2. ಅತಿ ಶ್ರಮವನ್ನು ಬಯಸುತ್ತದೆ. 3. ತಪ್ಪುಗಳು ಸಂಭವಿಸುವ ಅವಕಾಶಗಳು ಹೆಚ್ಚಾಗುತ್ತವೆ. ಆದ್ದರಿಂದ ಈಗ ಗಣಕಗಳನ್ನು ಬಳಸಿ ಅಸಂಖ್ಯಾತ ಹೆಸರುಗಳನ್ನು ಕ್ಷಿಪ್ರಗತಿಯಲ್ಲಿ ತಪ್ಪುಗಳನ್ನು ಸಂಭವಿಸದಂತೆ ಜೋಡಿಸುವುದು ಸಾಧ್ಯವಾಗಿದೆ. ಗಣಕಗಳು ಅಕ್ಷರಾನುಸಾರ ಜೋಡಿಸುವಾಗ ಇಂಗ್ಲಿಶ್ ವರ್ಣಮಾಲೆಯ ಅನುಕ್ರಮವನ್ನು ಪಾಲಿಸುತ್ತವೆ. ಅಂದರೆ ಗಣಕಗಳ ಕಾರ್ಯವಾಹಿಯಲ್ಲಿ ಇಂಗ್ಲಿಶ್ ವರ್ಣಗಳ ಅನುಕ್ರಮವನ್ನು ಜೋಡಿಸಿಕೊಡಲಾಗಿದೆ.

ನಾವೀಗ ಆಯ್ಕೆ ಮಾಡಿಕೊಳ್ಳುವ ಅಕ್ಷರಾನುಕ್ರಮಣಿಕೆ ಇಂಗ್ಲಿಶ್‌ನದೋ ಅಥವಾ ಕನ್ನಡದ್ದೋ? ಉದಾ.ಗೆ ಕನ್ನಡ ಭಾಷೆಯ ಪದಕೋಶವೊಂದು ಇಂಗ್ಲಿಶ್ ಅಕ್ಷರಾನುಕ್ರಮವಾಗಿ ಇರುವುದನ್ನು ನಾವು ಬಯಸುವುದಿಲ್ಲ. ಕನ್ನಡ ಅಕ್ಷರಗಳ ಅನುಕ್ರಮವನ್ನು ನಿರ್ಧರಿಸುವುದು ನಾವು ತಿಳಿದಷ್ಟು ಸುಲಭವಲ್ಲ. ಅದರ ಸಮಸ್ಯೆಗಳಲ್ಲಿ ಕೆಲವನ್ನು ಮುಂದೆ ಚರ್ಚಿಸಿದೆ.

ಮೊದಲ ಅಕ್ಷರವನ್ನು ಗಮನಿಸಿ ಸ್ಥೂಲವಾದ ಅಕಾರಾದಿ ಮಾಡುವುದು ಸುಲಭ. ಅನ್ನ, ಆಟ, ಇರುವೆ, ಕನ್ನಡ, ಚಲನೆ, ಯಮ ಈ ಪದಗಳು ತಂತಾವೇ ಅಕಾರಾದಿಯಲ್ಲಿವೆ. ಸಮಸ್ಯೆ ಪ್ರಾರಂಭವಾಗುವುದು ಎರಡನೆಯ ಧ್ವನಿಯಿಂದ. ಉದಾ: ಕಲ್ಲು, ಕಿಡಿ, ಕಾಲು ಈ ಮೂರು ಪದಗಳ ಎರಡನೆ ಧ್ವನಿಗಳು ಕ್ರಮವಾಗಿ ಅ,ಇ,ಆ. ಇವು ಕನ್ನಡ ಅಕ್ಷರಾನುಕ್ರಮಣೀಯ ಪ್ರಕಾರ ಅ,ಆ, ಇ ಎಂದು ಜೋಡಣೆಯಾಗಬೇಕು. ಹಾಗಾಗಿ ಕಲ್ಲು, ಕಾಲು, ಕಿಡಿ ಎಂದು ಪದಗಳನ್ನು ಜೋಡಿಸುತ್ತೇವೆ. ಎರಡನೆಯ ಧ್ವನಿ ವ್ಯಂಜನವಾದಾಗ: ಕ್ರಮ, ಕ್ಷೇಮ, ಕ್ವಚಿತ್ ಈ ಮೂರರಲ್ಲಿ ಎರಡನೆಯ ಧ್ವನಿ ಕ್ರಮವಾಗಿ ರ್,ಷ್ ಮತ್ತು ವ್. ಇವು ಕನ್ನಡದಲ್ಲಿ ರ್,ವ್,ಷ್ ನಿಂದ ಜೋಡಣೆಯಾಗುತ್ತವೆ. ಹಾಗಾಗಿ ಆಪದಗಳು ಕ್ರಮ, ಕ್ವಚಿತ್, ಕ್ಷೇಮ ಎಂದು ಅಳವಡುತ್ತವೆ. ಆದರೆ ಮೂರನೆಯ ಧ್ವನಿ ಅನುನಾಸಿಕವಾದಾಗ ಕೆಲವು ಸಮಸ್ಯೆಗಳು ಉದ್ಭವವಾಗುತ್ತದೆ. ಉದಾ: ಕಡಗ, ಕಂಡ, ಕರ, ಕಂಚ ಈ ಪದಗಳನ್ನು ಹೇಗೆ ಜೋಡಿಸುವುದು? ಮೂರನೆಯ ಧ್ವನಿ ಕ್ರಮವಾಗಿ ಡ್,ಣ್,ರ್,ನ್ ಇವುಗಳು ಡ್,ಣ್,ನ್,ರ್ ಎಂದು ಜೋಡಣೆಯಾಗಬೇಕು. ಆದ್ದರಿಂದ ಈ ಪದಗಳ ಕ್ರಮ: ಕಡಗ, ಕಂಡ, ಕಂದ, ಕರ. ಈವರೆಗೆ ವಿವರಿಸಿದ ದಾರಿಯು ಧ್ವನಿಗಳ ಅನುಕ್ರಮವನ್ನು ಅನುಸರಿಸುವುದು. ಕಿಟೆಲ್ ತನ್ನ ನಿಘಂಟಿನಲ್ಲಿ ಈ ಕ್ರಮವನ್ನು ಅನುಸರಿಸಿದ್ದಾನೆ. ಇನ್ನೊಂದು ದಾರಿ: ಅಕ್ಷರಗಳು ಕಣ್ಣಿಗೆ ಕಾಣುವ ವಿಧಾನವನ್ನು, ಬರೆಹದಲ್ಲಿ ಬರುವ ಅನುಕ್ರಮವನ್ನು ಪಾಲಿಸುವುದು. ಹಾಗೆ ಮಾಡಿದಾಗ ಕಂಡ, ಕಂದ, ಕರ, ಕಡಗ, ಪದಗಳು, ಕಂಡ, ಕಂದ, ಕಡಗ, ಕರ ಎಂದು ಜೋಡಣೆಯಾಗುತ್ತವೆ. ಏಕೆಂದರೆ ಅನುಸ್ವಾರ ಅಕ್ಷರ ಮಾಲೆಯಲ್ಲಿ ಮೊದಲು ಬರುತ್ತದೆ. ಹಾಗಾಗಿ ಅದಕ್ಕೆ ಮೊದಲಿನ ಜಾಗ. ಕನ್ನಡ–ಕನ್ನಡ ನಿಘಂಟುಕಾರರು ಈ ಕ್ರಮವನ್ನು ಅನುಸರಿಸಿದ್ದಾರೆ.

ಈ ಎರಡು ಮಾದರಿಗಳಲ್ಲದೆ ಹಲವು ಇತರ ಗೊಂದಲದ ಮಾದರಿಗಳೂ ಬಳಕೆಯಲ್ಲಿವೆ. ಅವು ಒತ್ತಕ್ಷರಗಳನ್ನುಳ್ಳ ಪದಗಳ ಜೋಡಣೆಯಲ್ಲಿ ವಿಭಿನ್ನ ಕ್ರಮಗಳನ್ನು

ಅನುಸರಿಸುವ ಬಗೆಗಳು. ಕ್ಷಣ, ಕ್ರಮ, ಕಾರ್ಯ, ಕೀಟ ಈ ಪದಗಳನ್ನು ಒಂದು ವಿಧಾನದಲ್ಲಿ ಕ್ರಮ, ಕ್ಷಣ, ಕಾರ್ಯ, ಕೀಟ ಎಂದೂ, ಮತ್ತೊಂದು ವಿಧಾನದಲ್ಲಿ ಕಾರ್ಯ, ಕೀಟ, ಕ್ರಮ, ಕ್ಷಣ ಎಂದೂ ಜೋಡಿಸಲಾಗುತ್ತದೆ. ಇದೂ ಒಂದು ಬಗೆಯಲ್ಲಿ ಮೇಲಿನ ಎರಡು ವಿಧಾನಗಳ ಮುಂದುವರಿಕೆಗಳು.

9. **ಅಂತೆ, ಅಂತ**

**ಅಂತೆ:** ಕನ್ನಡದಲ್ಲಿ ಎರಡು ಬಗೆಯ ಅಂತೆಗಳಿವೆ. ಒಂದು ಸಂಗತಿಯನ್ನು ಇನ್ನೊಂದರೊಡನೆ ಹೋಲಿಸುವಾಗ ಬಳಸುವ ಅಂತೆ ಒಂದಾದರೆ ಮಾತಿನಲ್ಲಿ ಏನನ್ನಾದರೂ ಉಲ್ಲೇಖಿಸುವಾಗ ಬಳಸುವ ಅಂತೆ ಇನ್ನೊಂದು

1. ನೀರಿನಂತೆ ಹಣವನ್ನು ಖರ್ಚು ಮಾಡುತ್ತಾರೆ.
2. ಅವರು ನಾಳೆ ಬಗೆಯ ಹೋಲಿಕೆಯ ಅರ್ಥವಿದ್ದರೆ
1. ರಲ್ಲಿ ಮೊದಲ ಬಗೆಯ ಹೋಲಿಕೆಯ ಅರ್ಥವಿದ್ದರೆ

2ರಲ್ಲಿ ಉಲ್ಲೇಖಿಸುವ ವಿಧಾನವಿದೆ. ವಾಕ್ಯವನ್ನು ಹೇಳುತ್ತಿರುವ ವ್ಯಕ್ತಿಗೆ ಆ ವಾಕ್ಯದಲ್ಲಿರುವ ಸಂಗತಿಯನ್ನು ಯಾರೋ ಹೇಳಿದ್ದು. ಅದನ್ನು ಆ ವಯಕ್ತಿ ಇನ್ನೊಬ್ಬರಿಗೆ ಹೇಳುವಾಗ ಕೊನೆಯಲ್ಲಿ ಈ ಅಂತೆಯನ್ನು ಸೇರಿಸಿದ್ದಾರೆ.

ಕಥೆ ಹೇಳುವಾಗ ಒಂದೂರಂತೆ, ಅಲ್ಲೊಬ್ಬ ರಾಜ ಇದ್ದನಂತೆ ಎಂದು ಹೇಳುವುದು ಉಂಟಷ್ಟೆ. ಇಲ್ಲಿಯೂ ಸಂಗತಿಯ ಅಧಿಕೃತತೆಯ ಬಗೆಗೆ ಹೊಣೆಯನ್ನು ಹೇಳುತ್ತಿರುವ ವ್ಯಕ್ತಿ ಹೊರುತ್ತಿಲ್ಲವೆನ್ನುವುದು ಗೊತ್ತಾಗುತ್ತದೆ.

ಈ ಎರಡನೆಯ ಬಗೆಯ ಅಂತೆಯನ್ನು ನಾವು ಒಂದು ಸಂಕಥನ ಸೂಚಕವೆನ್ನೋಣ. ಇದು ಯಾವಾಗ ಮತ್ತು ಎಲ್ಲಿ ಬಳಕೆಯಾಗುತ್ತದೆಂಬುದು ಗಮನಿಸಬೇಕಾದ ಸಂಗತಿ. ಅ)ಸಾಮಾನ್ಯವಾಗಿ ಬೇರೆಯವರ ಮಾತನ್ನು ಇನ್ನೊಬ್ಬರಿಗೆ ಹೇಳುವಾಗ: ಆ) ನಮಗೆ ಯಾವ ವಿಷಯ ಖಚಿತವಾಗಿ ಗೊತ್ತಿಲ್ಲವೋ ಅದನ್ನು ಮತ್ತೊಬ್ಬರಿಗೆ ತಿಳಿಸುವಾಗ; ಇ) ಬೇರೆಯವರಿಂದ ಯಾವುದಾರೊಂದು ವಿಷಯದ ಬಗೆಗೆ ಖಚಿತ ಮಾಹಿತಿಯನ್ನು ಪಡೆದುಕೊಳ್ಳುವಾಗ ವಾಕ್ಯದ ಕೊನೆಯಲ್ಲಿ ಸಾಮಾನ್ಯವಾಗಿ ಈ ಅಂತೆಯನ್ನು ಸೇರಿಸುವುದುಂಟು. ಇದಲ್ಲದೆ ಇದನ್ನು ಬಳಸುವ ಹತ್ತಾರು ಸಂದರ್ಭಗಳನ್ನು ಗುರುತಿಸುವುದು ಸಾಧ್ಯ. ಇದು ಯಾವಾಗಲೂ ವಾಕ್ಯದ ಕೊನೆಯಲ್ಲಿ ಬರುತ್ತದೆಂಬುದು ಮುಖ್ಯ.

**ಅಂತ:** ಇನ್ನೊಬ್ಬರ ಮಾತನ್ನು ಉಲ್ಲೇಖಿಸುವಾಗ ಕನ್ನಡದಲ್ಲಿ ಅಂತ ಎಂಬ ಅವ್ಯಯವನ್ನು ವಾಕ್ಯದಲ್ಲಿ ಸೇರಿಸುತ್ತೇವೆ.

1. ನೀವು ಖಂಡಿತ ಬರಬೇಕು ಅಂತ ನಮ್ಮ ತಂದೆ ಹೇಳಿದ್ದಾರೆ.
2. ಪದ್ಯ ಅರ್ಥ ಆಗಲಿಲ್ಲ ಅಂತ ಹುಡುಗರು ಹೇಳಿದರು.

ಮೊದಲ ವಾಕ್ಯದಲ್ಲಿ ತಂದೆಯ ಮಾತನ್ನು ಉಲ್ಲೇಖಿಸುತ್ತಾ ಅಂತ ಸೇರಿಸಲಾಗಿದೆ
ಎರಡನೆ ವಾಕ್ಯದಲ್ಲಿ ಹುಡುಗರ ಮಾತನ್ನು ಉಲ್ಲೇಖಿಸಿ ಅಂತ ಸೇರಿಸಲಾಗಿದೆ. ಇದಲ್ಲದ
ಇನ್ನೂ ಕೆಲವು ಕಡೆಗಳಲ್ಲಿ ಈ ಅಂತವನ್ನು ಬಳಸುತ್ತೇವೆ.

3. ಎಷ್ಟೂ ಅಂತ ಅವನಿಗೆ ಹೇಳುವುದು?
4. ಯಾರನ್ನೂ ಅಂತ ಕೇಳುವುದು?
5. ಎಲ್ಲೀ ಅಂತ ಹುಡುಕುವುದು?

ಈ ವಾಕ್ಯಗಳಲ್ಲಿ ಅಂತ ವನ್ನು ಬಿಟ್ಟರೂ ಅರ್ಥದಲ್ಲಿ ಅಷ್ಟು ವ್ಯತ್ಯಾಸವಾಗುವುದಿಲ್ಲ
ಅಂತ ಬಿಟ್ಟಾಗ ವಾಕ್ಯಗಳು ನಿರ್ದಿಷ್ಟ ಪ್ರಶ್ನೆಗಳಾಗುತ್ತವೆ. ಅಂತ ಸೇರಿದಾಗ ಅವು
ಅಸಹಾಯಕತೆಯನ್ನು ಹೇಳುತ್ತವೆ. ಆದ್ದರಿಂದ ಇಲ್ಲಿ ಅಂತ ಸಂಕಥನಸೂಚಕವಾಗಿ
ಕೆಲಸ ಮಾಡುವಂತಿದೆ. ಈ ಕೆಳಗಿನ ವಾಕ್ಯಗಳಲ್ಲಿಯೂ ಅಂತ ಬಳಕೆಯಾಗಿದೆ.

6. ನಮ್ಮ ತರಗತಿಯಲ್ಲಿ ಗುಂಡ ಅಂತ ಒಬ್ಬ ಹುಡುಗ ಇದ್ದಾನೆ.
7. ಅವನಿಗೆ ಚೆನ್ನ ರಂಗ ಅಂತ ಇಬ್ಬರು ಗೆಳೆಯರು.

ಅಂತ ರೂಪಕ್ಕೆ ಉಪಭಷಿಕ ಪರ್ಯಾಯಗಳಿವೆ. ಅಂತಿಳಗೊಂಡು, ಅಂದುಕೊಂಡು
ಅಂಕೊಂಡು, ಅಂಬ್ತ, ಅಂತಹೇಳಿ ಇತ್ಯಾದಿ. ಕೆಲವು ಉಪಭಾಷೆಗಳಲ್ಲಿ ಕೇವಲ ಹೇಳಿ
ರೂಪವೂ ಅಂತಕ್ಕೆ ಬದಲಾಗಿ ಅಲ್ಲಲ್ಲಿ ಬಳಕೆಯಾಗುವುದುಂಟು.

ಉದಾ:

8. ಬಸ್ಸು ಬರ್ತದೆ ಹೇಳಿ ಅಂವ ಕಾಯ್ದು ಕುಳಿತಿದ್ದ.

ಬರವಣಿಗೆಯಲ್ಲಿ ಅಂತಕ್ಕೆ ಪರ್ಯಾಯ ರೂಪಗಳೆಂದರೆ ಎಂಬ ಅಥವಾ
ಎಂದು. ಅಂತ, ಎಂಬ ಮತ್ತು ಎಂದು ಈ ಮೂರು ರೂಪಗಳಿಗೂ ಧಾತು ಒಂದೇ
ಅನ್ ಅಥವಾ ಎನ್. ಇವೆರಡೂ ಕ್ರಮವಾಗಿ ಆಡುಮಾತು ಮತ್ತು ಬರೆಹಗಳಲ್ಲಿ
ಬಳಕೆಯಾಗುತ್ತಿವೆ. ಎಂಬ ಅಭೂತ ಕೃದಂತವಾಗಿದೆ (ಎನ್+ಪ=ಎಂಬ. ಹಳೆಗನ್ನಡದ
ಬರ್ಪ, ಇರ್ಪ ಮುಂತಾದ ರೂಪಗಳನ್ನು ಗಮನಿಸಿ. ಪ ಪ್ರತ್ಯಯದ ಬದಲು ವ
ಕೂಡ ಬಳಕೆಯಾಗಬಹುದು. ಪೇಳ್ವ, ಪೋಲ್ವ, ಸಲ್ವ ಇತ್ಯಾದಿ). ಎಂದು ಭೂತ
ಕೃದಂತವಾಗಿದೆ. (ಎನ್+ದ್+ಉ=ಎಂದು. ದ್ ಇಲ್ಲಿ ಕಾಲಸೂಚಕ ಪ್ರತ್ಯಯವಾಗಿದೆ
ಬಂದು, ಕೊಂದು, ಸಂದು ಇವೆಲ್ಲವೂ ಹೀಗೆ ರೂಪುಗೊಂಡಿವೆ.) ಅಂತ. ಅನ್ನುತ್ತ
ಎಂಬುದರ ಸಂಕ್ಷಿಪ್ತ ರೂಪ. ಅನ್ನುತ್ತ ಅಭೂತ ಕಾಲದಲ್ಲಿದೆ. ಎಂಬ ರೂಪಕ್ಕೆ ಈಗ
ಎನ್ನುವ ರೂಪವನ್ನು ಪರ್ಯಾಯವಾಗಿ ಬಳಸಲು ಸಾಧ್ಯ. (ಬರ್ಪ/ಬರುವ, ಇರ್ಪ
ಇರುವ, ಪೇಳ್ವ/ಹೇಳುವ)ಉತ್ ಮತ್ತು ಉವ್ ಇವೆರಡು ಅಭೂತ ಕಾಲಸೂಚಕಗಳಾಗಿ
ಕನ್ನಡದಲ್ಲಿ ಬಳಕೆಯಾಗುತ್ತಿವೆ. ಈ ಕಾರಣದಿಂದಲೇ ಬರವಣಿಗೆಯಲ್ಲಿ ಅಂತದ
ಕೆಲಸವನ್ನು ಎಂದು ಮತ್ತು ಎಂಬ ಇವೆರಡೂ ರೂಪಗಳು ಹಂಚಿಕೊಳ್ಳುವುದು
ಸಾಧ್ಯವಾಗಿದೆ.

## 10. ಹುಚ್ಚು

ಈಗ ಈ ಪದದದಿಂದ ಹೊರಡುವ ಅರ್ಥಗಳೇನೇ ಇರಲಿ, ಇದರ ಪೂರ್ವ ರೂಪಗಳು ಕುತೂಹಲಕಾರಿಯಾಗಿವೆ. ಇದು ಹಕಾರದಿಂದ ಮೊದಲಾಗುವ ದೇಶ್ಯ ಶಬ್ದವಾದ್ದರಿಂದ ಮೊದಲು ಪಕಾರಾದಿಯಾಗಿ ಇದ್ದಿರಬೇಕೆಂಬ ಊಹೆ ಸಾಧ್ಯ. ಕನ್ನಡ–ಕನ್ನಡ ನಿಘಂಟು, ಕಿಟೆಲ್ ನಿಘಂಟುಗಳು ನೀಡುವ ಮಾಹಿತಿಯ ಪ್ರಕಾರ ಈ ಪದಕ್ಕೆ ಪ್ರಾಚೀನ ಉಲ್ಲೇಖಗಳಿಲ್ಲ. ಹುಚ್ಚು ಎಂಬ ರೂಪವೇ ಪುರಂದರದಾಸರ ಕೀರ್ತನೆಗಳಲ್ಲಿ ಕಾಣಸಿಗುವುದೆಂದು ಹೇಳಲಾಗಿದೆ. ದಾಸರ ಕೀರ್ತನೆಗಳು ಯಾವಾಗ ಲಿಖಿತರೂಪಕ್ಕೆ ಬಂದವೋ ಮತ್ತು ಈ ರೂಪ ಯಾವಾಗ ಕೀರ್ತನೆಗಳಲ್ಲಿ ದಾಖಲಾಯಿತೋ ತಿಳಿಯದು.

ಹುಚ್ಚು ಪದದ ಹಳೆಯ ರೂಪಗಳಾಗಿ ಪುಚ್ಚು ಮತ್ತು ಪುರ್ಚು ಎಂಬ ರೂಪಗಳು ಅಲ್ಲಲ್ಲಿ ಸಿಗುತ್ತವೆ. ಕನ್ನಡದಲ್ಲಿ ನಡೆದಿರುವ ಧ್ವನಿವ್ಯತ್ಯಾಸಗಳ ಅನುಕ್ರಮವನ್ನು ಗಮನಿಸಿದರೆ ಪುರ್ಚು ಎಂಬುದೇ ಪುಚ್ಚು ಎಂಬುದಕ್ಕಿಂತ ಹಳೆಯ ರೂಪವಾಗಬೇಕು. ಸಮರೂಪಧಾರಣೆಯ ಮೂಲಕ ಪುರ್ಚುವಿನ ರಕಾರವೂ ಚಕಾರವಾಗಿ ಪುಚ್ಚು ಎಂದಾಗುವುದು ಸಹಜವೂ ಹೌದು. ಚುರ್ಚು>ಚುಚ್ಚು, ಚರ್ಚು>ಚಚ್ಚು, ಇವೆಲ್ಲ ಇಂಥ ಇತರ ಉದಾಹರಣೆಗಳು.

ಪುಚ್ಚು ಪದವೂ ಕೂಡ 16ನೇ ಶತಮಾನದ ದಾಖಲೆಗಳಲ್ಲಿ ಕಾಣಸಿಗುತ್ತದೆ. ಪುರ್ಚು ರೂಪವಂತೂ ಇಪ್ಪತ್ತನೇ ಶತಮಾನದ ಪ್ರಯೋಗ. ಬಿಎಂಶ್ರೀಯವರ ಅಶ್ವತ್ಥಾಮನ್‌ನಲ್ಲಿ ಮತ್ತು ಕುವೆಂಪು ಅವರ ಶ್ರೀರಾಮಾಯಣ ದರ್ಶನಂನಲ್ಲಿ ಬಳಕೆಯಾಗಿದೆ. ಹುಚ್ಚು ಪದದ ಪ್ರಾಚೀನ ರೂಪಗಳಿರಬೇಕೆಂದು ಪುಚ್ಚು <ಪುರ್ಚುಗಳನ್ನು ಕಲ್ಪಿಸಿಕೊಂಡಂತಿದೆ. ಪುಚ್ಚುವಿನಿಂದ ಪುರ್ಚುವನ್ನು ಕಲ್ಪಿಸಿದ್ದಂತೂ ಸಾಮಾನ್ಯ ಧ್ವನಿನಿಯಮಗಳನ್ನೇ ತಲೆಕೆಳಗು ಮಾಡಿದೆ. ಒಂದು ಪದ ಪ್ರಾಚೀನವೆಂದು ತೋರಿಸಲು ಇಂಥ ಪ್ರಯೋಗಗಳನ್ನು ಕವಿಗಳು ಮಾಡುತ್ತಾರೆಂದು ತೋರುತ್ತದೆ.

ಇನ್ನೂ ಒಂದು ಕುತೂಹಲದ ಸಂಗತಿ ಇಲ್ಲಿದೆ. ಸಾಮಾನ್ಯವಾಗಿ ಚು ನಿಂದ ಅಂತ್ಯಗೊಳ್ಳುವ ಪದಗಳು ಕ್ರಿಯಾಧಾತುಗಳಾಗಿವೆ. ಆಗ ಮಾತ್ರ ಚು ಕಾರದ ಹಿಂದಿನ ರೇಫೆಯು ಚಕಾರವಾಗಿ ಪರಿವರ್ತಿತವಾಗುತ್ತದೆ. ಉದಾ: ಚುರ್ಚು>ಚುಚ್ರ್ಚು, ಕರ್ಚು>ಕಚ್ಚು, ಬೆರ್ಚು>ಬೆಚ್ಚು, ಪೆರ್ಚು>ಪೆಚ್ಚು(>ಹೆಚ್ಚು). ಈ ನಿಯಮ ಪಾಲನೆಗೆ ಕೆಲವು ಶರತ್ತುಗಳಿವೆ. ಅವು ಇಲ್ಲಿ ನಮಗೆ ಮುಖ್ಯವಲ್ಲ. ಆದರೆ ಹುಚ್ಚು ಕ್ರಿಯಾಧಾತುವಲ್ಲ. ಆದರೂ ಅದರ ಪೂರ್ವರೂಪವನ್ನು ಪುರ್ಚು ಎಂದು ಕಲ್ಪಿಸಿಕೊಂಡಿರುವುದು ವಿಚಿತ್ರವಾಗಿದೆ.

## 11. ದ್ವಿತೀಯಾ ವಿಭಕ್ತಿ ಪ್ರತ್ಯಯ

ಬಸ್ಸಿನಲ್ಲಿ ಕೇಳಿದ ವಾಕ್ಯ:

1. ಕಂಡೀದೀನಿ, ಕಟ್ಬಿಟ್‌ಬುಡಯ್ಯಾ ನಿನ್ ಆಟವಾ

ಕನ್ನಡದ ಉಪಭಾಷೆಗಳನ್ನು ಕೇಳಿ ಬಲ್ಲವರಿಗೆ ಇದು ಕಾವೇರಿ ನದಿಯ ಅಸುಪಾಸಿನ ಜನರು ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಆಡುವ ಮಾತೆಂದು ಗೊತ್ತಾಗುತ್ತದೆ. ಈ ವಾಕ್ಯವನ್ನಾಡಿದ ವ್ಯಕ್ತಿ ದಾರಿಯುದ್ಧಕ್ಕೂ ಆಡುತ್ತಿದ್ದ ಮಾತುಗಳನ್ನು ಕೇಳಿದಾಗ ಒಂದೆರಡು ಕುತೂಹದ ಅಂಶಗಳು ಕಂಡುಬಂದವು.

1. ಕನ್ನಡದ ಶಾಲಾವ್ಯಾಕರಣಗಳು ವಾಕ್ಯದಲ್ಲಿ ಕರ್ಮಪದಕ್ಕೆ ದ್ವಿತೀಯಾ ವಿಭಕ್ತಿ ಪ್ರತ್ಯಯ 'ಅನ್ನು' ಸೇರುತ್ತದೆಂದು ಹೇಳುತ್ತವೆ. ಕನ್ನಡದ ಬಳಕೆಯನ್ನು ಅಭ್ಯಾಸ ಮಾಡಿದವರು ಈ ವಿಭಕ್ತಿ ಪ್ರತ್ಯಯ ಆಡುಮಾತಿನಲ್ಲಿ ಕೇಳಲು ಸಿಗುವುದಿಲ್ಲವೆನ್ನುತ್ತಾರೆ.

2. ಸ್ವಾಮಿ ಪುಸ್ತಕ ಓದಿದನು.
3. ಹುಡುಗಿ ಮಡಕೆ ಒಡೆದಳು.

2ಮತ್ತು 3ರಲ್ಲಿ ಪುಸ್ತಕ ಮತ್ತು ಮಡಕೆ ಈ 'ಕರ್ಮಪದ'ಗಳಿಗೆ ಯಾವ ಪ್ರತ್ಯಯವೂ ಹತ್ತಿಲ್ಲ. ಹೀಗೆ ವಿಭಕ್ತಿ ಪ್ರತ್ಯಯ ಕಾಣಿಸದೆ ಇರಬಹುದು ಎಂಬ ನಿರ್ಣಯವನ್ನು ಒಪ್ಪದವರೂ ಇದ್ದಾರೆ. ಅವರ ಪ್ರಕಾರ ಉಚ್ಚರಿಸುವಾಗ ದ್ವಿತೀಯಾ ವಿಭಕ್ತಿಯು ಇರಬೇಕಾದ ಪದದ ಕೊನೆಯ ಸ್ವರ ಕೊಂಚ ದೀರ್ಘವಾಗುತ್ತದೆ.

2A ಸ್ವಾಮಿ ಪುಸ್ತಕ + ಓದಿದನು
3A ಹುಡುಗಿ ಮಡಕೆ + ಒಡೆದಳು

+ ಚಿಹ್ನೆಯು ಆಯಾ ಪದದ ಕೊನೆಯ ಸ್ವರ ಕೊಂಚ ದೀರ್ಘವಾಗುವುದನ್ನು ಸೂಚಿಸುತ್ತದೆ. ಅಲ್ಲದೆ ಸ್ತ್ರೀಲಿಂಗ, ಪುಲ್ಲಿಂಗವಾಚಿ ಪದಗಳು ವಾಕ್ಯದಲ್ಲಿ ಕರ್ಮಪದದ ಜಾಗದಲ್ಲಿ ಬಂದಾಗ ಈ ವಿಭಕ್ತಿಪ್ರತ್ಯಯ ಲೋಪ ನಿಯಮವನ್ನು ಬಳಸಲಾಗುವುದಿಲ್ಲ.

4. ನಾಯಿ ಹುಡುಗ ಕಚ್ಚಿತು

4ರಲ್ಲಿ ಹುಡುಗನನ್ನು ಎಂದು ಹೇಳಬೇಕು. ಪ್ರತ್ಯಯಲೋಪ ಸಾಧ್ಯವಿಲ್ಲ.

ಈ ಮೇಲಿನ ವಿವರಣೆಗೆ ಮತ್ತಷ್ಟನ್ನು ಸೇರಿಸುವುದು ಸಾಧ್ಯ. ವಾಕ್ಯದ ಪದಾನುಪೂರ್ವಿಯನ್ನು ಬದಲಾಯಿಸಿ ಕರ್ಮಪದವನ್ನು ಕ್ರಿಯಾಪದದ ಅನಂತರ ಬರುವಂತೆ ಮಾಡಿದರೆ ಏನಾಗುತ್ತದೆ? ಹೀಗೆ ಪಲ್ಲಟಗೊಳಿಸುವುದು ಅಸಹಜವೇನೂ ಅಲ್ಲ. ಅನ್ನು ಪ್ರತ್ಯಯವನ್ನು ನೋಡಿದರೆ ಅಲ್ಲಿ ಈಬಗೆಯ ಪಲ್ಲಟ ಕಾಣುತ್ತದೆ. ಕರ್ಮಪದವು ಹೀಗೆ ಕ್ರಿಯಾಪದದ ಅನಂತರ ಬಂದಾಗ ದ್ವಿತೀಯಾ ವಿಭಕ್ತಿಯನ್ನು ಸೂಚಿಸುವ ಪ್ರತ್ಯಯವನ್ನು ಇರಿಸಿಕೊಳ್ಳುವುದು ಒಂದು ನಿಯಮ. ಇದು ಸ್ತ್ರೀಲಿಂಗ, ಪುಲ್ಲಿಂಗ ವಾಚಿಗಳಿಗೆ ಮಾತ್ರವಲ್ಲದೆ ಎಲ್ಲ ನಾಮಪದಗಳಿಗೂ ಅನ್ವಯಿಸುತ್ತದೆ.

ಕೆಲವು ಉಪಭಾಷೆಗಳಲ್ಲಿ ಹೀಗೆ ಪದಾನುಪೂರ್ವಿಯನ್ನು ಪಲ್ಲಟಗೊಳಿಸುವುದು, ಕರ್ಮಪದವನ್ನು ಕ್ರಿಯಾಪದದ ಅನಂತರ ಇರಿಸುವುದು ಸಹಜವಾದ ಬಳಕೆಯೆಂದು ತೋರುತ್ತಿಲ್ಲ. ಇದಕ್ಕೆ ಕಾರಣಗಳನ್ನು ಹುಡುಕಬೇಕಾಗಿದೆ.

1.ರಲ್ಲಿ 'ಆಟವಾ' ಎಂಬ ರೂಪವಿದೆ. ಇದರಿಂದ ಅಲ್ಲಿನ ವಿಭಕ್ತಿಪ್ರತ್ಯಯ 'ವಾ' ಎಂದು ತಿಳಿಯಬೇಕೇ? ಆಟ ಅಕಾರಾಂತ ಪದವಾಗಿರುವುದಿರಿಂದ ಅದಕ್ಕೆ 'ಅನ್ನು' ಪ್ರತ್ಯಯ ಹತ್ತಿದಾಗ 'ಆಟವನ್ನು' ಎಂಬ ರಚನೆ ಸಿಗುತ್ತದೆ. ಇದು ಸರಿ. ಆದರೆ ಪದಾನು ಪೂರ್ವಿಯ ಪಲ್ಲಟದಿಂದ ಅ/ಆ ಎಂಬುದು ಮಾತ್ರ ಪ್ರತ್ಯಯವಾಗಿ ಕಾಣಿಸಿಕೊಳ್ಳುತ್ತದೆ. 'ಆಟಮ್' ಎಂಬುದನ್ನು ಪ್ರಕೃತಿ ಎಂದು ತಿಳಿಯಬೇಕು.

ಕನ್ನಡದ ಕವಿಗಳು ತಮ್ಮ ರಚನೆಗಳನ್ನು ಆಕಾರಾಂತ ನಾಮಪದಗಳ ಪ್ರಕೃತಿಯಲ್ಲಿ ನ್ ಸೇರಿಸಿ ಅದಕ್ಕೆ ಅ(ದ್ವಿತೀಯಾ ವಿ.ಪ್ರತ್ಯಯ) ಸೇರಿಸುವುದುಂಟು. ಇದು ಐಚ್ಛಿಕ ನಿಯಮ. ಪ್ರತ್ಯಯವಿಲ್ಲದೆಯೂ ಇರಬಹುದು.

5. ಗುಮ್ಮನ ಕರೆಯದಿರೆ ಅಮ್ಮ
6. ಹಚ್ಚೇವು ಕನ್ನಡದ ದೀಪ

5ರಲ್ಲಿ 'ಗುಮ್ಮನ' ರೂಪವನ್ನು ಕ್ರಿಯಾಪದದ ಅನಂತರ ತಂದರೂ ರೂಪದಲ್ಲಿ ಏನೂ ಬದಲಾವಣೆಯಾಗುವುದಿಲ್ಲ.

ಆದರೆ ನಾನು ಉಲ್ಲೇಖಿಸಿದ ವಾಕ್ಯ 1ರಲ್ಲಿ ಪ್ರಕೃತಿಯ ಭಾಗವಾಗಿ 'ವ್' ಇರುವುದು ಮಾತ್ರ ಆ ಉಪಭಾಷೆಯ ವೈಶಿಷ್ಟವೆಂದು ತೋರುತ್ತದೆ. ಶಿಷ್ಟ (ಪ್ರಮಾಣ) ಭಾಷೆ ಮತ್ತು 'ನ್' ಕಾರವನ್ನು ಅಕಾರಾಂತ ನಾಮಪದಗಳಿವೆ ಸೇರಿಸುತ್ತದೆ.

**12. ದಾರಿಯ ಸುಂಕ**

1. 'ಸುಂಕವಿಲ್ಲದ ದಾರಿಗೆ ಪಯಣ'

ಇದು ವಾರಪತ್ರಿಕೆಯೊಂದರಲ್ಲಿ ಧಾರಾವಾಹಿಯ ಕಂತಿಗೆ ಕೊಟ್ಟ ಶೀರ್ಷಿಕೆ ವಾಕ್ಯ. 'ದಾರಿಗೆ ಪಯಣ' ಎಂಬ ರಚನೆಯೇ ಗೊಂದಲಕ್ಕೆ ತಳ್ಳುತ್ತದೆ. ಪಯಣ ಮಾಡಲು ದಾರಿ ಅವಶ್ಯ. ಹಾಗಾಗಿ ದಾರಿಯಲ್ಲಿ/ದಾರಿಗುಂಟ ಇತ್ಯಾದಿ ರೂಪಗಳು ಬಳಕೆಯಾಗುವುದು ನಿರೀಕ್ಷಿತ. 'ದಾರಿಗೆ' ಎಂದಾಗ ಗುರಿಯನ್ನು ಸೂಚಿಸಿದಂತಾಯ್ತು. ಆಗ ಊರಿಗೆ, ಗುಡ್ಡಕ್ಕೆ, ಕೆರೆಗೆ, ನದಿಗೆ ಎಂಬ ರೂಪಗಳು ಪಯಣದ ಜತೆಗೆ ಬಳಕೆಯಾಗಬಹುದು. ದಾರಿಯೇ ಪಯಣ ಮಾಡುವುದು ಸಾಧ್ಯವಿದ್ದರೆ ಆಗ (ಉದಾ: ರಾಮನಿಗೆ ಶಿಕ್ಷೆ, ಬೆಕ್ಕಿಗೆ, ಜ್ವರ, ರಂಗನಿಗೆ ಬಹುಮಾನ) ಈ ಪ್ರಯೋಗ ಸರಿ. ಇಲ್ಲಂತೂ ಈಗಿರುವಂತೆ ಅಸ್ಪಷ್ಟ

ಇನ್ನು 'ಸುಂಕವಿಲ್ಲದ ದಾರಿ' ಎಂದರೇನು? ಆ ಧಾರಾವಾಹಿಯಲ್ಲೇ ಅದೇ ಕಂತಿನಲ್ಲಿ– ಬಂದದಾರಿಗೆ ಸುಂಕವಿಲ್ಲ ಎಂಬ ಗಾದೆಯ ಬಳಕೆಯಿದೆ. (ಗಾದೆಯನ್ನು ಉಲ್ಲೇಖ ಚಿಹ್ನೆಗಳಲ್ಲಿ ಬಳಸಿದ್ದಾರೆ). ಈ ಗಾದೆಯಿಂದಲೇ ಸುಂಕವಿಲ್ಲದ ದಾರಿ ಎಂಬ ನಾಮಗುಚ್ಚವನ್ನು ರೂಪಿಸಿದಂತಿದೆ. ವಾಕ್ಯದಲ್ಲಿರುವ ನಾಮಗುಚ್ಛಗಳನ್ನು ಹೀಗೆ ರೂಪಿಸುವುದು ಅಸಹಜವೇನಲ್ಲ.

2. ಪಂದ್ಯದಲ್ಲಿ ರಾಮ ಸೋತನು-ಸೋತ ರಾಮ
3. ಬುದ್ಧನಿಗೆ ಜಾಗವಿಲ್ಲ-ಜಾಗವಿಲ್ಲದ ಬುದ್ಧ
4. ಹಕ್ಕಿ ಹಾರಿ ಬಂದಿತು-ಹಾರಿಬಂದ ಹಕ್ಕಿ

ಈ ರೂಪಾಂತರಗಳಿಗೆ ಕೆಲವು ಶರತ್ತುಗಳಿವೆ. ಮುಂದೆ ನೋಡಿ

5. ಕೋಲು ಮುರಿಯಲಿಲ್ಲ.-ಮುರಿಯುವ ಕೋಲು
6. ಕೋಲು ಮುರಿಯುವುದಿಲ್ಲ-ಮುರಿಯದ ಕೋಲು
7. ನಕ್ಷತ್ರ ಮಿನುಗುತ್ತದೆ-ಮಿನುಗುವ ನಕ್ಷತ್ರ

5 ಮತ್ತು 6 ಇವೆರಡರ ಮೂಲವಾಕ್ಯದಲ್ಲಿರುವ ವ್ಯತ್ಯಾಸಗಳನ್ನು ಸಾಧಿತ ನಾಮ ಗುಚ್ಛಗಳು ಬಿಟ್ಟು ಕೊಟ್ಟಿವೆ. 7ರಲ್ಲಿರುವ ಅಭೂತಕಾಲ ಸೂಚಕವನ್ನು ಸಾಧಿತ ನಾಮ ಗುಚ್ಛ ಬದಲಾಯಿಸಿಕೊಂಡಿದೆ. ಈ ಪರಿವರ್ತನೆಗಳೇಕೆ ಆಗುತ್ತವೆ? ಇದನ್ನು ಬೇರೊಮ್ಮೆ ಚರ್ಚಿಸಬಹುದು.

1.ರಲ್ಲಿ ಕುತೂಹಲಕಾರಿಯಾಗಿ ತೋರುವ ಅಂಶ ಅದರ ಅರ್ಥರಚನೆಯೇ ಆಗಿದೆ. ಆ ರಚನೆಯ ಅರ್ಥವಿಷ್ಟೆ: ನಿರುಪಯುಕ್ತ ವ್ಯರ್ಥ, ಲಾಭಕರವಲ್ಲ ಇತ್ಯಾದಿ. ಪಯಣದಿಂದ ಏನೂ ಪ್ರಯೋಜನವಿಲ್ಲ ಎಂದು ಸೂಚಿಸಲು ಈ ರಚನೆಯನ್ನು (ಸುಂಕವಿಲ್ಲದ ದಾರಿಗೆ ಪಯಣ) ಬಳಸಲಾಗಿದೆ.

ಸುಂಕವಿಲ್ಲದ ದಾರಿ (ಮಾದರಿ: ನೆರಳಿಲ್ಲದ ದಾರಿ, ಕಲ್ಲುಮುಳ್ಳಿನ ದಾರಿ, ಬೆಳಕಿಲ್ಲದ ದಾರಿ, ಏರು ತಗ್ಗಿಲ್ಲದ ದಾರಿ, ನೀರಿಲ್ಲದ ದಾರಿ)ಎಂದರೇನು? ಸುಂಕ ಕೊಡಬೇಕಾಗಿಲ್ಲದ ದಾರಿಯೋ? ಅಥವಾ ಸುಂಕ ದೊರಕದ ದಾರಿಯೋ? ಮೊದಲ ಅರ್ಥವಿದ್ದರೆ ಪಯಣ ವ್ಯರ್ಥವಲ್ಲ; ಲಾಭಕರ. ಎರಡನೇ ಅರ್ಥ ಸುಂಕ ವಸೂಲು ಮಾಡುವವರಿಗೆ ಮಾತ್ರ ಅನ್ವಯವಾಗುತ್ತದೆ. (ಸುಂಕ: ಇದು ಶುಲ್ಕದ ತದ್ಭವ. ಒಂದು ಬಗೆಯ ದ್ರವ್ಯರೂಪದಕರ) ಈ ಎರಡನೇ ಅರ್ಥ ಸೀಮಿತನೆಲೆಯಲ್ಲಿ ಮಾತ್ರ ಬಳಕೆಯಾಗುವುದು ಸಾಧ್ಯ.

ಅಂದರೆ 1 ತಂತಾನೇ ವ್ಯರ್ಥವೆಂಬ ಅರ್ಥವನ್ನು ಕೊಡುವುದು ಸಾಧ್ಯವಿಲ್ಲವೆಂದೇ ತೋರುತ್ತದೆ. ಈ ರಚನೆಗೆ ಕಾರಣವಾದ ಮೂಲವಾಕ್ಯ (ಗಾದೆ)ವನ್ನು ಮತ್ತೊಮ್ಮೆ ಪರಿಶೀಲಿಸಬೇಕಾಗಿದೆ. ಬಂದದಾರಿಗೆ ಸುಂಕವಿಲ್ಲವೆಂದು ನಾವು ಹೇಳುವುದು ಏನೂ ಲಾಭವಾಗಲಿಲ್ಲ, ವ್ಯರ್ಥಪ್ರಯತ್ನ ಎಂದು ಸೂಚಿಸಬೇಕಾಗಿ ಬಂದಾಗ ತಾನೇ? ಕನ್ನಡದ ಇನ್ನೊಂದು ಗಾದೆ ಹೀಗಿದೆ: 'ಯಾರಿಗೆ ಯಾರಿಲ್ಲ; ದಾರಿಗೆ ಸುಂಕವಿಲ್ಲ'. ಇಲ್ಲಿ ಸುಂಕ ಹಾಕುವುದು ದಾರಿಗಲ್ಲ; ದಾರಿಯಲ್ಲಿ ಬಂದವರಿಗೆ ಎಂಬ ಅರ್ಥವಿದೆ. ಅಂದರೆ ದಾರಿಗೂ ಸುಂಕಕ್ಕೂ ಯಾವ ಸಂಬಂಧವೂ ಇಲ್ಲವೆಂಬ ಸೂಚನೆ. ನಾವು ಗಮನಿಸುತ್ತಿರುವ 'ಬಂದ ದಾರಿಗೆ ಸುಂಕವಿಲ್ಲ'ವೆಂಬ ಗಾದೆಯಲ್ಲೂ ಇದೇ ಅರ್ಥವಿದೆಯೇ? ಹಾಗಿದ್ದರೆ ಈವರೆಗೆ ಸಂಭವಿಸಿದ್ದಕ್ಕೆ ಏನೂ ತೆರಿಗೆ ನೀಡಬೇಕಿಲ್ಲ ಎಂದೇ ತಿಳಿಯಬೇಕಾಗುತ್ತದೆ. ಆದರೆ ಬಳಕೆಯಲ್ಲಿ ಈ ಅರ್ಥವಿಲ್ಲ. ಈ ಗಾದೆಯ ಅರ್ಥ ಮತ್ತು ಬಳಕೆಯಲ್ಲಿರುವ

ಗೊಂದಲಗಳೇ ಮೇಲೆ ಉಲ್ಲೇಖಿಸಿದ 'ಸುಂಕವಿಲ್ಲದ ದಾರಿಗೆ ಪಯಣ' ಎಂಬ ರಚನೆಯಲ್ಲೂ ಮುಂದುವರೆದಂತೆ ತೋರುತ್ತದೆ.

## 13. ಪದಬಂಧಗಳು

ವೃತ್ತಪತ್ರಿಕೆಗಳಲ್ಲಿ ಈಗ ದಿನದಿವೂ ಪದಬಂಧಗಳನ್ನು ರಚಿಸಿ ಓದುಗರ ಎದುರು ಇಡುವುದನ್ನು ಗಮನಿಸಿದ್ದೇವೆ. ವಾಸ್ತವವಾಗಿ ಇವು ತಲೆ ಕೆಳಗಾದ ನಿಘಂಟುಗಳು. ನಿಘಂಟುಗಳಲ್ಲಿ ಪದ (ರೂಪ)ಗಳಿಗೆ ಅರ್ಥಗಳನ್ನು ಹುಡುಕುತ್ತೇವೆ. ಪದಬಂಧಗಳಲ್ಲಿ ಅರ್ಥಗಳಿಗೆ ತಕ್ಕ ಪದ (ರೂಪ)ಗಳನ್ನು ಕಂಡುಕೊಳ್ಳುವುದು ಮುಖ್ಯ. ಪದ(ರೂಪ)ಗಳಿಗೆ ಹಲವು ಅರ್ಥಚ್ಛಾಯೆಗಳನ್ನು ನಿಘಂಟು ದಾಖಲಿಸಿದ್ದರೆ ನಮಗೆ ಅವಶ್ಯ ಇಲ್ಲವೇ ಸೂಕ್ತವೆನಿಸಿದ ಅರ್ಥವನ್ನು ನಾವು ಆಯ್ಕೆ ಮಾಡುತ್ತೇವೆ. ಪದಬಂಧದಲ್ಲಿ ನೀಡಲಾದ ಅರ್ಥವನ್ನು ಸೂಚಿಸುವ ಹಲವು ಪದ(ರೂಪ)ಗಳಿರುವುದು ಸಾಧ್ಯ. ಪದಬಂಧದ ಇತರ ಪದಗಳಿಗೆ ಹೊಂದುವ ಪದವನ್ನು ಸಾಧ್ಯರೂಪಗಳಿಂದ ಆಯ್ಕೆ ಮಾಡಿಕೊಳ್ಳುತ್ತೇವೆ. ಉದಾ: ಮೂರು ಕಣ್ಣುಳ್ಳ ದೇವತೆ ಎಂಬ ಅರ್ಥಕ್ಕೆ ಈಶ್ವರ, ಶಿವ, ಮುಕ್ಕಣ್ಣ, ಗಿರಿಜಾಪತಿ, ಪಾರ್ವತೀಶ, ರುದ್ರ ಹೀಗೆ ಹಲವು ಪದ (ರೂಪ)ಗಳು ಸಾಧ್ಯ. ಆದರೆ ಪದಬಂಧ ಪದದ ಅಕ್ಷರಗಳ ಸಂಖ್ಯೆಯನ್ನು ನಿಗದಿಪಡಿಸಿರುತ್ತದೆ ಮತ್ತು ಆಯ್ಕೆ ಮಾಡಿದ ಪದ, ಪದಬಂಧದ ಇತರ ಪದಗಳೊಡನೆ ಹೊಂದಿಕೊಳ್ಳ ಬೇಕಾಗುತ್ತದೆ. ಭಾಷೆಯ ಬಳಕೆಯ ಒಂದ ವಿಶಿಷ್ಟ ಸಂದರ್ಭವಿದು. ನಿಘಂಟು ರಚಕರು ಪದ(ರೂಪ)ಗಳ ಬಳಕೆಯನ್ನು ಆಧರಿಸಿ ಅರ್ಥ ವಿವರಣೆ ಮಾಡುವ ವಿಧಾನವನ್ನು ಬಹು ಹಿಂದಿನಿಂದಲೂ ಅನುಸರಿಸುತ್ತಿದ್ದಾರೆ. ಪದಬಂಧಗಳು ಭಾಷಿಕರ ಭಾಷಾಸ್ಮೃತಿಯನ್ನು ಮತ್ತೊಂದು ದಿಕ್ಕಿನಿಂದ ಉದ್ದೀಪಿಸಿ ಪರೀಕ್ಷಿಸುತ್ತವೆ. ಪದದಿಂದ ಪದಾರ್ಥದ ಕಡೆಗೆ ನಡೆಯುವ ಚಲನೆಯೊಂದಾದರೆ (ನಿಘಂಟು) ಪದಾರ್ಥದಿಂದ ಪದದ ಕಡೆಗೆ ನಡೆಯುವ ಚಲನೆ ಮತ್ತೊಂದು (ಪದಬಂಧ)

ನಮ್ಮ ಭಾಷಾಬಳಕೆಯಲ್ಲಿ ಪದ-ಪದಾರ್ಥಗಳ ಸಂಬಂಧ ಯಾವ ಬಗೆಯಲ್ಲಿರುವುದೆಂಬುದು ಕುತೂಹಲಕಾರಿ. ಈ ಟಿಪ್ಪಣಿಯ ಮಟ್ಟಿಗೆ ಈ ಸಂಬಂಧದ ಸ್ವರೂಪವನ್ನು ನಮ್ಮ ಶಿಕ್ಷಣ ಪದ್ಧತಿ ಗ್ರಹಿಸಿರುವ ವಿಧಾನವಷ್ಟೇ ಪ್ರಸ್ತುತವಾಗಿದೆ. ಒಂದು ಉದಾಹರಣೆ: ಗಣಿತದಲ್ಲಿ ಗುಣಿಸುವ ಕ್ರಿಯೆಯನ್ನು ಬೋಧಿಸುವಾಗ 3x4=12ಎಂದು ಕಲಿಯುವಂತೆ 12 ಸಂಖ್ಯೆಗೆ 2 ಮತ್ತು 4 ಅಪವರ್ತಗಳು (ಇದು ಒಂದು ಜೋಡಿ. ಇಂಥವು ಹಲವು ಅಪವರ್ತನಗಳು 12ಕ್ಕೆ ಇವೆ) ಎಂಬುದನ್ನು ಕಲಿಯುತ್ತೇವೆ. ಹೀಗೆ ಎರಡು ಮುಖಗಳಿಂದ ಒಂದು ಸಂಗತಿಯನ್ನು ಗ್ರಹಿಸುವುದು ಗಣಿತ ಕಲಿಕೆಯಲ್ಲಿ ನಡೆಯುತ್ತದೆ. ಪದಕೋಶ ಸ್ಥಿರೀಕರಣದಲ್ಲಿ ಪದದಿಂದ-ಪದಾರ್ಥಗಳ ಸಂಬಂಧವನ್ನು ಅರಿಯುವುದು ಎಷ್ಟು ಮುಖ್ಯವೋ ಪದಾರ್ಥದಿಂದ ಪದವನ್ನೂ ಗೊತ್ತು ಮಾಡುವುದೂ ಅಷ್ಟೇ ಮುಖ್ಯವಾಗಬೇಕು. ಹಾಗಾಗಿ ನಮ್ಮ ಶಿಕ್ಷಣ ಕ್ರಮದಲ್ಲಿ ಈ ಪದಾರ್ಥ-ಪದ ಗ್ರಹಿಕೆಯ ಸಾಮರ್ಥ್ಯಗಳನ್ನು ಹೆಚ್ಚಿಸುವ ಅಭ್ಯಾಸ ಕ್ರಮಗಳನ್ನು ಸೇರಿಸುವುದು ಅವಶ್ಯ.

ಪದಬಂಧಗಳಲ್ಲಿ ಮತ್ತೊಂದು ಬಗೆಯವು ಇವೆ. ಇಲ್ಲಿ ಪದಗ್ರಹಿಕೆಯಾಗಲು ನೀಡುವ ಸೂಚನೆಗಳು ಆ ಪದದ ಅರ್ಥವನ್ನು ಅವಲಂಬಿಸಿರುವುದಿಲ್ಲ. ಬದಲಿಗೆ ಆ ಪದದ ಶಾಬ್ದಿಕ ಸ್ತರವನ್ನು ಅವಲಂಬಿಸಿರುತ್ತವೆ. ಕೆಳಗಿನ ಕೆಲವು ಸೂಚನೆಗಳನ್ನು ಗಮನಿಸಿ:

1. ಇವಳು ಕೆಟ್ಟ ಗ್ರಾಮದೇವತೆಯೇ? (3)
2. ಈ ಧಾನ್ಯದ ತಲೆ ಕತ್ತರಿಸಿದರೆ ಹಕ್ಕಿಯ ಪುಕ್ಕ ಸಿಗುತ್ತದೆ (3)
3. ಈ ಸಂಗೀತ ವಾದ್ಯದಲ್ಲಿ ನೀರಿನ ಸಂಗ್ರಹವಿದೆ(3)

ಕ್ರಮವಾಗಿ ನಾವು ಗ್ರಹಿಸಬೇಕಾದ ಪದಗಳು: ಕುಮಾರಿ, ತೊಗರಿ ಮತ್ತು ಕೊಳಲು. ಈ ಪದಗಳಿಗೂ ನೀಡಲಾದ ಸೂಚನೆಗಳಿಗೂ ಅರ್ಥದ ನೆಲೆಯ ಸಂಬಂಧಗಳಿಲ್ಲ. ಆಯಾ ಪದಗಳ ಧ್ವನಿರಚನೆಯನ್ನು ಅವಲಂಬಿಸಿ ಈ ಸೂಚನೆಗಳು ನಿರ್ಮಾಣಗೊಂಡಿವೆ. ಇಲ್ಲಿ ಜಾಣತನ ಮಾತ್ರ ಇದೆ ಎನ್ನುವಂತಿಲ್ಲ. ಭಾಷೆಯ ಶಬ್ದ ಮತ್ತು ಅರ್ಥಗಳ ಸಂಬಂಧವನ್ನು ಭಿನ್ನ ರೀತಿಯಲ್ಲಿ ನೋಡುವ ಉದ್ದೇಶವಿದೆ. ಈ ಬಗೆಯ ಪದಬಂಧಗಳೂ ಕೂಡ ಭಾಷಾಶಿಕ್ಷಣದಲ್ಲಿ ಅತ್ಯವಶ್ಯ. ಕಲಿಯುವವರಿಗೆ ಪದರೂಪವನ್ನು ಅರ್ಥದೊಡನೆ ಸದಾ ಜೋಡಿಸಿ ನೋಡುವ ಪ್ರವೃತ್ತಿಯಿಂದ ಹೊರಬರಲು ಈ ಪದಬಂಧಗಳು ಅವಕಾಶ ನೀಡುತ್ತಿದೆ.

## 14. 'ವ' ಒಂದು ಚಿಹ್ನೆ, ಎರಡು ಉಚ್ಚಾರ

ಕನ್ನಡದ ಲಿಪಿವ್ಯವಸ್ಥೆಯಲ್ಲಿ 'ವ' ಎಂಬ ಚಿಹ್ನೆಯಿದೆ. ಸಾಮಾನ್ಯವಾಗಿ ಭಾಷಾಧ್ಯಯನಕಾರರು ಇದನ್ನು ದ್ವಯೋಷ್ಠ್ಯ ಘೋಷ ಘರ್ಷವೆಂದು ವರ್ಣಿಸುತ್ತಾರೆ. ಪ,ಬ,ಮ ಉಚ್ಚಾರಣಾ ಸ್ಥಾನದಲ್ಲಿನ ಘರ್ಷಧ್ವನಿ. ಇದರ ಅಘೋಷರೂಪ ಕನ್ನಡದಲ್ಲಿ ಬಳಕೆಯಾಗುವುದು ಈಚೆಗೆ ಕಂಡುಬಂದಿದೆ. ಇಂಗ್ಲಿಶಿನ coffee, fee, surf, fine ಮುಂತಾದ ಪದಗಳನ್ನು ಕಲಿತ ಕನ್ನಡಿಗರು ಉಚ್ಚರಿಸುವಾಗ 'f' ಧ್ವನಿಯನ್ನು ದ್ವಯೋಷ್ಠ್ಯ ಅಘೋಷ ಘರ್ಷವನ್ನಾಗಿ ಉಚ್ಚರಿಸುತ್ತಾರೆ. ಅದೇನೇ ಇರಲಿ, 'ವ್' ಒಂದು ದ್ವಯೋಷ್ಠ್ಯ ಘರ್ಷವೆಂದು ತಿಳಿಯಲು ಕನ್ನಡ ಸಂಧಿ ಸಂದರ್ಭವೊಂದು ಸಮರ್ಥನೆ ನೀಡುತ್ತದೆ. ಪ್,ಬ್,ಮ್ ಗಳು ಉತ್ತರಪದದ ಆದಿಧ್ವನಿಗಳಾಗಿದ್ದಾಗ ವಕಾರಾದೇಶವಾಗುವ ನಿದರ್ಶನಗಳು ಕನ್ನಡದಲ್ಲಿವೆ.

ಎಲೆ+ಮನೆ=ಎಲೆವನೆ

ಕಣ್ಣೀರ್+ಪೊನಲ್–ಕಣ್ಣೀರ್ವೊನಲ್

ತೋಳ್+ಬಲ–ತೋಳ್ವಲ

ಆದರೆ ಕನ್ನಡದಲ್ಲಿ ವಕಾರಾದೇಶವಾಗುವ ಇತರ ಸಂದರ್ಭಗಳೂ ಇವೆ.

ಪುಸ್ತಕ+ಅನ್ನು– ಪುಸ್ತಕವನ್ನು

ಹಣ+ಅನ್ನು–ಹಣವನ್ನು

ಹಣ+ಉಳ್ಳ–ಹಣವುಳ್ಳ
ಜಾಗ+ಉಳ್ಳ–ಜಾಗವುಳ್ಳ

ಈ ನಿದರ್ಶನಗಳಲ್ಲಿರುವ 'ವ' ಕಾರದ ಉಚ್ಚಾರವೇನು? ಪೂರ್ವಸ್ವರಗಳಾದ ಇ,ಎಗಳಿಗೆ ಸ್ವರ ಪರವಾದಾಗ ಯಕಾರಾಗಮವಾಗುವ ಪ್ರಸಂಗವನ್ನು ಗಮನಿಸಬೇಕು.

ತಲೆ+ಅಲ್ಲಿ–ತಲೆಯಲ್ಲಿ
ಇಲಿ+ಅನ್ನು–ಇಲಿಯನ್ನು

ಯಕಾರಾಗಮ ಮತ್ತು ವಕಾರಾಗಮಗಳು ನಡೆಯುತ್ತಿರುವ ಪರಿಸರವನ್ನು ಸಂಧಿಯಾಗುತ್ತಿರುವ ಸಂದರ್ಭದ ಸ್ವರಗಳು ನಿರ್ದೇಶಿಸುತ್ತಿವೆ. ಯ್ ಪೂರ್ವ ಜಾರುಧ್ವನಿ. ಹಾಗಾಗಿ ವ್ ಕೂಡ ಇಲ್ಲಿ ಪಶ್ಚ ಜಾರುಧ್ವನಿ ಯೆಂದು ತಿಳಿಯಲು ಸಾಧ್ಯ. ಪಶ್ಚಸ್ವರಗಳ ನಡುವೆ(ಅ,ಉ,ಒ) ಸಂಧಿಯಾದಾಗ ಜಾರುಧ್ವನಿಯ ಆಗಮವಾಗುತ್ತದೆ. ಈ ಧ್ವನಿಯನ್ನು ಮೊದಲು ನಾವು ಗುರುತಿಸಿದ ಓಷ್ಠ್ಯ ಘರ್ಷವೆಂದು ಹೇಳುವುದು ಸರಿಯಾಗದು. ಕೆಲವರು ಹೀಗೆ ಆಗಮವಾಗುವ 'ವ್' ಪ್ರಕೃತಿಯ ಭಾಗವೆಂದು ವಾದಮಾಡಬಹುದು. ಹಾಗಿದ್ದಾಗಲೂ ಅದರ ಉಚ್ಚಾರಣೆ ಮಾತ್ರ ಪಶ್ಚ ಜಾರುಧ್ವನಿಯೇ ಹೊರತು ಬೇರೇನಲ್ಲ. ಈ ಮೇಲಿನ ವಿವರಣೆಯಿಂದ ಕನ್ನಡ ಬರೆವಣಿಗೆಯ ಚಿಹ್ನೆ 'ವ್'ಗೆ ಎರಡು ಭಿನ್ನ ಉಚ್ಚಾರಣೆಗಳಿವೆಯೆಂದು ಗೊತ್ತಾಗುತ್ತದೆ. ಅಥವಾ ಎರಡು ಭಿನ್ನ ಉಚ್ಚಾರಣೆಗಳಿರುವ ಧ್ವನಿಗಳನ್ನು ಒಂದೇ ಚಿಹ್ನೆಯ ಮೂಲಕ ಪ್ರತಿನಿಧಿಸುತ್ತಿದ್ದೇವೆ. 'ವ್' (ದ್ವಯೋಷ್ಠ್ಯ ಘೋಷ ಘರ್ಷ)ಗೆ ಹೆಚ್ಚಿನ ಪ್ರಸಾರವಿದೆ. ಅನ್ಯಭಾಷೆಗಳಿಂದ ಎರವಲು ಪಡೆದ ಪದಗಳನ್ನು ನಾವು ವಕಾರಯುಕ್ತವಾಗಿ ಬರೆದಿದ್ದರೆ ಅಲ್ಲಿನ ಉಚ್ಚಾರಣೆ ಬಹುಮಟ್ಟಿಗೆ ಓಷ್ಠ್ಯ ಘೋಷವಾಗಿರುತ್ತದೆ. ವಂದನೆ, ಅವಿರತ, ವರ್ಣನೆ, ಅವೇಳೆ ಮುಂತಾದ ಸಂಸ್ಕೃತ ಪದಗಳೂ ವೆರಿಗುಡ್, ವಾಲ್, ಅವೇ(away) ಮುಂತಾದ ಇಂಗ್ಲಿಶ್ ಪದಗಳು ಉಚ್ಚಾರಗೊಳ್ಳುವಾಗ ಇದೇ ಉಚ್ಚಾರವಿದೆ. 'ವ್' ಜಾರುಧ್ವನಿಯಾಗಿ ಪಶ್ಚಧ್ವನಿಗಳು ಸಂಧಿಯಾಗುವ ಸಂದರ್ಭದಲ್ಲಿ ಹೆಚ್ಚಾಗಿ ಬಳಕೆಯಾಗುತ್ತದೆ. ಅಥವಾ ಪಶ್ಚಧ್ವನಿಗಳು ಪದಾದಿಯಲ್ಲಿ ಬಂದಾಗ ಅವುಗಳು ಈ ಜಾರುಧ್ವನಿಯೊಡಗುಡಿ ಉಚ್ಚಾರವಾಗುತ್ತವೆ. ವಲೆ(<ಒಲೆ), ವೋಟ(ಓಟ), ವುಡ(<ಉಡ), ವೂಟ(<ಊಟ) ಇತ್ಯಾದಿ. ತ್ವಾಟ(<ತೋಟ), ಕ್ವಾಟೆ (<ಕೋಟೆ), ಕ್ವಾಸ(<ಕೋಸ) ಇಲ್ಲಿಯೂ ಜಾರುಧ್ವನಿ 'ವ್' ಕಾರವೇ ಇದೆ. ಏನಿದ್ದರೂ ಈ ಜಾರುಧ್ವನಿ 'ವ್'ನ ಪ್ರಸಾರ ಕಡಿಮೆಯೆಂದೇ ತಿಳಿಯಬಹುದು. ಅಥವಾ ಅದರ ಉಚ್ಚಾರಣೆಯ ಸಂದರ್ಭಗಳು ಸೀಮಿತವಾಗ ತೊಡಗಿವೆ. ಇಲ್ಲಿ ಹೇಳಿದ ಪದಾದಿಯ ವಕಾರಾಗಮ ಸಂದರ್ಭಗಳು ಶಿಕ್ಷಣ ಪ್ರಸಾರದೊಡನೆ ಮಾಯವಾಗುತ್ತವೆ.

## 15. ಕನ್ನಡ ವಾಕ್ಯಗಳಲ್ಲಿ ಎರಡು ನಿಷೇಧಗಳು

ಈ ಕೆಳಗಿನ ವಾಕ್ಯಗಳನ್ನು ಗಮನಿಸಿ

1. ಜನರ ಶಾಪ ನಿಮಗೆ ತಟ್ಟದೇ ಇರುವುದಿಲ್ಲ(=ಜನರ ಶಾಪ ನಿಮಗೆ ತಟ್ಟುತ್ತದೆ.)

2. ಅಲ್ಲಿಗೆ ಹೋದವರು ಅರಮನೆ ನೋಡದೇ ಬರುವುದಿಲ್ಲ. (=ಅಲ್ಲಿಗೆ ಹೋದವರು ಅರಮನೆ ನೋಡಿ ಬರುತ್ತಾರೆ.)

3. ಈ ಕೆಲಸ ಮುಗಿಸಲೇಬೇಕೆಂದು ಹಠ ಹಿಡಿಯದೇ ಬಿಡುವುದಿಲ್ಲ. (=ಈ ಕೆಲಸ ಮುಗಿಸಬೇಕೆಂದು ಹಠ ಹಿಡಿಯುತ್ತಾರೆ.)

ಕಂಸಗಳಲ್ಲಿ ನೀಡಿರುವ ವಾಕ್ಯಗಳನ್ನೇ ಎರಡು ನಿಷೇಧಗಳನ್ನು ಬಳಸಿ 1,2 ಮತ್ತು 3ನೇ ವಾಕ್ಯಗಳನ್ನು ರಚಿಸಲಾಗಿದೆ.ಮತ್ತೆ ಈ ಕೆಳಗಿನ ವಾಕ್ಯಗಳನ್ನು ನೋಡಿರಿ:

4. ಕೈ ಕೆಸರಾಗದೇ ಬಾಯಿ ಮೊಸರಾಗುವುದಿಲ್ಲ(=ಕೈ ಕೆಸರಾದರೆ ಬಾಯಿ ಮೊಸರಾಗುತ್ತದೆ)

5. ಮಳೆ ಬರದೇ ಬೆಳೆಯಾಗುವುದಿಲ್ಲ. (=ಮಳೆ ಬಂದರೆ ಬೆಳೆಯಾಗುತ್ತದೆ)
6. ಎಣ್ಣೆ ಇಲ್ಲದೇ ದೀಪ ಹೊತ್ತಿಸಿಲ್ಲ (=ಎಣ್ಣೆ ಇದ್ದರೆ ದೀಪ ಹೊತ್ತಿಸಲಾಗುತ್ತದೆ).

5,6,7 ರಲ್ಲಿಯೂ ಎರಡು ನಿಷೇಧಗಳಿವೆ. ಆದರೆ ಇಲ್ಲಿ ಕಂಸದಲ್ಲಿರುವ ಮೂಲವಾಕ್ಯಗಳಲ್ಲಿರುವ ಸಂಭಾವನಾರ್ಥ ಗಮನಾರ್ಹ. (ಕೆಸರಾದರೆ, ಬಂದರೆ, ಇದ್ದರೆ)ಈ ಸಂಭಾವನಾರ್ಥವನ್ನು ನಿಷೇಧವಾಕ್ಯಗಳ ಮೊದಲ ನಿಷೇಧದ ಅನಂತರವೂ ಬಳಸಬಹುದು.

4.ಅ ಕೈ ಕೆಸರಾಗದಿದ್ದರೆ ಬಾಯಿ ಮೊಸರಾಗುವುದಿಲ್ಲ.

ದ್ವಿನಿಷೇಧ ವಾಕ್ಯಗಳ ಮೊದಲ ನಿಷೇಧವು ಹತ್ತುವ ಕ್ರಿಯಾರೂಪವು ಅಭೂತ ಕ್ರಿಯಾ ಅವ್ಯಯುವಾಗಿರುತ್ತದೆ. (ಬರದೇ, ಇಲ್ಲದೇ) ಆದರೆ ಮೂಲವಾಕ್ಯ (ಕಂಸಗಳಲ್ಲಿರುವುದು)ದಲ್ಲಿ ಸಂಭಾವನಾರ್ಥರೂಪ, ಭೂತಕೃದಂತ ರೂಪಕ್ಕೆ ಹತ್ತುತ್ತದೆ. (ಬಂದರೆ, ಇದ್ದರೆ) ಮೊದಲ ಮೂರು ವಾಕ್ಯಗಳಲ್ಲಿ ಎರಡು ನಿಷೇಧಗಳ ಬಳಕೆ, ಶೈಲಿಯ ಅವಶ್ಯಕತೆಯಂತೆ ಕಂಡುಬರುತ್ತದೆ. ಕಂಸದಲ್ಲಿರುವ ಮೂಲವಾಕ್ಯಗಳು ಹೆಚ್ಚು ಖಚಿತವಾಗಿವೆ. ಆದರೆ ಎರಡನೇ ಗುಂಪಿನ ವಾಕ್ಯಗಳಲ್ಲಿ ಮೂಲವಾಕ್ಯಗಳು ಯಾವಾಗಲೂ ನಿಜ ಸಂದರ್ಭವನ್ನು ಹೇಳುವುದಿಲ್ಲ. ಅಂದರೆ ಅವು ಒಂದು ಸಾಧ್ಯತೆ ಮಾತ್ರ. ಉದಾ: ಮಳೆ ಬರದೇ ಬೆಳೆಯಾಗುವುದಿಲ್ಲ ಎಂದಾಗ 'ಮಳೆ'ಯು 'ಬೆಳೆ'ಯಾಗಲು ಅವಶ್ಯವೆಂಬ ಸೂಚನೆ ಇದೆ. ಆದರೆ 'ಬೆಳೆ'ಯಾಗಲು 'ಮಳೆ' ಮಾತ್ರ ಸಾಕು ಎಂದು ಹೇಳುವುದಿಲ್ಲ. ಅಂದರೆ ತರ್ಕದ ಹೇಳಲಾಗಿದೆಯೇ ಹೊರತು ಸಾಕು ಎನಿಸುವಷ್ಟು (ಸಫಿಶಿಯಂಟ್) ಸಂದರ್ಭಗಳನ್ನು ಹೇಳಿಲ್ಲ. ಅಂದರೆ ಮೂಲವಾಕ್ಯಗಳಿಗಿಂತ ನಿಷೇಧ ವಾಕ್ಯಗಳೇ ಹೆಚ್ಚು ಖಚಿತವಾಗಿವೆ. ದೃಢವಾಗಿವೆ.

ಈಚೆಗೆ ಕನ್ನಡದಲ್ಲಿ ಮೊದಲ ಬಗೆಯ ದ್ವಿನಿಷೇಧವಾಕ್ಯಗಳ ಬಳಕೆ ಹೆಚ್ಚಾಗಿರುವಂತೆ ತೋರುತ್ತದೆ. ಮಾಧ್ಯಮಗಳಲ್ಲಿ ಇಂಥ ನಿದರ್ಶನಗಳು ಕಾಣಸಿಗುತ್ತವೆ. ಹೇಳಲೇ ಬೇಕಾದುದನ್ನು ದೃಢವಾಗ ಹೇಳಲು ಸಾಧ್ಯವಿಲ್ಲದಿರುವಾಗ ಅಥವಾ ಹಾಗೆ ದೃಢವಾಗಿ ಹೇಳಲು ಇಚ್ಛೆ ಇಲ್ಲದಿದ್ದಾಗ ಈ ದ್ವಿನಿಷೇಧಗಳನ್ನು ಬಳಸುವ ಅವಶ್ಯಕತೆ ಉಂಟಾಗುತ್ತದೆಂದು ತಿಳಿಯಬಹುದಾಗಿದೆ.

## 16. ವರೆಗೆ, ತನಕ

ವರೆಗೆ, ತನಕ, (ತಂಕ, ತನಾ)ಗಂಟ, ಮಟ ಮುಂತಾದ ಅವ್ಯಯಗಳು ಕಾಲಾವಧಿಯನ್ನು ಸೂಚಿಸುವಂತೆ ದೂರವನ್ನೂ ಹೇಳುತ್ತವೆ.

1. ನಾಳೆವರೆಗೆ ನೀನು ಕಾಯಬೇಕು (ಕಾಲ)
2. ಆ ಮೂಲೆವರೆಗೆ ನನ್ನೊಡನೆ ಬಾ (ದೂರ)

ಕೆಲವೊಮ್ಮೆ ಈ ಎರಡೂ ಸೂಚನೆಗಳು ಒಂದೇ ಪ್ರಯೋಗದಲ್ಲಿ ಸಿಗಲೂಬಹುದು. (ಬಸ್ಸು ಬರುವ ಸಮಯ ಇಲ್ಲವೇ ಬಸ್ಸು ಬರುವ ಸ್ಥಳ)

3. ಬಸ್ಸು ಬರುವವರೆಗೆ ನಡೆಯುತ್ತಿರೋಣ

3ರಲ್ಲಿ ಕಾಲದ ಸೂಚನೆ ಇರುವಂತೆ ದೂರದ ಸೂಚನೆ ಕೂಡ ಇದೆ.

ಎರಡು ಸಮಸ್ಯೆಗಳು: 1. ಈ ಸಮಾನಾರ್ಥಕಗಳಲ್ಲಿ ಎಲ್ಲವನ್ನೂ, ಎಲ್ಲ ಸಂದರ್ಭಗಳಲ್ಲೂ ಒಂದರ ಬದಲು ಇನ್ನೊಂದನ್ನು ಬಳಸಬಹುದೇ 2.ಒಂದು ವಾಕ್ಯದಲ್ಲಿ ಇವು ಕಾಲ(ಅವಧಿ) ಅಥವಾ ದೂರ (ಅಂತರ)ಗಳಲ್ಲಿ ಏನನ್ನು ಸೂಚಿಸುತ್ತವೆಂದು ತಿಳಿಯುವುದು ಹೇಗೆ?

ಗಂಟ ಮತ್ತು ಮಟಗಳು ಉಪಭಾಷಿಕ ಪ್ರಸಾರವನ್ನು ಪಡೆದಿವೆ. ಹಾಗಾಗಿ ಅವು ನಿರ್ದಿಷ್ಟ ಪ್ರದೇಶಗಳಲ್ಲಿ ಮಾತ್ರ ಬಳಕೆಯಾಗುವುದರಿಮದ ಪರ್ಯಾಯಗಳಾಗುವ ಸಾಧ್ಯತೆ ಕಡಿಮೆ. ವರೆಗೆ ಹೆಚ್ಚು ಔಪಚಾರಿಕ ಮತ್ತು ಬರೆಹಗನ್ನಡಕ್ಕೆ ಸೇರಿದೆ. ಹಾಗಾಗಿ ಈ ಪದಗಳಲ್ಲಿ ಒಂದು ಇನ್ನೊಂದರ ಬದಲು ಬಳಕೆಯಾಗುವ ಸಂದರ್ಭಗಳು ಒದಗುವುದಿಲ್ಲ.

ಸಾಮಾನ್ಯವಾಗಿ ಈ ಅವ್ಯಯದ ಹಿಂದಿನ ಪದದ ನೆರವಿನಿಂದ ಅದು ಅವಧಿಯನ್ನು ಸೂಚಿಸುವುದೋ ಅಥವಾ ಅಂತರವನ್ನೋ ಎಂಬುದು ನೆರವಿನಿಂದ ಅದು ಅವಧಿಯನ್ನು (3ರಲ್ಲಿ ಇರುವಂತೆ) ಈ ಸೂಚನೆ ಅಸ್ಪಷ್ಟವಾಗುವುದೂ ಉಂಟು. ಪೂರ್ವಪದಗಳು ನಾಮಪದಗಳಾಗಿದ್ದರೆ ಈ ಅಸ್ಪಷ್ಟತೆ ಇರುವುದಿಲ್ಲ. ಕ್ರಿಯಾವ್ಯಯಗಳಾದರೆ ಈ ಅನಿರ್ಧಾರಕ ಅಂಶ ಕಾಣಿಸಿಕೊಳ್ಳುವುದುಂಟು.

ಹಳಗನ್ನಡದಲ್ಲಿ ಅನ್ನಕ, ಅನ್ನವರ, ಅನ್ನೆವರಂ, ಅನ್ನೆಬರಂ ಎಂಬಿತ್ಯಾದಿ ಪ್ರಯೋಗಗಳು ಇದೇ ಬಗೆಯ ಅವ್ಯಯಗಳಾಗಿ ಬಳಕೆಯಾಗಿವೆ. ನಡುಗನ್ನಡದಲ್ಲಿ ಅನ್ನಕ್ಕ, ಅನ್ನಕ್ಕರ ರೂಪಗಳಿವೆ. ಆದರೆ ಈಗ ಅನಕ, ಅನಕಾ ಎಂಬ ರೂಪಗಳಷ್ಟೇ ಉಳಿದಿದ್ದು, ಅವುಗಳಿಗೆ ಅಂತೂ ಎಂಬ ಅರ್ಥ ಲಭಿಸಿದೆ.

4. ನಾನನಕ ಬರುವುದಿಲ್ಲ
5. ಈ ಕೆಲಸಕ್ಕೆ ಅವನನಕ ಲಾಯಕ್ಕಿಲ್ಲ

ತನಕ, ವರೆಗೆಗಳ ಅರ್ಥದಲ್ಲಿ ಅನಕ ಬಳಕೆಯಾಗುವುದಿಲ್ಲ

## 17. ಓರಾಟಗಾರ

ಈಚಿನ ವರ್ಷಗಳಲ್ಲಿ ಮುದ್ರಣ ಮಾಧ್ಯಮಗಳು ಈಪದವನ್ನು ಬಳಸತೊಡಗಿವೆ. ಯಾವುದೇ ಸಾಮಾಜಿಕ ಚಳುವಳಿಯ ಉದ್ದೇಶವನ್ನು ಸರಿಯಾಗಿ ಅರಿಯದೇ ಹುಂಬತನದಲ್ಲಿ ಮುನ್ನುಗ್ಗುವವರನ್ನು, ಚಳುವಳಿಯಿಂದ ತಮ್ಮ ಸ್ವಂತದ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳುವವರನ್ನು ಸಾಮಾನ್ಯವಾಗಿ ಓರಾಟಗಾರರೆಂದು ಕರೆಯಲಾಗುತ್ತಿದೆ.

ಓರಾಟಗಾರ ಪದವು ಹೋರಾಟಗಾರ ಪದದ ಒಂದು ಉಚ್ಚಾರಣಾ ರೂಪ. ಪದಾದಿಯ ಹಕಾರವನ್ನು ಲೋಪ ಮಾಡುವ ಮೂಲಕ ಓರಾಟಗಾರ ರೂಪ ಸಿದ್ಧಿಸುತ್ತದೆ. ಹೀಗೆ ಲೋಪ ಮಾಡುವವರು ಯಾರು? ಈ ಬಗ್ಗೆ ಒಂದು ಸಾಮಾನ್ಯ ತಿಳುವಳಿಕೆ ಇದೆ. ಹಳ್ಳಿಗಾಡಿನಿಂದ ಬಂದವರು, ಅಬ್ರಾಹ್ಮಣರು, ಅಶಿಕ್ಷಿತರು ಅಥವಾ ಕೌಟುಂಬಿಕವಾಗಿ ಶೈಕ್ಷಣಿಕ ಹಿನ್ನೆಲೆ ಇಲ್ಲದವರು ಇವರು ಪದಾದಿಯ ಹಕಾರವನ್ನು ಲೋಪಿಸುವರೆಂದೋ ಅಥವಾ ಹೀಗೆ ಲೋಪಿಸುವವರನ್ನು ಇಂಥ ಸಾಮಾಜಿಕ ಹಿನ್ನೆಲೆಯವರೆಂದೋ ಭಾವಿಸುವ ಪರಿಪಾಠವುಂಟು.

ಈಗ ಹುಂಬತನದ/ಸ್ವಂತದ ಆಸಕ್ತಿಯ ಚಳುವಳಿಗಾರರನ್ನು ಓರಾಟಗಾರರೆಂದು ಕರೆದದ್ದರಿಂದ ಏನಾಯಿತು? ಇಂಥ ಚಳುವಳಿ ಗಾರರಿಗೂ ಪದಾದಿಯ ಹಕಾರ ಲೇಪಿಸುವವರ ಕಲ್ಪಿತ ಸಾಮಾಜಿಕ ಹಿನ್ನೆಲೆಯನ್ನೇ ಆರೋಪಿಸಿದಂತಾಯಿತು. ಅಂದರೆ ಇದು ಹಳ್ಳಿಗಾಡಿನ, ಅಬ್ರಾಹ್ಮಣ, ಅಶಿಕ್ಷಿತ ಹಿನ್ನೆಲೆಯ ಚಳುವಳಿಗಾರರು ಹುಂಬರು ಮತ್ತು ಸ್ವಂತದ ಆಸಕ್ತಿಯುಳ್ಳವರು ಎಂದು ಭಾವಿಸಿದಂತೆ ಇದೆಯಲ್ಲವೇ? ಪದಾದಿಯ ಹಕಾರವನ್ನು ಉಚ್ಚರಿಸಬಲ್ಲವರಿಗೆ ಮಾತ್ರ ಶುದ್ಧಚಾರಿತ್ರ್ಯದ ಚಳುವಳಿಗಾರರಾಗಿರುವ ಅರ್ಹತೆ ಇದೆಯೆಂದು ಪರೋಕ್ಷವಾಗಿ ಹೇಳಿದಂತಾಯ್ತು.

'ಸರಿಯಾಗಿ' ಕನ್ನಡವನ್ನು ಮಾತನಾಡಲಾರದವರು ಕನ್ನಡದ ಉದ್ಧಾರವನ್ನೇನು ಮಾಡಿಯಾರು ಎನ್ನುವುದೂ ಒಂದೇ; ಸರಿಯಾಗಿ ಕನ್ನಡ ಮಾತಾಡುವವರಷ್ಟೇ ಕನ್ನಡವನ್ನು ಉದ್ಧರಿಸಬಲ್ಲವರೆಂದು ಹೇಳುವುದೂ ಒಂದೇ ಅಲ್ಲವೇ?

### 'ಅ' ಲಿಪಿಯ ಎರಡು ಉಚ್ಚಾರಗಳು

ಸಾಮಾನ್ಯವಾಗಿ ಕನ್ನಡ ಲಿಪಿಯನ್ನು ಕಲಿಸುವ ಶಿಕ್ಷಕರು ಒಂದು ಚಿಹ್ನೆಗೆ ಒಂದು ಉಚ್ಚಾರಣೆ ಎಂಬ ನಿಯಮವನ್ನು ಕನ್ನಡ ವರ್ಣಮಾಲೆ ಅನುಸರಿಸುವುದೆಂದು ತಿಳಿಯುತ್ತಾರೆ. ಆದರೆ ಈ ನಿಯಮ ಉಲ್ಲಂಘನೆಯಾಗುವ ಪ್ರಸಂಗಗಳು ಕೆಲವಿದೆ. ಕೆಲವು ಚಿಹ್ನೆಗಳಿಗೆ ಒಂದಕ್ಕಿಂತ ಹೆಚ್ಚು (ಬಹುಮಟ್ಟಿಗೆ ಎರಡು) ಉಚ್ಚಾರಣೆಗಳಿವೆ. ಆ ಉಚಚಾರಣೆಗಳಲ್ಲಿ ಒಂದು ಇನ್ನೊಂದರ ಬದಲು ಬಳಕೆಯಾಗುವುದು ಒಂದು ಬಗೆ. ಉದಾಹರಣೆಗೇ 'ಜ್ಞ' ಇದನ್ನು 'ಗ್ನ' ಎಂದು ಉಚ್ಚರಿಸುವ ಕ್ರಮ. ಇದಲ್ಲದೆ ಎರಡು ಉಚ್ಚಾರಣೆಗಳೂ ಬಳಕೆಯಲ್ಲಿರುವುದು ಇನ್ನೊಂದು ಬಗೆ. 'ಅ' ಲಿಪಿಗೆ ಸಂಬಂಧಿಸಿದಂತೆ ಈ ಅಂಶ ನಮಗೆ ಮುಖ್ಯ.

. ಅತ್ತೆ(=ಗಂಡ/ಹೆಂಡತಿಯ ತಾಯಿ) ಅತ್ತೆ (=ಅಳು ಧಾತುವಿನ ಭೂತ ರೂಪಗಳಲ್ಲಿ ಒಂದು)
. ತಂದೆ (=ಅಪ್ಪ) ತಂದೆ (=ತರು ಧಾತುವಿನ ಭೂತ ರೂಪಗಳಲ್ಲಿ ಒಂದು)

ಈ ನಿದರ್ಶನಗಳಲ್ಲಿ 1 ಮತ್ತು 2ನೇ ಗುಂಪಿನ ಮೊದಲ ಪದಗಳ ಮೊದಲ ಸ್ವರದ ಉಚ್ಚಾರಣೆಗೂ ಆ ಗುಂಪುಗಳ ಎರಡನೇ ಪದಗಳ ಮೊದಲ ಸ್ವರದ ಉಚ್ಚಾರಣೆಗೂ ವ್ಯತ್ಯಾಸಗಳಿವೆ. ಪಾರಿಭಾಷಿಕವಾಗಿ ಹೇಳುವುದಾದರೆ ಮೊದಲ ಬಗೆಯ ಉಚ್ಚಾರಣೆ ವಿವೃತ-ಪಶ್ಚ ಅ$_1$ ಆದರೆ ಎರಡನೆಯದು ಅರೆವಿವೃತ_ಮಧ್ಯ ಅ$_2$. ಆದ್ದರಿಂದ ಕನ್ನಡದಲ್ಲಿ 'ಅ' ಲಿಪಿಗೆ ಎರಡು ಉಚ್ಚಾರಣೆಗಳಿವೆ. ಈ ಮಾತು ಎಲ್ಲ ಉಪಭಾಷೆಗಳಿಗೂ ಅನ್ವಯಿಸುವುದೋ ಇಲ್ಲವೋ ತಿಳಿಯದು.

ಈ ವಿವರಣೆಯನ್ನು ಇನ್ನೊಂದು ರೀತಿಯಲ್ಲೂ ನೋಡುವುದು ಸಾಧ್ಯ. ಕನ್ನಡದಲ್ಲಿ, ಅದರ ಒಂದು ಪ್ರಭೇದದಲ್ಲಿ ಇವೆರಡೂ ಪ್ರತ್ಯೇಕ ಸ್ವರಗಳಾಗಿವೆ ಎನ್ನುವುದು ಈ ಇನ್ನೊಂದು ಸಾಧ್ಯತೆ. ಆದರೆ ಆ ಪ್ರಭೇದವನ್ನು ಬಳಸುವವರಿಗೆ ಈ ಉಚ್ಚಾರಣೆಯ ವ್ಯತ್ಯಾಸ ಗಮನಕ್ಕೆ ಬಂದಿರುವುದಿಲ್ಲ. ಗಮನಿಸುವಂತೆ ಹೇಳಿದಾಗ ವಿರಲೋಚ್ಚಾರಣೆಯಲ್ಲಿ, ಅವರಿಗೂ ವ್ಯತ್ಯಾಸಗೊತ್ತಾಗುವುದು. ಆದ್ದರಿಂದ ಅವುಗಳಿಗೆ ಪ್ರತ್ಯೇಕ ಅಸ್ತಿತ್ವವನ್ನು ನೀಡುವುದು ಸರಿಯಾಗದು.

**ಇನ್ನಷ್ಟು ನಿದರ್ಶನಗಳನ್ನು ನೋಡೋಣ**

ಕರಿ (ಕ್ರಿ. ಅ$_{೧}$), ಕರಿ (ನಾ.ಅ$_{೨}$); ಬರಿ (ಕ್ರಿ. ಅ$_{೧}$) ಬರಿ (ನಾ. ಅ$_{೨}$)

ಇವುಗಳಲ್ಲಿ ಕ್ರಿಯಾಪದ ರೂಪಗಳಿಗೆ ಕರೆ, ಬರೆ ಎಂಬ ಪರ್ಯಾಯ ರೂಪಗಳಿವೆ. ಕನ್ನಡದಲ್ಲಿ ಅದರ ಕೆಲವು ಉಪಭಾಷೆಗಳಲ್ಲಿ ಕ್ರಿಯಾಪದದ ಈ ಎರಡೂ ರೂಪಗಳೂ ಬಳಕೆಯಲ್ಲಿವೆ. ಎ ಕಾರಾಂತ ರೂಪಗಳಲ್ಲಿ ಪ್ರಥಮ ಸ್ವರ ಉಚ್ಚಾರಕ್ಕೂ ವ್ಯತ್ಯಾಸಗಳಿವೆ. ಎಕಾರಾಂತ ರೂಪಗಳಲ್ಲಿ ಪ್ರಥಮ ಸ್ವರ ವಿವೃತ ಪಶ್ಚ(ಅತ್ತೆ-ಗಂಡ/ಹೆಂಡತಿಯ ತಾಯಿ) ರೂಪದಲ್ಲಿ ಇದ್ದಂತೆಯೇ ಇದೆ. ಸುಲಭವಾಗಿ ಗ್ರಹಿಸಲು 'ಅರೆ' ರೂಪವನ್ನು ಗಮನಿಸಿ 'ಅರೆ' (ಕ್ರಿ)=ನುರಿಯುವ ಕ್ರಿಯೆ. ಪರ್ಯಾಯರೂಪ 'ಅರಿ', ಅರೆಯ ಮೊದಲ ಸ್ವರ ಮತ್ತು ಅರಿಯ ಮೊದಲ ಸ್ವರಗಳು ಉಚ್ಚಾರಣೆಯಲ್ಲಿ ಬೇರೆ ಬೇರೆ ಎಂದರೇನಾಯ್ತು? ಅಂತ್ಯಸ್ವರ ಎಕಾರ_ಇಕಾರವಾದಾಗ (ಉನ್ನತೀಕರಣ) ಮೊದಲ ಸ್ವರವೂ ಪಶ್ಚ ಸ್ಥಾನದಿಂದ ಮಧ್ಯ ಸ್ಥಾನಕ್ಕೆ ಬರುತ್ತದೆ.

ಹಾಗಾಗಿ ನಾವು 'ಅ' ಲಿಪಿಯ ಎರಡು ಉಚ್ಚಾರಣೆಯ ಕಾರಣವನ್ನು ವಿವರಿಸಿದಂತಾಯಿತು. ಕನ್ನಡ ಭಾಷೆಯ ಚರಿತ್ರೆಯ ವಿವರಗಳಿಂದ ಇದೇ ಕ್ರಿಯೆಯನ್ನು ಇನ್ನೂ ಒಂದು ರೀತಿಯಿಂದ ವಿವರಿಸಲು ಸಾಧ್ಯವಿದೆ.

**ಮುನ್ನಡೆ, ಮುನ್ನೆಡೆ: ಹಿನ್ನೆಲೆ, ಹಿನ್ನಲೆ; ಮುನ್ನೆಲೆ, ಮುನ್ನಲೆ**

ಮೊದಲ ಜೋಡಿ ಪದದಲ್ಲಿ ಮೊದಲನೆಯದು ಸಾಧು, ಮುನ್ ಎಂಬ ಪ್ರತ್ಯಯಕ್ಕೆ ನಡೆ ಎಂಬ ಪದ ಸೇರಿದೆ. **ಮುನ್ನೆಡೆ** ಎಂಬುದನ್ನು ಮುನ್+ಎಡೆ ಎಂದು

ವಿಭಜಿಸಬೇಕಾಗುತ್ತದೆ. ಅದರ ಅರ್ಥ ಮುಂದಿನ ಭಾಗ ಎಂದಾಗಬಹುದು. ಆದರ
ಪ್ರಗತಿ, ಚಲನೆ ಎಂಬ ಅರ್ಥ ಬೇಕಾದರೆ **ಮುನ್ನಡೆ** ಎಂದೇ ಬಳಸುವುದು ಸೂಕ್ತ.

ಎರಡನೇ ಜೋಡಿಯಲ್ಲಿಯೂ ಮೊದಲನೆಯ ಪದವೇ ಸರಿ. ಹಿನ್ ಪ್ರತ್ಯಯ
ನೆಲೆ ಸೇರಿದೆ. **ಹಿನ್ನಲೆ** ಎಂಬ ರಚನೆಯನ್ನು ಹಿನ್+ಅಲೆ ಎಂಬುದಾಗಿ ವಿಭಜಿಸಿದ
ಹಿಂದಿನಿಂದ ಬಂದ ಅಲೆ ಎಂಬ ಅರ್ಥ ಬರುತ್ತದೆ. ಆದರೆ **ಹಿನ್ನೆಲೆಯ** ಅರ್ಥ
ಬೇಕಾದರೆ **ಹಿನ್ನಲೆ** ಬಳಸುವುದು ಸಾಧ್ಯವಾಗದು. ಇದೇ ವಿವರಣೆಯನ್ನು ಮೂರನೆಯ
ಜೋಡಿಗೂ ಹೇಳಬಹುದು.

ಈ ಗೊಂದಲ ಏಕೆ ಉಂಟಾಗುತ್ತದೆ? ಒಂದು ಪದದ ರೂಪ ಸಾಮ್ಯದ ಮೇ
ಇನ್ನೊಂದನ್ನು ಗ್ರಹಿಸುವುದೇ ಈ ಗೊಂದಲಕ್ಕೆ ಕಾರಣ. **ಮುನ್ನೆಡೆ** ಎಂಬುದನ್ನು **ಹಿನ್ನೆ**
ಎಂಬುದರ ಸಾಮ್ಯದ ಮೇಲೆ ರೂಪಿಸಿಕೊಂಡು ಬಿಡುತ್ತೇವೆ. ಹಾಗೇ ಬರೆದೂ ಬಿಡುತ್ತೇವೆ

**ರೈಲು ಟಿಕೆಟ್ ದೊರೆಯಿತು: ರೈಲು ಟಿಕೆಟ್ ದೊರಕಿತು**

ಇವೆರಡು ವಾಕ್ಯಗಳು ಒಂದೇ ಅರ್ಥವನ್ನು ಹೊಂದಿವೆ. ಒಂದರ ಬದಲ
ಇನ್ನೊಂದು ಬಳಕೆಯಾಗಲು ಅಡ್ಡಿ ಇಲ್ಲ. ಮೊದಲ ವಾಕ್ಯದಲ್ಲಿ ದೊರೆ ಎಂಬುದ
ಕ್ರಿಯಾಧಾತುವಾದರೆ ಎರಡನೆಯುದರಲ್ಲಿ ದೊರಕು ಕ್ರಿಯಾಧಾತು. ದೊ
ಎಂಬುದರಿಂದಲೇ ದೊರಕು ಸಾಧಿತವಾಗಿದೆ ಎಂದು ನಿಘಂಟುಗಳು ಹೇಳುತ್ತವ
ಅದೀಗ ನಮಗೆ ಬೇಡ. ಇಂದಿನ ಕನ್ನಡದಲ್ಲಿ ಇವೆರಡೂ ಕ್ರಿಯಾರೂಪಗಳಲ್ಲಿ ಅ
ವ್ಯತ್ಯಾಸ ಕಾಣಬರುವುದಿಲ್ಲ. ಆದರೆ ನಡುಗನ್ನಡದಲ್ಲಿ ದೊರೆಕೊಳು, ದೊರೆಕೊಂ
ಎಂಬ ರೂಪಗಳು ಬಳಕೆಯಾಗಿವೆ.

**ಬುಶ್ ಅಥವಾ ಬುಷ್**

ನಾವೀಗ ದಿನವೂ ಹೊಸ ಹೊಸ ಪದಗಳಿಗೆ ಕನ್ನಡದಲ್ಲಿ ಲಿಖಿತ ರೂಪಗಳನ
ರೂಪಿಸುವ ಕೆಲಸ ಮಾಡಬೇಕಿದೆ. ಅದರಲ್ಲೂ ದೇಶ ವಿದೇಶಗಳ ರಾಜಕಾರಣಿಗಳ
ವಾಣಿಜ್ಯೋದ್ಯಮಿಗಳ ಹೆಸರುಗಳನ್ನು ಕನ್ನಡದಲ್ಲಿ ಬರೆಯುವಾಗ ಯಾವುದು ಸರಿಯಾ
ಕಾಗುಣಿತ ಎಂಬ ಪ್ರಶ್ನೆ ಕಾಡುತ್ತದೆ. ಬುಶ್ ಅಥವಾ ಬುಷ್, ಮುಶರಫ್ ಅಥವ
ಮುಷರಫ್. ಹಳೆಯ ನಿದರ್ಶನವನ್ನು ತೆಗೆದುಕೊಂಡರೆ ಶೇಕ್ಸ್‌ಪಿಯರ್ ಅಥವ
ಷೇಕ್ಸ್‌ಪಿಯರ್. ಇವೆಲ್ಲಾ ದಿನದಿನದ ಗೊಂದಲಗಳು. ಅದಕ್ಕಾಗಿ ಒಂದು ನಿಯಮವನ
ಮಾಡಿಕೊಳ್ಳುವುದು ಸರಿಯೆನಿಸುತ್ತದೆ. ಶ್ ಅಥವಾ ಷ್‌ಗಳಲ್ಲಿ ಯಾವುದು ಎಂದ
ಆಯ್ಕೆ ಮಾಡಿಕೊಳ್ಳಬೇಕಾಗಿ ಬಂದಾಗ ಶ್ ಅನ್ನೇ ಆಯ್ಕೆ ಮಾಡಿಕೊಳ್ಳುವುದು
ನಿಯಮ. ಶರಬತ್ ಮತ್ತು ಷರಬತ್‌ಗಳಲ್ಲಿ ಮೊದಲ ಧ್ವನಿ ಮೂಲ ಪರ್ಸೋ
ಅರಬಿಕ್‌ನಲ್ಲಿ ಯಾವುದು? ಇದಕ್ಕೆ ನಾವು ಉತ್ತರ ಕೊಡುತ್ತ ಕೂರಬೇಕಿಲ್ಲ. ಬಹುಮಟ್ಟ
ಕನ್ನಡಿಗರು ಮಾತನಾಡುವಾಗ ಶ್ ಮತ್ತು ಷ್‌ಗಳನ್ನು ಶ್ ಎಂದೇ ಉಚ್ಚರಿಸುತ್ತಾರ
ಬರವಣಿಗೆಯ ದೃಷ್ಟಿಯಿಂದ ನಾವು ಇವೆರಡರ ನಡುವೆ ಶ್ ಲಿಪಿಯನ್ನೇ ಆಯ
ಮಾಡಿಕೊಳ್ಳುವುದು ಸೂಕ್ತ. ಈಗಾಗಲೇ ಬಳಕೆಯಲ್ಲಿ ಬಂದು ಸ್ಥಿರಗೊಂಡಿರುವ ರೂಪಗಳ

ಷ್ ಇದ್ದರೆ ಅಂಥ ಕಡೆಗಳಲ್ಲಿ ಬದಲಾವಣೆಗಳು ಬೇಡ. ಉದಾ: ಷಟ್ಪದಿಯನ್ನು ಶಟ್ಪದಿ ಎಂದೇನೂ ಬರೆಯಬೇಕಿಲ್ಲ. ಹೊಸ ರೂಪಗಳ ಬರವಣಿಗೆಯಲ್ಲಿ ಮಾತ್ರ ಈ ನಿಯಮವನ್ನು ಜಾರಿಗೆ ತರಬಹುದು.

**ಅಸಮಾಧಾನ, ಅಸಮಧಾನ**

'ಅಸಮಧಾನ' ಎಂಬ ಪ್ರಯೋಗವನ್ನು ಕಳೆದ ವಾರ ಕೆಲವು ಪತ್ರಿಕೆಗಳಲ್ಲಿ ಕಂಡೆ. ಸಮಾಧಾನದ ನಿಷೇಧ ರೂಪ ಅಸಮಾಧಾನ. ನಾವು ಉಚ್ಚರಿಸುವ ರೀತಿಯನ್ನು ಗಮನಿಸಿದರೆ ಬರವಣಿಗೆಯಲ್ಲಿ ಯಾಕೆ 'ಅಸಮಧಾನ'ವೆಂದು ಬರೆಯಲಾಗಿದೆ ಎನ್ನುವುದು ಗೊತ್ತಾಗುತ್ತದೆ. ಏಕೆಂದರೆ ಬಹುಪಾಲು ಜನ ಹಾಗೆಯೇ ಉಚ್ಚರಿಸುತ್ತಾರೆ. ನೀವು ಗಮನಿಸಬಹುದು. ಅಸಾಮಾನ್ಯ ಎಂಬ ರೂಪದ ವಿಷಯದಲ್ಲೂ ಹೀಗೇ ಆಗುತ್ತದೆ. ಇದನ್ನು ಬರೆಯುವಾಗ ಅಸಾಮಾನ್ಯವೆಂದು ಬರೆದರೂ ಬಹಳ ಜನರು 'ಅಸಮಾನ್ಯ' ಎಂದು ಉಚ್ಚರಿಸುವುದನ್ನು ಗಮನಿಸಬಹುದು. ಕೆಲವು ಪದರೂಪಗಳ ಹೋಲಿಕೆಯಿಂದ ಇಂಥ ಗೊಂದಲಗಳು ಉಂಟಾಗುತ್ತಿರಬಹುದು. ಅಸಹಕಾರ ಅಂಥದೊಂದು ಪದ.

**ಅನಂತರ, ಆನಂತರ, ನಂತರ**

ಅನಂತರ ಎಂಬುದನ್ನು ನಂತರ, ಆನಂತರ ಎಂದು ಬರೆಯುವವರಿದ್ದಾರೆ. ಅಂತರಕ್ಕೆ ಅನ್ ಪೂರ್ವಪ್ರತ್ಯಯ ಸೇರಿ ಅನಂತರ ಆಗುತ್ತದೆ. ಅನತಿ, ಅನರ್ಘ ಎಂಬ ಪದಗಳಲ್ಲೂ ಹೀಗೇ ಆಗಿದೆ. ನಂತರ ಎನ್ನುವುದಕ್ಕೆ ವಿವರಣೆ ನೀಡುವುದು ಸಾಧ್ಯವಿಲ್ಲ. ನಂತರಕ್ಕೆ ದೂರಸೂಚಕ ಸರ್ವನಾಮವನ್ನು (ಅ) ಸೇರಿಸಿ ಅನಂತರ ಎಂದು ಬರೆಯಲಾಗುತ್ತದೆ. ನಂತರ ಎಂಬ ರೂಪವನ್ನು ಸಾಮಾನ್ಯವಾಗಿ ವಾಕ್ಯವೊಂದರ ಆರಂಭದಲ್ಲಿ ಬಳಸುವಂತೆ ತೋರುತ್ತದೆ. ಉದಾ:ಗೆ ಮಳೆ ನಿಂತ ನಂತರ ಬಸ್ಸು ಬಂತು ಎಂಬ ವಾಕ್ಯವನ್ನು ಗಮನಿಸಿ. ಇಲ್ಲಿ ನಿಂತ ನಂತರ ಎಂಬಲ್ಲಿ ಅನಂತರ (ನಿಂತ+ಅನಂತರ) ಇದೆಯೋ, ನಂತರ (ನಿಂತ+ನಂತರ) ಇದೆಯೋ ಹೇಳುವುದು ಕಷ್ಟ. ಅದರೆ ಕಳ್ಳರು ಪರಾರಿಯಾದರು. ನಂತರ ಪೊಲೀಸರು ಬಂದರು ಎಂಬ ವಾಕ್ಯಗಳಲ್ಲಿ ನಂತರ ಪ್ರಯೋಗ ಸ್ಪಷ್ಟವಾಗಿದೆ.

**ಊಟೋಪಚಾರ**

ಸುಮಾರು ಎಂಬತ್ತು ವರ್ಷಗಳ ಹಿಂದೆಯೇ ಶಿವರಾಮ ಕಾರಂತರು ತಮ್ಮ ಬರೆಹವೊಂದರಲ್ಲಿ ಈ ರೂಪವನ್ನು ಬಳಸಿದ್ದಾರೆ. ಇದು ಕನ್ನಡದ 'ಊಟ' ಮತ್ತು ಸಂಸ್ಕೃತದ 'ಉಪಚಾರ'ಗಳನ್ನು ಕೂಡಿಸಿರುವ ಪದ. ಸಂಧಿ ನಿಯಮ ಮಾತ್ರ ಸಂಸ್ಕೃತದ್ದು (ಗುಣಸಂಧಿ). ಇಂಥ ಹಲವು ಪ್ರಯೋಗಗಳು ಕಾಣ ಸಿಗುತ್ತವೆ. ಮರೋತ್ಪನ್ನ ಇಂಥದೇ ಒಂದು ಪದ. ಇದನ್ನು ನಿಯಮಬದ್ಧವಾಗಿ ವಿವರಿಸುವುದು ಸಾಧ್ಯವಿಲ್ಲ. ಸಾಮಾನ್ಯವಾಗಿ ಕನ್ನಡ ಪದಗಳು ಪೂರ್ವಪದಗಳಾಗಿದ್ದು ಸಂಸ್ಕೃತ ಪದಗಳು ಉತ್ತರಪದಗಳಾಗಿದ್ದರೆ ಆಗ ಸಂಸ್ಕೃತದ ಸಂಧಿ ನಿಯಮಗಳನ್ನು ಅನುಸರಿಸಿ ಪದರೂಪಗಳನ್ನು ಪಡೆಯುವ ಕ್ರಮವನ್ನು ನಾವು ಪಾಲಿಸುವಂತಿದೆ.

**ಜ್ಞಾನ, ಗ್ನಾನ, ಗ್ಯಾನ**

ಜ್ಞಾನವೆಂದು ಬರೆದು ಅದನ್ನು ಗ್ನಾನವೆಂದು ಉಚ್ಚರಿಸುವುದು ಹಲವು ಕನ್ನಡಿಗರ ಪರಿಪಾಟ. ವಿಜ್ಞಾನವನ್ನು ವಿಗ್ನಾನವೆಂದೇ ಉಚ್ಚರಿಸುವುದುಂಟು. ನಾವು ಕನ್ನಡಿಗರು ಬರೆದಂತೆ ಉಚ್ಚರಿಸುತ್ತೇವೆ. ಉಚ್ಚರಿಸಿದಂತೆ ಬರೆಯುತ್ತೇವೆ ಎಂಬ ನಂಬಿಕೆ ಅಷ್ಟು ನಿಜವಲ್ಲ. ಗ್ಯಾನವೆಂಬ ಇನ್ನೊಂದು ರೂಪವೂ ಮಾತು ಮತ್ತು ಬರಹಗಳೆರಡರಲ್ಲೂ ಬಳಕೆಯಲ್ಲಿದೆ. ಇದು ತದ್ಭವ ರೂಪ. ಇದರ ಅರ್ಥ ಕೂಡ ಸಂಕುಚಿತಗೊಂಡಿದೆ. ಆದರೆ ಜ್ಞಾನದ ಅರ್ಥವನ್ನೇ ಉಳಿಸಿಕೊಂಡಿರುವ ಗ್ನಾನಕ್ಕೆ ಬರಹದಲ್ಲಿ ಜಾಗ ಸಿಕ್ಕಿಲ್ಲ. (ಶಿವರಾಮಕಾರಂತರು ಒಮ್ಮೆ ಬಳಸಿದ್ದುಂಟು) ಜ್ಞ-ಇದು ಕನ್ನಡಕ್ಕೆ ಅಷ್ಟು ಸಹಜವಲ್ಲದ ಧ್ವನಿ ಸಂಯೋಜನೆ. ಹಾಗಾಗಿ ಅದನ್ನು ಉಚ್ಚರಿಸುವಾಗ ಗ್ನ ಎಂದು ನಮಗೆ ಹೊಂದುವ ರೀತಿಯಲ್ಲಿ ಉಚ್ಚರಿಸುವ ಪರಿಪಾಟ ಬೆಳೆದಿದೆ.

**ಕೃತಜ್ಞ, ಕೃತಘ್ನ**

ಜ್ಞಾನ, ಗ್ನಾನದ ವಿಚಾರ ತಿಳಿದೆವಷ್ಟೆ. ಈ ಮಾದರಿಯಲ್ಲೇ ಕೃತಜ್ಞ ಎಂಬುದನ್ನು ಕೃತಗ್ನ ಎಂದು ಉಚ್ಚರಿಸುವುದರಿಂದ ಅರ್ಥದ ನೆಲೆಯಲ್ಲೂ ವ್ಯತ್ಯಾಸಗಳಾಗುತ್ತವೆ. ಏಕೆಂದರೆ ಕೃತಗ್ನ ಎಂಬುದು ಕೃತಘ್ನದ ಅರ್ಥವನ್ನು ನೀಡುವ ಸಾಧ್ಯತೆ ಇದೆ. ಆಗ ವಿರುದ್ಧಾರ್ಥ ಪ್ರತೀತವಾಗುತ್ತದೆ. ಮಾಡಿದ(ನೆರವನ್ನು)ನೆನೆಪಿಟ್ಟುಕೊಂಡಿರುವಾತ ಕೃತಜ್ಞ; ಅದರ ನೆನಪೇ ಇಲ್ಲದ ವ್ಯಕ್ತಿ ಕೃತಘ್ನ. ಬರೆವಣಿಗೆಯಲ್ಲಿ ನಾವು ಸರಿಯಾದ ರೂಪಗಳನ್ನು ಬಳಸಿದರೂ ಉಚ್ಚಾರಣೆಯಲ್ಲಿ ಆಗುವ ಗೊಂದಲದಿಂದಾಗಿ ಉಂಟಾಗುವ ಪೇಚುಗಳಿವು.

**ಮಿರಿಮಿರಿ, ಝಣಝಣ**

ಇವು ಅನುಕರಣವಾಚಿಗಳು, ಕನ್ನಡದಲ್ಲಿ ಇಂಥವು ನೂರಾರಿವೆ. ಸರಸರ, ದಡದಡ, ಪಟಪಟ, ಥಳಥಳ ಇತ್ಯಾದಿ. ಇವು ಯಾವುದಾದರೊಂದು ಕ್ರಿಯೆಯನ್ನು ಅಥವಾ ಅವಸ್ಥೆಯನ್ನು ಬಣ್ಣಿಸುವ ಪದಗಳು. ಸಾಮಾನ್ಯವಾಗಿ ಇಂಥ ರೂಪಗಳಲ್ಲಿ ಒಂದೇ ಪದಭಾಗ ಎರಡು ಬಾರಿ ಬಳಕೆಯಾಗಿರುತ್ತದೆ. ಇನ್ನೂ ಸೂಕ್ಷ್ಮವಾಗಿ ಗಮನಿಸಿದರೆ ಈ ಅನುಕರಣವಾಚಿಗಳಲ್ಲಿ ಎರಡು ಬಗೆಗಳು ಇರುವಂತೆ ತೋರುತ್ತದೆ. ಒಂದು ಬಗೆಯ ಅನುಕರಣವಾಚಿಗಳು ಕಣ್ಣಿನ ಅನುಭವವನ್ನು ಹೇಳುತ್ತವೆ. ಉದಾ: ಮಿರಿಮಿರಿ, ಥಳಥಳ, ಫಳಫಳ ಇತ್ಯಾದಿ. ಮತ್ತೊಂದು ಬಗೆಯವು ಕಿವಿಯ ಅನುಭವವನ್ನು ಸೂಚಿಸುವಂತಿರುತ್ತವೆ. ಉದಾ: ದರದರ, ಸರಸರ.

**ಕಥೆ ಕತೆಯೂ ಹೌದೆ?**

ಕಥೆ, ಕತೆ, ಇವೆರಡೂ ಸಾಧು ರೂಪಗಳು. ಕಥಾ ಎಂಬುದೇ ಕಥೆ. ಇದು ಕತೆ ಎಂಬ ರೂಪದಲ್ಲಿಯೂ ಬಳಕೆಯಲ್ಲಿದೆ. ಬೇರೊಂದು ಪ್ರತ್ಯಯದೊಡನೆ ಬಳಕೆಯಾಗುವಾಗ ಆಯ್ಕೆಯ ಮಾತು ಬರುತ್ತದೆ. ಅಂದರೆ ಆ ಪ್ರತ್ಯಯ ಕನ್ನಡದ್ದಾದರೆ ಆಗ ಇವೆರಡರಲ್ಲಿ ಯಾವುದನ್ನಾದರೂ ಬರೆಯಬಹುದು. ಉದಾ: ಕತೆಗಾರ ಅಥವಾ ಕಥೆಗಾರ. ಆದರೆ ಸಂಸ್ಕೃತ ಪದಗಳೊಡನೆ ಬಳಕೆಯಾಗುವಾಗ ಕಥಾರೂಪವನ್ನು

ಮಾತ್ರವೇ ಬಳಸಬೇಕು. ಉದಾ: ಕಥಾಲೋಕ, ಕಥಾವಿವರ. ಕತೆ ಎಂಬುದನ್ನು ಇಲ್ಲಿ ಬಳಸಬೇಕಾದರೆ ಅದನ್ನು ಷಷ್ಠೀ ವಿಭಕ್ತಿ ರೂಪದಲ್ಲಿ ಪ್ರಯೋಗಿಸಬೇಕು. ಉದಾ: ಕತೆಯ ಲೋಕ, ಕತೆಯ ವಿವರ.

**ತಾಸು, ಗಂಟೆ**

ಕಾವೇರಿ–ಹೇಮಾವತಿ ಪರಿಸರದಲ್ಲಿ ಗಂಟೆ ಎಂದರೆ ನಿರ್ದಿಷ್ಟ ಕಾಲಮಾನ ಮತ್ತು ನಿರ್ದಿಷ್ಟ ಕಾಲಾವಧಿ. ಈ ಎರಡೂ ಅರ್ಥಗಳಲ್ಲಿ ಗಂಟೆ ಎಂಬ ಪದವನ್ನು ಅಲ್ಲಿ ಬಳಸಲಾಗುತ್ತದೆ. ಉದಾ: 'ಈಗ ನಾಲ್ಕು ಗಂಟೆ', 'ಈ ಕೆಲಸಮಾಡಲು ನಾಲ್ಕು ಗಂಟೆ ಬೇಕು' ಎಂಬ ಎರಡು ಬಳಕೆಗಳೂ ಸರಿ. ಆದರೆ ಉತ್ತರ ಕರ್ನಾಟಕಕ್ಕೆ ಸರಿದಂತೆ ಎರಡನೇ ವಾಕ್ಯದಲ್ಲಿ 'ತಾಸು' ಎಂದೇ ಬಳಸಬೇಕು. ಅಂದರೆ ಕಾಲಮಾನವನ್ನು 'ಗಂಟೆ' ಎಂದೂ ಕಾಲಾವಧಿಯನ್ನು 'ತಾಸು' ಎಂದು ಹೇಳುವುದು ಅಲ್ಲಿನ ಪರಿಪಾಟ.

**ಮದುವೆ ಮ್ಯಾರೇಜ್ ಅಲ್ಲ**

ಇಂಗ್ಲಿಶ್ ಪದಗಳ ಎರಡು ರೂಪಗಳು ಬರವಣಿಗೆಯಲ್ಲಿ ಕಾಣಸಿಗುತ್ತವೆ. ಟಿಕೆಟ್, ಟಿಕೇಟ್, ಕಾಲೆಜ್,ಕಾಲೇಜ್ ಇತ್ಯಾದಿ. ಇಂಗ್ಲಿಶ್ ಪದಗಳನ್ನು ಕನ್ನಡದಲ್ಲಿ ಬರೆಯುವಾಗ ಹಲವು ಕಡೆಗಳಲ್ಲಿ ಇಂಥ ಗೊಂದಲಗಳಾಗುತ್ತವೆ. ಆ ಭಾಷೆಯ ಸ್ವರ ಮತ್ತು ಘಾತ ವ್ಯವಸ್ಥೆ ಕನ್ನಡಕ್ಕಿಂತ ಬೇರೆಯಾದುದು. ಕನ್ನಡ ಮುಖ್ಯವಾಗಿ ಪ್ರಥಮಾಕ್ಷರ ಘಾತವುಳ್ಳ ಭಾಷೆ. ಆದ್ದರಿಂದ ಇಂಗ್ಲಿಶ್ ಪದಗಳನ್ನು ಕನ್ನಡದಲ್ಲಿ ಬರೆಯುವಾಗ, ಅವಶ್ಯವಿರುವಲ್ಲಿ ಮಾತ್ರ ಮೊದಲ ಸ್ವರವನ್ನು ದೀರ್ಘವಾಗಿ ಬರೆಯುವುದು ಒಳ್ಳೆಯದು. ಉದಾ: ಕಾರ್, ಲಾಯರ್, ಉಳಿದೆಡೆಗಳಲ್ಲಿ ಎಲ್ಲ ಸ್ವರಗಳನ್ನೂ ಹ್ರಸ್ವ ರೂಪದಲ್ಲಿ ಬಳಸಿದರೆ ಸಾಕು. ನಾವು ಇಂಗ್ಲಿಶ್‌ನ ಉಚ್ಚಾರಣೆಯನ್ನು ಕನ್ನಡ ಬರವಣಿಗೆಯಲ್ಲಿ ಯಥಾವತ್ತಾಗಿ ಅನುಕರಿಸುವುದು ಅಸಾಧ್ಯ. ಆದರೆ ಕನ್ನಡ ಬರವಣಿಗೆಯಲ್ಲಿ ಇಂಗ್ಲಿಶ್ ರೂಪಗಳನ್ನು ಬರೆದಾಗ ಒಂದು ಸಾಮಾನ್ಯ, ಪ್ರಮಾಣಿತ ರೂಪ ಇರುವುದು ಒಳ್ಳೆಯದು. ಆದ್ದರಿಂದ ಮ್ಯಾರೇಜ್ ಅಲ್ಲ ಮ್ಯಾರೆಜ್,ಆಫೀಸರ್ ಅಲ್ಲ ಆಫಿಸರ್ ಎಂದು ಬರೆಯುವುದು ಸರಿಯಾದ ಮಾರ್ಗ.

**ಸಾಮಾನ್ಯ/ಸಾರ್ವತ್ರಿಕ**

ಜಮ್ಮು ಮತ್ತು ಕಾಶ್ಮೀರದಲ್ಲಿ ಸಾಮಾನ್ಯ ಚುನಾವಣೆಗಳನ್ನು ನಡೆಸಲು....' ಹೀಗೊಂದು ವಾಕ್ಯವನ್ನು ಟಿವಿ ಚಾನೆಲ್‌ನಲ್ಲಿ ಕೇಳಿದಾಗ ಕೊಂಚ ಗಲಿಬಿಲಿಯಾಯಿತು. ಜನರಲ್ ಎಂಬ ಇಂಗ್ಲಿಶ್ ಪದಕ್ಕೆ ಇರುವ ಅನೇಕ ಅರ್ಥಗಳಲ್ಲಿ 'ಸಾಮಾನ್ಯ' ಎಂಬುದು ಒಂದು. ಇದಲ್ಲದೆ ಇನ್ನೂ ಹಲವು ಅರ್ಥಗಳಿವೆ. ಚುನಾವಣೆಯ ಸಂಬಂಧದಲ್ಲಿ ಬಳಕೆಯಾದಾಗ ಜನರಲ್‌ಗೆ ಸಾರ್ವತ್ರಿಕ ಎಂಬ ಅರ್ಥವಿದೆ. ಕನ್ನಡದಲ್ಲಿ ಹಲವು ದಶಕಗಳಿಂದ ಇದೇ ಅರ್ಥದಲ್ಲಿ ಬಳಕೆಯಾಗುತ್ತಿದೆ. ಕಾಮನ್ ಎಂಬ ಇಂಗ್ಲಿಶ್ ಪದವನ್ನೂ ಕೆಲವು ವೇಳೆ ಸಾಮಾನ್ಯ ಎಂದು ತರ್ಜುಮೆ ಮಾಡುವುದುಂಟು. ಇದೂ

ಎಲ್ಲ ಕಡೆಯೂ ಸರಿಯಲ್ಲ. ಕಾಮನ್ ಸೆನ್ಸ್ ಎಂದರೆ ಸಾಮಾನ್ಯ ಜ್ಞಾನ ಅಲ್ಲ ತಾನೆ? ಭಾಷೆಯ ವ್ಯಾಪಕ ಬಳಕೆಯನ್ನು ಅಭ್ಯಾಸ ಮಾಡದಿದ್ದರೆ ಆಗುವ ಗೊಂದಲಕ್ಕೆ ಮೇಲಿನ ವಾಕ್ಯ ಒಂದು ನಿದರ್ಶನವಾಗಿದೆ.

**ಬೇಡೇರಿಕೆ**

ಈಚೆಗೊಂದು ವರದಿಯಲ್ಲಿ ಭಾಷಣಕಾರರು ಈ ಪದವನ್ನು ಬಳಸಿದ್ದನ್ನು ಉಲ್ಲೇಖಿಸಿ, ಆ ಭಾಷಣಕಾರರ ಭಾಷಾಜ್ಞಾನವನ್ನು ಗೇಲಿಗೆ ಗುರಿಮಾಡಲಾಗಿತ್ತು. ಕೆಲವೊಮ್ಮೆ ಇಂಥ ಪ್ರಯೋಗಗಳಿಗೆ ಭಾಷಾಜ್ಞಾನದ ಕೊರತೆ ಕಾರಣವಾಗಿರುವುದಿಲ್ಲ. ಬದಲಿಗೆ ಯಾವುದಾದರೊಂದು ಪದದ ರೂಪದ ಬಗೆಗೆ ಇರುವ ಗೊಂದಲಗಳಿಂದ ಈ ಬಗೆಯ 'ಹೊಸ ಪದಗಳು' ಬಳಕೆಯಾಗುತ್ತವೆ. ಈ ಪದ ಪ್ರಯೋಗಿಸಿದವರ ಮನಸ್ಸು 'ಬೇಡಿಕೆ' ಮತ್ತು 'ಕೋರಿಕೆ'ಗಳೆಂಬ (ಅಥವಾ ನನ್ನ ಮಿತ್ರರೊಬ್ಬರು ಸೂಚಿಸಿದಂತೆ 'ಬೇಡಿಕೆ' ಮತ್ತು 'ಈಡೇರಿಕೆ' ಎಂಬ) ಎರಡು ಪದಗಳನ್ನು ಒಮ್ಮೆಗೆ ನೆನಪಿಗೆ ತಂದುಕೊಂಡು ಅವೆರಡನ್ನು ಭಾಗಶಃ ಬೆರಸಿ 'ಬೇಡೇರಿಕೆ' ಎಂಬ ಪದವನ್ನು ರೂಪಿಸಿಕೊಂಡಿರುವ ಸಾಧ್ಯತೆಗಳಿವೆ. ಭಾಷಾವ್ಯವಹಾರದಲ್ಲಿ ಇದು ಅಪರೂಪವಲ್ಲ. ಇಂಗ್ಲಿಶಿನ ಮೊಟೆಲ್, ಬ್ರಂಚ್, ಸ್ಮಾಗ್ ಮುಂತಾದವು ಈ ಬಗೆಯ ಪದಗಳೇ ಆಗಿವೆ. ಬೆಂಗಳೂರಿನಲ್ಲಿ ಹಲವು ವರ್ಷ ಒಂದು ನಾಮಫಲಕದಲ್ಲಿ ಕ್ರೀಡಾರಂಗ, ಕ್ರೀಡಾಂಗಣಗಳು ಜೊತೆಗೂಡಿ ಕ್ರೀಡಾರಂಗಣ ಎಂಬೊಂದು ಪದ ಕಾಣಲು ಸಿಗುತ್ತಿತ್ತು.

**ಹೇಳಲಾ, ಹೇಳಲೇ, ಹೇಳಲೀ**

ಅನುಮತಿಯನ್ನು, ಸಮ್ಮತಿಯನ್ನು ಕೇಳುವ ಪ್ರಶ್ನೆಗಳಲ್ಲಿ ಒಂದು ಮುಖ್ಯ ಲಕ್ಷಣವಿರುತ್ತದೆ. ಆ ಪ್ರಶ್ನೆಗಳಲ್ಲಿ ಕ್ರಿಯಾಪದಗಳ ಅವ್ಯಯ ರೂಪಗಳು(ಹೇಳಲ್, ಬರಲ್, ಕೊಡಲ್, ತಿನ್ನಲ್ ಇತ್ಯಾದಿ) ಬಳಕೆಯಾಗಿರುತ್ತವೆ. ಜೊತೆಗೆ ಈ ಅವ್ಯಯಗಳಿಗೆ ಪ್ರಶ್ನಾರ್ಥಕ ಪ್ರತ್ಯಯಗಳಾಗಿ '–ಆ' ಅಥವಾ '–ಏ' ಅಥವಾ '–ಈ' ಗಳನ್ನು ಸೇರಿಸಲಾಗುತ್ತದೆ. ಈ ಮೂರರಲ್ಲಿ '–ಆ'ಕಾರಾಂತ ರೂಪವು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಬಳಕೆಯಾಗುತ್ತದೆ. ಏಕಾರಾಂತ ರೂಪವು ಬರೆಹದಲ್ಲಿ ಮತ್ತು ಔಪಚಾರಿಕ ಬಳಕೆಯಲ್ಲಿ ಕಾಣಸಿಗುತ್ತದೆ. ಈಕಾರಾಂತ ರೂಪವು ಈಶಾನ್ಯ ಕರ್ನಾಟಕದಲ್ಲಿ ಹೆಚ್ಚು ಕೇಳಿಸುತ್ತದೆ. ಈ ಏಕಾರಾಂತ ರೂಪವು ಏನು ಎಂಬುದರ ಸವಕಳಿ ಇರಬಹುದು. ಉದಾ: ಹೇಳಲೇನು? ಹೇಳಲೇ?

**ಹರಿಬರಿ**

ಈ ಪದ ಕೂಲಿನಾಲಿ, ಸಂಬಳಸಾರಿಗೆ, ಪಾತ್ರೆಪಗಡ ಎಂಬ ರೀತಿಯ ಜೋಡಿಪದ. ಇದು ಸಾಮಾನ್ಯವಾಗಿ 'ಅಪೂರ್ಣ' ಎಂಬ ಅರ್ಥವನ್ನು ಕೆಲವೊಮ್ಮೆ 'ಆತುರದಿಂದ ಉಂಟಾದ ಅಪೂರ್ಣತೆ' ಎಂಬ ಅರ್ಥವನ್ನು ನೀಡುವಂತಿದೆ. ಉದಾ: 'ಹರಿಬರಿ ಬಂದುಬಿಟ್ಟೆ, ನಿಮ್ಮ ಪುಸ್ತಕ ತರಲಿಲ್ಲ' ಇದರ ಮೂಲ ಎಲ್ಲಿದೆಯೋ ತಿಳಿಯದು. ಅರೆಬರೆ ಎಂಬ ಇನ್ನೊಂದು ಪದವನ್ನು ಇದಕ್ಕೆ ಪರ್ಯಾಯವಾಗಿ ಬಳಸುವುದುಂಟು.

ಆದರೆ ಅದರಲ್ಲಿ ಆತುರ ಎಂಬ ಅರ್ಥ ಇಲ್ಲ. ಅಸ್ಪಷ್ಟ ಎಂಬ ಅರ್ಥ ಕೊಡುವ ಹರ್ಲಿಬರ್ಲಿ ಎಂಬ ಇಂಗ್ಲಿಶ್ ರೂಪವಿದೆ. ಇದೂ ಕೂಡ ಭಾರತೀಯ ಮೂಲದಿಂದ ಇಂಗ್ಲಿಶ್‌ಗೆ ಹೋಗಿದೆ. ಇದಕ್ಕೂ ಹರಿಬರಿಗೂ ಸಂಬಂಧವಿದೆಯೋ ಏನೋ ಗೊತ್ತಿಲ್ಲ.

**ಚರಿತ್ರಾರ್ಹ**

'ಭಾರತಕ್ಕೆ ಚರಿತ್ರಾರ್ಹ ವಿಜಯ' ಇದು ಪತ್ರಿಕೆಯಲ್ಲಿ ಕಂಡ ತಲೆಬರೆಹ. ಇನ್ನೊಂದು ಪತ್ರಿಕೆಯಲ್ಲಿ ಈ ಘಟನೆಯನ್ನು ಐತಿಹಾಸಿಕ ಗೆಲುವು ಎಂದು ಬಣ್ಣಿಸಲಾಗಿತ್ತು. ಐತಿಹಾಸಿಕ ಮತ್ತು ಚಾರಿತ್ರಿಕ ಇವೆರಡೂ ಸಮಾನಾರ್ಥಕಗಳು. ಆದರೆ ಚಾರಿತ್ರಿಕ ಮತ್ತು ಚರಿತ್ರಾರ್ಹ ಇವೆರಡೂ ಸಮಾನಾರ್ಥಕಗಳೇ? ಸ್ಮರಣಾರ್ಹ, ಮಂಡನಾರ್ಹ, ಚರ್ಚಾರ್ಹ, ಸ್ವಾಗತಾರ್ಹ, ಖಂಡನಾರ್ಹ ಎಂಬ ಪದಗಳ ಮಾದರಿಯಲ್ಲಿ ಚರಿತ್ರಾರ್ಹ ಎಂಬ ಪದವನ್ನು ರೂಪಿಸಲಾಗಿದೆ. ಇದೇ ಸರಣಿಯಲ್ಲಿ ಇತಿಹಾಸಾರ್ಹ ಎಂಬ ಪದವನ್ನು ಸೇರಿಸಲು ಬರುತ್ತದೆಯೇ? ಆದರೆ ಮಾದರಿಯಾದ ಪದಗಳ ಅರ್ಥವಿಶದತೆ ಚರಿತ್ರಾರ್ಹ ಪದಕ್ಕಿಲ್ಲ. ಚರಿತ್ರೆಗೆ ಸೇರಲು ಅರ್ಹ ಎಂಬ ಅರ್ಥವನ್ನು ಹೇಳಬೇಕಾಗುತ್ತದೆ. ಕೊಂಚ ದೂರಾನ್ವಯದ ಅರ್ಥವಿದು. 'ಚರಿತಾರ್ಹ' ಎಂಬುದು ಹೆಚ್ಚು ಸೂಕ್ತವಾದ ಪದವಾಗಬಹುದು.

**ನಿರ್ದೇಶಿಸು**

'ಚೆಂಡನ್ನು ಸ್ಲಿಪ್‌ನಲ್ಲಿದ್ದ ಸೆಹವಾಗ್ ಕಡೆಗೆ ನಿರ್ದೇಶಿಸಿದರು' ಇದು ಕ್ರಿಕೆಟ್ ಆಟದ ವರದಿ. ಎಸೆದ ಚೆಂಡನ್ನು ಬ್ಯಾಟ್ಸ್‌ಮನ್ ಹೊಡೆದಾಗ ಅಥವಾ ಅದು ಅವನ ಬ್ಯಾಟ್‌ಗೆ ತಗುಲಿದಾಗ ಯಾರೋ ಕ್ಷೇತ್ರರಕ್ಷಕರ ಕೈ ಸೇರಿತ್ತು ಎಂದು ವಾಕ್ಯದ ಅರ್ಥ. ಚೆಂಡು ಅದನ್ನು ಹಿಡಿದವನ ಕಡೆಗೆ ಹೋಗುವಂತೆ ಅದರ ಚಲನೆಯ ದಿಕ್ಕನ್ನು ಬ್ಯಾಟ್ಸ್‌ಮನ್ 'ನಿರ್ದೇಶಿಸಿ'ದ ಬಗ್ಗೆ ವಾಕ್ಯ ಹೇಳುತ್ತದೆ. ಡೈರಕ್ಟ್ ಎಂಬ ಇಂಗ್ಲಿಶ್ ಕ್ರಿಯಾಪದವನ್ನು ಕನ್ನಡದಲ್ಲಿ ಹೇಳಲು ಬಳಸಿದ ಈ 'ನಿರ್ದೇಶಿಸು' ಪದ ಒಂದು ಅಪಪ್ರಯೋಗವಾಗಿದೆ. ಪದದ ಅರ್ಥವ್ಯಾಪ್ತಿ ತಿಳಿಯದೇ ಬಳಸಿದ್ದಾಗಿದೆ. ಮೂಲಪದದ ಎಲ್ಲ ಅರ್ಥಗಳನ್ನು ಮತ್ತು ವಾಕ್ಯದಲ್ಲಿ ಅವಶ್ಯವಾದ ಅರ್ಥವನ್ನು ಗ್ರಹಿಸದೇ ಇರುವುದರಿಂದ ಆಗಿರುವ ಗೊಂದಲವಿದು.

**ವ್ಯಾಯಾಮ/ಕಸರತ್ತು, ಶಕ್ತಿ/ತಾಖತ್ತು, ಜಮೀನು/ಭೂಮಿ**

ಈ ಜೋಡಿಪದಗಳಲ್ಲಿ ಮೊದಲನೆಯದು ಸಂಸ್ಕೃತದಿಂದ ಬಂದಿದ್ದರೆ ಎರಡನೆಯದು ಪರ್ಶಿಯನ್ ಅಥವಾ ಅರಾಬಿಕ್ ಮೂಲದಿಂದ ಕನ್ನಡಕ್ಕೆ ಬಂದಿದೆ. ಈ ಪದಗಳು ಕನ್ನಡದಲ್ಲಿ ಬಳಕೆಯಾಗುವ ವಿಧಾನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಂಸ್ಕೃತ ಮೂಲದ ಪದಗಳಿಗೆ ಹೆಚ್ಚು ವ್ಯಾಪಕ ಅರ್ಥಗಳಿದ್ದು, ಪರ್ಶಿಯನ್ ಅಥವಾ ಅರಾಬಿಕ್ ಮೂಲದ ಪದಗಳಿಗೆ ಖಚಿತ ಆದರೆ ಕಡಿಮೆ ವ್ಯಾಪ್ತಿಯ ಅರ್ಥಗಳಿರುವುದು ಗೊತ್ತಾಗುತ್ತದೆ. ಅಲ್ಲದೆ ಸಂಸ್ಕೃತ ಪದಗಳನ್ನು ಹೆಚ್ಚು ಔಪಚಾರಿಕ ವಲಯಗಳಲ್ಲಿ ಬಳಸಬಹುದಾದರೂ ಪರ್ಶಿಯನ್ ಮೂಲದ ಪದಗಳು ಸೀಮಿತ ವಲಯಗಳಲ್ಲಿ ಮಾತ್ರ ಬಳಕೆಯಾಗುತ್ತವೆ. ಒಂದೇ ಅರ್ಥವುಳ್ಳ ಪದಗಳನ್ನು ಬೇರೆ ಬೇರೆ ಭಾಷೆಗಳಿಂದ

ಕನ್ನಡ ಸ್ವೀಕರಿಸಿರುವಾಗ ಆ ಸ್ವೀಕೃತ ಪದಗಳ ಬಳಕೆಯಲ್ಲಿ ನಿರ್ದಿಷ್ಟ ವ್ಯತ್ಯಾಸ ಮಾಡಿಕೊಳ್ಳುವ ಮೂಲಕ ಅವುಗಳಿಗೆ ಸ್ಥಾನ ನಿರ್ದೇಶ ಮಾಡಿದೆ. ಇಲ್ಲಿ ಭಾಷೆಯ ಅವಶ್ಯಕತೆಯ ಜೊತೆಗೆ ಸಂಸ್ಕೃತ ಮತ್ತು ಪರ್ಶಿಯನ್ ಇಲ್ಲವೇ ಅರಾಬಿಕ್ ಭಾಷೆಗಳ ಬಗೆಗೆ ಕನ್ನಡಿಗರು ಹೊಂದಿರುವ ದೃಷ್ಟಿಕೋನವೂ ಕೂಡ ಪ್ರಭಾವ ಬೀರುತ್ತದೆ.

**ಚನ್ನ, ಚೆನ್ನ, ಚಂದ್ರ, ಚೆಂದ್ರ**

ಕನ್ನಡಿಗರು ಮೇಲಿನ ಪದಗಳನ್ನು ಉಚ್ಚರಿಸುವ ಮತ್ತು ಬರೆಯುವ ರೀತಿಯಲ್ಲಿ ವ್ಯತ್ಯಾಸಗಳಿವೆ. ಚನ್ನ ಎಂದು ಬರೆದರೂ ಉಚ್ಚರಿಸುವಾಗ ಚೆನ್ನ (ಹೀಗೆಯೇ ಚಂದ, ಚೆಂದ)ಎನ್ನುವುದು ಸಾಮಾನ್ಯ ಲಕ್ಷಣ. ಇಂಥ ಹಲವು ಪದಗಳನ್ನು ಪಟ್ಟಿ ಮಾಡಬಹುದು. ಉಚ್ಚರಿಸುವ ರೀತಿಯಲ್ಲೇ ಹಲವರು ಬರೆಯುವುದೂ ಉಂಟು. ಈ ಬಗೆಯ ಬಹುಪಾಲು ಪದಗಳಲ್ಲಿ ಮೊದಲ ವ್ಯಂಜನ ಚಕಾರವಾಗಿರುತ್ತದೆ. ಅದರ ಮುಂದಿನ ಸ್ವರ ಅಕಾರವಾಗಿದ್ದಾಗ ಉಚ್ಚಾರಣೆಯಲ್ಲಿ ಅದು ಎಕಾರವಾಗುವುದು ಕಂಡುಬರುತ್ತದೆ. ಇದಕ್ಕೆ ಚಕಾರವೇ ಕಾರಣ. ಅದರ ಪ್ರಭಾವದಿಂದಲೇ ಪಶ್ಚ–ನಿಮ್ನಸ್ವರವಾದ ಆಕಾರವು ಪೂರ್ವಸ್ವರವಾಗಿ ಬದಲಾಗುತ್ತದೆ. ಇದು ಹಲವು ಭಾಷೆಗಳಲ್ಲಿ ಕಂಡುಬರುವ ಒಂದು ಧ್ವನಿ ಪ್ರವೃತ್ತಿ. ಚಕಾರದ ಮುಂದೆ ಇನ್ನಾವುದೇ ಸ್ವರ ಅಥವಾ ದೀರ್ಘ ಆಕಾರವಿದ್ದಾಗಲೂ ಇಂಥ ಬದಲಾವಣೆ ಉಚ್ಚಾರದಲ್ಲಿ ಆಗುವುದಿಲ್ಲ ಎಂಬುದನ್ನು ಗಮನಿಸಬೇಕು.

**ಸಾಯು**

ದೇಹದ ಚಟುವಟಿಕೆಗಳು ಮರುಚೇತರಿಕೆಯಿಲ್ಲದೆ ನಿಂತು ಹೋಗುವ ಈ ಕ್ರಿಯೆಯನ್ನು ವರ್ಣಿಸಲು ಕನ್ನಡದಲ್ಲಿ ಇನ್ನೂರೈವತ್ತಕ್ಕೂ ಹೆಚ್ಚು ಪದಗಳಿವೆ ಎಂಬುದನ್ನು ಬಲ್ಲಿರಾ? ಬಹುಶಃ ಒಂದು ಕ್ರಿಯೆಯನ್ನು ಬಣ್ಣಿಸಲು ಇಷ್ಟೊಂದು ಪದಗಳಿರುವುದು ಇದೊಂದೇ ಕ್ರಿಯೆಗೆಂದು ತೋರುತ್ತದೆ. ಕೆಲವು ಪದಗಳು ಕ್ರಿಯೆಯ ಭೌತಿಕ ಚಹರೆಗಳನ್ನು ಬಣ್ಣಿಸಿದರೆ, ಮತ್ತೆ ಕೆಲವು ಅದರ ಪರಿಣಾಮವನ್ನು ಹೇಳುತ್ತವೆ. ಸಾವಿಗೆ ಧಾರ್ಮಿಕ ಚಹರೆಗಳೂ ಇವೆ. (ಶಿವಾಧೀನ, ವೈಕುಂಠವಾಸಿ, ಜಿನಾಧೀನ, ಕ್ರಿಸ್ತವಾಸಿ ಇತ್ಯಾದಿ) ಮತ್ತೆ ಕೆಲವು ಪದಗಳು ಈ ಕ್ರಿಯೆಯನ್ನು ಗೇಲಿ ಮಾಡುವ ದೃಷ್ಟಿಯನ್ನೂ ಹೊಂದಿರುತ್ತವೆ (ಗೋತಾ, ಗೊಟಕ್, ನೆಗೆದುಬೀಳು ಮುಂತಾದುವು) ಓದುಗರು ತಮಗೆ ನೆನಪಿಗೆ ಬಂದಷ್ಟು ಈ ವರಸೆಯ ಪದಗಳನ್ನು ಪಟ್ಟಿ ಮಾಡಿ ನೋಡಿಕೊಳ್ಳಬಹುದು. ಅದರಿಂದ ಕನ್ನಡದಲ್ಲಿ ಸಾಯುವ ವೈವಿಧ್ಯಗಳು ಗೊತ್ತಾಗುತ್ತದೆ.

**'ಬೇಡೇರಿಕೆ' ಬೇಕೆ?**

ಬೇಡೇರಿಕೆ ಕುರಿತು 'ಬರೆದ ಟಿಪ್ಪಣಿಯನ್ನು ಓದಿದ ಕೆಲವರು ತಮ್ಮ ಅಭಿಪ್ರಾಯವನ್ನು ಬರೆದಿದ್ದಾರೆ. ಅವರ ವಾದವಿಷ್ಟೆ. ಇಂಥ ಪ್ರಯೋಗಗಳನ್ನು ಸಮರ್ಥಿಸಬಾರದು. ಹಾಗೆ ಮಾಡುವುದರಿಂದ ಭಾಷೆಯ ಶುದ್ಧತೆಗೆ ಕುಂದುಂಟಾಗುತ್ತದೆ. ಇಂಗ್ಲಿಶ್ ಭಾಷೆಯ ಪ್ರಯೋಗಗಳ ನೆಪದಲ್ಲಿ ಅನುಕರಣೆಯ ಪ್ರಗತಿ ಬೆಳೆಸಬಾರದು. ಓದುಗರ ಈ ಆತಂಕ ಸಹಜ. ಆದರೆ ಈ ಟಿಪ್ಪಣಿಗಳನ್ನು ಬರೆಯುವಾಗ ಯಾವುವು ತಪ್ಪುಗಳು ಎಂದು ಗುರುತಿಸುವುದಷ್ಟೇ ನನ್ನ ಕೆಲಸವಾಗಿರುವುದಿಲ್ಲ. ಆ ತಪ್ಪುಗಳು

ಉಂಟಾಗುವುದಕ್ಕೆ ಏನು ಕಾರಣಗಳಿರಬಹುದು ಎಂಬ ಬಗೆಗೂ ಕೊಂಚ ಆಲೋಚಿಸುವ ಉದ್ದೇಶವಿರುತ್ತದೆ. ಹೀಗೆ ಮಾಡುವುದರಿಂದ ಆ 'ತಪ್ಪು'ಗಳನ್ನು ಸಮರ್ಥಿಸಿದಂತೆ ಆಗುವುದಿಲ್ಲ. ಭಾಷೆಯಲ್ಲಿ ಈ ಬಗೆಯ ಪ್ರಯೋಗಗಳು ಕಾಣಿಸಿಕೊಳ್ಳುವುದೇ ಆ ಭಾಷೆಯ ಜೀವಂತಿಕೆಯ ಲಕ್ಷಣ. ಆದರೆ ಇಂಥ ಪ್ರಯೋಗಗಳೆಲ್ಲವೂ ಎಲ್ಲರ ಬಳಕೆಯ ಭಾಗಗಳಾಗಿರುವುದಿಲ್ಲ. ಭಾಷೆಗೆ ಅದರದೇ ಆದ ಶೋಧಕಗಳಿರುತ್ತವೆ. ಅದಕ್ಕೆ ಅನುಗುಣವಾಗಿ ತಕ್ಕ ಬದಲಾವಣೆಗಳು ಉಳಿಯುವುದು ಅಥವಾ ಅಳಿಯುವುದು ನಿರ್ಧಾರವಾಗುತ್ತದೆ. ದಯವಿಟ್ಟು ಓದುಗರು ಈ ಅಂಶವನ್ನು ಗಮನಿಸಬೇಕೆಂದು ಕೋರುತ್ತೇನೆ.

**ಮಕ್ಕಳಿಗೆ ಇರಿದ ಮತಿಗೆಟ್ಟ ವ್ಯಕ್ತಿ**

ಇದು ಕನ್ನಡ ಪತ್ರಿಕೆಯೊಂದರಲ್ಲಿ ಈಚೆಗೆ ಕಂಡ ತಲೆಬರೆಹ. ಈಚೆಗೆ ಇಂಥ ಪ್ರಯೋಗಗಳು ಹಲವು ಕಡೆ ಕಾಣಸಿಗುತ್ತವೆ. ಸಾಮಾನ್ಯವಾಗಿ ನಾವು ನಿರೀಕ್ಷಿಸುವ ರಚನೆ 'ಮಕ್ಕಳನ್ನು ಇರಿದ...' ಎಂದು ಮೊದಲಾಗುತ್ತದೆ. ಇವೆರಡು ರೂಪಗಳನ್ನೂ ಸಾಧು ಎಂದು ಪರಿಗಣಿಸುವ ಪ್ರವೃತ್ತಿಯೂ ಹೆಚ್ಚಿದೆ. ಆದರೆ ಸೂಕ್ಷ್ಮವಾಗಿ ಗಮನಿಸಿದರೆ ಈ ಎರಡು ವಾಕ್ಯಗಳನ್ನು ಗಮನಿಸಿ: ಶ್ರೀಯುತರನ್ನು ಶಾಲು ಹೊದಿಸಿ ಸನ್ಮಾನಿಸಲಾಯಿತು. ಶ್ರೀಯುತರಿಗೆ ಶಾಲುಹೊದಿಸಿ ಸನ್ಮಾನಿಸಲಾಯಿತು. ಇವೆರಡೂ ಒಂದೇ ಘಟನೆಯನ್ನು ಹೇಳುತ್ತಿದ್ದರೂ ಎರಡೂ ಬೇರೆ ಬೇರೆ ಅರ್ಥವುಳ್ಳ ವಾಕ್ಯಗಳಾಗಿವೆ. ಮೇಲೆ ಉಲ್ಲೇಖಿಸಿದ ವಾಕ್ಯದಲ್ಲೂ 'ಇರಿದ' ಎನ್ನುವ ಕ್ರಿಯಾರೂಪದ ಬದಲು 'ಸಾಕಿದ', 'ಮುದ್ದಿಸಿದ' ಎಂಬಂಥ ಕ್ರಿಯಾರೂಪಗಳನ್ನು ಬಳಸಿದರೆ ವಾಕ್ಯವನ್ನು 'ಮಕ್ಕಳಿಗೆ' ಎಂದು ಆರಂಭಿಸುವುದು ಸಾಧ್ಯವಿಲ್ಲ ಎನ್ನುವುದು ಗೊತ್ತಾಗುತ್ತದೆ.

**ಅವಶ್ಯ, ಆವಶ್ಯಕ, ಅತ್ಯವಶ್ಯ, ಅತ್ಯಾವಶ್ಯಕ, ಅತ್ಯವಶ್ಯಕ**

ಈ ಎಲ್ಲ ರೂಪಗಳೂ ಕನ್ನಡ ಬರವಣಿಗೆಯಲ್ಲಿ ಕಾಣಸಿಗುತ್ತವೆ. ರಚನೆಯ ನಿಟ್ಟಿನಲ್ಲಿ ಕೊನೆಯದು ನಿಯಮಗಳಿಗೆ ಅನುಗುಣವಾಗಿಲ್ಲ. ಅತಿ ಮತ್ತು ಅವಶ್ಯಕ ಎಂಬ ರೂಪಗಳಿಂದ ಅತ್ಯವಶ್ಯಕ ಎಂಬ ರೂಪವನ್ನು ಪಡೆಯಬೇಕಾಗುತ್ತದೆ. ಆದರೆ ಅವಶ್ಯಕ ಎಂಬ ರೂಪ ಸಾಧುವಲ್ಲ. ಅವಶ್ಯದಿಂದ ಆವಶ್ಯಕ ಎಂಬ ರೂಪವನ್ನು ಮಾತ್ರ ಸಾಧಿಸಬಹುದು. ಆದರೂ ಕನ್ನಡದಲ್ಲಿ ಅವಶ್ಯಕ ಎಂಬ ಪದರೂಪಕ್ಕೆ ಹೆಚ್ಚಿನ ಬಳಕೆ ಬಂದುಬಿಟ್ಟಿದೆ. ಉದಾ: ಅವಶ್ಯಕ ಸಾಮಗ್ರಿ, ಅವಶ್ಯಕ ಸೇವೆ ಇತ್ಯಾದಿ. ಹೀಗಾಗಿ ಅತ್ಯವಶ್ಯಕ ಎಂಬ ರೂಪ ಕೂಡ ಮೈ ತಳೆದು ಜಾರಿಯಲ್ಲಿದೆ. ಅವಶ್ಯ>ಆವಶ್ಯಕ >ಅತ್ಯಾವಶ್ಯಕ ಇದು ಸಾಧು ಪದ ಸರಣಿ. ಅವಶ್ಯಕ ಮತ್ತು ಅತ್ಯವಶ್ಯಕಗಳ ಬಳಕೆಯನ್ನು ಕಡಿಮೆ ಮಾಡುವುದು ಒಳ್ಳೆಯದು.

**ತಂದಿಟ್ಟು/ತಂದಿತ್ತು**

ಇವೆರಡೂ ಅಪೂರ್ಣ ಕ್ರಿಯಾರೂಪಗಳು. ಕೆಲವೊಮ್ಮೆ ಸಮಾನಾರ್ಥಕಗಳಂತೆ ಪ್ರಯೋಗಗೊಳ್ಳುತ್ತವೆ. ಉದಾ: 'ಪುಸ್ತಕ ತಂದಿಟ್ಟು ಹೋಗು' ಮತ್ತು 'ಪುಸ್ತಕ ತಂದಿತ್ತು ಹೋಗು'. ಇವೆರಡೂ ಬಹುಮಟ್ಟಿಗೆ ಸಮಾನಾರ್ಥಕ ವಾಕ್ಯಗಳು. ಆದರೆ 'ನನ್ನ

ಮನಸ್ಸಿಗೆ ಶಾಂತಿಯನ್ನು ತಂದಿತ್ತ ಸಂಗೀತ' ಎಂಬದಲ್ಲಿ 'ತಂದಿಟ್ಟ' ಎಂಬ ರೂಪವನ್ನು ಬಳಸಲು ಸಾಧ್ಯವಿಲ್ಲ. 'ತಂದಿಟ್ಟ' ಎಂಬುದನ್ನು 'ತಂದಿಡು' ಎಂಬ ಕ್ರಿಯಾಪ್ರಕೃತಿಯಿಂದ ಸಾಧಿಸಬಹುದು. ಆದರೆ 'ತಂದಿತ್ತ' ಎಂಬುದರ ಮೂಲ ರೂಪ? 'ತಂದೀಯು' ಎಂಬುದೇ ಆ ರೂಪ. ನೀಡು ಎನ್ನುವ ಅರ್ಥದ 'ಈಯು' ಕ್ರಿಯಾಧಾತು ಈಗ ಕನ್ನಡದಲ್ಲಿ ಅತಿ ಕಡಿಮೆ ಬಳಕೆಯಲ್ಲಿದೆ. ಈಯು, ಈವ, ಇತ್ತ ಎಂಬ ರೂಪಗಳು ಈಗ ಕಾಣಸಿಗುವುದು ಅಪರೂಪ. ಹಳೆಯ ನಾಟಕದ ಹಾಡೊಂದರಲ್ಲಿ (ದೇವದಾಸಿ) 'ಸುಖವೀವ ಸುರಾಪಾನ...' ಎಂಬ ಪ್ರಯೋಗವನ್ನು ಕೇಳಿದ ನೆನಪು.

**ನಿರ್ದೇಶಿಸು ಕುರಿತು ಇನ್ನೊಮ್ಮೆ**

ಈ ಹಿಂದೆ ನಿರ್ದೇಶಿಸು ಎಂಬ ಪ್ರಯೋಗವನ್ನು ಕುರಿತು ಬರೆದ ಟಿಪ್ಪಣಿಯನ್ನು ಗಮನಿಸಿ ಆ ಪ್ರಯೋಗ ಪಾರಿಭಾಷಿಕವಾಗಿ ಸರಿ ಎಂದು ಪ್ರತಿಕ್ರಿಯಿಸಲಾಗಿದೆ. ಚೆಂಡನ್ನು ಗೊತ್ತಾದ ಆಟಗಾರನ ಕೈಗೆ ತಲುಪುವಂತೆ ಅದರ ಚಲನೆಯ ದಿಕ್ಕನ್ನು ಆಟಗಾರ ನಿರ್ದೇಶಿಸಿದನು ಎಂದು ಹೇಳುವುದು ಸರಿಯಿದ್ದೀತು. ಆದರೆ 'ಮಂತ್ರಿಗಳು ತಮ್ಮ ಟೀಕೆಯನ್ನು ಮಾಧ್ಯಮಗಳ ಕಡೆಗೆ ನಿರ್ದೇಶಿಸಿದರು' ಎನ್ನಬಹುದೆ? ಅಂದರೆ ಭೌತಿಕ ಘಟನೆ ಇಲ್ಲದಿರುವಾಗ ನಿರ್ದೇಶಿಸು ಎನ್ನುವ ಪದದ ಅರ್ಥವ್ಯಾಪ್ತಿಯನ್ನು ಸರಿಯಾಗಿ ಗುರುತಿಸಿಕೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ ಅಷ್ಟು ಸಹಜವಲ್ಲದ ವಾಕ್ಯಗಳನ್ನು ಓದಬೇಕಾಗುವುದು.

**ಮುರಳಿ/ಮುರುಳಿ**

ಈಚಿನ ಪತ್ರಿಕೆಯೊಂದರ ಲೇಖನದಲ್ಲಿ ಇವೆರಡೂ ಪ್ರಯೋಗಗಳು ಒಂದೇ ಲೇಖನದಲ್ಲಿ ಹಲವು ಬಾರಿ ಕಾಣಿಸಿಕೊಂಡಿದ್ದವು. ಸಾಮಾನ್ಯವಾಗಿ ಇವೆರಡರಲ್ಲಿ ಯಾವುದು ಸಾಧು ಎಂಬ ಪ್ರಶ್ನೆ ಹಲವರನ್ನು ಕಾಡುತ್ತದೆ. ಅದಕ್ಕಾಗಿ ಎರಡನ್ನೂ ಬರೆದು ಬಿಡುತ್ತಾರೆ. ಉಚ್ಚಾರಣೆಯಲ್ಲೂ ಇದೇ ಗೊಂದಲವಿದೆ. ಬರೆವಣಿಗೆಯ ದೃಷ್ಟಿಯಿಂದ ಮುರಳಿ ಸಾಧು ರೂಪ. ಕನ್ನಡದಲ್ಲಿ, ಹಲವು ಭಾಷೆಗಳಲ್ಲಿ ಸಾಮಾನ್ಯವಾಗಿ ಇರುವಂತೆ, ಒಂದು ಪದದಲ್ಲಿ ಇರುವ ಯಾವುದಾದರೊಂದು ಸ್ವರವು ಅದೇ ಪದದಲ್ಲಿರುವ ಇನ್ನಿತರ ಸ್ವರಗಳನ್ನು ತನ್ನಂತೆ ಪರಿವರ್ತಿಸಿಕೊಳ್ಳುವ ಲಕ್ಷಣ ಕಾಣಿಸುತ್ತದೆ. ಉಸಿರು ಎಂಬುದನ್ನು ಉಸುರು ಎಂದು ಉಚ್ಚರಿಸುವುದು ಮತ್ತು ಬರೆಯುವುದು ಇದೇ ಕಾರಣಕ್ಕಾಗಿ ಪದಾದಿಯಲ್ಲಿರುವ 'ಉ'ಕಾರವು ಎರಡನೆಯ ಸ್ವರವಾದ 'ಇ'ಕಾರವನ್ನು ತನ್ನಂತೆ ಪರಿವರ್ತಿಸಿ ಅದನ್ನೂ 'ಉ'ಕಾರವನ್ನಾಗಿ ಮಾಡುತ್ತದೆ. ಮುರಳಿ ಎಂಬ ಪದದಲ್ಲೂ ಹೀಗೇ ಆಗಿದೆ. ಕನ್ನಡದಲ್ಲಿ ಇಂಥ ಹಲವಾರು ಉದಾಹರಣೆಗಳಿವೆ. ಬಸಿರು/ಬಸುರು, ಹಸಿರು/ಹಸುರು ಇತ್ಯಾದಿ.

**ಕಾಲೇಜ್, ಹಾಟೆಲ್**

ಈಶಾನ್ಯ ಕರ್ನಾಟಕದವರ ಉಚ್ಚಾರಣೆ ಮತ್ತು ಬರೆಹಗಳನ್ನು ತಮಾಶೆ ಮಾಡಲು ದಕ್ಷಿಣ ಕರ್ನಾಟಕದವರು ಈ ಮೇಲಿನ ಬಗೆಯ ಪದಗಳನ್ನು ಉದಾಹರಿಸುತ್ತಾರೆ.

ವ್ಯಂಜನಾಂತ ಪದಗಳನ್ನು ಈಶಾನ್ಯ ಕರ್ನಾಟಕದವರು 'ಅ'ಕಾರಾಂತವಾಗಿ ಮಾಡಿಕೊಳ್ಳುತ್ತಾರೆ ಎಂಬುದು ಇವರ ತಿಳುವಳಿಕೆ. ಆದರೆ ಕಾಲೇಜ ಎಂದು ಬರೆದರೂ ಅದನ್ನು ಕಾಲೇಜ್ ಎಂದೇ ಅವರು ಉಚ್ಚರಿಸುತ್ತಾರೆ ಎಂಬುದು ಬಹಳ ಜನರಿಗೆ ತಿಳಿದಿಲ್ಲ. ಹಾಗೆಯೇ ಹಾಟೆಲ ಎಂದು ಬರೆದರೂ ಅದನ್ನು ವ್ಯಂಜನಾಂತವಾಗಿಯೇ ಉಚ್ಚರಿಸುತ್ತಾರೆ. ಆದರೆ ಈ ಪದಗಳನ್ನು ಅಕಾರಾಂತವಾಗಿ ಗ್ರಹಿಸುತ್ತಾರೆ ಎಂಬುದೂ ನಿಜ. ಏಕೆಂದರೆ ಈ ಪದಗಳಿಗೆ 'ಅಲ್ಲಿ' ಎಂಬ ಪ್ರತ್ಯಯವನ್ನು ಸೇರಿಸಿದಾಗ ದಕ್ಷಿಣ ಕರ್ನಾಟಕದವರು ಕಾಲೇಜಿನಲ್ಲಿ ಎಂದು ಬರೆದರೆ/ಉಚ್ಚಿಸಿದರೆ, ಈಶಾನ್ಯ ಕರ್ನಾಟಕದವರು ಕಾಲೇಜದಲ್ಲಿ ಎಂದು ಬರೆಯುತ್ತಾರೆ/ಉಚ್ಚರಿಸುತ್ತಾರೆ. ಅವರ ಪ್ರಯೋಗದಲ್ಲಿ ದಕಾರ ಬಂದುದೇತಕ್ಕೆ? ಇದು ಸಾಮಾನ್ಯವಾಗಿ ಅಕಾರಾಂತ ಪದಗಳ ಮುಂದೆ ಮಾತ್ರ ಬರುವಂಥದು. ಉದಾ: ಪುಸ್ತಕದಲ್ಲಿ, ದೀಪದಲ್ಲಿ, ಆದ್ದರಿಂದ ಈಶಾನ್ಯ ಕರ್ನಾಟಕದವರು ವ್ಯಂಜನಾಂತ ಪದಗಳನ್ನು ಅಕಾರಾಂತವಾಗಿ ಗ್ರಹಿಸುವುದು ನಿಜ. ಆದರೆ ಬಿಡಿಯಾಗಿ ಉಚ್ಚರಿಸುವಾಗ ಮಾತ್ರ ವ್ಯಂಜನಾಂತವಾಗಿಯೇ ಉಚ್ಚರಿಸುತ್ತಾರೆ.

### ಅಷ್ಟೆ

ಕನ್ನಡ ಮಾತಿನ ಒಂದು ಪ್ರಭೇದದಲ್ಲಿ ಈ ಪದಪ್ರಯೋಗ ವಾಕ್ಯಗಳ ಕೊನೆಯಲ್ಲಿ ಕೇಳಿ ಬರುತ್ತದೆ. ಬರೆವಣಿಗೆಯಲ್ಲಿ ಇದರ ಪ್ರಯೋಗ ಕಡಿಮೆ. 'ನೀನೀಗ ನನ್ನ ಸಾಲ ಕೊಡದೇ ಹೋದ್ರೆ ಅಷ್ಟೆ'. ಈ ವಾಕ್ಯದಲ್ಲಿ ಅಷ್ಟೆ ಎಂಬುದು ಯಾವುದೋ ಒಂದು ನಡೆಯಲಿರುವ ಕ್ರಿಯೆಯನ್ನು ಸೂಚಿಸುತ್ತದೆ. ವಾಕ್ಯದಲ್ಲಿ ಶರತ್ತುಗಳು ಸಂದೇಹಗಳು ಇರುವಲ್ಲಿ ಈ ಪದವನ್ನು ವಾಕ್ಯದ ಕೊನೆಗೆ ಇರಿಸುವುದು ಕಂಡು ಬಂದಿದೆ. ಇಂಥ ಪ್ರಯೋಗಗಳನ್ನು 'ಸಂಕಥನ ಸೂಚಕ'ಗಳು ಎನ್ನುತ್ತಾರೆ. ಕನ್ನಡ ಮಾತಿನಲ್ಲಿ ಈ ಬಗೆಯ ಸೂಚಕಗಳು ಹಲವು ಇವೆ. ಈ ಅಷ್ಟೆ ಅನ್ನುವ ಸೂಚಕದೊಡನೆ 'ಮತ್ತೆ' ಎನ್ನುವ ಇನ್ನೊಂದು ಪದವನ್ನೂ ಸೇರಿಸಿ ಬಳಸುವುದುಂಟು. ಈ ಮತ್ತೆ ಎಂಬುದು ವಾಕ್ಯದ ಆರಂಭದಲ್ಲೂ ಬರುವುದು ಸಾಧ್ಯ. ಉದಾ: 'ಮತ್ತೆ, ನೀನು ಊರಿಗೆ ಹೋಗಬಾರದಂತೆ' ಇದರ ಪ್ರಯೋಗಕ್ಕೂ ಕೆಲವು ನಿಯಮಗಳಿವೆ. ಈ ನಿಯಮಗಳೆಲ್ಲಾ ಕನ್ನಡ ಬಳಕೆಗೆ ಸಂಬಂಧಿಸಿವೆ. ಅಲ್ಲದೆ ಒಂದೊಂದು ಪ್ರದೇಶದಲ್ಲೂ ಇವು ಬೇರೆ ಬೇರೆಯಾಗಿ ಕಾಣಿಸಿಕೊಳ್ಳುತ್ತವೆ.

### ರವರು/ನವರು

ಕನ್ನಡದಲ್ಲಿ ಬಳಕೆಯಾಗುತ್ತಿರುವ ಗೌರವ ಸೂಚಕ ಪದಗಳು. ಸಾಮಾನ್ಯವಾಗಿ ಹೆಸರುಗಳ ಮುಂದೆ ಈ ವ್ಯಕ್ತಿಯ ಬಗ್ಗೆ ಇರುವ ಗೌರವವನ್ನು ಸೂಚಿಸಲು–ರವರು ಅಥವಾ ನವರು ಎಂಬ ಪದಗಳನ್ನು ಸೇರಿಸುವುದುಂಟು. ಶ್ರೀ ಬಂಗಾರಪ್ಪನವರು, ಶ್ರೀಕೃಷ್ಣರವರು, ಶ್ರೀ ಹನುಮಂತಯ್ಯನವರು, ಶ್ರೀಮಲ್ಯರವರು, ಶ್ರೀರಾಮಣ್ಣನವರು, ಶ್ರೀಮತಿ ಅಂಬುಜಮ್ಮನವರು, ಶ್ರೀಮಿರ್ಜಾರವರು ಇತ್ಯಾದಿ. ಸಾಮಾನ್ಯವಾಗಿ ಅವರು ಎಂಬ ಗೌರವ ಸೂಚಕ ಪದವನ್ನು ಬಹುಪಾಲು ಹೆಸರುಗಳ ಮುಂದೆ ಸೇರಿಸುವುದುಂಟು. ಈ –ರವರು ಮತ್ತು –ನವರುಗಳು ಏಕೆ ಬಂದವೋ ಗೊತ್ತಾಗುತ್ತಿಲ್ಲ. ಆದರೂ ಅವು

ಯಾವ ಯಾವ ಸಮುಪದಗಳ ಮುಂದೆ ಸೇರಬಹುದು ಎಂಬ ಬಗ್ಗೆ ಒಂದು ನಿಯಮವನ್ನು ಹೇಳಲು ಸಾಧ್ಯ. ನಾಮಪದದ ಕೊನೆಯಲ್ಲಿ ಒಂದು ಸ್ವಜಾತೀಯ ದ್ವಿತ್ವವಿದ್ದರೆ (ಒಂದೇ ವ್ಯಂಜನ ಆವರ್ತವಾಗಿದ್ದರೆ)-ನವರು ಮತ್ತು ವಿಜಾತೀಯ ದ್ವಿತ್ವವಿದ್ದರೆ (ಬೇರೆ ಬೇರೆ ವ್ಯಂಜನಗಳು ಜೊತೆಯಾಗಿದ್ದರೆ)-ರವರು ಸೇರುತ್ತದೆ. ಈ ನಿಯಮಕ್ಕೆ ಕೆಲವು ವಿನಾಯಿತಿಗಳಿವೆ ಎಂದು ನಾನು ಬಲ್ಲೆ. ಆದರೂ ಈ ನಿಯಮ ಎಷ್ಟು ಸರಿ ಎಂಬುದನ್ನು ಓದುಗರು ಪರೀಕ್ಷೆ ಮಾಡಬೇಕೆಂದು ಕೋರುತ್ತೇನೆ.

**'ರು', 'ಯವರು', 'ಗಳು' ಇತ್ಯಾದಿ**

ಸ್ವಜಾತೀಯ ಅಥವಾ ವಿಜಾತೀಯ ದ್ವಿತ್ವಗಳಿಲ್ಲದಿರುವ ಸಂದರ್ಭದಲ್ಲಿ 'ಅವರು' ಸೇರುತ್ತದೆ. ಉದಾ: ನಾರಾಯಣ ಅವರು, ದಕ್ಷಿಣ ಕನ್ನಡ, ಕೊಡಗು ಮುಂತಾದ ಕೆಲವು ಕಡೆ 'ರು' ಸೇರಿಸುತ್ತಾರೆ. ಉದಾ: ನಾರಾಯಣರು, ಕೃಷ್ಣರು ಇದೇ ಪ್ರದೇಶಗಳಲ್ಲಿ ಕೆಲವೊಮ್ಮೆ ಅಂತ್ಯಾಕ್ಷರ ಭೇದವಿಲ್ಲದೆ 'ನವರು' ಸೇರಿಸುತ್ತಾರೆ. ಉದಾ: ಕೃಷ್ಣನವರು, ನಾರಾಯಣನವರು, ಹಳೇ ಮೈಸೂರು ಪ್ರದೇಶಗಳಲ್ಲಿ ಕೆಲವು ಸಂದರ್ಭದಲ್ಲಿ 'ಗಳು' ಸೇರುತ್ತದೆ. ಉದಾ: ಕೃಷ್ಣಮೂರ್ತಿಗಳು, ರಾಮಮೂರ್ತಿಗಳು, ಇದರೊಂದಿಗೆ ಕೃಷ್ಣಮೂರ್ತಿಯವರು, ರಾಮಮೂರ್ತಿಯವರು ಎಂಬ ಬಳಕೆಯೂ ಇದೆ. ಅರ್ಧಾಕ್ಷರಗಳಲ್ಲಿ ಮುಕ್ತಾಯವಾಗುವ ಹೆಸರುಗಳಿಗೆ 'ಅವರು' 'ರವರು' ಎರಡೂ ಸೇರುತ್ತದೆ. ಉದಾ: ಕಿರಣ್‌ರವರು, ಕಿರಣ್ ಅವರು.

**ಬರಿ**

ಇದೊಂದು ಕನ್ನಡದ ವಿಶಿಷ್ಟ ಪದ. ಬಱಿ ಎಂಬ ಹಳಗನ್ನಡದ ಇಂದಿನ ರೂಪ. ಬರಿ ಎಂದರೆ ಏನೂ ಇಲ್ಲದ, ಖಾಲಿಯಾದ, ಶೂನ್ಯವಾದ, ನಿರುಪಯುಕ್ತವಾದ ಎಂಬೆಲ್ಲ ಅರ್ಥಗಳಿವೆ. ಇದು ಕನ್ನಡದ ಹಲವಾರು ನಾಮಪದಗಳ ಜೊತೆಯಲ್ಲಿ ಬಳಕೆಯಾಗುವ ವಿಶೇಷಣ, ಬರಿಮಾತು, ಬರಿಮೈ, ಬರಿದಲೆ, ಬರಿಗಾಲು, ಬರಿಗೈ, ಬರಿಹೊಟ್ಟೆ, ಬರಿಬೆನ್ನು, ಬರಿನೆಲ, ಬರಿಮನೆ ಇತ್ಯಾದಿ, ಖಾಲಿ ಅಥವಾ ಶೂನ್ಯ ಎಂಬ ಅರ್ಥದಲ್ಲಿ ಬೋಳು ಎಂಬ ಪದವೂ ಬಳಕೆಯಲ್ಲಿದೆ. ಆದರೆ ಅದಕ್ಕೂ 'ಬರಿ'ಗೂ ಅರ್ಥದಲ್ಲಿ ವ್ಯತ್ಯಾಸಗಳಿವೆ. ಬರಿದಲೆ ಮತ್ತು ಬೋಳುತಲೆ ಎಂಬ ಪದಗಳಿಗೆ ಇರುವ ಅರ್ಥವ್ಯತ್ಯಾಸವನ್ನು ಗಮನಿಸಿ. ಬರಿ ಮತ್ತು ಬರಗಳಿಗೂ ಇರುವ ಅರ್ಥಸಂಬಂಧಗಳನ್ನು ಗುರುತಿಸಬೇಕಾಗಿದೆ. ಬರ ಎಂದರೆ ಕ್ಷಾಮ ಎಂಬ ನಿರ್ದಿಷ್ಟಾರ್ಥವಿದೆ. ಆದರೆ ಬರಡು, ಬರಡ, ಬರ್ಪ (ಕನ್ನಡದ ಕೆಲವು ಉಪಭಾಷೆಗಳಲ್ಲಿ ಬರ್ಪ ಎಂದರೆ ಮೈಮೇಲೆ ಕೂದಲುಗಳಿಲ್ಲದ ವ್ಯಕ್ತಿ ಎಂಬ ಅರ್ಥವಿದೆ). ಇಲ್ಲೆಲ್ಲ ಬರ ಎಂಬುದಕ್ಕೆ ಸಾರರಹಿತ, ನಿರುಪಯುಕ್ತ ಎಂಬ ಅರ್ಥಗಳಿವೆ. ಹಾಗಾಗಿ ಬರ ಮತ್ತು ಬರಿ ಇವೆರಡೂ ಅರ್ಥ ಸಂಬಂಧವುಳ್ಳ ಪದಗಳ ಹಾಗೆ ತೋರುತ್ತವೆ. ಲಿಖಿಸು ಎಂಬ ಅರ್ಥವುಳ್ಳ ಬರಿ (=ಬರೆ) ಎಂಬ ಕ್ರಿಯಾಪದ ಕನ್ನಡದಲ್ಲಿದೆ. ಆದರೆ ಈ ಎರಡೂ ಬರಿಗಳ ಉಚ್ಚಾರಣೆಯಲ್ಲಿ ವ್ಯತ್ಯಾಸವಿದೆ. ಮೊದಲ ಸ್ವರದಲ್ಲಿ ಈ ವ್ಯತ್ಯಾಸವನ್ನು ಗುರುತಿಸಬಹುದು. ಉಚ್ಚರಿಸಿ ನೋಡಿ.

**ನೂರಾರು ಎಂಬುದು ನೂರ ಆರೇ?**

ನೂರಾರು ಎಂಬುದು ಒಂದು ನಿರ್ದಿಷ್ಟ ಸಂಖ್ಯೆಯಲ್ಲ. ನೂರು ಮತ್ತು ಅದಕ್ಕೂ ಮಿಕ್ಕು ಎಂಬ ಅನಿರ್ದಿಷ್ಟತೆಯನ್ನು ಹೇಳುವಾಗ ನೂರಾರು ಎನ್ನುತ್ತೇವೆ. ಸಾವಿರಾರು, ಹತ್ತಾರು, ಸಹಸ್ರಾರು ಎಂಬ ಪ್ರಯೋಗಗಳು ಇವೆ. ಸಂಖ್ಯೆಗಳಲ್ಲಿ ಮಾತ್ರವಲ್ಲದೆ ಹಲವಾರು, ಕೆಲವಾರು ಎಂಬ ಅನಿರ್ದಿಷ್ಟಾರ್ಥ ಪ್ರಯೋಗಗಳಲ್ಲೂ ಇದು ಕಾಣಸಿಗುತ್ತದೆ. ಸಹಸ್ರ ಎಂಬ ಸಂಸ್ಕೃತ ಪದದೊಡನೆ ಕಂಡರೂ ಲಕ್ಷ, ಕೋಟಿ, ಮಿಲಿಯನ್ ಮುಂತಾದ ಪದಗಳ ಜೊತೆ ಇದು ಕಾಣಸಿಗುವುದಿಲ್ಲ. ಅಲ್ಲೆಲ್ಲಾ ಗಟ್ಟಲೆ ಎಂಬ ಪ್ರತ್ಯಯ ಸೇರುತ್ತದೆ. ಲಕ್ಷಗಟ್ಟಲೆ, ಕೋಟಿಗಟ್ಟಲೆ, ಮಿಲಿಯಗಟ್ಟಲೆ ಇತ್ಯಾದಿ. ಸಾವಿರದ ಜೊತೆಗೂ ಈ –ಗಟ್ಟಲೆ ಆಗಾಗ ಸೇರುವುದುಂಟು. ಉದಾ: ಸಾವಿರಗಟ್ಟಲೆ. ಹಲವು ಲಕ್ಷಗಳು ಎನ್ನುವ ಅರ್ಥದಲ್ಲಿ ಲಕ್ಷಾಂತರ ಎಂಬ ಪ್ರಯೋಗವೂ ಇದೆ. ಕೋಟ್ಯಂತರ (ಕೋಟ್ಯಾಂತರ ಅಲ್ಲ) ಮಿಲಿಯಾಂತರ ಎಂಬ ಪ್ರಯೋಗಗಳೂ ಇವೆ. ಹಲವಾರು ಎಂಬ ಅರ್ಥದಲ್ಲಿ ನೂರೆಂಟು ಎಂಬ ಪ್ರಯೋಗವೂ ಇದೆ. ಇದು ಸಾಮಾನ್ಯವಾಗಿ ಬೇಡದ, ಗೋಜಲಿನ ಸಂಗತಿಗಳನ್ನು ಹೇಳುವಾಗ ಮಾತ್ರ ಬಳಕೆಯಾಗುವಂತೆ ತೋರುತ್ತದೆ. ನೂರೆಂಟು ತರಲೆಗಳು, ನೂರೆಂಟು ವಿಘ್ನಗಳು, ನೂರೆಂಟು ತಾಪತ್ರಯಗಳು ಇತ್ಯಾದಿ. ಇಲ್ಲೆಲ್ಲಾ ನೂರೆಂಟು ಎಂಬ ಸಂಖ್ಯೆ ಮುಖ್ಯವಲ್ಲ. ಆದರೂ ಈ ಸಂಖ್ಯೆಯ ಬಗ್ಗೆ ಇರುವ ಕೆಲವು ನಂಬಿಕೆಗಳು ನೂರೆಂಟು ಎಂಬ ಪದಕ್ಕಿರುವ ಅಪಥ್ಯ ಅರ್ಥಕ್ಕೆ ಕಾರಣವಾಗಿರಬಹುದು.

**ಆಮರಣಾಂತ/ಅಮರಣಾಂತ**

ಈಚಿನ ದಿನಗಳಲ್ಲಿ ಪತ್ರಿಕೆಯೊಂದರ ತಲೆಬರೆಹದಲ್ಲಿ ಮತ್ತು ವರದಿಯ ಭಾಗದಲ್ಲಿ 'ಅಮರಣಾಂತ' ಎಂಬ ಪ್ರಯೋಗ ಕಂಡಿತು. ಇದು 'ಆಮರಣಾಂತ' ಎಂದಿರಬೇಕಿತ್ತು. ಅಂಥ ಕೆಲವು ಪ್ರಯೋಗಗಳು ಹೀಗಿವೆ. ಆಬಾಲವೃದ್ಧ (ಹುಡುಗರಿಂದ ಮುದುಕರವರೆಗೆ), ಆಸೇತುಹಿಮಾಚಲ (ರಾಮೇಶ್ವರದಿಂದ ಹಿಮಾಲಯುದವರೆಗೆ), ಆಕರ್ಣಾಂತ (ಕಿವಿಯವರೆಗೆ), ಆಜನ್ಮ (ಹುಟ್ಟಿನಿಂದಲೇ) ಇತ್ಯಾದಿ, ಆಮರಣಾಂತ ಎಂದರೆ ಸಾವು ಬರುವವರೆಗೆ ಎಂದು ಅರ್ಥ. ಸಾಮಾನ್ಯವಾಗಿ ಸಾಮಾಜಿಕ ಹೋರಾಟಗಳಲ್ಲಿ ಉಪವಾಸ ಕೂರುವ ಕೆಲವರು ತಮ್ಮ ಉಪವಾಸ ಮುಗಿಯಬೇಕಾದರೆ ತಮ್ಮ ಬೇಡಿಕೆಗಳು ಪೂರೈಸಬೇಕು ಇಲ್ಲವೇ ತಮ್ಮ ಸಾವು ಬರಬೇಕು ಎಂಬ ಶರತ್ತು ಹಾಕಿಕೊಳ್ಳುತ್ತಾರೆ. ಇದನ್ನು ಕೆಲವೊಮ್ಮೆ ಆಮರಣ ಉಪವಾಸವೆಂದೂ ಹೇಳುವುದುಂಟು. ಆದರೆ ಅಮರಣಾಂತವೆಂದು ಹೇಳುವುದು ಮಾತ್ರ ಸರಿಯಾಗದು. ಅಮರಣ ಎಂದರೆ ಮರಣದ ವಿರುದ್ಧೋಕ್ತಿಯಲ್ಲವೆ?

**ಜಲಕೊಯ್ಲು**

ಇದೊಂದು ಇತ್ತೀಚೆಗೆ ಬಳಕೆಗೆ ಬರುತ್ತಿರುವ ರಚನೆ. ಕೆಲವರು ಮಳೆಕೊಯ್ಲು ಎಂದೂ ಬಳಸಿರುವುದುಂಟು. ಮಳೆನೀರು ಪೋಲಾಗದಂತೆ ಅದನ್ನು ವಿವಿಧ ರೀತಿಗಳಲ್ಲಿ ಸಂಗ್ರಹಿಸಿ ಜತನ ಮಾಡಿ, ಬೇಕಾದಾಗ ಬಳಸುವ ಪದ್ಧತಿಗಳು ಈಗ ಪ್ರಚಾರ ಪಡೆಯುತ್ತಿವೆ.

ಹೀಗೆ ಮಳೆನೀರನ್ನು ಕೂಡಿಡುವ ವಿಧಾನವನ್ನು ಜಲಕೊಯ್ಲು ಎಂದು ಕರೆಯಲಾಗುತ್ತಿದೆ. ಕೊಯ್ಲು ಎಂಬುದು ಸಾಮಾನ್ಯವಾಗಿ ತೆನೆ ತುಂಬಿದ ಬೆಳೆಯನ್ನು ಕತ್ತರಿಸುವ ಕ್ರಿಯೆಗೆ ಅನ್ವಯವಾಗುವ ಮಾತಾಗಿದೆ. ಒಕ್ಕುವ, ಬಣವೆ ಮಾಡಿ ಸಂಗ್ರಹಿಸಿ ಬಳಸುವ ವಿವಿಧ ಕ್ರಿಯೆಗಳ ಸರಣಿಗೆ ಕೊಯ್ಲು ಎಂದು ಹೆಸರಿಸುವುದು ವಾಡಿಕೆಗೆ ಬರುತ್ತಿದೆ. ಸಂಸ್ಕೃತ ಮತ್ತು ಕನ್ನಡ ಪದಗಳು ಸೇರಿ 'ಜಲಕೊಯ್ಲು' ರಚನೆಯಾಗಿದೆ ಎನ್ನುವುದನ್ನೂ ಗಮನಿಸಬೇಕು. ಕನ್ನಡದಲ್ಲಿ ಹೀಗೆ ಹಲವಾರು ರಚನೆಗಳು ಹಿಂದಿನಿಂದಲೂ ಬಳಕೆಗೆ ಬಂದಿವೆ.

**ಸಂಕಿರಣ/ಸಂಕೀರ್ಣ**

ಹಲವು ಆಹ್ವಾನ ಪತ್ರಿಕೆಗಳಲ್ಲಿ ವಿಚಾರಗೋಷ್ಠಿಗಳಿಗೆ ವಿಚಾರ ಸಂಕೀರ್ಣಗಳೆಂದು ಅಚ್ಚಾಗಿರುವುದನ್ನು ನೋಡುತ್ತೇವೆ. ಅದು ವಾಸ್ತವವಾಗಿ ಸಂಕಿರಣ ಎಂದಾಗಬೇಕು. ಸಂಕೀರ್ಣ ಎಂಬುದು ಜಟಿಲ, ಸರಳವಲ್ಲದ ಎಂಬ ಅರ್ಥವುಳ್ಳ ಪದ. ಸಂಕಿರಣಗಳು ಬಲು ಸಂಕೀರ್ಣವಾದ ವಿಚಾರ ಮಂಡನೆಯಾಗುವ ಜಾಗಗಳು ಎಂಬುದು ನಿಜವಾದರೂ ಅದೇ ಕಾರಣಕ್ಕೆ ಅವುಗಳನ್ನು ವಿಚಾರ ಸಂಕೀರ್ಣಗಳೆಂದು ಕರೆಯಲು ಬಾರದು. ಸಂಕೀರ್ಣ ಎಂಬುದು ಸಮುಚ್ಚಯ ಎಂಬ ಅರ್ಥದಲ್ಲೂ ಬಳಸುವುದುಂಟು. ಬಹುಮಹಡಿ ಕಟ್ಟಡಗಳನ್ನು, ವ್ಯಾಪಾರಿ ಮಳಿಗೆಗಳ ಸಮುಚ್ಚಯಗಳನ್ನು ಸಂಕೀರ್ಣಗಳೆಂದು ಕರೆಯುವುದು ಈಗ ವಾಡಿಕೆಗೆ ಬಂದಿದೆ. ಇಂಗ್ಲಿಶ್‌ನ ಕಾಂಪ್ಲೆಕ್ಸ್ ಎಂಬುದನ್ನು ಕನ್ನಡಕ್ಕೆ ನೇರವಾಗಿ ಅನುವಾದಿಸಿಕೊಂಡಿರುವುದರಿಂದ ಇಂಥ ಪ್ರಯೋಗಗಳು ಬಳಕೆಗೆ ಬಂದಿವೆ.

**ಸಿಗು/ಸಿಕ್ಕು:ಮಿಗು/ಮಿಕ್ಕು**

ಸಿಗು ಮತ್ತು ಸಿಕ್ಕು ಸಮಾನಾರ್ಥಕ ಕ್ರಿಯಾರೂಪಗಳೆಂದು ತೋರುತ್ತವೆ. ಆದರೆ ಸಿಕ್ಕು ರೂಪಕ್ಕೆ ಹೆಚ್ಚು ವ್ಯಾಪಕ ಬಳಕೆ ಇದೆ. ಅದನ್ನು ಭೂತ ಮತ್ತು ಅಭೂತ ಕಾಲಗಳಲ್ಲಿ ಬಳಸಬಹುದು. 'ರೈಲು ಸಿಕ್ಕಿತು', 'ರೈಲು ಸಿಕ್ಕುತ್ತದೆ'. ಆದರೆ ಸಿಗು ಎಂಬ ರೂಪ ಅಭೂತ ಕಾಲದಲ್ಲಿ ಮಾತ್ರ ಬಳಕೆಯಾಗುವಂತಿದೆ. 'ರೈಲು ಸಿಗುತ್ತದೆ' ಎಂಬುದು ಸರಿಯಾದ ವಾಕ್ಯ. ಆದರೆ 'ರೈಲು ಸಿಗಿತು' ಎನ್ನಲು ಬರುವುದಿಲ್ಲ. ಮಿಗು ಮತ್ತು ಮಿಕ್ಕು ಎಂಬ ರೂಪಗಳಿಗೂ ಇಂಥದೇ ವಿವರಣೆ ಹೊಂದುತ್ತದೆ. ಸಿಗು ಮತ್ತು ಸಿಕ್ಕು ಎಂಬ ಎರಡು ರೂಪಗಳು ಏಕೆ ಬಳಕೆಗೆ ಬಂದವು ಎಂಬುದು ಕುತೂಹಲದ ವಿಚಾರ. ಇದು ಭಾಷೆಯ ಚರಿತ್ರೆಗೆ ಸೇರಿದ ಚರ್ಚೆ.

**ವಡಾ, ರವಾ, ದೋಸಾ**

ಯಾವುದೇ ಉಪಾಹಾರ ಮಂದಿರದಲ್ಲಾದರೂ ಕಾಣಸಿಗುವ ಪದಗಳಿವು. ಕ್ರಮವಾಗಿ ವಡೆ, ರವೆ ಮತ್ತು ದೋಸೆಗಳು ಆಗಬೇಕಾದ ಈ ಪದಗಳು ಏಕೆ ಹೀಗೆ ವಿರೂಪಗೊಂಡಿವೆ? ಇವುಗಳ ಇಂಗ್ಲಿಶ್ ಲಿಪ್ಯಂತರದಲ್ಲೂ ಹೀಗೆ ಆಕಾರಾಂತವಾಗಿಯೇ ಕಾಣಿಸಿಕೊಳ್ಳುತ್ತವೆ. ಆಕಾರಾಂತವಾಗಿದ್ದ ಸಂಸ್ಕೃತ ಪದಗಳನ್ನು ಎಕರಾಂತಗೊಳಿಸಿಕೊಂಡ ವಿಚಾರ ಎಲ್ಲರಿಗೂ ಗೊತ್ತಿದೆ. ಅಪ್ಸರಾ=ಅಪ್ಸರೆ, ಲೀಲಾ=ಲೀಲೆ ಇತ್ಯಾದಿ. ಅಂದರೆ ಅಕಾರಾಂತ ಪದಗಳು ಮೂಲಪದಗಳೆಂದೂ ಅವುಗಳ ತದ್ಭವಗಳು ಎಕಾರಾಂತಗಳೆಂದೂ ಸಾಮಾನ್ಯ ತಿಳುವಳಿಕೆ

ಇರುವಂತಿದೆ. ಅದಕ್ಕಾಗಿಯೇ ಈಗ ಸಹಜವಾಗಿ ಎಕಾರಾಂತವಾಗಿರುವ (ರವೆ, ದೋಸೆ, ವಡೆ)ಪದಗಳನ್ನು ಹೆಚ್ಚು ಪರಿಷ್ಕೃತ ರೂಪದಲ್ಲಿ ಬಳಸಬೇಕೆಂದು ಅವುಗಳನ್ನು ಆಕಾರಾಂತಗೊಳಿಸಲಾಗಿದೆ ಎಂದು ತೋರುತ್ತದೆ. ಇಂಥವೇ ಇನ್ನಷ್ಟು ಪ್ರಯೋಗಗಳು ಗಮನಿಸಿ: ತೋಟಗಾರಿಕಾ ಸಚಿವ, ಕೈಗಾರಿಕಾ ವಲಯ, ಕಲಿಕಾ ಕೇಂದ್ರ,

**ಮತ್ತು/ಹಾಗೂ**

ಇಂದಿನ ಕನ್ನಡದಲ್ಲಿ ಇವೆರಡು ಪದಗಳನ್ನು ನಾವು ಬಳಸುವ ರೀತಿಯಲ್ಲಿ ಹೆಚ್ಚಿನ ವ್ಯತ್ಯಾಸಗಳು ಕಂಡು ಬರುತ್ತಿಲ್ಲ. ಎರಡೂ ಸಮಾನಾರ್ಥಕಗಳೇನೋ ಎಂಬಂತೆ ಬಳಕೆಯಾಗುತ್ತಿವೆ. ಅಂದರೆ 'ಮತ್ತು' ಬಳಸುವ ಕಡೆಯಲ್ಲೆಲ್ಲಾ 'ಹಾಗೂ' ರೂಪವನ್ನು ಬಳಸುವುದು ಸಾಧ್ಯ. ಇವೆರಡೂ ರೂಪಗಳನ್ನು ಬೇರೆ ಬೇರೆಯಾಗಿಡಲು ನಿಯಮ ಬೇಕಾಗಿದೆ. ಅಂಥ ನಿಯಮವನ್ನು ನಿರೂಪಿಸಲು ಯತ್ನಿಸುತ್ತೇನೆ. ಎರಡು ನಾಮರೂಪಗಳನ್ನು ಸಮುಚ್ಚಯಗೊಳಿಸಲು ಅವುಗಳ ನಡುವೆ ಈ ರೂಪಗಳನ್ನು ಬಳಸಲಾಗುತ್ತದೆ. ನಿಯಮ ಹೀಗಿದೆ: ಆ ನಾಮರೂಪಗಳು ಸಂಪೂರ್ಣವಾಗಿ ಬೇರೆ ಬೇರೆಯಾಗಿದ್ದರೆ ಆಗ ಅವುಗಳ ನಡುವೆ 'ಮತ್ತು' ರೂಪವನ್ನು ಬಳಸಬೇಕು. ಉದಾ: 'ಭಾರತ ಮತ್ತು ಪಾಕಿಸ್ತಾನಗಳು ನೆರೆಹೊರೆಯ ರಾಷ್ಟ್ರಗಳು' ನಾಮರೂಪಗಳಲ್ಲಿ ಮೊದನೆಯದರ ಆಂಶಿಕ ಮುಂದುವರಿಕೆಯಾಗಿ ಎರಡನೆಯ ನಾಮರೂಪವಿದ್ದರೆ ಆಗ ಅವೆರಡರ ನಡುವೆ 'ಹಾಗೂ' ರೂಪವನ್ನು ಬಳಸಬೇಕು. ಉದಾ: 'ಮಕ್ಕಳು ಹಾಗೂ ಅವರ ಪೋಷಕರು ಇಂದಿನ ಕಾರ್ಯಕ್ರಮಕ್ಕೆ ಆಹ್ವಾನಿತರಾಗಿದ್ದಾರೆ'. 'ಪುಸ್ತಕದ ಮುದ್ರಣ ಹಾಗೂ ಅದರ ವಿನ್ಯಾಸಗಳೆರಡೂ ಚೆನ್ನಾಗಿವೆ' ಸ್ವಲ್ಪ ಎಚ್ಚರಿಕೆಯಿಂದ ಗಮನಿಸಿದರೆ 'ಹಾಗೂ' ಬಳಕೆಯಾಗುವ ಮೊದಲನೆಯ ನಾಮರೂಪದ ಸರ್ವನಾಮ ರೂಪ (ಅವರ, ಅದರ ಇತ್ಯಾದಿ) ಎರಡನೆಯ ನಾಮರೂಪದ ಮೊದಲಲ್ಲಿ ಬರುವುದು ತಿಳಿಯುತ್ತದೆ. ಈ ನಿಯಮ ಎಷ್ಟು ಸರಿ ಎಂಬುದನ್ನು ಓದುಗರು ಪರಿಶೀಲಿಸಬೇಕು.

ಮತ್ತು/ಹಾಗೂ ಈ ಪದಗಳ ಪ್ರಯೋಗವನ್ನು ಕುರಿತು ಬರೆದ ಟಿಪ್ಪಣಿಗೆ ಓದುಗ ಮಿತ್ರರೊಬ್ಬರು ಪ್ರತಿಕ್ರಿಯಿಸಿದ್ದಾರೆ. ಈಗ ಮತ್ತಷ್ಟು ಸಂಗತಿಗಳನ್ನು ನೋಡೋಣ. ಹಾಗೂ ಎಂಬ ಪದವನ್ನು ಪರಿಷತ್ತಿನ ಕನ್ನಡ-ಕನ್ನಡ ನಿಘಂಟು ದಾಖಲೆ ಮಾಡಿಲ್ಲ. ಆದರೂ ಕನ್ನಡದಲ್ಲಿ ಇದು ವ್ಯಾಪಕವಾಗಿ ಬಳಕೆಯಾಗುತ್ತಿದೆ. ಹಾಗೆ ಎಂಬುದು ಹೋಲಿಕೆಗಾಗಿ ಬಳಕೆಯಾಗುವ ಪದವಷ್ಟೆ. ಮರದ ಹಾಗೆ ನಿಂತಿದ್ದಾನೆ ಎಂಬ ವಾಕ್ಯವನ್ನು ಗಮನಿಸಿ. ಹಾಗೆ ಎಂಬುದು ಅಂತೆ ಎಂಬ ಇನ್ನೊಂದು ಕನ್ನಡದ ಹೋಲಿಕೆಯ ಪದಕ್ಕೆ ಸಂವಾದಿಯಾಗಿದೆ. ಹಾಗೆಯೇ ಎಂಬುದು ಹೊಸಗನ್ನಡದ ಇನ್ನೊಂದು ರೂಪ. ಜೊತೆಗೆ, ಅದೇ ಕ್ರಮದಲ್ಲಿ ಎಂಬ ಅರ್ಥದಲ್ಲಿ ಬಳಕೆ ಸಾಧ್ಯ. ಈ ಬಳಕೆಗಳಲ್ಲಿ ಇರುವ ವ್ಯತ್ಯಾಸವನ್ನು ಗಮನಿಸಲು ಅನುಕೂಲವಾಗುವಂತೆ ಮತ್ತೊಂದು ಸೂಚನೆಯನ್ನು ನೀಡಬಯಸುತ್ತೇನೆ. ಹಾಗೂ ಎಂಬ ಪದ ಬಳಕೆಯಾದಾಗ ಅದರ ಆಚೀಚಿನ ನಾಮಪದಗಳು ಪ್ರಥಮಾ ವಿಭಕ್ತಿಯಲ್ಲಿ ಇದ್ದರೆ ಸಾಕು. ಒಂದು ವೇಳೆ ಬೇರೆ ವಿಭಕ್ತಿಪ್ರತ್ಯಯ ಬಳಕೆಯಾಗಿದ್ದರೆ ತಪ್ಪಿಲ್ಲ. ಆದರೆ ಎರಡು ನಾಮಪದಗಳ ವಿಭಕ್ತಿ ಪ್ರತ್ಯಯ ಮಾತ್ರ

ಒಂದೇ ಆಗಿರಬೇಕು. ಹಾಗೆ ಎಂಬ ರೂಪ ಬಳಕೆಯಾದಾಗ ಅದರ ಹಿಂದಿನ ನಾಮಪದವು ಷಷ್ಠೀ ವಿಭಕ್ತಿಯಲ್ಲಿರುತ್ತದೆ. ಉದಾ: ಚಂದ್ರನ ಹಾಗೆ, ಕತ್ತೆಯ ಹಾಗೆ, ದೀಪದ ಹಾಗೆ ಇತ್ಯಾದಿ. ಇರಲಿ. ಈ ವಿಷಯದ ಚರ್ಚೆ ಇಲ್ಲಿಗೆ ಮುಗಿಯುವಂತಿಲ್ಲ.

**ಹೇಳಿದರೆ/ಹೇಳುವರೆ**

ಗೋವಿಂದಪೈ ಅವರ ಬರಪಣಿಗೆಯಲ್ಲಿ ಹೇಳುವರೆ, ನೋಡುವರೆ ಮುಂತಾದ ಪ್ರಯೋಗಗಳನ್ನು ಕಂಡಾಗ ಕೊಂಚ ಅಚ್ಚರಿಯಾಗುತ್ತಿತ್ತು. ಅವರ ಕನ್ನಡವೇ ಅಂಥ ಅಚ್ಚರಿಗಳಿಗೆ ಆಕರವಾಗಿದ್ದರಿಂದ ಇದೊಂದು ಬೇರೆ ಎನಿಸುತ್ತಿರಲಿಲ್ಲ. ಈಚೆಗೆ ಪೈ ಅವರ ಪ್ರದೇಶದವರೇ ಆದ ಹಿರಿಯರೊಬ್ಬರ ಮಾತಿನಲ್ಲಿ 'ಹೇಳುವರೆ' ಪ್ರಯೋಗ ಕೇಳಿದಾಗ ಮತ್ತೆ ಅಚ್ಚರಿಯಾಯಿತು. ಇದು ಯಾವ ಬಗೆಯ ರಚನೆ ಎಂದು ಕಂಡುಕೊಳ್ಳುವ ಕುತೂಹಲವಾಯಿತು. ಸಾಮಾನ್ಯವಾಗಿ ಹೇಳುವರೆ, ನೋಡುವರೆ, ಕೊಡುವರೆ ಮುಂತಾದ ಪ್ರಯೋಗಗಳು ಬರುವ ವಾಕ್ಯಗಳಲ್ಲಿ ನಾವು (ಅಂದರೆ ಪ್ರಮಾಣ ಕನ್ನಡವನ್ನು ಬಳಸುತ್ತೇವೆಂದು ತಿಳಿದವರು)ನಿರೀಕ್ಷಿಸುವ ರೂಪಗಳೆಂದರೆ ಕ್ರಮವಾಗಿ ಹೇಳಿದರೆ, ನೋಡಿದರೆ, ಕೊಟ್ಟರೆ ಆಗಿರುತ್ತವೆ. ಅಂದರೆ ನಾವು ನಿರೀಕ್ಷಿಸುವ ರೂಪಗಳಲ್ಲಿ ಆಯಾ ಕ್ರಿಯಾಪದಗಳ ಭೂತಕೃದಂತ ರೂಪಕ್ಕೆ -ಅರೆ ಎಂಬ ಪ್ರತ್ಯಯ ಸೇರಿದೆ. ಈ-ಅರೆ ಪಕ್ಷಾರ್ಥವಾಚಿ ಅಥವಾ ಶರತ್ತು ಸೂಚಕವಾಗಿರುವ ಸಾಧ್ಯತೆಗಳು ಹೆಚ್ಚು, ಉದಾ: ಕೊಟ್ಟರೆ, ಬಿಟ್ಟರೆ, ತಿಂದರೆ, ಹೋದರೆ ಇತ್ಯಾದಿ. ಇದೇ ರೂಪದಲ್ಲಿ ಕ್ರಿಯಾಪದದ ಅಭೂತ ಕೃದಂತ ರೂಪಕ್ಕೆ ಕ್ಕೆ 'ಅರೆ' ಸೇರಿದರೆ ನಮಗೆ ಅಚ್ಚರಿ ತಂದ ರೂಪಗಳು ಸಿದ್ಧವಾಗುತ್ತವೆ. ನಾವು ಉಲ್ಲೇಖಿಸಿರುವ ಪದಗಳಲ್ಲಿ ಹೇಳುವ, ನೋಡುವ, ಕೊಡುವ ಈ ರೂಪಗಳಿಗೆ -ಅರೆ ಸೇರಿವೆ. ಗೋವಿಂದಪೈ ಅವರ ಬರೆಹಗಳಲ್ಲಿ ಕಂಡ ಈ ರೂಪಗಳನ್ನು ಹಳೆಗನ್ನಡದ ರೂಪಗಳ ನೆನಪನ್ನು ತರುತ್ತವೆ. ನೆನಪಿಗೆ ಬರುವ ಪಂಪನ ಎರಡು ಪ್ರಯೋಗಗಳು ಹೀಗಿವೆ. 'ಪೇೞ್ವೊಡೆ ಪಂಪನೆ ಪೇೞ್ಗುಂ' 'ಬೇಡುವೊಡೆ ಎಮ್ಮಯ್ಯನಂ ಬೇಡಿರೇ' ಬೇಂದ್ರೆಯ ಕವಿತೆಯೊಂದರಲ್ಲಿ 'ಊದುವರೆ ಕೊಳಲು' ಎಂಬ ಸಾಲಿದೆ. ಬಲ್ಲವರು ಇನ್ನಷ್ಟು ಈ ಬಗ್ಗೆ ಬೆಳಕು ಚೆಲ್ಲಬೇಕು.

**ರಾಜ್ಯಪಾಲೆ/ಮಂತ್ರಿಣಿ**

ರಾಜ್ಯಪಾಲರ ಹುದ್ದೆಯಲ್ಲಿ ಹೆಂಗಸರಿದ್ದಾಗ ಅವರನ್ನು ಏನೆಂದು ಕರೆಯಬೇಕೆಂದು ಸಮಸ್ಯೆಯಾಯಿತು. ಕೆಲವರು ರಾಜ್ಯಪಾಲ ಪದವನ್ನೇ ಸ್ತ್ರೀವಾಚಿಯಾಗಿಯೂ ಬಳಸಬಹುದೆಂದುಕೊಂಡರು. ಮತ್ತೆ ಕೆಲವರು ರಾಜ್ಯಪಾಲೆ ಎಂಬ ರೂಪವನ್ನು ಬಳಸಿದರು. ವೈದ್ಯ-ವೈದ್ಯೆ, ಸಚಿವ-ಸಚಿವೆ ಮುಂತಾದ ರೂಪಗಳ ಮಾದರಿಯಲ್ಲಿ ರಾಜ್ಯಪಾಲೆ ರೂಪವೂ ಸಿದ್ಧಗೊಂಡಿದೆ ಎನ್ನಬಹುದು. ಆದರೆ ಮಂತ್ರಿ, ಉಪಾಧ್ಯಾಯ, ಸೇವಕ, ನಟ, ನಿರ್ದೇಶಕ ಮುಂತಾದ ವೃತ್ತಿಸೂಚಕ ನಾಮಪದಗಳ ಸ್ತ್ರೀಲಿಂಗ ರೂಪಗಳನ್ನು ಹೀಗೆ ಎಕಾರಾಂತ ಮಾಡುವುದಿಲ್ಲ. ಅಲ್ಲೆಲ್ಲಾ-ಇಣಿ/ಇನಿ ಪ್ರತ್ಯಯ ಸೇರಿಸುವುದು (ಉದಾ: ಉಪಾಧ್ಯಾಯಿನಿ, ಮಂತ್ರಿಣಿ)ಇಲ್ಲವೇ ಇಕಾರಾಂತಗೊಳಿಸುವುದು (ಉದಾ: ನಟಿ, ಸೇವಕಿ) ಕಂಡು ಬರುತ್ತದೆ. ಇಲ್ಲೆಲ್ಲಾ ಯಾವುದಾದರೂ ನಿಯಮ

ಬಳಕೆಯಾಗುತ್ತಿದೆಯೇ ಎಂದು ಪರಿಶೀಲಿಸಬೇಕಾಗಿದೆ. ಸಾಮಾನ್ಯವಾಗಿ ಇಕಾರಾಂತ ಅಥವಾ ವ್ಯಂಜನಾಂತ ವೃತ್ತಿನಾಮಪದಗಳಾದರೆ ಅವುಗಳಿಗೆ ಇಣಿ/ಇನಿ ಹಚ್ಚುವುದು ಕಂಡು ಬರುತ್ತದೆ. ಅಕಾರಾಂತ ವೃತ್ತಿನಾಮಪದಗಳನ್ನು ಯಾವಾಗ ಇಕಾರಾಂತಗೊಳಿಸುವುದು (ನಟಿ) ಮತ್ತು ಯಾವಾಗ ಎಕಾರಾಂತಗೊಳಿಸುವುದು (ವೈದ್ಯೆ) ಎಂಬುದಕ್ಕೆ ಇನ್ನೂ ಖಚಿತವಾದ ನಿಯಮಗಳನ್ನು ಹೇಳುವುದು ಸಾಧ್ಯವಿಲ್ಲ. ಹಾಗೆ ರೂಪಿಸಬಹುದಾದ ನಿಯಮವೂ ಬಹಳ ಸಂಕೀರ್ಣವಾಗಿದೆ.

**ಕಲೆ**

ಕನ್ನಡದ ಒಂದು ಕ್ರಿಯಾಪದವಿದು, ಸೇರು, ಬೆರೆಯು, ಭೇಟಿಯಾಗು ಮುಂತಾದ ಅರ್ಥಗಳಲ್ಲಿ ಇದು ಬಳಕೆಯಾಗುತ್ತದೆ. ಆದರೆ ಈಚಿನ ಪ್ರಮಾಣಕನ್ನಡದಲ್ಲಿ ಇದರ ಬಳಕೆ ಕಡಿಮೆಯಾಗಿದೆ. ಸಾಮಾನ್ಯವಾಗಿ ಇಂಥ ಎಕಾರಾಂತ ಕ್ರಿಯಾರೂಪಗಳು ಕಾವೇರಿ–ಹೇಮಾವತಿ ಪ್ರದೇಶದಲ್ಲಿ ಇಕಾರಾಂತವಾಗುತ್ತವೆ. ಉದಾ: ಬರೆ=ಬರಿ, ತೆರೆ=ತೆರಿ, ತೆಗೆ=ತೆಗಿ, ಮರೆ=ಮರಿ, ಕರೆ=ಕರಿ ಇತ್ಯಾದಿ. ಆದರೆ ಕಲೆ ಎಂಬ ಕ್ರಿಯಾರೂಪ ಹೀಗೆ ಇಕಾರಂತವಾಗಿ ಬಳಕೆಯಾಗುವುದು ಈ ಪ್ರದೇಶದಲ್ಲಿ ಕೇಳಸಿಗುವುದು ಕಡಿಮೆ. ಬಳ್ಳಾರಿಯ ಕನ್ನಡದಲ್ಲಿ ಇದು ಹೆಚ್ಚಿನ ಪ್ರಮಾಣದಲ್ಲಿ ಕೇಳಸಿಗುತ್ತದೆ. ಅಲ್ಲಿ ಕಲೆ ಎಂಬ ರೂಪದಲ್ಲೇ ಬಳಕೆಯಾಗುತ್ತದೆ. ಭೇಟಿಯಾಗು, ಸಿಗು ಎಂಬ ಅರ್ಥದಲ್ಲಿ ಇದರ ಬಳಕೆಯಾಗುತ್ತದೆ. 'ಕಲೆ ಬಿದ್ದಿದ್ದ' ಎಂಬಲ್ಲಿ ಬೆನ್ನು ಹತ್ತಿದ ಎಂಬ ಅರ್ಥವಿದೆ. ಕನ್ನಡ ಮಾತಿನಲ್ಲಿ ಮತ್ತೆ ಯಾವ ಯಾವ ಪ್ರದೇಶಗಳಲ್ಲಿ ಇದು ಬಳಕೆಯಲ್ಲಿದೆ ಎಂಬುದನ್ನು ನೋಡಬೇಕಿದೆ.

**ಔಪಚಾರಿಕ/ಅನೌಪಚಾರಿಕ**

ರಚನೆಯ ದೃಷ್ಟಿಯಿಂದ ಔಪಚಾರಿಕದ ವಿರುದ್ಧೋಕ್ತಿಯಾಗಿ ಅನೌಪಚಾರಿಕವನ್ನು ಗ್ರಹಿಸಬೇಕು. ಪರಿಷತ್ತಿನ ಕನ್ನಡ–ಕನ್ನಡ ನಿಘಂಟು ಔಪಚಾರಿಕ ಎಂದರೆ (1) ಉಪಚಾರಕ್ಕೆ ಸಂಬಂಧಿಸಿದ, (2) ಗೌಣವಾದ, ಪ್ರಧಾನವಲ್ಲದ, (3) ಅಲಂಕಾರಿಕವಾದ ಎಂಬ ಅರ್ಥಗಳನ್ನು ನೀಡಿದೆ. ಅನೌಪಚಾರಿಕವೆಂದರೆ (1)ಔಪಚಾರಿಕವಲ್ಲದ, (2) ಮೊದಲೇ ಏರ್ಪಾಡಿಲ್ಲದ ಎಂಬ ಅರ್ಥಗಳನ್ನು ನೀಡಿದೆ. ಔಪಚಾರಿಕದ ಎರಡು ಮತ್ತು ಮೂರನೆಯ ಅರ್ಥಗಳಿಗೆ ವಿರುದ್ಧವಾದ ಯಾವ ಅರ್ಥವೂ ಅನೌಪಚಾರಿಕಕ್ಕೆ ಇಲ್ಲ ಎಂಬುದನ್ನು ಗಮನಿಸಬೇಕು. ಇಂದಿನ ಕನ್ನಡದಲ್ಲಿ ಇಂಗ್ಲಿಶಿನ ಫಾರ್ಮಲ್ ಮತ್ತು ಇನ್‌ಫಾರ್ಮಲ್‌ಗೆ ಸಂವಾದಿಯಾಗಿ ಈ ಪದಗಳು ಬಳಕೆಯಾಗುತ್ತಿರುವಂತೆ ತೋರುತ್ತದೆ. ವ್ಯವಸ್ಥಿತ, ನಿಯಮಬದ್ಧ, ನಿಗದಿತ ಎಂಬ ಅರ್ಥದಲ್ಲಿ ಔಪಚಾರಿಕ ಪದವನ್ನು ಬಳಸಲಾಗುತ್ತದೆ. ಆದರೆ ಒಮ್ಮೊಮ್ಮೆ 'ವಿಧಿವತ್ತಾದ ಆದರೆ ನಿರರ್ಥಕ' ಎನ್ನುವ ಅರ್ಥದಲ್ಲೂ ಬಳಕೆಯಾಗುವುದುಂಟು. ಉದಾ: 'ತೀರ್ಪು ನಿಶ್ಚಿತವಾದ ಮೇಲೆ ಈ ಎಲ್ಲ ವಿಚಾರಣೆ ಕೂಡ ಔಪಚಾರಿಕವಲ್ಲವೇ?' ಅನೌಪಚಾರಿಕ ಪದರಚನೆಯಲ್ಲಿ ವಿರುದ್ಧಾರ್ಥಕ ಪ್ರತ್ಯಯವನ್ನು ಹೊಂದಿದ್ದರೂ ಬಳಕೆಯಲ್ಲಿ ಅದು ಸ್ವಾಯತ್ತ ಅರ್ಥವನ್ನು ಪಡೆದುಕೊಂಡಿದೆ; ಯಾವುದೇ ವಿರುದ್ಧಾರ್ಥವನ್ನೂ ಅದು ಪ್ರಕಟಿಸಬೇಕೆಂದಿಲ್ಲ.

**ಸಮ-ಸಮಾನ**

ಇವೆರಡೂ ರಚನೆಯ ದೃಷ್ಟಿಯಿಂದ ಬೇರೆಬೇರೆ. ಸಮಾನದಲ್ಲಿ ಸಮ ಇಲ್ಲ. ಅದನ್ನು ಸ-ಮಾನ ಎಂದು ಪ್ರಗಣಿಸಬೇಕು. ಆದರೂ ಕನ್ನಡದಲ್ಲಿ ಇವೆರಡೂ ಪದಗಳು ಅಲ್ಲಲ್ಲಿ ಪರ್ಯಾಯ ಪದಗಳಂತೆ, ಒಂದೇ ಅರ್ಥವುಳ್ಳ ಪದಗಳಂತೆ ಬಳಕೆಯಾಗುವುದುಂಟು. ಉದಾ: ಸಮಾನಾಂತರ, ಸಮಾಂತರ, ಸಮವಯಸ್ಕರು, ಸಮಾನವಯಸ್ಕರು ಇತ್ಯಾದಿ. ಎಲ್ಲ ಕಡೆಗಳಲ್ಲೂ ಇದು ಸಾಧ್ಯವಿಲ್ಲ. ಸಮಾನ ಹೃದಯಿ ಎಂಬಲ್ಲಿ ಸಮಹೃದಯಿ ಎನ್ನುವುದಾಗದು. ಹಾಗೆಯೇ ಸಮಾನವೇತನ ಎಂಬಲ್ಲಿ ಸಮವೇತನ ಎನ್ನುವುದು ಸಾಧ್ಯವಿಲ್ಲ. ಇವುಗಳಿಂದ ಸಾಧಿತವಾದ ಅಸಮ/ಅಸಮಾನ, ಸಮತೆ/ಸಮಾನತೆ/ಅಸಮಾನತೆ ಎಂಬೀ ಪದಗಳ ಬಳಕೆಯಲ್ಲೂ ಇಂಥದೇ ಗೊಂದಲಗಳಿವೆ. ಹೆಚ್ಚಿನ ಪ್ರಯೋಗಗಳನ್ನು ಗಮನಿಸಿದಾಗ ಸಮ ರೂಪದ ಸ್ಥಾನವನ್ನು ನಿಧಾನವಾಗಿ ಸಮಾನ ಪಡೆದುಕೊಳ್ಳುತ್ತಿರುವಂತೆ ತೋರುತ್ತದೆ. ಈ ಪರಿವರ್ತನೆ ಎಲ್ಲಿಯವರೆಗೆ ಹೋಗುತ್ತದೆ ಎಂಬುದನ್ನು ಕಾಯ್ದುನೋಡಬೇಕಾಗಿದೆ.

**ನಿಭಾವಣಾ**

'ಆಡಳಿತ ನಿಭಾವಣಾ ವಿಜ್ಞಾನ'. ಪತ್ರಿಕೆಯೊಂದರಲ್ಲಿ ಕಂಡ ಪ್ರಯೋಗವಿದು. ನಿರ್ವಹಣಾ ಎಂಬ ಪರಿಚಿತ ಪದಕ್ಕೆ ಬದಲಾಗಿ ನಿಭಾವಣಾ ಎಂಬ ಪದ ಬಳಕೆಯಾಗಿದೆ. ನಿಭಾಯಿಸು ಎಂಬ ಕ್ರಿಯಾಪದ ಕನ್ನಡದಲ್ಲಿ ಹೆಚ್ಚಾಗಿ ಬಳಕೆಯಲ್ಲಿದೆ. ಇದು ಪರ್ಸೋ ಅರಾಬಿಕ್ ಮೂಲದ ಕ್ರಿಯಾಪದ. ಕನ್ನಡಕ್ಕೆ ಆ ಭಾಷೆಗಳಿಂದ ಇಲ್ಲವೇ ಮರಾಠಿಯಿಂದ ಬಂದಿದೆ. ಈ ಕ್ರಿಯಾಪದಕ್ಕೆ ನಿರ್ವಹಿಸು ಎಂಬ ಅರ್ಥವೇ ಇದೆ. ಈ ಕ್ರಿಯಾಪದದ ಮೂಲಕ ನಿಭಾವಣಾ ಎಂಬ ನಾಮರೂಪವನ್ನು ಪಡೆಯಲಾಗಿದೆ. ಮಾದರಿ: ಚುನಾಯಿಸು:ಚುನಾವಣೆ. ನಿಭಾವಣೆ ಪ್ರಯೋಗ ಈಗಾಗಲೇ ಕನ್ನಡದಲ್ಲಿ ಅಲ್ಲಲ್ಲಿ ಕಂಡು ಬಂದಿದೆ. ಚುನಾವಣಾ ಆಯೋಗ ಎಂಬಲ್ಲಿ ಏಕಾರಾಂತ (ಚುನಾವಣೆ) ನಾಮಪದವನ್ನು ಆಕಾರಾಂತ (ಚುನಾವಣಾ)ಗೊಳಿಸಿರುವುದು ಕುತೂಹಲಕಾರಿ. ಇದು ಸಂಸ್ಕೃತ ಪದವೊಂದನ್ನು ನಿರ್ವಹಿಸುವ ಕ್ರಮ. ಅಲ್ಲಿನ ನಿಯಮವನ್ನು ಅನ್ಯ ಮೂಲದ ಪದಗಳಿಗೂ ಅನ್ವಯಿಸಲಾಗಿದೆ. ನಿಭಾವಣಾ ಎಂಬಲ್ಲಿಯೂ ಹೀಗೇ ಆಗಿದೆ. ಈ ಪದಗಳನ್ನು ಪರಿಶೀಲಿಸಿ: ದಬಾವಣೆ, ಬಚಾವಣೆ

**ಗೌರವರ್ಣ/ಗೌರವವರ್ಣ**

ಮಾಧ್ಯಮಗಳಲ್ಲಿ ಸೌಂದರ್ಯವರ್ಧಕ ಸಾಮಗ್ರಿಗಳನ್ನು ಪ್ರಚಾರ ಮಾಡುವಾಗ ಕೆಲವೊಮ್ಮೆ "ಗೌರವವರ್ಣವನ್ನು" ಪಡೆಯಲು ತಮ್ಮ ಕಂಪೆನಿಯ ವಸ್ತುವನ್ನೇ ಬಳಸಿ ಎಂದು ಹೇಳುವುದನ್ನು ಗಮನಿಸಿದ್ದೀರಾ? ಏನಿದು ಗೌರವ ವರ್ಣ? ಇಲ್ಲಿ ಅವರು ನಿಜವಾಗಿ ಹೇಳಬೇಕಿರುವುದು "ಗೌರವರ್ಣ" ಗೌರ ಎಂದರೆ ಚೆಲುವಿನ ಬಿಳಿ ಬಣ್ಣ. ಬಿಳಿ ಎಂದರೆ ಬಿಳುಪಲ್ಲ; ತಿಳಿಗೆಂಪಿಗೆ ಹತ್ತಿರವಾದುದು. ಗೌರವರ್ಣವುಳ್ಳವಳು ಗೌರಿ. ಈ ಪದದಿಂದಲೇ ಹಿಂದಿಯ ಗೋರಾ ಎಂಬ ಪದ ಬಂದಿದೆ. ಶ್ಯಾಮವರ್ಣಕ್ಕೆ ವಿರುದ್ಧವಾದುದು ಗೌರ. ಕೃಷ್ಣ ಶ್ಯಾಮವರ್ಣದವನು. ಆದರೆ ರಾಧೆ ಗೌರವರ್ಣದವಳು.

ಕನ್ನಡದಲ್ಲಿ ಈಚೆಗೆ ಈ ಗೌರವರ್ಣ ಎನ್ನುವುದನ್ನು ಗೌರವವರ್ಣ ಎಂದು ಬರೆಯುವುದು ಹೆಚ್ಚಾಗುತ್ತಿದೆ. ವರ್ಣದಲ್ಲಿ ಗೌರವವೇನು ಬಂತು?

### ಬರಬರುತ್ತಾ/ಮೊದಮೊದಲು

ಕನ್ನಡದಲ್ಲಿ ಒಂದು ಕ್ರಿಯೆಯ ಅಥವಾ ಅವಸ್ಥೆಯ ನಿರಂತರತೆಯನ್ನು ಸೂಚಿಸಲು ವಿಶಿಷ್ಟ ಕ್ರಮವೊಂದಿದೆ. ಆ ಕ್ರಿಯಾಸೂಚಕ ಅಥವಾ ಅವಸ್ಥಾಸೂಚಕ ಪದದ ಮೊದಲ ಒಂದು ಅಥವಾ ಎರಡು ಅಕ್ಷರಗಳನ್ನು ಪದದ ಮೊದಲಲ್ಲಿ ಆವರ್ತನಗೊಳಿಸುವುದೇ ಆ ಕ್ರಮ. ಮೊದಲು ಎಂಬುದು ಒಂದು ಅವಸ್ಥೆಯನ್ನು ಹೇಳುತ್ತದೆ. ಮೊದಮೊದಲು ಎಂದರೆ ನಿರ್ದಿಷ್ಟವಾಗಿ ಮೊದಲು ಎಂದು ಹೇಳಿದಂತಾಗುವುದಿಲ್ಲ. ಆರಂಭದಿಂದ ಕೆಲವು ಸಮಯದವರೆಗೆ ಎಂಬ ಅರ್ಥ ಇಲ್ಲಿ ಮುಖ್ಯವಾಗುತ್ತದೆ. 'ಮೊದಮೊದಲು ನನಗೆ ತುಂಬಾ ಗಾಬರಿಯಾಗುತ್ತಿತ್ತು' ಎಂಬ ವಾಕ್ಯವನ್ನು ಗಮನಿಸಿ. ಕನ್ನಡದಲ್ಲಿ ಇಂಥ ರಚನೆಗಳು ಅಧಿಕವಾಗಿ ಬಳಕೆಯಾಗುತ್ತವೆ. ಕೊನೆಕೊನೆಗೆ, ಒಳೊಳಗೆ, ತಿರುತಿರುಗಿ ಇತ್ಯಾದಿ. ಇನ್ನೂ ಗಮನಿಸಬೇಕಾದ ಸಂಗತಿಯೊಂದಿದೆ. ಈ ಮಾದರಿಯ ರಚನೆಗಳನ್ನು ಅನ್ಯಭಾಷೆಯ ಪದಗಳನ್ನು ಬಳಸಿಯೂ ಪಡೆಯುವುದುಂಟು. ಫಸ್ಟ್ ಫಸ್ಟು, ಲಾಸ್ಟ್ ಲಾಸ್ಟು ಮುಂತಾದ ರೂಪಗಳು ಮಾತಿನಲ್ಲಿ ಬಳಕೆಯಾಗುತ್ತವೆ. ಇಂಥವು ಸಾಮಾನ್ಯವಾಗಿ ಗುಣವಾಚಕಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಈ ಬಗೆಯ ರಚನೆಗಳು ದಕ್ಷಿಣ ಏಶಿಯಾದ ಭಾಷೆಗಳಲ್ಲಿ ಮಾತ್ರ ಕಂಡುಬರುತ್ತವೆಂಬುದು ಭಾಷಾಧ್ಯಯನಕಾರರ ತಿಳುವಳಿಕೆ.

### ತರಾಟೆ

ಕನ್ನಡ ಪದಕೋಶದಲ್ಲಿ ಇದೊಂದು ವಿಶಿಷ್ಟ ಪದ. ಏಕೆಂದರೆ ಇದನ್ನು ಬಳಸಲು ಇರುವ ರಾಚನಿಕ ಸಾಧ್ಯತೆ ಒಂದೇ ಒಂದು. 'ತರಾಟೆಗೆ ತೆಗೆದುಕೊಳ್ಳುವುದು' ಎಂಬ ಅರ್ಥದಲ್ಲಿ ಮಾತ್ರ ಈ ಪದವನ್ನು ಬಳಸಲು ಅವಕಾಶವಿದೆ. ಇದನ್ನು ಬಿಟ್ಟು ಬೇರೆ ಯಾವ ರೀತಿಯಲ್ಲೂ ಇದರ ಬಳಕೆ ಅಸಾಧ್ಯ. ಆದರೂ ಈಚೆಗೆ ಕನ್ನಡದಲ್ಲಿ ವಿಚಿತ್ರ ಪ್ರಯೋಗಗಳು ಕಾಣಸಿಗುತ್ತಿವೆ. 'ಅಧಿಕಾರಿಗಳಿಗೆ ತರಾಟೆ', 'ಸಚಿವರಿಂದ ತರಾಟೆ' ಎಂಬ ತಲೆಬರೆಹಗಳನ್ನು ಪತ್ರಿಕೆಯಲ್ಲಿ ಗಮನಿಸಿದ್ದೇನೆ. ಸಾಮಾನ್ಯವಾಗಿ ತರಾಟೆ ಪದ ವಾಕ್ಯದಲ್ಲಿ ಬಳಕೆಯಾದರೆ ಅದರ ಹಿಂದೆ ಇರುವ ನಾಮಪದಕ್ಕೆ ದ್ವಿತೀಯಾ ವಿಭಕ್ತಿ ಪ್ರತ್ಯಯ (ಅನ್ನು) ಮಾತ್ರ ಬರುವುದು. ತರಾಟೆ ಪದಕ್ಕೆ ಚತುರ್ಥೀ ವಿಭಕ್ತಿ ಪ್ರತ್ಯಯ(ಗೆ) ಹತ್ತಿರುತ್ತದೆ. ಹಾಗಾಗಿ ಅಧಿಕಾರಿಗಳಿಗೆ ತರಾಟೆ, ಸಚಿವರಿಂದ ತರಾಟೆ ಎಂಬ ರಚನೆಗಳು ನಿಯಮಬಾಹಿರವಾಗಿವೆ.

### ಅಲ್ಲ/ಅಲ್ಲಾ/ಅಲ್ವಾ

ಪ್ರಶ್ನಾರ್ಥಕ ವಾಕ್ಯಗಳಲ್ಲಿ ಹಲವು ಬಗೆಗಳಿವೆ. ಕೆಲವು ಬಗೆಯ ಪ್ರಶ್ನೆಗಳು ಹೌದು ಅಥವಾ ಇಲ್ಲ ಎಂಬ ಉತ್ತರಗಳನ್ನು ಮಾತ್ರ ಬಯಸುತ್ತವೆ. 'ನಂಬಿ ಕರೆದರೆ ಓ ಎನ್ನನೆ ಶಿವನು?' ಎಂಬುದು ಆ ಬಗೆಯ ಪ್ರಶ್ನೆ. ಈ ಮಾದರಿಯ ಪ್ರಶ್ನೆಗಳ ರಚನೆಯಲ್ಲಿ ಹಲವು ವಿಧಗಳಿವೆ. ಅವುಗಳಲ್ಲಿ ಒಂದು ಮಾದರಿ ಹೀಗಿದೆ: ಒಂದು ವಾಕ್ಯವನ್ನು

ನಿರೂಪಿಸಿ ಕೊನೆಗೆ ಪ್ರಶ್ನೆ ಎಂದು ಸೂಚಿಸುವ ಪದವನ್ನು ಸೇರಿಸಲಾಗುತ್ತದೆ. ನಿರೂಪಿತ ವಾಕ್ಯದ ಮುಖ್ಯಾರ್ಥವನ್ನು ಸಮರ್ಥಿಸುವ ಇಲ್ಲವೇ ನಿರಾಕರಿಸುವ ಉದ್ದೇಶ ಈ ಪ್ರಶ್ನೆಗೆ ಇರುತ್ತದೆ. ಉದಾ: 'ಎಲೆ ಹೆಚ್ಚಾಯ್ತು. ಅಲ್ಲ?' ಈ ಪ್ರಶ್ನೆಯ ನಿರೀಕ್ಷೆ ಸ್ಪಷ್ಟವಾಗಿದೆ. ಹೌದು ಅಥವಾ ಇಲ್ಲ ಎನ್ನಬೇಕು. ಈ ಮಾದರಿಯ ವಾಕ್ಯಗಳಲ್ಲಿ ಸಾಮಾನ್ಯವಾಗಿ 'ಅಲ್ಲ' ಎಂಬ ಪದವನ್ನು ಪ್ರಶ್ನೆಯನ್ನು ಸೂಚಿಸಲು ಬಳಸಲಾಗುತ್ತದೆ. 'ಅಲ್ಲ' ಎಂಬ ನಿಷೇಧಸೂಚಕ ಪದದ ರೂಪವೇ ಇಲ್ಲಿದ್ದರೂ ಅದರ ಕೆಲಸ ಮಾತ್ರ ಬೇರೆ. ಅಲ್ಲ ಎಂಬುದಕ್ಕೆ ಅಲ್ಲಾ, ಅಲ್ಲ ಎಂಬ ಪರ್ಯಾಯ ಬಳಕೆಗಳೂ ಇವೆ. ಕೆಲವೊಮ್ಮೆ ಅಲ್ವೇ (ಗೌರವ ಸೂಚಕ)ಎಂದೂ ಬಳಸುವುದುಂಟು. ಈ ಬಗೆಯ ಪ್ರಶ್ನಾರ್ಥಕ ವಾಕ್ಯ ಮತ್ತು ಅಲ್ಲಾ ಎಂಬ ಪ್ರಶ್ನಾರ್ಥಕಗಳನ್ನು ಹದಿವಯಸ್ಸಿನ ಹೆಣ್ಣು ಮಕ್ಕಳು ಹೆಚ್ಚಾಗಿ ಬಳಸುತ್ತಾರೆ ಎಂದು ಒಂದು ಅಧ್ಯಯನ ತಿಳಿಸುತ್ತದೆ.

**ಓದು ಎಂದರೇನು?**

ಪ್ರಶ್ನೆ ವಿಚಿತ್ರವಾಗಿದೆ. ಕನ್ನಡದ ಕೆಲವು ಕ್ರಿಯಾಪದಗಳ ಲಕ್ಷಣವಿಶೇಷವನ್ನು ಹೇಳುವ ಉದ್ದೇಶದಿಂದ ಓದು ಎಂಬ ಕ್ರಿಯಾಪದವನ್ನು ಆಯ್ದುಕೊಂಡಿದ್ದೇನೆ. 'ಮಗು ಕನ್ನಡ–ಪುಸ್ತಕಗಳನ್ನು ಓದುತ್ತದೆ', 'ಅವನು ಓದುವಾಗ ತಡವರಿಸುತ್ತಾನೆ' ಈ ಎರಡು ವಾಕ್ಯಗಳಲ್ಲಿ ಓದು ಕ್ರಿಯಾಪದ ಬೇರೆ ಬೇರೆ ಅರ್ಥಗಳಲ್ಲಿ ಬಳಕೆಯಾಗಿದೆ. ಓದು ಎಂಬುದಕ್ಕೆ ತನಗಾಗಿ ಓದುವುದು ಮತ್ತು ಇತರರಿಗಾಗಿ ಓದುವುದು ಎಂಬ ಎರಡು ಅರ್ಥಗಳಿರುವುದು ಮೇಲಿನ ಉದಾಹರಣೆಯ ವಾಕ್ಯಗಳನ್ನು ಗಮನಿಸಿದರೆ ಗೊತ್ತಾಗುತ್ತದೆ. ಪಠನ ಮತ್ತು ವಾಚನ ಎಂಬ ಎರಡು ಕ್ರಿಯೆಗಳೂ ಓದು ಎಂಬ ಕ್ರಿಯಾಪದದಲ್ಲಿವೆ. ತನಗೆ ತಾನು ಓದುವಾಗ ಮೌನಓದು ಸಾಧ್ಯ. ಇಂಥಲ್ಲಿ ಓದಿಕೊಳ್ಳು ಎಂಬ ಆತ್ಮಾರ್ಥಕ ರೂಪವನ್ನು ಬಳಸಬೇಕೆಂದು ಕೆಲವರು ಹೇಳುವುದುಂಟು. ಇತರರಿಗಾಗಿ ಓದುವಾಗ 'ಕೇಳು'ವಂತೆ ಓದಬೇಕು. ಇಂಗ್ಲಿಶಿನ ವೃತ್ತಿಸೂಚಕ ರೀಡರ್ ಪದಕ್ಕೆ ಈ ಅರ್ಥವೇ ಮೊದಲು ಇದ್ದದ್ದು. ಅದು ಬೇರೆ ಮಾತು. ಓದು ಮಾದರಿಯ ಕ್ರಿಯಾಪದಗಳು ಕನ್ನಡದಲ್ಲಿ ಹಲವಾರಿವೆ. ತಿನ್ನು, ಸುಡು, ಹರಡು ಎಂಬ ಕ್ರಿಯಾಪದಗಳನ್ನು ಉದಾಹರಣೆಯಾಗಿ ಪರಿಶೀಲಿಸಬಹುದು.

**ಕೂಳು, ಅನ್ನ, ರೈಸ್**

ಕ್ರಮವಾಗಿ ಇವು ಕನ್ನಡ, ಸಂಸ್ಕೃತ ಮತ್ತು ಇಂಗ್ಲೀಷ್ ಪದಗಳು. ಈ ಮೂರು ಪದಗಳೂ ಕನ್ನಡದಲ್ಲಿ ಬಳಕೆಯಲ್ಲಿವೆ. ಕೂೞ್ ಎಂಬುದು ಹಳಗನ್ನಡದ ಪದ. ಈಗ ರೂಪ ವ್ಯತ್ಯಾಸವಾಗಿ ಕೂಳು ಆಗಿದೆ. ಅರ್ಥವೂ ಈಗ ಬದಲಾಗಿದೆ. ಭಿಕ್ಷೆಯಿಂದ ಪಡೆದ, ತಿನ್ನುವ ಯಾವುದೇ ವಸ್ತುವಿಗಾದರೂ ಈ ಪದ ಬಳಕೆಯಾಗಬಹುದು. ಹೀನ ಇಲ್ಲವೇ ತಿರಸ್ಕಾರದ ಛಾಯೆಯುಳ್ಳ ಬಳಕೆಗಳು ಮಾತ್ರ ಈಗ ಕಾಣಸಿಗುತ್ತವೆ. ಅನ್ನ ವ್ಯಾಪಕವಾಗಿ ಬಳಕೆಯಾಗುವ ಪದ. ನಿರ್ದಿಷ್ಟ ಅರ್ಥದಲ್ಲಿ ಮಾತ್ರವಲ್ಲದೆ ದುಡಿಮೆಯ ಗಳಿಕೆ. ನೆರವು ಎಂಬ ಲಕ್ಷಣಾರ್ಥಗಳಲ್ಲೂ ಬಳಕೆಯಾಗುತ್ತದೆ. ಸಾಮಾಜಿಕವಾಗಿ ಹೆಚ್ಚು ಸ್ಥಿರಗೊಂಡ ಪದ. ಈಗೀಗ ಅನ್ನದ ಜಾಗವನ್ನು ಕೆಲವು

ಬಳಕೆಯ ವಲಯಗಳಲ್ಲಿ ರೈಸ್ ಆಕ್ರಮಿಸಿಕೊಳ್ಳುತ್ತಿದೆ. ಕರ್ಡ್ ರೈಸ್, ರೈಸ್ ಬಾತ್, ರೈಸ್ ಪೊಂಗಲ್ ಮುಂತಾದ ಪದಗಳು ಹೋಟೆಲ್‌ಗಳ ಮೆನುಕಾರ್ಡ್‌ಗಳಲ್ಲಿ ಕಾಣಸಿಗುತ್ತವೆ. ನಿರ್ದಿಷ್ಟವಾಗಿ ಒಂದು ಬಗೆಯ ಖಾದ್ಯ ವಸ್ತು ಎಂಬ ಅರ್ಥ ಮಾತ್ರ ಇಲ್ಲಿ ಮುಖ್ಯ. ಲಕ್ಷಣಾರ್ಥಗಳಿಲ್ಲ. ಆದರೂ ಅನ್ನ ಎನ್ನುವುದರ ಬದಲು ಮಾತಿನಲ್ಲಿ ರೈಸ್ ಎಂದು ಹೇಳುವ ಪ್ರವೃತ್ತಿ ಎಲ್ಲ ಕಡೆಗಳಲ್ಲೂ ಹೆಚ್ಚಾಗುತ್ತಿರುವುದು ನಿಜ. ಒಂದೇ ಅರ್ಥವುಳ್ಳ ಪದಗಳ ಬಳಕೆಯಲ್ಲಿ ಏಕೆ ಹೀಗೆ ತಾರತಮ್ಯ ಉಂಟಾಗುತ್ತದೆ ಎಂಬುದು ಕುತೂಹಲದ ವಿಷಯ. ನಮ್ಮ ಸಾಮಾಜಿಕ ರಚನೆಯಲ್ಲಿ ಇದಕ್ಕೆ ಉತ್ತರಗಳಿವೆ.

**ಸುಮಾರು/ಸಾಧಾರಣ**

ಸುಮಾರು ಪದ ಸರಾಸರಿಗಿಂತ ಕಡಿಮೆ, ಅಷ್ಟೇನೂ ತೃಪ್ತಿಕರವಲ್ಲದ ಎಂಬ ಅರ್ಥಗಳಲ್ಲಿ ಹೆಚ್ಚು ಬಳಕೆಯಾಗುವಂತೆ ತೋರುತ್ತದೆ. 'ಈ ಬಾರಿ ಬೆಳೆ ಸುಮಾರಾಗಿದೆ', 'ಪರೀಕ್ಷೆಗೆ ಸುಮಾರಾಗಿ ಓದಿಕೊಂಡಿದ್ದೇನೆ' ಈ ವಾಕ್ಯಗಳಲ್ಲಿ ಅದೇ ಅರ್ಥಗಳಿವೆ. ಆದರೆ ಕಾವೇರಿ ಹೇಮಾವತಿ, ಪ್ರದೇಶದಲ್ಲಿ ಕೆಲವೊಮ್ಮೆ 'ಹೆಚ್ಚು' ಅಥವಾ 'ನಿರೀಕ್ಷೆಯನ್ನು ಮೀರಿದ' ಎಂಬ ಅರ್ಥವು ಈ ಪದಕ್ಕೆ ಒದಗುವುದುಂಟು. 'ಅವನಿಗೆ ಸುಮಾರು ಸಾಲ ಇದೆ'. ಎಂದರೆ ಬಹಳ ಸಾಲ ಎಂದೇ ಅರ್ಥ. ಇಂಥ ಕಡೆಗಳಲ್ಲಿ ಸುಮಾರು ಒಂದು ಸ್ವತಂತ್ರ ಪದವೆಂಬಂತೆ ಪ್ರಯೋಗವಾಗುತ್ತದೆ. ಯಾವುದೇ ಪ್ರತ್ಯಯ ಅದಕ್ಕೆ ಹತ್ತುವುದಿಲ್ಲ. ಸುಮಾರು ಮತ್ತು ಸಾಧಾರಣ ಎಂಬ ಪದಗಳು ಬಹುಮಟ್ಟಿಗೆ ಸಮಾನಾರ್ಥಕಗಳಂತೆ ಬಳಕೆಯಾಗುತ್ತವೆ. ಆದರೆ ಸಾಧಾರಣ ಪದಕ್ಕೆ ಹೆಚ್ಚು, ಬಹಳ, ಅಧಿಕ ಎಂಬ ಅರ್ಥದ ಬಳಕೆ ಇಲ್ಲ.

**ಅಂತಹ/ಅಂತಾ/ಅಂಥ/ಅಂಥಾ/ಅಂತ**

ಈ ರೂಪಗಳನ್ನು ಒಂದರ ಬದಲಾಗಿ ಇನ್ನೊಂದನ್ನು ಬಳಕೆ ಮಾಡುವುದು ಕಂಡು ಬರುತ್ತದೆ. ಇವುಗಳ ಪೂರ್ವರೂಪವನ್ನು ನೋಡೋಣ. ಅಂತಪ್ಪ ಎಂಬ ಹಳೆಗನ್ನಡದ ರೂಪವಿತ್ತು. ಪದಮಧ್ಯದ -ಪ್ಪ್- ಹಕಾರವಾಗುವುದು ಕನ್ನಡದಲ್ಲಿ ನಡೆದ ಒಂದು ಬದಲಾವಣೆ. ಅಂದರೆ ಅಂತಪ್ಪ/ಅಂತಹ ಎಂದಾಯಿತು. ಹಾಗಾಗಿ ಇದು ಸಾಧುರೂಪ. ಈ ಪದದಲ್ಲಿರುವ ಹಕಾರವು ಲೋಪಗೊಳ್ಳುವ ಇನ್ನೊಂದು ಬದಲಾವಣೆ ಕನ್ನಡದಲ್ಲಿ ನಡೆಯಿತು. ಅದರ ಫಲಿತವಾಗಿ ಅಂತಾ, ಅಂಥ ಎಂಬ ರೂಪಗಳು ಬಳಕೆಗೆ ಬಂದವು. ಅಂತಹ ರೂಪದಲ್ಲಿ ಕಳೆದು ಹೋದ ಹಕಾರ ಹಿಂದಿನ ವ್ಯಂಜನವಾದ ತಕಾರವನ್ನು ಮಹಾಪ್ರಾಣವನ್ನಾಗಿ ಪರಿವರ್ತಿಸಿದೆ. ಆಗ ಅಂಥ ರೂಪ ಸಿದ್ಧವಾಗುತ್ತದೆ. ಇದೂ ಕೂಡ ಕನ್ನಡಕ್ಕೆ ಸಹಜವಾದ ಬದಲಾವಣೆಯಾಗಿದೆ. ಆದರೆ ಅಂಥಾ ಮತ್ತು ಅಂತ ರೂಪಗಳಿಗೆ ವಿವರಣೆ ನೀಡಲು ಬರುವುದಿಲ್ಲ.

**ದುರದೃಷ್ಟ/ದುರಾದೃಷ್ಟ**

ದುರದೃಷ್ಟ/ದುರಾದೃಷ್ಟ-ಇವೆರಡೂ ರೂಪಗಳ ಬಳಕೆ ಹಲವು ಕಡೆಗಳಲ್ಲಿ ಕಂಡುಬರುತ್ತದೆ. ರಚನೆಯ ದೃಷ್ಟಿಯಿಂದ ದುರದೃಷ್ಟ ಸರಿಯಾದ ರೂಪ. ಅದೃಷ್ಟ ಎಂಬ ಪದಕ್ಕೆ ದುರ್ ಎಂಬ ಪೂರ್ವಪ್ರತ್ಯಯವನ್ನು ಹತ್ತಿಸಿದಾಗ ಅದು ದುರದೃಷ್ಟ

ಎಂದಾಗಬೇಕು. ಮಾದರಿ: ದುರಂತ (ದುರ್+ಅಂತ), ದುರಹಂಕಾರ (ದುರ್+ಅಹಂಕಾರ) ಇತ್ಯಾದಿ. ದುರ್ ಎಂಬ ಪೂರ್ವಪ್ರತ್ಯಯ ದುಸ್ (ದುಸ್ಸಾಹಸ), ದುಷ್ (ದುಷ್ಕಾಲ, ದುಷ್ಫಲ), ದುಶ್ (ದುಶ್ಚಟ) ಎಂಬ ರೂಪಗಳಲ್ಲೂ ಕಾಣಿಸಿಕೊಳ್ಳುತ್ತದೆ. ಇವೆಲ್ಲ ರೂಪಗಳು ಎಲ್ಲಿ ಬಳಕೆಯಾಗಬೇಕು ಎಂಬ ಬಗ್ಗೆ ನಿಯಮಗಳಿವೆ. ದುರಾದೃಷ್ಟ ಎಂಬ ರೂಪದ ಬಳಕೆ ಬರೆಹಕ್ಕಿಂತ ಮಾತಿನಲ್ಲಿ ಹೆಚ್ಚು ಕೇಳಸಿಗುತ್ತದೆ.

**ದೇಶಾದ್ಯಂತ/ದೇಶದಾದ್ಯಂತ**

ಕನ್ನಡದಲ್ಲಿ ಇವೆರಡೂ ರೂಪಗಳು ಬೇರೆ ಬೇರೆ ಪ್ರಮಾಣದಲ್ಲಿ ಬಳಕೆಯಲ್ಲಿವೆ. ಆದ್ಯಂತ ಎಂದರೆ ಮೊದಲು ಮತ್ತು ಕೊನೆ. ಕನ್ನಡದಲ್ಲಿ ಮೊದಲಿನಿಂದ ಕೊನೆಯವರೆಗೆ, ಇಡಿಯಾಗಿ ಎನ್ನುವ ಅರ್ಥದಲ್ಲಿ ಈ ಪದ ಬಳಕೆಯಾಗುತ್ತಿರುವಂತೆ ತೋರುತ್ತದೆ. ದೇಶಾದ್ಯಂತ ಎಂಬ ರಚನೆಯ ಮಾದರಿಯಲ್ಲಿರುವ ನಾಡಿನಾದ್ಯಂತ, ಜಿಲ್ಲೆಯಾದ್ಯಂತ, ಜಗತ್ತಿನಾದ್ಯಂತ ಮುಂತಾದ ರೂಪಗಳನ್ನು ನೋಡಿ. ಇಲ್ಲೆಲ್ಲಾ ಆದ್ಯಂತ ಪದ ಸೇರುತ್ತಿರುವ ಮೊದಲ ನಾಮಪದಗಳಿಗೆ (ನಾಡು, ಜಿಲ್ಲೆ, ಜಗತ್ತು) ಷಷ್ಠೀ ಪ್ರತ್ಯಯಗಳು ಹತ್ತಿರುವುದು ಗೊತ್ತಾಗುತ್ತದೆ. ದೇಶದಾದ್ಯಂತ ರೂಪದಲ್ಲೂ ಇದೇ ಮಾದರಿಯನ್ನು ಅನುಸರಿಸಲಾಗಿದೆ. ದೇಶಾದ್ಯಂತ ಸಂಸ್ಕೃತ ಪದರಚನೆಯ ನಿಯಮಗಳಿಗೆ ಅನುಗುಣವಾಗಿ ಸರಿಯಿದ್ದೀತು. ಆದರೆ ಕನ್ನಡ ಸಾಮಾನ್ಯವಾಗಿ ಅನುಸರಿಸುತ್ತಿರುವ ನಿಯಮದ ಅನ್ವಯ ದೇಶದಾದ್ಯಂತ ಹೆಚ್ಚು ಸಾಧುರೂಪವೆಂದು ತೋರುತ್ತದೆ.

**ನಲ್ಲಿಯಲ್ಲಿ/ನಲ್ಲಿನಲ್ಲಿ**

ಎರಡನೆಯ ರೂಪವನ್ನು ಎಷ್ಟು ಜನ ಕೇಳಿದ್ದೀರೋ ಅಥವಾ ಓದಿನಲ್ಲಿ ಕಂಡಿದ್ದೀರೋ ಕಾಣೆ. ಆದರೆ ಈ ರೂಪದ ಬಳಕೆ ಕನ್ನಡದಲ್ಲಿ ಇದೆ. ಅಲ್ಲಿ ಎಂಬ ಸಪ್ತಮೀ ವಿಭಕ್ತಿ ಪ್ರತ್ಯಯ ಇಕಾರಾಂತ ಅಥವಾ ಎಕಾರಾಂತ ಪದಗಳಿಗೆ ಹತ್ತಿದಾಗ ಯಕಾರಾಗಮವಾಗುತ್ತದೆ ಎಂದು ಶಾಲಾವ್ಯಾಕರಣಗಳು ಹೇಳುತ್ತವೆ. ಉದಾ: ಬೀದಿಯಲ್ಲಿ, ಗಡಿಯಲ್ಲಿ, ತಲೆಯಲ್ಲಿ, ಬಳೆಯಲ್ಲಿ, ಗುಹೆಯಲ್ಲಿ ಇತ್ಯಾದಿ. ಹೀಗಿದ್ದರೆ ನಲ್ಲೀನಲ್ಲಿ, ಬೀದೀನಲ್ಲಿ, ತಲೇನಲ್ಲಿ ಎಂಬ ರೂಪಗಳು ಹೇಗೆ ಬಂದವು? ಸಾಮಾನ್ಯವಾಗಿ ಉಕಾರಾಂತ ಅಥವಾ ವ್ಯಂಜನಾಂತ ಪದಗಳ ಮುಂದೆ ಅಲ್ಲಿ ಬಂದಾಗ ಇನ್ (ಅಥವಾ ನ್) ಆಗಮವಾಗುತ್ತದೆಯಷ್ಟೆ. ಬಸ್ಸಿನಲ್ಲಿ, ಕಾರಿನಲ್ಲಿ, ಶೂನಲ್ಲಿ ಇತ್ಯಾದಿ. ಲಂಡನ್‌ನಲ್ಲಿ, ಜಪಾನ್‌ನಲ್ಲಿ, ರೈಲ್‌ನಲ್ಲಿ ಎಂಬ ರೂಪಗಳು ಆಧುನಿಕ ಕನ್ನಡದಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಕೆಯಾಗುತ್ತಿವೆ. ಇಕಾರಾಂತ ಮತ್ತು ಎಕಾರಾಂತ ಪದಗಳಲ್ಲಿ ಇನ್ ಅಥವಾ ನಕಾರಾಗಮ ಏಕೆ? ಇದರ ಜೊತೆಗೆ ನಲ್ಲೀಲಿ, ಬೀದೀಲಿ, ತಲೇಲಿ ಎಂಬ ರೂಪಗಳೂ ಮಾತಿನಲ್ಲಿ ಬಳಕೆಯಾಗುತ್ತಿವೆ. ಇದು ಬೇರೊಂದು ಟಿಪ್ಪಣಿಯ ವಿಚಾರ.

**ಒಂಟಲಿಂಗ**

ಈ ಪದದ ಅರ್ಥವೇನಿರಬಹುದು. ನೀವು ಗ್ರಹಿಸುವ ಸರಳ ಅರ್ಥವನ್ನು ನಾನು ಬಲ್ಲೆ. ಆದರೆ ಈ ಪದದ ವಿಚಿತ್ರ ಬಳಕೆಯೊಂದನ್ನು ಗೆಳೆಯರೊಬ್ಬರು ನನ್ನ

ಗಮನಕ್ಕೆ ತಂದರು. ಅಲ್ಲಿ ಇಂಗ್ಲಿಶ್‌ನ ಯೂನಿಸೆಕ್ಸ್ ಎಂಬ ಪದಕ್ಕೆ ಸಂವಾದಿಯಾಗಿ ಒಂಟಿಲಿಂಗ ಎಂದು ಬಳಸಲಾಗಿತ್ತು. ಹೀಗೆ ಹೊಸ ಪದವೊಂದನ್ನು ಹೊಸೆದ ಮಾತು ಹಾಗಿರಲಿ. ಇಂಗ್ಲಿಶ್‌ನ ಕೆಲವು ಉಪಸರ್ಗಗಳನ್ನು ಕನ್ನಡಕ್ಕೆ ಅನುವಾದಿಸುವಾಗ ಹಲವು ಗೊಂದಲಗಳು ಕಾಣಿಸಿಕೊಳ್ಳುತ್ತಿವೆ. ಯೂನಿ-ಎಂಬುದನ್ನು ಸಮ (ಯೂನಿಫಾರಂ) ಏಕ (ಯೂನಿಟರಿ) ಎಂದೆಲ್ಲಾ ಕನ್ನಡದಲ್ಲಿ ರೂಪಾಂತರಿಸಲಾಗಿದೆ. ಒಂಟಿ ಎಂದು ರೂಪಾಂತರಿಸಿದ್ದು ಇದೇ ಮೊದಲು. ಒಂಟಿ ಎಂಬುದಕ್ಕೆ ಒಂದು ಎನ್ನುವುದಕ್ಕಿಂತ ಏಕಾಂಗಿ ಎಂಬ ಅರ್ಥವೇ ಹೆಚ್ಚು ಸಲ್ಲುತ್ತದೆ ಎಂಬುದನ್ನು ಗಮನಿಸಿದರೆ ಒಂಟಿ ಲಿಂಗ ಎಂಬುದು ಅಷ್ಟು ಉಪಯುಕ್ತ ಪ್ರಯೋಗವೆಂದು ತೋರುವುದಿಲ್ಲ.

**ಇಡೀ ದಿನ/ದಿನವಿಡಿ**

ಇವೆರಡೂ ರಚನೆಗಳು ಬಹುಮಟ್ಟಿಗೆ ಸಮಾನಾರ್ಥಕಗಳು. ಆದರೆ ಇವು ನಮ್ಮ ಚರ್ಚೆಗೆ ಬೇರೊಂದು ರೀತಿಯಲ್ಲಿ ಉಪಯುಕ್ತವಾಗಿವೆ. ಕನ್ನಡ ವ್ಯಾಕರಣಗಳು ಪ್ರಥಮಾ ವಿಭಕ್ತಿ ಪ್ರತ್ಯಯವೆಂಬುದು ಕನ್ನಡದಲ್ಲಿ ಇದ್ದರೂ ಅದು ಬಳಕೆಯಲ್ಲಿ ಇಲ್ಲವೆಂದು ತಿಳಿಸುತ್ತವೆ. ವಾಕ್ಯಗಳಲ್ಲಿ ಅದು ಇದೆಯೆಂದು ತಿಳಿದು ವ್ಯವಹರಿಸಬೇಕೆಂದು ಹೇಳುತ್ತವೆ. ಸರಿ ಈ ಕಾಣದಂತೆ ಇರುವ ಪ್ರತ್ಯಯ ಗೋಚರವಾಗುವಂತೆ ಮಾಡಲು ಕೆಲವು ಪ್ರಯೋಗಗಳನ್ನು ಮಾಡಬೇಕಾಗುತ್ತದೆ. ಇಡೀ ದಿನ ಕೆಲಸವಿಲ್ಲದೆ ಕಾಲ ಕಳೆದೆ ಎನ್ನುವ ವಾಕ್ಯದಲ್ಲಿ ದಿನ ಪದದ ಮುಂದೆ ಇರಬೇಕಾದ ಪ್ರಥಮಾ ವಿಭಕ್ತಿ ಪ್ರತ್ಯಯ ಕಾಣದು. ಆದರೆ ದಿನವಿಡೀ ಎಂದು ಹೇಳಿದಾಗ ದಿನ ಪದಕ್ಕೆ ಹತ್ತಿರುವ ಉಕಾರ ಪ್ರತ್ಯಯ (ಪ್ರಥಮಾ) ಪ್ರಕಟಗೊಳ್ಳುತ್ತದೆ. ದೇಹವಿಡೀ, ದೇಶವಿಡೀ, ಮನೆಯಿಡೀ, ಗೋಡೆಯಿಡೀ ಮುಂತಾದ ಪ್ರಯೋಗಗಳನ್ನು ಮಾದರಿಯಾಗಿ ಗಮನಿಸಬಹುದು. ಭಾಷೆಯ ರಚನೆಯನ್ನು ಅರಿಯ ಬಯಸುವವರಿಗೆ ಇದೊಂದು ಒಳ್ಳೆಯ ನಿದರ್ಶನ. ಅಥವಾ ದೇಹವಿಡೀ ರೂಪದಲ್ಲಿರುವ ವ ಕಾರ ಆದೇಶ ಸಂಧಿಯ ಪರಿಣಾಮವಾಗಿದ್ದರೆ ಆಗ ಇಲ್ಲಿ ಕೂಡ ಪ್ರಥಮಾವಿಭಕ್ತಿ ಪ್ರತ್ಯಯ ಇಲ್ಲವೆಂದೇ ಹೇಳಲಾಗುತ್ತದೆ.

**ಹಿರಿ**

ಹಿರಿ-ಕನ್ನಡದಲ್ಲಿ ಇದು ಕ್ರಿಯಾಪದವಾಗಿಯೂ ಬಳಕೆಯಾಗುತ್ತದೆ. ಬಹುಖ್ಯಾತವಾದ ಶ್ರವಣಬೆಳಗೊಳದ ಸುರಚಾಪಂ ಎಂದು ಪ್ರಾರಂಭಗೊಳ್ಳುವ ಶಾಸನಪದ್ಯದಲ್ಲಿ ಪಿರಿಗುಂ ಎಂಬ ಪದದ ಬಳಕೆ ಇದೆ. (ಇದಕ್ಕೆ ಪರಿಗುಂ ಎಂಬ ಪಾಠವೂ ಇದೆ). ಅಲ್ಲಿ ಪಿರಿ ಎಂಬುದಕ್ಕೆ ತಂತಾನೇ ಮಾಯವಾಗು, ಇಲ್ಲವಾಗು ಎಂಬ ಅರ್ಥವಿದೆ. ಹೊಸಗನ್ನಡದ ಹಿರಿ ಕ್ರಿಯಾಪದಕ್ಕೆ ಈ ಪಿರಿ ರೂಪವೇ ಮೂಲ. ಆದರೆ ಈಗ ಬಳಕೆಯಾಗುತ್ತಿರುವಂತೆ ಹಿರಿ ಎಂಬ ಕ್ರಿಯಾಪದಕ್ಕೆ ಕರ್ತೃ ಬೇಕೇ ಬೇಕು. ಉದಾ: ಅವನು ಬಣವೆಯಿಂದ ಹುಲ್ಲನ್ನು ಹಿರಿದನು. ಜನರು ಕಬ್ಬಿನ ಜಲ್ಲೆಯನ್ನು ಹಿರಿದರು. ಶಾಸನದಲ್ಲಿ ಬಳಕೆಯಾದಂತೆ ಹಿರಿ ಎಂಬುದು ತಂತಾನೇ ಸಂಭವಿಸುವ ಕ್ರಿಯೆ. ಈ ಅರ್ಥದಲ್ಲಿ ಈಗ ಕ್ರಿಯಾಪದ ಬಳಕೆಯಾಗುವುದು ಕಡಿಮೆಯಾಗಿದೆ. ಆದರೂ ಗೋವಿಂದ ಪೈ, ಶಿವರಾಮ ಕಾರಂತರ ಬರೆವಣಿಗೆಗಳಲ್ಲಿ ಈ ಕ್ರಿಯಾಪದ ಹಳೆಯ ಅರ್ಥದಲ್ಲಿ ಬಳಕೆಯಾಗಿದೆ. ಅಂಥ

ಅರ್ಥವುಳ್ಳ ಬಳಕೆಗೆ ಒಂದು ನಿದರ್ಶನ, ಸಂತೆ ಹಿರಿಯಿತು. ಇಲ್ಲಿ ಸಂತೆ ಕರಗಲು ಕರ್ತೃ ಯಾರೂ ಅಲ್ಲ. ಅದು ತನ್ನಿಂದ ತಾನೇ ಸಂಭವಿಸಿದ ಘಟನೆಯಾಗಿದೆ.

**ಸ್ವಮೇಕ್**

ಕನ್ನಡ ಪತ್ರಿಕೆಗಳಲ್ಲಿ ಚಲನಚಿತ್ರಗಳಿಗೆ ಸಂಬಂಧಪಟ್ಟ ವರದಿ, ವಿಮರ್ಶೆಗಳನ್ನು ಓದುವವರಿಗೆ ಈಚಿನ ದಿನಗಳಲ್ಲಿ ಸ್ವಮೇಕ್ ಎಂಬ ಪದದ ಪರಿಚಯವಾಗಿರುತ್ತದೆ. ರೀಮೇಕ್ ಎಂಬ ಪದದ ವಿರುದ್ಧಾರ್ಥ ನೀಡಲೆಂದು ರೂಪಿಸಿಕೊಂಡ ಪದ ಸ್ವಮೇಕ್. ಇದರ ರಚನೆಯಲ್ಲಿರುವ ವಿಶೇಷ ಸ್ಪಷ್ಟವಾಗಿಯೇ ಇದೆ. ಮೇಕ್ ಎಂಬ ಇಂಗ್ಲಿಶ್ ನಾಮಪದಕ್ಕೆ ಸಂಸ್ಕೃತದ ಸ್ವ ಎಂಬ ಪದಭಾಗವನ್ನು ಸೇರಿಸಿ ಸ್ವಮೇಕ್ ಎಂದು ಕನ್ನಡದಲ್ಲಿ ಬಳಸಲಾಗುತ್ತಿದೆ. ಸ್ವಜಾತಿ, ಸ್ವದೇಶ, ಸ್ವಧರ್ಮ, ಸ್ವಭಾವ, ಸ್ವತಂತ್ರ ಮುಂತಾದ ಪದಗಳಲ್ಲಿ ಸ್ವ ಎಂಬ ಪದಭಾಗವಿರುವಂತೆ ಸ್ವಮೇಕ್‌ನಲ್ಲೂ ಇದೆ. ಅನ್ಯರದ್ದಲ್ಲದ, ತನ್ನದೇ ಆದ ಎಂಬ ಅರ್ಥವನ್ನು ಸ್ವ ಎಂಬುದಕ್ಕೆ ಹೇಳಬಹುದಾಗಿದೆ. ಮೇಕ್ ಎಂಬುದು ತಯಾರಿಕೆ ಎಂಬ ಅರ್ಥವನ್ನು ಹೊಂದಿದೆ. ಭಾಷೆಯಲ್ಲಿ ಹೊಸಪದ ರಚನೆಯಾಗುವಾಗ ಏನೆಲ್ಲ ನಡೆಯಬಹುದೆಂಬುದಕ್ಕೆ ಇದೊಂದು ಉದಾಹರಣೆ. ಈಗಿರುವಂತೆ ಚಿತ್ರಗಳಿಗೆ ಅನ್ವಯಿಸುವಂತೆ ಮಾತ್ರ ಈ ಹೊಸಪದ ಬಳಕೆಯಾಗುತ್ತಿದೆ. ಅದರಾಚೆಗೆ ಇನ್ನೂ ಬಂದಿಲ್ಲ. ಬಹುಶಃ ಬರಲಾರದು.

**ರಾ ಎಂಬ ಗೌರವಸೂಚಕ**

ಕನ್ನಡದಲ್ಲಿ ಒಬ್ಬರನ್ನೊಬ್ಬರು ಮಾತನಾಡಿಸುವಾಗ ಸಾಮಾಜಿಕವಾಗಿ ಮೇಲುಸ್ತರದಲ್ಲಿರುವವರಿಗೆ ಸಂಬೋಧನೆಯ ಪದದೊಡನೆ ಗೌರವ ಸೂಚಕ ರೂಪವೊಂದನ್ನು ಸೇರಿಸುವ ಕ್ರಮವಿದೆ. ಬಹಳ ಸಂದರ್ಭಗಳಲ್ಲಿ ಬಹುವಚನ ಸೂಚಕ ಪ್ರತ್ಯಯವೇ ಈ ಕೆಲಸ ಮಾಡುತ್ತದೆ. ಉದಾ: ಗುರುಗಳೇ, ಸ್ವಾಮಿಯವರೇ, ಬುದ್ಧಿಯವರೇ ಇತ್ಯಾದಿ. ರೀ ಎಂಬುದು ಇನ್ನೊಂದು ಅಂತಹ ಗೌರವ ಸೂಚಕ ಪದ. ಇದನ್ನು ಬಳಸಿದಾಗ ಸಂಬೋಧನೆಯ ರೂಪವನ್ನು ಬಳಸುವುದಿಲ್ಲ. ಕೇವಲ ಈ ಪದಗಳನ್ನಷ್ಟೇ ಬಳಸಿ ಸಂವಾದವನ್ನು ಮುಂದುವರೆಸುವುದನ್ನು ಕಾಣುತ್ತೇವೆ. ಇದು ವಾಕ್ಯದ ಕೊನೆಯ ಕ್ರಿಯಾಪದಕ್ಕೂ ಅಂಟಿಕೊಂಡು ಬರುವುದುಂಟು. ಉದಾ: ಬನ್ನಿರೀ, ತಿನ್ನಿರೀ ಇತ್ಯಾದಿ. ಕನ್ನಡದ ಒಂದು ಉಪಭಾಷೆಯಲ್ಲಿ ಕಾವೇರಿಯ ದಕ್ಷಿಣ ಭಾಗದಲ್ಲಿ ರಾ-ಎಂಬ ಗೌರವ ಸೂಚಕ ರೂಪವೊಂದು ಬಳಕೆಯಲ್ಲಿದೆ. ಇಲ್ರಾ, ಕೊಡ್ರಾ, ಹೇಳ್ರಾ, ನಿಷೇಧ ಸೂಚಕ 'ಅಲ್ಲ' ಸೇರಿರುವ ಕ್ರಿಯಾಪದಗಳ ಮುಂದೆ ಇದು ಕೆಲವೊಮ್ಮೆ ರು ಆಗುವುದುಂಟು. ಬರಲಿಲ್ರು, ಕೊಡಲಿಲ್ರು, ತಿನ್ಲಿಲ್ರು ಇತ್ಯಾದಿ. ರೀ ಪದದಂತೆ ಇದು ಸ್ವತಂತ್ರವಾಗಿ ಬಳಕೆಯಾಗುವುದಿಲ್ಲ. ಕ್ರಿಯಾಪದದ ಕೊನೆಯಲ್ಲಿ ಮಾತ್ರ ಇದಕ್ಕೆ ಬಳಕೆ ಇದೆ.

**ಒತ್ತೆಸೆರೆ**

ಕಳೆದ ವಾರದಲ್ಲಿ ಈ ಪದ ಹಲವು ಬಾರಿ ಪತ್ರಿಕೆಗಳಲ್ಲಿ ಬಳಕೆಯಾಯಿತು. ಒತ್ತೆಯಾಳು ಎಂಬ ಪದ ಈ ಹಿಂದೆ ಬಳಕೆಯಾಗಿ ಸ್ಥಿರಗೊಂಡಿತ್ತು. ಯಾವುದಾದರೊಂದು

ಬೇಡಿಕೆ–ಅಥವಾ ಒತ್ತಾಯವನ್ನು ಮುಂದಿಟ್ಟು ವ್ಯಕ್ತಿ ಇಲ್ಲವೇ ಹಲವು ವ್ಯಕ್ತಿಗಳನ್ನು ಒತ್ತೆಯಾಗಿ ಇರಿಸಿಕೊಳ್ಳುವುದನ್ನು ನಮ್ಮ ಮಾಧ್ಯಮಗಳು ಬಣ್ಣಿಸಲು ಈಗ ಒತ್ತಸೆರೆ ಎಂಬ ಪದವನ್ನು ಬಳಕೆಗೆ ತಂದಿವೆ. ಒತ್ತೆಸೆರೆಯಲ್ಲಿ ಸಿಲುಕಿರುವವರು ಒತ್ತೆಯಾಳುಗಳು. ಸೀತಾಪಹರಣವೇ ನಮಗೆ ಗೊತ್ತಿರುವ ಅತಿ ಹಿಂದಿನ ಒತ್ತೆಸೆರೆಯ ಪ್ರಸಂಗ. ಅದಿರಲಿ. ಒತ್ತೆಗಾಗಿ ಇರಿಸಿಕೊಳ್ಳುವುದು ಒತ್ತೆಸೆರೆಯಾದರೆ, ಒತ್ತೆಯಾಗಿ ಇರಿಸಿಕೊಂಡವರು ಒತ್ತೆಯಾಳುಗಳು. ಈಚಿನ ದಿನಗಳಲ್ಲಿ ನಮ್ಮ ಪತ್ರಿಕೆಗಳು ರೂಪಿಸಿದ ಒಳ್ಳೆಯ ಪ್ರಯೋಗವಿದು.

**ಸಚಿವ/ಮಂತ್ರಿ**

ಇವೆರಡೂ ಸಂಸ್ಕೃತದಿಂದ ಕನ್ನಡಕ್ಕೆ ಬಂದಿರುವ ಪದಗಳು. ಕನ್ನಡದಲ್ಲಿ ಮಾತ್ರ ಇವೆರಡಕ್ಕೂ ಒಂದೇ ಅರ್ಥವಿದೆ. ಅಥವಾ ಒಂದೇ ಅರ್ಥದಲ್ಲಿ ಬಳಕೆಯಾಗುತ್ತಿವೆ. ಆದರೂ ಬಳಕೆಯ ಸ್ವರೂಪದಲ್ಲಿ ಈಗೀಗ ವ್ಯತ್ಯಾಸಗಳು ಕಾಣಬರುತ್ತಿವೆ. ಸಚಿವ ಪದ ಹೆಚ್ಚು ಬಳಕೆಯಾಗುತ್ತಿದೆ. ಕಳೆದ ನಾಲ್ಕೈದು ದಶಕಗಳ ಹಿಂದಿನ ಪತ್ರಿಕೆ ವರದಿಗಳನ್ನು ಕಂಡಾಗ ಅಲ್ಲಿ ಮಂತ್ರಿ ಪದ ಹೆಚ್ಚು ಬಳಕೆಯಲ್ಲಿದ್ದುದು ಗೊತ್ತಾಗುತ್ತದೆ. ಮುಖ್ಯಮಂತ್ರಿ ಪದದಲ್ಲಿ ಮಾತ್ರ ಮಂತ್ರಿ ಪದ ಸಚಿವಕ್ಕೆ ಜಾಗ ಬಿಟ್ಟುಕೊಟ್ಟಿಲ್ಲ. ಪ್ರಧಾನಮಂತ್ರಿಯಲ್ಲೂ ಇದು ನಿಜವಾದರೂ ಅದನ್ನು ಪ್ರಧಾನಿ ಎಂದಷ್ಟೇ ಬಳಸುವ ಪ್ರವೃತ್ತಿ ಈಗ ಹೆಚ್ಚಾಗಿದೆ. ಸಚಿವಕ್ಕೆ ಸ್ತ್ರೀಲಿಂಗ ರೂಪ ಸಚಿವೆ. ಆದರೆ ಮಂತ್ರಿ ಪದಕ್ಕೆ ಮಂತ್ರಿಣಿ. ಮಂತ್ರಿಣಿ ಪದ ಲಘುಬರೆಹಗಳಿಗೆ ಮಾತ್ರ ಸೀಮಿತ. ಮಂತ್ರಿಮಂಡಲದ ಬದಲು ಸಚಿವ ಸಂಪುಟ ಬಳಕೆಗೆ ಬಂದಿದೆ. (ಎರಡೂ ಪ್ರಾಸಬದ್ಧವಾಗಿವೆ) ಈ ಬದಲಾವಣೆ ಏಕೆ ಆಯಿತೋ ಹೇಳಬರುವುದಿಲ್ಲ. ಈ ವಿಷಯದಲ್ಲಿ ಮಾತ್ರ ಕನ್ನಡ ಹಿಂದಿಯಿಂದ ಭಿನ್ನವಾಗಿದೆ. ಹಿಂದಿಯಲ್ಲಿ ಮಂತ್ರಿ ಮತ್ತು ಸಚಿವ ಸಮಾನಾರ್ಥಕಗಳಲ್ಲ. ಬಳಕೆಯಲ್ಲಂತೂ ಮಿನಿಸ್ಟರ್‌ಗೆ ಮಂತ್ರಿ ಪದ ಮತ್ತು ಸೆಕ್ರೆಟರಿಗೆ ಸಚಿವ ಪದ ಚಾಲ್ತಿಯಲ್ಲಿದೆ.

**ಅಂತೆ**

ಕನ್ನಡದಲ್ಲಿ ಅಂತೆ ಎಂಬ ರೂಪದ ಪದಗಳು ಕೊನೆಯ ಪಕ್ಷ ಎರಡಿವೆ. ಒಂದು ಪದ ಹೋಲಿಕೆಯನ್ನು ಮಾಡಲು ಬಳಕೆಯಾಗುತ್ತದೆ. ಇನ್ನೊಂದು ಪದದ ಬಳಕೆಯನ್ನು ಈ ಟಿಪ್ಪಣಿಯಲ್ಲಿ ಗಮನಿಸಬಹುದು. ಸಾಮಾನ್ಯವಾಗಿ ನಾವು ಕೇಳಿದ ಆದರೆ ನಮಗೆ ಅಷ್ಟು ಖಚಿತವಲ್ಲದ ಸಂಗತಿಯೊಂದನ್ನು ಹೇಳುವಾಗ ವಾಕ್ಯದ ಕೊನೆಗೆ ಅಂತೆ ಎಂಬ ಪದವನ್ನು ಸೇರಿಸುತ್ತೇವೆ. ಉದಾ: ಕಳ್ಳ ಸಿಕ್ಕಿದನಂತೆ. ಈ ವಾಕ್ಯದಲ್ಲಿ ಕಳ್ಳ ಸಿಕ್ಕಿದ್ದು ನಮಗೆ ಖಚಿತವಿಲ್ಲ. ಅಂತಹದೊಂದು ಸುದ್ದಿಯನ್ನು ನಾವು ಕೇಳಿರಬಹುದು. ಅದಕ್ಕಾಗಿ ವಾಕ್ಯದ ಕೊನೆಗೆ ಈ ಪದವನ್ನು ಸೇರಿಸುತ್ತೇವೆ. ಇದು ಕೆಲವೊಮ್ಮೆ ಪ್ರಶ್ನಾರ್ಥಕವಾಗಿರಲೂಬಹುದು. ಜನಪದ ಕಥೆಗಳ ನಿರೂಪಣೆಯಲ್ಲಿ ವಾಕ್ಯಗಳ ಕೊನೆಗೆ ಈ ಪದವನ್ನು ಬಳಸುವುದು ವ್ಯಾಪಕವಾಗಿ ಬಳಕೆಯಲ್ಲಿದೆ. ಕನ್ನಡ ಭಾಷಾ ಪ್ರದೇಶದಲ್ಲಿ ವಾಸಿಸುವ ಉರ್ದುಭಾಷಿಕರ ಉರ್ದುವಿನಲ್ಲಿ **ಕತೇ** ಎಂಬ ರೂಪವೊಂದಿದೆ. ಇದು ಕನ್ನಡದ ಅಂತೆ ಪದದ ಕೆಲಸವನ್ನೇ ಮಾಡುತ್ತದೆ. ಅನ್ಯಪ್ರದೇಶದ ಉರ್ದುವಿನಲ್ಲಿ ಈ ರೂಪ ಬಳಕೆಯಲ್ಲಿ ಇದ್ದಂತಿಲ್ಲ.

**ಶುದ್ಧರೂಪ ನಿರ್ಣಯಿಸಿ**

ಉದಯವಾಣಿ ದಿನಪತ್ರಿಕೆಯ 'ಪದ ಪದಾರ್ಥ' ಅಂಕಣ ಬರಹಗಾರರ ಉದಾಹರಣೆಯ ಭಂಡಾರ ಕ್ಷೀಣಿಸುತ್ತಿದೆಯೇ ಎಂಬ ಅನುಮಾನ ಬರುತ್ತಿದೆ. ಆದುದರಿಂದ ಪ್ರಚಲಿತವಾಗಿರುವ ಅಸಾಧು ಪ್ರಯೋಗಗಳಲ್ಲಿ ನನಗೆ ನೆನಪಿರುವ ಕೆಲವನ್ನು ಇಲ್ಲಿ ನೀಡಿದ್ದೇನೆ. ಇವುಗಳ ಶುದ್ಧ ಪ್ರಯೋಗಗಳನ್ನು ಪ್ರಕಟಿಸುವಂತೆ ವಿನಂತಿಸುತ್ತಿದ್ದೇನೆ.

**ನಂಬಿಕಾರ್ಹ**

ಈ ಪ್ರಯೋಗ ಬಹಳ ಕಡೆ ಕಾಣಿಸಿಕೊಳ್ಳುತ್ತಿದೆ. ಜಾಹೀರಾತುಗಳಲ್ಲಿ ಬಳಕೆ ಹೆಚ್ಚು. ಪ್ರಶಂಸಾರ್ಹ, ಉಲ್ಲೇಖಾರ್ಹ, ಖಂಡನಾರ್ಹ, ಸ್ವೀಕಾರಾರ್ಹ, ಗಮನಾರ್ಹ ಇವೇ ಮುಂತಾದ ಪ್ರಯೋಗಗಳ ಮಾದರಿಯಲ್ಲಿ ನಂಬಿಕಾರ್ಹ ಎಂಬ ರಚನೆಯೂ ರೂಪಗೊಂಡಿದೆ ಎಂಬುದು ಸ್ಪಷ್ಟ. ಸಮಸ್ಯೆ ಇರುವುದೆಲ್ಲಿ? ಈ ರಚನೆಯ ಮೊದಲ ಪದ(ನಂಬಿಕೆ) ಕನ್ನಡವಾಗಿದ್ದು ಅರ್ಹ ಎಂಬುದು ಸಂಸ್ಕೃತವಾಗಿದೆ. ಅಲ್ಲದೆ ನಂಬಿಕೆ ಮತ್ತು ಅರ್ಹ ಪದಗಳು ಸೇರಿದಾಗ ನಂಬಿಕಾರ್ಹ ಎಂಬ ರೂಪ ಸಿದ್ಧಗೊಳ್ಳುವುದಾದರೆ ಅದನ್ನು ಯಾವ ಸಂಧಿ ನಿಯಮಗಳಲ್ಲೂ ವಿವರಿಸಲು ಸಾಧ್ಯವಿಲ್ಲ. ಪೂರ್ವಪದವನ್ನು ನಂಬಿಕ ಅಥವಾ ನಂಬಿಕಾ ಎಂದು ಕಲ್ಪಿಸಿಕೊಂಡ ಹೊರತು ಈ ರಚನೆಯ ವಿವರಣೆ ಅಸಾಧ್ಯ. ಹಾಗೆ ಕಲ್ಪಿಸಿಕೊಳ್ಳಲು ಯಾವ ಆಧಾರಗಳೂ ಇಲ್ಲ. ಕನ್ನಡದ ಕ್ರಿಯಾ ಅವ್ಯಯ ರೂಪಗಳಿಗೆ ಅರ್ಹ ಎಂಬ ಪದವನ್ನು ಸೇರಿಸಿ ಹೊಸ ರಚನೆಗಳನ್ನು ಪಡೆಯುವ ಬಗೆಯೊಂದಿದೆ. ನೋಡಲರ್ಹ, ಕೊಡಲರ್ಹ, ತಿನ್ನಲರ್ಹ, ಓದಲರ್ಹ ಮುಂತಾದ ರೂಪಗಳನ್ನು ಗಮನಿಸಿ. ಇವೆಲ್ಲ ಸಾಧು ರೂಪಗಳು. ನಂಬಲರ್ಹ ಎಂಬ ರೂಪ ಈ ನಿಟ್ಟಿನಲ್ಲಿ ಯೋಗ್ಯ ರಚನೆಯಾಗಿದೆ. ಇದು ನಂಬಿಕಾರ್ಹ ಎಂಬುದಕ್ಕಿಂತ ಸೂಕ್ತ ರೂಪವಾಗಿದೆ.

**ನಕಲು/ನಕಲಿ**

'ನನಗಿನ್ನೂ ನಕಲುಪ್ರತಿ ದೊರೆತಿಲ್ಲ' ಎಂಬ ವಾಕ್ಯವನ್ನು ಈಚೆಗೆ ಪತ್ರಿಕೆಗಳಲ್ಲಿ ಓದಿದೆ. ಪ್ರತಿ ಎಂದರೆ ಸಾಕು; ನಕಲು ಪ್ರತಿ ಎಂದರೇನು? ಮೂಲದ ಅನುಕರಣೆ ನಕಲು. ಇದು ಪರ್ಷೋ ಅರಾಬಿಕ್ ಪದ. ನಾವು ಪ್ರತಿ ಮತ್ತು ನಕಲುಗಳನ್ನು ಪರ್ಯಾಯಗಳಾಗಿ ಬಳಸುವುದು ಸೂಕ್ತ. ಎರಡನ್ನೂ ಒಟ್ಟಾಗಿ ಬಳಸಬೇಕಾಗಿಲ್ಲ. ನಕಲಿ ಎಂಬ ಇನ್ನೊಂದು ಪದ ಬಳಕೆಯಲ್ಲಿದೆ: ಇಲ್ಲಿಯೂ ನಕಲು ಮಾಡುವ ಕ್ರಿಯೆ ಇದೆ. ಆದರೆ ಈ ನಕಲು ಹಾಸ್ಯಕ್ಕಾಗಿ ಮಾಡಿದುದಾಗಿರಬಹುದು. ತೆನಾಲಿ ರಾಮಕೃಷ್ಣನಿಗೆ ನಕಲಿ ಶ್ಯಾಮ ಎಂಬ ಹೆಸರು ಇದೆಯಷ್ಟೇ. ನಕಲಿ ಎಂಬುದರ ಅರ್ಥ ಮೂಲದ ಸ್ಥಾನಮಾನಕ್ಕೆ ಧಕ್ಕೆ ಉಂಟು ಮಾಡುವುದು ಎಂದೂ ಆಗಿರಬಹುದು. ನಕಲಿ ನಾಣ್ಯಗಳ ಉದಾಹರಣೆ ನೆನೆಪಿಸಿಕೊಳ್ಳಿ. ನಕಲಿನಾಣ್ಯಗಳು ನಿಜನಾಣ್ಯಗಳ ನಕಲುಗಳಾದರೂ ಅವುಗಳಿಂದ ನಿಜನಾಣ್ಯಗಳಿಗೆ ಧಕ್ಕೆ ಒದಗುತ್ತದೆಯಲ್ಲವೇ?

**ನೇರಲಾತೀತ**

ಅಲ್ಟ್ರಾ ವಯಲೆಟ್ ಎಂಬುದಕ್ಕೆ ಸಂವಾದಿಯಾಗಿ ನೇರಲಾತೀತ ಎಂಬ ಪದವನ್ನು ಬಳಸಿರುವುದು ಗಮನಕ್ಕೆ ಬಂದಿದೆ. ಈ ಪದದ ರಚನೆ ಕುತೂಹಲಕಾರಿಯಾಗಿದೆ. ನೇರಳೆ (ನೇರಿಳೆ) ದೇಶ್ಯ ಪದ. ಕನ್ನಡದ ಜ್ಞಾತಿ ಭಾಷೆಗಳಲ್ಲೂ ಇಂತಹ ರೂಪಗಳಿವೆ. ಈ ಪದವನ್ನು ಅತೀತ ಎಂಬ ಪದದೊಡನೆ ಸೇರಿಸಿ ಸಂಧಿ ಮಾಡುವಾಗ ಅದರ ಮೂಲ ರೂಪವನ್ನೇ ಬೇರೆಯಾಗಿ ಕಲ್ಪಿಸಿಕೊಳ್ಳಲಾಗಿದೆ. ಳಕಾರವನ್ನು ಲಕಾರವನ್ನಾಗಿ ಪರಿವರ್ತಿಸಿರುವುದಲ್ಲದೆ, ಎಕಾರಾಂತವನ್ನು ಆಕಾರಾಂತವನ್ನಾಗಿ ಕಲ್ಪಿಸಿಕೊಳ್ಳಲಾಗಿದೆ. ಇದು ಮೂಲದಲ್ಲಿ ನೇರಿಲಾ ಎಂಬ ಸಂಸ್ಕೃತ ಪದ ಕನ್ನಡಕ್ಕೆ ಬಂದಾಗ ನೇರಿಳೆ ಎಂದು ಬದಲಾಗಿದೆ ಎಂಬ ಭಾವವನ್ನು ಹುಟ್ಟಿಸುತ್ತದೆ. ಭಾಷೆಯ ವ್ಯಾಪಾರಗಳು ಸರಳವೇ ಆಗಿದ್ದರೂ ಭಾಷಿಕರ ವರ್ತನೆಗಳು ಅತಿ ಜಟಿಲವಾಗಿರುತ್ತವೆ ಎಂಬುದಕ್ಕೆ ಇದೊಂದು ನಿದರ್ಶನ.

**ಬದುಕು**

ಇದು ಕನ್ನಡದಲ್ಲಿ ಒಂದು ನಾಮಪದವಾಗಿರುವಂತೆ ಕ್ರಿಯಾರ್ಥದಲ್ಲೂ ಬಳಕೆಯಾಗುತ್ತದೆ. ಕ್ರಿಯಾಪದವಾಗಿ ಬದುಕು ಎಂಬುದಕ್ಕೆ ಏನು ಅರ್ಥವಿದೆ ಎನ್ನುವುದು ಗಮನಾರ್ಹ ಸಂಗತಿಯಾಗಿದೆ. ಸಾಮಾನ್ಯವಾಗಿ ಇದಕ್ಕೆ ಜೀವಿಸು ಎಂಬ ಅರ್ಥವನ್ನು ನೀಡುತ್ತೇವೆ. ಆದರೆ ಬದುಕು ಎಂಬ ಕ್ರಿಯಾಪದದ ಬಳಕೆಯ ಪ್ರಸಂಗಗಳನ್ನು ನೋಡಿದರೆ 'ಸಾವಿನಿಂದ ಪಾರಾಗು' ಎಂಬ ಅರ್ಥಗಳೇ ಹೆಚ್ಚಾಗಿ ಕಂಡು ಬರುತ್ತವೆ. 'ಬದುಕಿದೆನು ಬದುಕಿದೆನು ಭವ ಎನಗೆ ಹಿಂಗಿತು', 'ಬದುಕಿದೆಯಾ ಬಡ ಜೀವವೇ', 'ಬದುಕ್ಕೊಂಡೇ ಹೋಗು', 'ಸಾವಿನ ದವಡೆಯಿಂದ ಬದುಕುಳಿದವರು' ಮುಂತಾದ ಪ್ರಯೋಗಗಳನ್ನು ಗಮನಿಸಿ. ಇಲ್ಲೆಲ್ಲ ಜೀವಿಸಿರು ಎಂಬುದಕ್ಕಿಂತ ಪ್ರಾಣ ಉಳಿಸಿಕೋ ಎಂಬ ಅರ್ಥವೇ ಮುಖ್ಯವಾಗಿದೆ. ಒಟ್ಟಾರೆ ಅರ್ಥ ಒಂದೇ ಅಲ್ಲವೇ ಎಂದು ಹೇಳಬಹುದು. ಆದರೆ ಲೋಕಗ್ರಹಿಕೆಯ ನೆಲೆಯಲ್ಲಿ ಇವೆರಡಕ್ಕೂ ಅಗಾಧವಾದ ವ್ಯತ್ಯಾಸವಿದೆ. ಈ ಮಾತಿಗೆ ಪೂರಕವಾಗಿ ಬದುಕಿಸು ಎಂಬ ಕ್ರಿಯಾಪದಕ್ಕೆ ಪ್ರಾಣ ಉಳಿಸು ಎಂಬ ಅರ್ಥವೇ ಇದೆ ಎಂಬುದನ್ನು ಗಮನಿಸಬೇಕು.

**ಇತರ/ಇತರೆ**

ಇತರ ಎಂಬುದಕ್ಕೆ ಬೇರೆಯ, ಉಳಿದ ಎಂಬ ಅರ್ಥಗಳಿವೆ. ಇದನ್ನು ನಮ್ಮ ನಿಘಂಟುಗಳು ಅವ್ಯಯ ಎಂದು ಗುರುತಿಸುತ್ತವೆ. ಬಳಕೆಯಲ್ಲಿ ಇದೊಂದು ನಾಮಪದದಂತೆ ವರ್ತಿಸುತ್ತದೆ. ಇದಕ್ಕೆ ವಿಭಕ್ತಿ ಪ್ರತ್ಯಯಗಳು ಹತ್ತುತ್ತವೆ. ಆದರೆ ಹಾಗೆ ಹತ್ತುವಾಗ ಅದು ಬಹುವಚನ ರೂಪದಲ್ಲಿ (ಇತರರು) ಇರಬೇಕೆಂಬ ಶರತ್ತಿದೆ. ಇತರೆ ಎಂಬ ಇನ್ನೊಂದು ಪ್ರಯೋಗವಿದೆ. ಅದಕ್ಕೆ ಹೆಚ್ಚಿನ ಬಳಕೆಯಿಲ್ಲ. ಸಾಮಾನ್ಯ ಸಂದರ್ಭಗಳಲ್ಲಿ ಇತರ ಎಂಬುದಕ್ಕೆ ಬದಲಾಗಿ ಇತರೆ ಎಂದು ಬಳಸುವುದುಂಟು. ಆದರೆ ಇದರ ಬಳಕೆ ಹೆಚ್ಚು ವ್ಯಾಪಕವಾಗಿಲ್ಲ.

**ಎಲ್ಲರೂ/ಯಾರೂ**

ಎಲ್ಲರೂ ಬರುತ್ತಾರೆ ಎಂಬ ವಾಕ್ಯವನ್ನು ಗಮನಿಸಿ. ಇದರ ನಿಷೇಧ ರೂಪ ಏನು? ಎಲ್ಲರೂ ಬರಲಿಲ್ಲ ಅಥವಾ ಯಾರೂ ಬರಲಿಲ್ಲ. ಆದರೆ ಈ ಎರಡು ವಾಕ್ಯಗಳ ನಡುವೆ ಅರ್ಥ ವ್ಯತ್ಯಾಸವಿದೆ. ಎಲ್ಲರೂ ಬರಲಿಲ್ಲ ಎಂದಾಗ ಯಾರೋ ಕೆಲವರು ಮಾತ್ರ ಬಂದಿದ್ದಾರೆ ಎಂಬ ಅರ್ಥ ಬರುತ್ತದೆ. ಆದರೆ ಯಾರೂ ಬರಲಿಲ್ಲ ಎಂದಾಗ ಸಂಪೂರ್ಣ ನಿಷೇಧರೂಪ ಸಿದ್ಧವಾಗುತ್ತದೆ. ಕನ್ನಡದಲ್ಲಿ ಈ ಪದಗಳ ಬಳಕೆಯ ಬಗೆಗೆ ಒಂದು ನಿಯಮವನ್ನು ಮಾಡಬಹುದು. ಇತ್ಯಾತ್ಮಕ ವಾಕ್ಯಗಳಲ್ಲಿ ಎಲ್ಲರೂ ಎಂಬ ಪರಿಮಾಣವಾಚಕ ಬಳಕೆಯಾಗಬಲ್ಲದು. ಆದರೆ ನಿಷೇದರೂಪದಲ್ಲಿ ಯಾರೂ ಎಂಬ ರೂಪ ಮಾತ್ರ ಬಳಕೆಯಾಗಬಲ್ಲದು. ಸದ್ಯ ಈಗ ಕನ್ನಡದಲ್ಲಿ ಈ ಪದಗಳ ಬಳಕೆಯ ಸ್ವರೂಪ ಇನ್ನೂ ನಿಯತಗೊಂಡಿಲ್ಲ.

**ಆದರೆ**

ಇಂದಿನ ಕನ್ನಡದಲ್ಲಿ ಈ ಪದ ಹೆಚ್ಚು ಪ್ರಮಾಣದಲ್ಲಿ ಬಳಕೆಯಾಗುತ್ತಿದೆ. 'ಆದೊಡೆ' ಎಂಬ ಹಳೆಯ ರೂಪ ಈಗ 'ಆದರೆ' ಎಂದು ಚಾಲ್ತಿಯಲ್ಲಿದೆ. 'ಆದೊಡೆ' ಎಂಬುದಕ್ಕೆ ಈಗ ಬಳಕೆ ಇಲ್ಲ. 'ಆದರೆ' ಪದವು ಎಲ್ಲೆಲ್ಲಿ ಪ್ರಯೋಗಗೊಳ್ಳುತ್ತದೆ ಎಂಬುದನ್ನು ಎಚ್ಚರಿಕೆಯಿಂದ ಗಮನಿಸಿದರೆ ಈ ಪದಕ್ಕೆ ಭಿನ್ನಾರ್ಥದ ಬಳಕೆ ಇರುವುದು ಗೊತ್ತಾಗುತ್ತದೆ. ಈ ಮುಂದಿನ ವಾಕ್ಯಗಳನ್ನು ಗಮನಿಸಿ. 1)ಪರೀಕ್ಷೆಗೆ ಕಷ್ಟಪಟ್ಟು ಓದಿದೆ. ಆದರೆ ಪಾಸಾಗಲಿಲ್ಲ. 2) ಪರೀಕ್ಷೆಗೆ ಕಷ್ಟಪಟ್ಟು ಓದಿದೆಯಾದರೆ ಪಾಸಾಗುತ್ತಿ. ಮೊದಲ ವಾಕ್ಯದಲ್ಲಿ 'ಆದರೆ' ಎಂಬುದು ವಾಕ್ಯದ ನಡುವೆ ಪ್ರಯೋಗವಾಗಿದೆ. ಎರಡನೆಯ ವಾಕ್ಯ ಸರಣಿಯಲಿ 'ಆದರೆ' ವಾಕ್ಯದ ಮೊದಲಲ್ಲಿ ಕಾಣಿಸಿಕೊಳ್ಳುತ್ತದೆ. ವಾಕ್ಯದ ನಡುವೆ ಕಾಣಿಸಿಕೊಂಡಾಗ ಪಕ್ಷಾರ್ಥವಿದ್ದರೆ ವಾಕ್ಯದ ಮೊದಲು ಬಂದಾಗ ಇದಕ್ಕೆ ಶರತ್ತು ಸೂಚಿಸುವ ಅರ್ಥವಿದೆ. ಅಂದರೆ 'ಆದರೆ' ಎಂಬುದು ಒಂದೇ ಪದವಾದರೂ ಅದು ವಾಕ್ಯದಲ್ಲಿ ಎಲ್ಲಿ ಪ್ರಯೋಗವಾಗುತ್ತದೆ ಎಂಬುದನ್ನು ಅವಲಂಬಿಸಿ ಅರ್ಥವು ಬೇರೆಬೇರೆಯಾಗುತ್ತದೆ.

**ನಮಸ್ಕಾರ(ಗಳು)**

ಓದುಗರೊಬ್ಬರು ಬರೆವಣಿಗೆಯಲ್ಲಿ ಅದರಲ್ಲೂ ಪತ್ರಲೇಖನದಲ್ಲಿ ನಮಸ್ಕಾರಗಳು ಎಂಬ ಪ್ರಯೋಗವಿರುವುದನ್ನು ಸರಿಯಾಗಿಯೇ ಗುರುತಿಸಿದ್ದಾರೆ. ನಮಸ್ಕಾರ ರೂಪಕ್ಕೆ ಬಹುವಚನ ಪ್ರತ್ಯಯವನ್ನು ಹತ್ತಿಸುವುದು ಸಾಧ್ಯ. ಆದರೆ ಬಹುವಚನ ರೂಪ ಬೇಕೆ? ಇದು ಪ್ರಶ್ನೆ. ನಮಸ್ಕಾರವೆಂಬುದು ಒಂದೇ ಸಂದರ್ಭದಲ್ಲಿ ಮತ್ತೆ ಮತ್ತೆ ಸಂಭವಿಸುವ ಕ್ರಿಯೆಯಲ್ಲ. ಹಾಗಾಗಿ ಬಹುವಚನ ಅಗತ್ಯವಲ್ಲ. ಬಹುಶಃ ಇಂಗ್ಲಿಶ್‌ನ ಥ್ಯಾಂಕ್ಸ್ ಎಂಬುದರಲ್ಲಿರುವ ಬಹುವಚನ ಪ್ರತ್ಯಯದಿಂದಾಗಿ ಕನ್ನಡದಲ್ಲೂ ಇಂಥ ಬಳಕೆ ಆರಂಭವಾಗಿರುವುದು ಸಾಧ್ಯ. ಧನ್ಯವಾದಗಳು, ವಂದನೆಗಳು ಮುಂತಾದ ರೂಪಗಳನ್ನು ಇದೇ ಮಾದರಿಯಲ್ಲಿ ಗಮನಿಸಬಹುದು. ದೊಡ್ಡ ನಮಸ್ಕಾರವೆಂಬ ಮಾತು ಕನ್ನಡದಲ್ಲಿ

ಬಳಕೆಯಲ್ಲಿದೆ. ಇದು ಕಟಕಿಯ ಮಾತು. ಇನ್ನು ಮುಂದೆ ಸಂಬಂಧ ಬೇಡ ಎನ್ನುವಾಗ ಈ ಮಾತನ್ನು ಸಾಮಾನ್ಯವಾಗಿ ಬಳಸುತ್ತಾರೆ. ಇದೇ ಓದುಗರು ನಮುಸ್ಕಾರ ಎಂಬ ರೂಪದ ಸಾಧುತ್ವವನ್ನು ಕುರಿತು ಕೇಳುತ್ತಾರೆ. ಇದು ಮಾತಿನಲ್ಲಿ ಕೇಳಿಬರುವ ರೂಪ. ಏಕೆ ಎರಡನೆಯ ಸ್ವರ ಅಕಾರದಿಂದ ಉಕಾರಕ್ಕೆ ಬದಲಾಗುತ್ತದೆ ಎಂಬುದು ಬೇರೆ ಪ್ರಶ್ನೆ. ಆದರೂ ಕುತೂಹಲಕ್ಕಾಗಿ ಓದುಗರಿಗೆ ಒಂದು ಸೂಚನೆ. ನೀವು ನಮುಸ್ಕಾರ ಎಂಬ ಪ್ರಯೋಗವನ್ನು ಎಲ್ಲಾದರೂ ಕೇಳಿದರೆ ಅದನ್ನು ಉಚ್ಚರಿಸುವವರ ಸಾಮಾಜಿಕ ಹಿನ್ನೆಲೆಯ ಬಗ್ಗೆ ಏನಾದರೂ ಹೇಳುವುದು ಸಾಧ್ಯವೇ ದಯವಿಟ್ಟು ಗಮನಿಸಿ.

### ಪದ ಮಧ್ಯೆ ಅಂತರವೇಕೆ?

ಪದಗಳ ಮಧ್ಯೆ ಅಂತರವಿಡುವುದು ಅಥವಾ ಜಾಗಬಿಟ್ಟು ಬಳಸುವುದು ಮೂಲಭೂತವಾಗಿ ಕನ್ನಡದ್ದಲ್ಲ ಎಂಬ ವಾದವಿದೆ. ಹೊಸಗನ್ನಡದಲ್ಲಿ ಈ ಪದವಿಂಗಡಣೆ ತೀರಾ ಸಾಮಾನ್ಯವಾಗಿದೆ. ಇಂಗ್ಲಿಶ್‌ನಲ್ಲಿ ಹೀಗೆ ಪದಗಳನ್ನು ಬಿಡಿಬಿಡಿಯಾಗಿ ಬರೆಯುವುದಕ್ಕೆ ನಿರ್ದಿಷ್ಟ ಕಾರಣಗಳಿವೆ. ಮೊದಲನೆಯದಾಗಿ ಇಂಗ್ಲಿಶ್ ಸ್ಪೆಲ್ಲಿಂಗ್ ಇರುವ ಭಾಷೆ. ಒಂದಷ್ಟು ಅಕ್ಷರಗಳ ಗುಂಪು ಒಂದು ಧ್ವನಿಯನ್ನು ಹೊರಡಿಸುತ್ತದೆ. ಹಾಗಿರುವುದರಿಂದ ಇಲ್ಲಿ ಪದಗಳ ಮಧ್ಯೆ ಅಂತರ ಅವಶ್ಯ. ಆದರೆ ಕನ್ನಡದಲ್ಲಿ ಒಂದೊಂದು ಅಕ್ಷರವೂ ಇಲ್ಲಿ ಪೊನೊಟಿಕ್. ಹಾಗಾಗಿ ಪದವಿಂಗಡಣೆಯಲ್ಲಿ ಸಾಕಷ್ಟು ಗೊಂದಲಗಳೂ ಸೃಷ್ಟಿಯಾಗುತ್ತಿವೆ. ಉದಾಹರಣೆಗೆ ವಿಜಯಕುಮಾರ ಎಂಬುದನ್ನು ವಿಜಯ ಕುಮಾರ ಎಂದು ಬರೆಯಬಹುದೇ? ಇಲ್ಲಿ ಎರಡು ಸ್ವತಂತ್ರ ಪದಗಳಿವೆ. ಹಾಗೆಯೇ ವಾಹನಚೋರರು, ಭ್ರಮನಿರಸನ, ಪಡೆದುಕೊಳ್ಳುವುದು.... ಹೀಗೆ ಪಟ್ಟಿ ಬಹಳ ಉದ್ದವಾಗಿದೆ.

### ನಕ್ಕಿದ್ದು/ನಕ್ಕದ್ದು

ಬರೆವಣಿಗೆಯಲ್ಲಿ ಈ ಎರಡೂ ರೂಪಗಳು ಸಮ ಸಮವೆಂಬಂತೆ ಬಳಕೆಯಲ್ಲಿವೆ. ಮಾತಿನಲ್ಲಂತೂ ಸರಿಯೇ ಸರಿ. ಇವೆರಡರಲ್ಲಿ ಯಾವುದು ರಾಚನಿಕವಾಗಿ ಸರಿ ಎಂಬುದು ಒಂದು ಪ್ರಶ್ನೆ. ಎಲ್ಲ ಕ್ರಿಯಾಪದಗಳಿಗೂ ಇದೇ ಬಗೆಯ ಎರಡೆರಡು ಪ್ರಯೋಗಗಳಿವೆ ಎಂಬುದನ್ನು ಗಮನಿಸೋಣ. ತಿಂದಿದ್ದು/ತಿಂದದ್ದು; ಕೊಟ್ಟಿದ್ದು/ ಕೊಟ್ಟದ್ದು; ಬಂದಿದ್ದು/ಬಂದದ್ದು ಹೀಗೆ. ಆದರೆ ಹೀಗೆ ಎರಡು ರೂಪಗಳಿಲ್ಲದ ಕ್ರಿಯಾಪದಗಳೂ ಇವೆ. ಕೇಳಿದ್ದು ಸಾಧ್ಯ. ಆದರೆ ಕೇಳದ್ದು ಅದಕ್ಕೆ ಸಮಾನಾರ್ಥಕವಾಗಿ ಸಾಧ್ಯವಿಲ್ಲ. ಹಾಗೆಯೇ ತೋರಿದ್ದು ಸರಿ. ತೋರದ್ದು ಅಲ್ಲ. ಈ ಮಾದರಿಯನ್ನು ಗಮನಿಸಿದರೆ ಎರಡನೆಯ ಸ್ವರ ಇಕಾರ ಇರುವ ರೂಪಗಳು ಸಾಧು ಎಂದಾಗುತ್ತದೆ. ಆದರೆ ಈ ನಿಯಮ ಸರಿಯಲ್ಲವೆಂದು ಹೇಳಲು ಕಾರಣಗಳಿವೆ. ಈ ರೂಪಗಳಲ್ಲಿ ಆಯಾ ಕ್ರಿಯಾಪದಗಳ ಭೂತ ಕೃದಂತ ರೂಪವಿರುತ್ತದೆ ಎನ್ನುವುದಾದರೆ ಆಗ ನಕ್ಕದ್ದು ಎಂಬ ರೂಪವನ್ನು ಒಪ್ಪುವುದು ಕಷ್ಟ. ನಕ್ಕಿದ್ದು ಎಂಬುದೂ ನಿಯಮಾನುಸಾರ ಸರಿಯಲ್ಲ. ಏಕೆಂದರೆ ನಕ್ಕಿದ ಎಂಬ ರೂಪ ಇಲ್ಲ. ಒಟ್ಟಿನಲ್ಲಿ ಇಂತಹ ರೂಪಗಳು ಕನ್ನಡ ಪದರಚನೆಯನ್ನು ವಿವರಿಸುವಲ್ಲಿ ಸವಾಲುಗಳನ್ನು ಒಡ್ಡುತ್ತಿವೆ.

**ತಲಾಶೆಯಲ್ಲಿ**

ಹುಡುಕಾಟದಲ್ಲಿ ಎಂಬುದಕ್ಕೆ ಬದಲಾಗಿ ತಲಾಶೆಯಲ್ಲಿ ಎಂಬ ರೂಪವನ್ನು ಈಚೆಗೆ ಪತ್ರಿಕೆಯೊಂದರ ವರದಿಯಲ್ಲಿ ಓದಿದೆ. ತಲಾಶ್ ಎಂಬ ಪರ್ಸೋ ಅರಾಬಿಕ್ ಮೂಲದ ಪದ ಕನ್ನಡಕ್ಕೆ ಬಂದು ಸೇರಿದೆ. ಈ ಪದಕ್ಕೆ ತಪಾಸಣೆ, ಶೋಧನೆ ಎಂಬ ಅರ್ಥಗಳನ್ನು ನೀಡಲಾಗಿದೆ. ತಲಾಷ್ (ತಲಾಷು) ಎಂಬ ಬರೆಹದ ರೂಪವನ್ನು ನಿಘಂಟುಗಳು ನೀಡುತ್ತವೆ. ಈ ಪದದ ಕೊನೆಯ ವ್ಯಂಜನವನ್ನು ಕನ್ನಡದ ಶ್ ಅಥವಾ ಷ್ ಇವುಗಳಲ್ಲಿ ಯಾವುದರ ಮೂಲಕ ಪ್ರತಿನಿಧಿಸಬೇಕು ಎಂಬುದು ಒಂದು ಪ್ರಶ್ನೆ. ಅದು ಈಗ ಬೇಡ. ಆದರೆ ತಲಾಶ್ ಪದ ವ್ಯಂಜನದಿಂದ ಕೊನೆಯಾಗುತ್ತದೆ. ಇದನ್ನು ಸ್ವರದಿಂದ ಕೊನೆಗೊಳಿಸಲು ಕನ್ನಡದಲ್ಲಿ ಉಕಾರವನ್ನು ಸೇರಿಸಿ ತಲಾಶು ಎಂದು ಬಳಸಲಾಗುತ್ತದೆ. ನಾನು ಗಮನಿಸಿದ ಪತ್ರಿಕೆಯ ಪ್ರಯೋಗದಲ್ಲಿ ತಲಾಶ್ ಎಂಬುದನ್ನು ತಲಾಶೆ ಎಂದು ಎಕಾರಾಂತಗೊಳಿಸಲಾಗಿದೆ. ಇದಕ್ಕೆ ಪ್ರಯೋಗಗಳ ಆಧಾರಗಳು ಇದ್ದಂತಿಲ್ಲ. ಸಾಮಾನ್ಯವಾಗಿ ಪರ್ಸೋ ಅರಾಬಿಕ್ ಮೂಲದ ಪದಗಳು ಆಡಳಿತಕ್ಕೆ ಸಂಬಂಧಿಸಿದ ಪದಗಳಾಗಿದ್ದರೆ ಮಾತ್ರ ಅವುಗಳನ್ನು ವ್ಯಾಪಕವಾಗಿ ಬಳಸುವುದುಂಟು. ಹಾಗಿಲ್ಲದ ಪದಗಳು ಲಘು ಬರೆಹಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಆದರೆ ಮೇಲೆ ಉಲ್ಲೇಖಿಸಿದ ಪ್ರಯೋಗ ಪತ್ರಿಕೆಯ ತಲೆಬರೆಹದಲ್ಲಿ ಕಾಣಿಸಿಕೊಂಡಿತ್ತು ಎಂಬುದು ಗಮನಾರ್ಹವಾದ ಸಂಗತಿಯಾಗಿದೆ.

**ತಿಂಗಳಾಂತ್ಯ**

ಈ ಪದ ಹಲವು ಬಾರಿ ಬಳಕೆಯಾಗಿರುವುದು ಗಮನಕ್ಕೆ ಬಂದಿದೆ. ಈಚೆಗೆ ಕೂಡ ಒಂದು ಪತ್ರಿಕೆಯ ವರದಿಯಲ್ಲಿ ಇದನ್ನು ನಾನು ಕಂಡೆ. ತಿಂಗಳ ಕೊನೆ ಎಂಬುದು ಉದ್ದೇಶಿತ ಅರ್ಥ. ತಿಂಗಳ ಕೊನೆ ಎಂಬುದನ್ನು ಒಂದು ನಾಮಪದದಂತೆ ಬಳಸಲು ಸಾಧ್ಯವಿದ್ದರೂ ಈ ತಿಂಗಳಾಂತ್ಯ ಎಂಬ ಪ್ರಯೋಗ ಏಕೆ ರೂಪುಗೊಳ್ಳುತ್ತದೋ ಕಾಣೆ. ತಿಂಗಳು ಕನ್ನಡ ಪದ. ಅಂತ್ಯ ಸಂಸ್ಕೃತ ಪದ ಇವೆರಡರ ನಡುವೆ ಸಂಧಿಯಾಗ ಬಾರದೆಂದೇನೂ ಇಲ್ಲ. ಅದರೆ ಅಂತಹ ಸಂಧಿಯಲ್ಲಿ ಯಾವ ನಿಯಮವನ್ನು ಪಾಲಿಸಬೇಕೆಂಬುದು ಒಂದು ಸಮಸ್ಯೆಯಾಗಿದೆ.

ಈ ರಚನೆಯಲ್ಲಿ ತಿಂಗಳು ಎಂಬ ಪದವನ್ನು ಮೊದಲು ತಿಂಗಳ ಎಂದು ಪರಿವರ್ತಿಸಿ ಅದಕ್ಕೆ ಅಂತ್ಯ ಪದವನ್ನು ಸೇರಿಸುವಾಗ ಸವರ್ಣದೀರ್ಘ ಎಂಬ ಸಂಸ್ಕೃತ ಸಂಧಿಯ ನಿಯಮವನ್ನು ಪಾಲಿಸಲಾಗಿದೆ. ವಾಸ್ತವವಾಗಿ ಈ ಪದವನ್ನು ಬಳಸಿದವರು ಇಷ್ಟೆಲ್ಲ ಯೋಚಿಸಿರಲಾರರು. ಮಾಸಾಂತ್ಯ ಎಂಬ ಪದವನ್ನು ಕಂಡು ಅದರ ಮಾದರಿಯಲ್ಲಿ ತಿಂಗಳಾಂತ್ಯ ಎಂಬ ಪ್ರಯೋಗವನ್ನು ಮಾಡಿದ್ದಾರೆ. ಕನ್ನಡದಲ್ಲಿ ಹೀಗೆ ಪದಗಳ ಹೋಲಿಕೆಯ ಮೇಲೆ ಮತ್ತೊಂದು ಪದವನ್ನು ರೂಪಿಸುವ ಪ್ರವೃತ್ತಿ ಬಲವಾಗಿದೆ. ಇದು ಹಲವಾರು ಗೊಂದಲದ ರೂಪಗಳಿಗೆ ಕಾರಣವಾಗುವುದು ಖಂಡಿತ. ತಿಂಗಳಾಂತ್ಯ ಆ ಬಗೆಯ ಪ್ರಯೋಗವಾಗಿದೆ.

**ಕಾರ್ಮಿಕೆ**

ಹೆಣ್ಣು ಕೆಲಸಗಾರರನ್ನು ಸೂಚಿಸಲು ಈ ಪದವನ್ನು ಈಚೆಗೆ ಬಳಸಿದ್ದನ್ನು ನೋಡಿದೆ. ಮಹಿಳಾ ಕಾರ್ಮಿಕರು ಎಂಬ ಬಳಕೆಯ ಪ್ರಯೋಗವಿದೆಯಾದರೂ ಅದನ್ನು ಏಕವಚನದಲ್ಲಿ ಬಳಸಲು ಬರುವುದಿಲ್ಲ. ಸಚಿವ/ಸಚಿವೆ, ಅಧ್ಯಕ್ಷ/ಅಧ್ಯಕ್ಷೆ, ಬುದ್ಧಿವಂತ/ಬುದ್ಧಿವಂತೆ, ವೈದ್ಯ/ವೈದ್ಯೆ ಮುಂತಾದ ರೂಪಗಳ ಸಾಮ್ಯದಿಂದ ಕಾರ್ಮಿಕೆ ಎಂಬ ರೂಪವನ್ನು ಬಳಸಿರಬಹುದು. ಆದರೆ ಇದು ನಾವು ತಿಳಿದಷ್ಟು ಸರಳವಾಗಿಲ್ಲ. ಹಲವು ಸಂಸ್ಕೃತ ಪದಗಳ ಸ್ತ್ರೀಲಿಂಗ ರೂಪಗಳನ್ನು ಕನ್ನಡ ತನಗೆ ಬೇಕಾದಂತೆ ರೂಪಿಸುವ ಕ್ರಮ ತುಂಬಾ ಸಂಕೀರ್ಣವಾಗಿದೆ. ಈಗಾಗಲೇ ಈ ಬಗ್ಗೆ ಒಮ್ಮೆ ಇದೇ ಅಂಕಣದಲ್ಲಿ ಬರೆದಿದ್ದೇನೆ. ಸಂಸ್ಕೃತ ತನಗೆ ಬೇಕಾದ ಸ್ತ್ರೀಲಿಂಗ ರೂಪಗಳನ್ನು ಹೇಗೆ ರೂಪಿಸಿಕೊಳ್ಳುತ್ತದೆ ಎನ್ನುವುದು ನಮಗಿಲ್ಲಿ ಅಷ್ಟು ಮುಖ್ಯವಲ್ಲ. ಏಕೆಂಬುದನ್ನು ನೋಡಿ. ಬಾಲಕ ಪದದ ಸಂಸ್ಕೃತ ಸ್ತ್ರೀಲಿಂಗ ರೂಪ ಬಾಲಿಕಾ ಆಗಿದ್ದರೆ ಅದನ್ನು ಕನ್ನಡದಲ್ಲಿ ಬಾಲಕಿ ಎಂದು ರೂಪಿಸಿಕೊಳ್ಳಲಾಗಿದೆ. ಬಾಲಿಕಾದ ತದ್ಭವವೆನ್ನಬಹುದಾದ ಬಾಲಿಕೆ ಎಂಬ ರೂಪವೂ ಅಲ್ಲಲ್ಲಿ ಆಗಾಗ ಬಳಕೆಯಾಗುವುದುಂಟು. ಈ ನಿಟ್ಟಿನಲ್ಲಿ ನೋಡಿದರೆ ಕನ್ನಡದಲ್ಲಿ ಕಾರ್ಮಿಕಾ (ಕಾರ್ಮಿಕೆ) ಮತ್ತು ಕಾರ್ಮಿಕಿ ಎಂಬ ರೂಪಗಳನ್ನು ಸರಿ ಎನ್ನಬೇಕಾಗುತ್ತದೆ. ಆದರೂ ಇಲ್ಲಿ ನಮಗಿನ್ನೂ ಅಸ್ಪಷ್ಟವಾಗಿರುವ ನಿಯಮವೊಂದು ಜಾರಿಯಲ್ಲಿದೆಯೆಂದೇ ನನಗೆ ತೋರುತ್ತಿದೆ.

**ಆಕ್ಟಿವೇಟ್/ತೀಕ್ಷ್ಣಗೊಳಿಸು**

ಓದುಗರೊಬ್ಬರು ದೂರವಾಣಿ ಇಲಾಖೆಯವರು ಬಳಸುತ್ತಿರುವ ಈ ಪ್ರಯೋಗಗಳ ಬಗೆಗೆ ಪ್ರತಿಕ್ರಿಯಿಸಿದ್ದಾರೆ. ಇದು ಅಪಪ್ರಯೋಗ. ಇಂಗ್ಲಿಶಿನ ಪದಗಳಿಗೆ ಸಂದರ್ಭಾನುಸಾರ ಇರುವ ಅರ್ಥಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು ಎಂದು ತಿಳಿಯದೆ ಈ ಬಗೆಯ ತುತ್ತಿನ ಹರಳುಗಳನ್ನು ಜಾರಿಗೆ ತರುತ್ತಾರೆ. ಪದರೂಪಗಳು ಹೇಗೆ ರಚನೆಯಾಗುತ್ತವೆ ಎನ್ನುವುದನ್ನು ಪಾರಿಭಾಷಿಕ ಪದಗಳನ್ನು ರೂಪಿಸುವವರು ತಿಳಿದಿರಬೇಕು. ಕೇವಲ ಅನುವಾದಕರು ಸರಿರೂಪಗಳನ್ನು ನೀಡಲಾರರು. ಆಕ್ಟಿವೇಟ್ ಎನ್ನುವುದಕ್ಕೆ ಕನ್ನಡದಲ್ಲಿ ಯಾವುದು ಸರಿಯಾದ ಪದ? ಈ ಪ್ರಶ್ನೆಗೆ ಸರಿಯಾದ ಅನುವಾದವನ್ನು ಸೂಚಿಸುವ ಪದವನ್ನು ಹೇಳಿ ಉತ್ತರಿಸುವುದು ಒಂದು ವಿಧಾನ. ಮೂಲಪದ ಸೂಚಿಸುವ ಕ್ರಿಯೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡು ಅದಕ್ಕೆ ಕನ್ನಡದಲ್ಲಿ ಹೊಸ ಪದವೊಂದನ್ನು ಸೂಚಿಸುವುದು ಇನ್ನೊಂದು ವಿಧಾನ. ಚಕ್ರಗೋಷ್ಠಿ, ಶೃಂಗಸಭೆ, ಸುಗ್ರೀವಾಜ್ಞೆ ಮುಂತಾದ ಪದಗಳನ್ನು ರೂಪಿಸಿದ ಎರಡನೆ ವಿಧಾನ ಈಗ ಹೆಚ್ಚು ಚಾಲ್ತಿಯಲ್ಲಿಲ್ಲ. ಅನುವಾದದ ಹಾದಿಯ ಮೊದಲ ವಿಧಾನಕ್ಕೆ ಮನ್ನಣೆ ದೊರಕಿಬಿಟ್ಟಿದೆ.

**ಮೊರೆಹೊಗು/ಮೊರೆಹೋಗು**

ಹಿರಿಯರೊಬ್ಬರು ಮೊರೆಹೋಗು ಎಂಬುದು ಅಶುದ್ಧರೂಪವೆಂದು ಸೂಚಿಸಿದ್ದಾರೆ. ಇದರ ಸರಿಯಾದ ರೂಪವೆನ್ನಬಹುದಾದ ಮೊರೆಹೊಗು ಎಂಬುದು ಕನ್ನಡದಲ್ಲಿ

ಬಳಕೆಯಾಗುವುದು ಕಡಿಮೆ. ಆದರೆ ಭೂತಕಾಲ ಪ್ರತ್ಯಯದೊಡನೆ ಬಳಸುವಾಗ ಮೊರೆಹೊಕ್ಕನು (ಧಾತು: ಮೊರೆಹೊಗು)ಎಂಬ ಪ್ರಯೋಗವೇ ಕಾಣಿಸುತ್ತದೆಯೇ ಹೊರತು ಮೊರೆಹೋದನು (ಧಾತು: ಮೊರೆಹೋಗು) ಎಂಬುದಲ್ಲ. ಹೋಗು, ಹೊಗು ಎಂಬ ಎರಡು ರೂಪಗಳು ಬೇರೆ ಬೇರೆ ಅರ್ಥಗಳನ್ನು ಹೊಂದಿರುವ ಕ್ರಿಯಾರೂಪಗಳು. ಪುಗು/ಹೊಗು ಎಂಬುದು ಒಂದು ರೂಪ. ಇದು ಕನ್ನಡದಲ್ಲಿ ಭೂತಕಾಲ ಪ್ರತ್ಯಯದೊಡನೆ ಮಾತ್ರ ಈಗ ಹೆಚ್ಚಾಗಿ ಬಳಕೆಯಲ್ಲಿದೆ. ಉದಾ: ಕಳ್ಳಹೊಕ್ಕಮನೆ, ತಲೆಹೊಕ್ಕ ಚಿಂತೆ ಇತ್ಯಾದಿ.- ಪೋ।ಹೋಗು ಎಂಬುದು ಇನ್ನೊಂದು ರೂಪ. ಇದು ಕನ್ನಡದಲ್ಲಿ ತುಂಬಾ ವ್ಯಾಪಕವಾಗಿ ಬಳಕೆಯಾಗುತ್ತದೆ. ಹೊಗು ಎಂಬುದು ನಾಮಪದಗಳೊಡನೆ ಸೇರಿ ಹೊಸ ಕ್ರಿಯಾರೂಪಗಳನ್ನು ರೂಪಿಸಬಲ್ಲುದು. ಮೊರೆಹೊಗು ಅಂಥ ಕ್ರಿಯಾರೂಪ. ಇದನ್ನು ಸಾಮಾನ್ಯವಾಗಿ ಮೊರೆಹೋಗು ಎಂದು ತಪ್ಪಾಗಿ ಗ್ರಹಿಸಿ ಬಳಸುವುದಿದೆ. ಆದರೆ ಈ ಮೊದಲೇ ಹೇಳಿದಂತೆ ಇದಕ್ಕೆ ಭೂತಕಾಲ ಪ್ರತ್ಯಯ ಸೇರಿದಾಗ ಮೊರೆಹೊಕ್ಕ ಎಂಬ ರೂಪ ಕಾಣಿಸಿಕೊಳ್ಳುವುದೇ ಹೊರತು ಮೊರೆಹೋದ ಎಂಬುದಾಗಿ ಅಲ್ಲ.

**ಅನಂಟು**

ಪತ್ರಿಕೆಯೊಂದರಲ್ಲಿ ಈಚೆಗೆ ಕಂಡ ಪ್ರಯೋಗವಿದು. ಅಂಟುರೋಗಗಳನ್ನು ನಾವು ಕೇಳಿಬಲ್ಲೆವು. ಒಬ್ಬರಿಂದ ಒಬ್ಬರಿಗೆ ಸೋಂಕಿನ ಮೂಲಕ ಹರಡದ ರೋಗಗಳನ್ನು ಗುರುತಿಸುವಾಗ ಅವುಗಳನ್ನು ಅನಂಟು ರೋಗಗಳೆಂದು ಆ ವರದಿಯಲ್ಲಿ ಹೇಳಲಾಗಿತ್ತು. ಈ ಪ್ರಯೋಗ ಗೊಂದಲಕ್ಕೆ ಕಾರಣವಾಗುತ್ತದೆ. ಏಕೆಂದರೆ ಮೇಲುನೋಟಕ್ಕೆ ಇದು ನಂಟು ಪದದ ನಿಷೇಧ ರೂಪವನ್ನು ಹೇಳುವಂತೆ ತೋರಬಹುದು. ಹಾಗೆ ಈ ರಚನೆ ಸಾಧ್ಯವಿಲ್ಲ. ಆ ಮಾತು ಬೇರೆ. ಅಂಟು ಪದಕ್ಕೆ ಅನ್ ಪ್ರತ್ಯಯವನ್ನು ಸೇರಿಸಿ ಈ ರಚನೆಯನ್ನು ಪಡೆಯಲಾಗಿದೆ. ಅಂಟು ಕನ್ನಡದ ಪದ. ಇದಕ್ಕೆ ಸಾಮಾನ್ಯವಾಗಿ ಕನ್ನಡದ ಪ್ರತ್ಯಯಗಳನ್ನು ಮಾತ್ರ ಸೇರಿಸಬೇಕಾಗುತ್ತದೆ. ಅನ್ ಸಂಸ್ಕೃತದ ಪ್ರತ್ಯಯ. ಹಾಗಾಗಿ ಇದೊಂದು ಅಸಹಜ ರಚನೆ. ಕನ್ನಡದಲ್ಲಿ ಇಂತಹ ರೂಪಗಳು ಹಲವು ಬಳಕೆಯಲ್ಲಿವೆ. ದುರ್ನಡತೆ, ದುರ್ಬಳಕೆ, ಸದ್ಬಳಕೆ, ಸನ್ನಡತೆ ಇತ್ಯಾದಿ. ಭಾಷೆಯ ಮೂಲಪದಗಳಿಗೆ ಅನ್ಯಭಾಷೆಯ ಪ್ರತ್ಯಯಗಳು ಸೇರುವುದು ಎಲ್ಲ ಭಾಷೆಗಳಲ್ಲೂ ಬೇರೆ ಬೇರೆ ಬಗೆಯಲ್ಲಿ ಮತ್ತು ಬೇರೆ ಬೇರೆ ಪ್ರಮಾಣಗಳಲ್ಲಿ ಇದ್ದೇ ಇದೆ. ಆದರೆ ಕನ್ನಡದಲ್ಲಿ ಇದು ಯಾವ ಸ್ವರೂಪದಲ್ಲಿ ಮತ್ತು ಯಾವ ನೆಲೆಯಲ್ಲಿ ನಡೆಯುತ್ತಿದೆ ಎಂಬುದನ್ನು ವಿವರವಾಗಿ ಅಧ್ಯಯನ ಮಾಡಬೇಕಾಗಿದೆ. ಅಲ್ಲಿಯವರೆಗೆ ಅನಂಟು ಪದ ಬಳಕೆಯಲ್ಲಿ ಮುಜುಗರವನ್ನು ತರುವುದಂತೂ ಖಂಡಿತ.

**ಪದಗಳ ನಡುವೆ ಅಂತರ**

ಓದುಗರೊಬ್ಬರು ಈ ಬಗ್ಗೆ ಕೆಲವು ಸಂಗತಿಗಳನ್ನು ಇದೇ ಪತ್ರಿಕೆಯಲ್ಲಿ ಬರೆದಿದ್ದಾರೆ. ಇದನ್ನು ಎರಡು ನೆಲೆಯಲ್ಲಿ ನೋಡೋಣ. ಮಾತಾಡುವಾಗ ನಾವು ಪದಗಳ ನಡುವೆ ಅಂತರವಿರಿಸುವ ಕ್ರಮ ಒಂದು ಬಗೆಯದು. ಅಲ್ಲಿ ಎಲ್ಲ ಪದಗಳನ್ನೂ ಬೇರೆ ಬೇರೆಯಾಗಿ ಇರಿಸುವುದಿಲ್ಲ. ವಾಕ್ಯದಲ್ಲಿ ಉಸಿರಿನ ಬಿಡುವುಗಳು ಇರುತ್ತವೆ. ಪ್ರತಿ ಬಿಡುವಿನ ನಡುವೆ

ಹಲವಾರು ಪದಗಳು ಒಟ್ಟಾಗಿ ಸೇರಿರುತ್ತವೆ. ಈ ಬಿಡುವುಗಳು ಅರ್ಥಾನುಸಾರಿಯಾಗಿರುತ್ತವೆ. ಈ ಮಾತನಾಡುವ ಕ್ರಮದ ಪದಗಳ ಜೋಡಣೆಯ ಮತ್ತು ವಿಭಜನೆಯ ಕ್ರಮವನ್ನು ಬರವಣಿಗೆಗೆ ನೇರವಾಗಿ ರವಾನಿಸಲು ಬರುವುದಿಲ್ಲ. ಅಂತಹ ಪ್ರಯೋಗವನ್ನು ಕೈಲಾಸಂ ಅವರು ತಮ್ಮ ನಾಟಕಗಳಲ್ಲಿ ಮಾಡಿದರು. ಅವುಗಳನ್ನು ಗಟ್ಟಿಯಾಗಿ ಓದಲು ಸಾಧ್ಯವಾಗುವಂತೆ ಮೌನವಾಗಿ ಓದಲು ಸಾಧ್ಯವಾಗುವುದಿಲ್ಲ. ಬರೆವಣಿಗೆಯಲ್ಲಿ ನಾವು ಪದಗಳೆಂದು ಬಿಡಿಸಿ ಹೇಳುವ ಘಟಕಗಳನ್ನು ಮಾತನಾಡುವಾಗಲೂ ಪ್ರತ್ಯೇಕ ಘಟಕಗಳೆಂದು ತಿಳಿಯುವುದು ಸರಿಯಾಗದು. ಕೆಲವು ವಾರ್ತಾವಾಚಕರು, ಕಿರುತೆರೆಯ ನಟರು ಇಂತಹ ತಪ್ಪುಗಳನ್ನು ಮಾಡುವುದನ್ನು ನಾವು ದಿನವೂ ಕೇಳುತ್ತಿದ್ದೇವೆ.

ಹಳೆಯ ಬರೆವಣಿಗೆಯ ಮಾದರಿಗಳನ್ನು ನೋಡಿದರೆ ಅಲ್ಲಿ ಪದಗಳ ನಡುವೆ ಅಂತರವನ್ನು ಬಿಡುತ್ತಿರಲಿಲ್ಲ. ಓದುವ ಪರಿಣಿತರಿಗೆ ಪದಗಳನ್ನು ಬಿಡಿಸಿ ಓದುವ ಕಲೆ ತಿಳಿದಿತ್ತಾಗಿ ಅವರು ಗೊಂದಲವಿಲ್ಲದೆ ಓದುವುದು ಸಾಧ್ಯವಾಗುತ್ತಿತ್ತು. ಆದರೆ ಮುದ್ರಣದ ಆಗಮನದಿಂದಾಗಿ ಪದಗಳ ನಡುವೆ ಕಣ್ಣಿಗೆ ಕಾಣುವ (ಕಿವಿಗೆ ಕೇಳುವ ಅಲ್ಲ) ಅಂತರವನ್ನು ತೋರಿಸುವ ಕ್ರಮವೊಂದು ಬೆಳೆದು ಬಂದಿದೆ. ಇದು ಮುಖ್ಯವಾಗಿ ಕಣ್ಣಿನ ಅನುಕೂಲಕ್ಕಾಗಿ ಮಾಡಿಕೊಂಡಿರುವ ಬದಲಾವಣೆ. ಪುಟಗಳ, ಕಾಲಂಗಳ ಅಗಲವೂ ಕೂಡ ಕಣ್ಣಿಗಾಗಿಯೇ ಮಾಡಿಕೊಂಡಿರುವ ರಚನೆಗಳು. ಅಲ್ಲದೆ ಈಗ ಓದುವುದು ಎಂದರೆ ಒಂದು ಭಾಷಾಕೌಶಲವಾಗಿದೆ. ಪದವಿಭಜನೆಗೆ ಅಲ್ಲಿ ತರಬೇತು ಇರುವುದಿಲ್ಲ. ಅಗಾಧ ಪ್ರಮಾಣದ ಬರೆವಣಿಗೆ ಸಿದ್ಧವಾಗಿ ಅಷ್ಟೇ ಪ್ರಮಾಣದಲ್ಲಿ ಓದುವಿಕೆಯೂ ಸಾಧ್ಯವಾಗಿರುವ ಈ ಕಾಲದಲ್ಲಿ ಪದ ವಿಭಜಿಸುವ ಕೆಲಸವನ್ನೂ ಓದುಗರೇ ಮಾಡಿಕೊಳ್ಳುವುದು ಅಸಾಧ್ಯ. ಕೆಲವು ಸಮಾಸ ಪದಗಳನ್ನು ಬರೆಯುವಾಗ ಅದರೊಳಗಿನ ಪದಗಳನ್ನು ಬೇರೆ ಬೇರೆಯಾಗಿ ಬರೆಯಬೇಕೇ ಒಟ್ಟಿಗೆ ಬರೆಯಬೇಕೆ ಎಂಬುದು ಒಂದು ಮುಖ್ಯ ಪ್ರಶ್ನೆ. ಸಾಮಾನ್ಯವಾಗಿ ಒಂದು ಕುರುಡು ನಿಯಮ ಇಲ್ಲಿ ಪಾಲನೆಯಾಗುವಂತೆ ತೋರುತ್ತಿದೆ. ಪ್ರತ್ಯಯಗಳಿಲ್ಲದ ಪದದಲ್ಲಿ ನಾಲ್ಕಕ್ಕಿಂತ ಹೆಚ್ಚುಸ್ವರಗಳಿದ್ದರೆ ಅಂತಹ ಪದಗಳನ್ನು ಎರಡು ಭಾಗಗಳನ್ನಾಗಿ ಮಾಡಿ ನಡುವೆ ಅಂತರವಿರಿಸಿ ಬರೆಯುವ, ಮುದ್ರಿಸುವ ಹಾಗೆ ಕಾಣುತ್ತಿದೆ. ಈ ಅಂಕಣವನ್ನೇ ಇದಕ್ಕೆ ಮಾದರಿಯಾಗಿ ಪರಿಗಣಿಸಬಹುದು. ಪ್ರತ್ಯಯಗಳಿರುವ ಪದಗಳನ್ನು ಹೀಗೆ ಬಿಡಿಸಿ ಬರೆಯುವುದಿಲ್ಲ. ಬಿಡಿಸದೆ ಬರೆದರೆ ಅರ್ಥಗ್ರಹಿಕೆಗೆ ಅಡ್ಡಿಯಾಗುವುದು ಸಾಧ್ಯ ಎಂಬುದನ್ನು ತಿಳಿಯಲು ಎರಡು ನಿದರ್ಶನಗಳನ್ನು ಮುಂದೆ ನೀಡಿದೆ. ಲಕ್ಷ್ಮೀಶನ ಜೈಮಿನಿ ಭಾರತದ ಸಾಲು ತಾಯೆನಗೆತಾಯೆನಗೆಗೂಡಿನೋಡಿ. ಬೇಂದ್ರೆಯವರಿಂದ ಒಂದು ಸಾಲು: ಯಾರಾಗಹಾಡಿದರುಯಾರಾಗಕೇಳುವರು. ಸುಮ್ಮನೆ ಮೋಜಿಗಾಗಿ ಈ ನಿದರ್ಶನಗಳು.

## ವಿಧ್ಯಾರ್ಥಿ, ಸಧ್ಯ, ಹಾರ್ಧಿಕ

ಸಾಮಾನ್ಯವಾಗಿ ಕನ್ನಡ ಬರೆವಣಿಗೆಯಲ್ಲಿ ಕಾಣಸಿಗುವ ತಪ್ಪು ಕಾಗುಣಿತಕ್ಕೆ ಉಪಾಧ್ಯಾಯರು ಈ ಪದಗಳನ್ನು ಉದಾಹರಣೆಯಾಗಿ ನೀಡುವುದುಂಟು. ಈ ಎಲ್ಲ ಪದಗಳಲ್ಲೂ ಅಲ್ಪಪ್ರಾಣ 'ದ'ಕಾರದ ಬದಲು ಮಹಾಪ್ರಾಣ 'ಧ'ಕಾರವನ್ನು ಬಳಸಲಾಗಿದೆ.

ಹೀಗೆ ಬರೆಯುವುದು ಒಬ್ಬಿಬ್ಬರಲ್ಲಿ ಮಾತ್ರವಲ್ಲ, ಹಲವಾರು ಜನರಲ್ಲಿ ಕಂಡುಬರುತ್ತದೆ. ಇವುಗಳನ್ನು ಉಚ್ಚರಿಸುವ ಕ್ರಮದಲ್ಲಿ ಆಗುವ ದೋಷಗಳ ಮಾತನ್ನು ಸದ್ಯ ಒತ್ತಟ್ಟಿಗೆ ಇರಿಸೋಣ. ಏಕೆ ಈ ಬಗೆಯ ತಪ್ಪು ಸಂಭವಿಸುತ್ತಿವೆ. ಸಾಮಾನ್ಯವಾಗಿ ಪದ ಮಧ್ಯದಲ್ಲಿ 'ದ'ಕಾರವು ಇನ್ನೊಂದು ವ್ಯಂಜನದೊಡನೆ ಬರುವಾಗ ಈ ಬಗೆಯ ತಪ್ಪುಗಳು ಸಂಭವಿಸುವಂತೆ ಕಂಡುಬರುತ್ತಿದೆ. ಇದು ಹೆಚ್ಚಿನ ಶೋಧವನ್ನು ಬಯಸುವ ವಿಚಾರ, ಆದರೆ ಹೀಗೆ ಒಂದೇ ಬಗೆಯ ತಪ್ಪನ್ನು ಹಲವಾರು ಜನ ಮತ್ತೆ ಮತ್ತೆ ಮಾಡುತ್ತಿದ್ದರೆ ಅದಕ್ಕೆ ಅವರ ಭಾಷಾಬರವಣಿಗೆಯ ನಿಯಮಗಳ ತಿಳಿವಿನ ಕೊರತೆ ಕಾರಣವಾಗಿರಲಾರದು. ಕನ್ನಡ ಭಾಷೆಯಲ್ಲಿ 'ದ'ಕಾರದ ಉಚ್ಚಾರಣೆಯು ಮೇಲೆ ಹೇಳಿದ ಧ್ವನಿ ಪರಿಸರದಲ್ಲಿ 'ಧ'ಕಾರವಾಗಿ ಬದಲಾಗುತ್ತಿರುವುದೂ ಕಾರಣವಿರಬಹುದು.

**ಅಕ್ಷರಿಕೆ**

ಇದು ಈಚೆಗೆ ಪ್ರಯೋಗದಲ್ಲಿ ಕಂಡ ಪದ. ಪುಸ್ತಕವೊಂದನ್ನು ವಿಮರ್ಶಿಸುತ್ತಾ ಅದರಲ್ಲಿ ಹಲವು ಅಕ್ಷರಿಕೆಯ ದೋಷಗಳಿವೆ ಎಂದು ಬರೆದಿದ್ದರು. ಮುದ್ರಣ ದೋಷಗಳಿವೆ ಎಂಬುದು ವಿಮರ್ಶಕರ ಅರ್ಥವೆಂದು ತಿಳಿಯಬಹುದು. ಈಗ ಮುದ್ರಣವೆಂಬುದು ಕೊನೆಯ ಹಂತದ ಕೆಲಸ. ಅದಕ್ಕೆ ಮೊದಲ ಅಕ್ಷರ ಜೋಡಣೆ ಎಂಬುದು ಈಗ ಗಣಕಗಳಲ್ಲಿ ನಡೆಯುತ್ತದೆ. ಆ ಹಂತದಲ್ಲಿ ನಡೆಯುವ ಬರಹದ ದೋಷಗಳನ್ನು ಅಕ್ಷರಿಕೆಯ ದೋಷಗಳೆಂದು ಹೆಸರಿಸಲಾಗಿದೆ. ಮೂಲಹಸ್ತಪ್ರತಿಯಲ್ಲಿ ಇಲ್ಲದಿದ್ದರೂ ಗಣಕದಲ್ಲಿ ಸಂಯೋಜನೆಯಾಗುವಾಗ ಸಂಭವಿಸುವ ದೋಷಗಳಿವು. ಇಕೆ ಎಂಬ ಪ್ರತ್ಯಯವನ್ನು ಕನ್ನಡದಲ್ಲಿ ಕ್ರಿಯಾಪದ, ಗುಣವಾಚಕ ಮತ್ತು ನಾಮಪದಗಳಿಗೆ ಸೇರಿಸಿ ಹೊಸ ನಾಮಪದಗಳನ್ನು ಪಡೆಯುವ ನಿಯಮಗಳಿವೆ. ಇಸು ಪ್ರತ್ಯಯದಂತೆ ಇದೂ ಕೂಡ ಸಂಸ್ಕೃತ (ಕೆಲವೊಮ್ಮೆ ಇತರ ಭಾಷೆಯ)ಪದಗಳಿಗೂ ಸೇರುವುದುಂಟು. ಕೇಂದ್ರಿಕೆ, ವಾಹಿಕೆ, ಉತ್ತಮಿಕೆ, ಪ್ರೋಗ್ರಾಮಿಕೆ ಈಗಾಗಲೇ ಬಳಕೆಯಲ್ಲಿರುವ ಪದಗಳಾಗಿವೆ. ಅಕ್ಷರ ಪದದ ತದ್ಭವವಾದ ಅಕ್ಕರ ಪದದಿಂದ ಅರಿಕೆ ಎಂಬ ರೂಪವನ್ನು ಸಾಧಿಸಿ ಬಳಸಲಾಗಿದೆ. ಆದರೆ ಅದರ ಅರ್ಥ ಬೇರೆ. ಪಾಂಡಿತ್ಯ, ತಿಳುವಳಿಕೆ, ಅಕ್ಷರ ಜ್ಞಾನ ಎಂಬ ಅರ್ಥಗಳಿವೆ.

**ಹೆಂಗೆಳೆ/ಹೆಂಗಳೆ**

ಈ ಎರಡೂ ರೂಪಗಳು ಬರವಣಿಗೆಯಲ್ಲಿ ಕಾಣಸಿಗುತ್ತವೆ. ಮೊದಲನೆಯದು ಸಾಧು ರೂಪ. ಕೆಳೆ ಎಂದರೆ ಸ್ನೇಹ, ಆಪ್ತ ಎಂಬ ಅರ್ಥಗಳ ಜೊತೆಗೆ ನಾಮರೂಪದ ಬಳಕೆಯೂ ಇದೆ. ಗೆಳೆತನ, ಗೆಳೆಯ, ಗೆಳತಿ, ಕೆಳದಿ ಈ ಎಲ್ಲ ರೂಪಗಳೂ ಕೆಳೆಯಿಂದಲೇ ಸಾಧಿತ. ಕೆಳೆ ಪದದ ಮೊದಲಲ್ಲಿ ಹೆಣ್ ಸೇರಿದಾಗ ಸಾಮಾನ್ಯ ಸಂಧಿ ನಿಯಮಗಳಿಗೆ ಅನುಗುಣವಾಗಿ ಹೆಂಗೆಳೆ ರೂಪ ಸಿದ್ಧವಾಗುತ್ತದೆ. ಕುತೂಹಲಕ್ಕಾಗಿ ಗಮನಿಸಿ: ಕನ್ನಡದಲ್ಲಿ ಗಂಗೆಳೆ ರೂಪವಿಲ್ಲ. ಹೆಂಗಳೆ ಎಂಬ ರೂಪವನ್ನು ಹೀಗೆ ವಿವರಿಸುವುದು ಸಾಧ್ಯವಿಲ್ಲ. ಅತಿ ವ್ಯಾಖ್ಯಾನ ಮಾಡಿ ಪೆಣ್+ಕಳೆ=ಪೆಂಗಳೆ ಎನ್ನಬಹುದು. ಹೆಣ್ಣು ಕಳೆ ಉಳ್ಳ ವ್ಯಕ್ತಿ ಪೆಂಗಳೆ ಎಂದರೆ ಅದು ಅಪಾರ್ಥಗಳಿಗೆ ಅವಕಾಶ ಮಾಡಿಕೊಡಬಹುದು.

**ಒಗ್ಗದಿಕೆ**

ಸಾಮಾನ್ಯವಾಗಿ ವೈದ್ಯಕೀಯ ಬರಹಗಳಲ್ಲಿ ಕಂಡು ಬರುವ ಪದವಿದು. ಕೆಲವು ವೈದ್ಯರು ಅಲರ್ಜಿ ಎಂಬ ಪದಕ್ಕೆ ಬದಲಾಗಿ ಈ ಪದವನ್ನು ಬಳಸುತ್ತಾರೆ. ಆದರೂ ಇದಕ್ಕೆ ಹೆಚ್ಚಿನ ಬಳಕೆ ಇರುವಂತಿಲ್ಲ. ಈ ಪದದ ಹಿಂದಿನ ರಾಚನಿಕ ನಿಯಮವನ್ನು ಕೊಂಚ ಅರಿಯುವುದು ಅಗತ್ಯ. ಒಗ್ಗು ಎಂಬ ಕ್ರಿಯಾಧಾತುವಿನ ನಿಷೇಧ ರೂಪ ಒಗ್ಗದ ಎಂದಾಗುತ್ತದೆ. ಇದಕ್ಕೆ ನಾಮಸಾಧಕ ಪ್ರತ್ಯಯವಾದ –ಇಕೆಯನ್ನು ಸೇರಿಸಿ ಒಗ್ಗದಿಕೆ ಎಂಬ ರೂಪವನ್ನು ಪಡೆಯಲಾಗಿದೆ. ಕನ್ನಡದಲ್ಲಿ ಈಗ ಬಳಕೆಯಲ್ಲಿರುವ ಒಂದು ನಿಯಮ ಹೀಗಿದೆ. ಇಕೆ ಪ್ರತ್ಯಯವನ್ನು ನೇರವಾಗಿ ಧಾತುವಿಗೆ ಹತ್ತಿಸಿ ನಾಮಪದವನ್ನು ಪಡೆಯುವ ಸಾಧ್ಯತೆಯನ್ನು ಈಗ ಕನ್ನಡ ಬಳಸುತ್ತಿಲ್ಲ. ಹೇಳಿಕೆ, ತೋರಿಕೆ, ಕೋರಿಕೆ ಇತ್ಯಾದಿ ಪದಗಳ ಮಾದರಿ ಕನ್ನಡದಲ್ಲಿ ಕಡಿಮೆ. ಆದರೆ ಕ್ರಿಯಾಪದದ ಅಭೂತಕಾಲದ ಅವ್ಯಯ ರೂಪಕ್ಕೆ (ಹೇಳುವ, ಕೇಳುವ, ನೋಡುವ, ಮಾಡುವ, ತಿನ್ನುವ ಮುಂತಾದವು) ಇಕೆ ಸೇರಿಸಿ ನಾಮಪದವನ್ನು ಪಡೆಯುವ ಕ್ರಮಕ್ಕೆ ವಿನಾಯಿತಿಗಳೇ ಇಲ್ಲ. ಎಲ್ಲ ಕ್ರಿಯಾಪದಗಳಿಗೂ ಇದು ಅನ್ವಯವಾಗುತ್ತದೆ. ಹೇಳುವ, ಕೇಳುವ, ನೋಡುವ, ತಿನ್ನುವ ಮುಂತಾದ ರೂಪಗಳ ನಿಷೇಧ ರೂಪಗಳಿಗೂ ಇಕೆ ನಿಯತವಾಗಿ ಹತ್ತುತ್ತದೆ. ಹೇಳದಿರುವಿಕೆ, ಕೇಳದಿರುವಿಕೆ, ನೋಡದಿರುವಿಕೆ ಮುಂತಾದ ರೂಪಗಳು ವ್ಯಾಪಕವಾಗಿ ಬಳಕೆಯಲ್ಲಿವೆ. ಹಾಗಾಗಿ ಒಗ್ಗದಿರುವಿಕೆ ಎಂಬುದು ಸದ್ಯ ಸಾಧುವಾದ ರೂಪವಾಗಿದೆ. ಒಗ್ಗದಿಕೆ ಅಸಹಜವಲ್ಲ, ಆದರೆ ಅದು ರೂಪಗೊಂಡಿರುವ ನಿಯಮ ಸದ್ಯ ಕನ್ನಡದಲ್ಲಿ ಬಳಕೆಯಲ್ಲಿ ಇಲ್ಲ.

**ಸಾಧಾರಣತೆ**

ಈ ಪದ ಈಚೆಗೆ ಬಳಕೆಯಾದುದು ಗಮನಕ್ಕೆ ಬಂತು. ಇದನ್ನು ಬಳಸಿದವರೇ ಇಂಗ್ಲಿಶಿನ ಮಿಡಿಯೋಕ್ರಸಿಗೆ ಸಮಾನವಾಗಿ ಬಳಸಿರುವುದಾಗಿ ಹೇಳಿದ್ದಾರೆ. ಇದು ಆ ಇಂಗ್ಲಿಶ್ ಪದಕ್ಕೆ ಸರಿಯಾದ ಸಂವಾದಿ ಪದವೋ ಅಲ್ಲವೋ ಎಂಬುದು ಈಗ ನನ್ನ ಆಸಕ್ತಿಯಲ್ಲ. ಸಂಸ್ಕೃತದಿಂದ ಬಂದಿರುವ ಸಾಧಾರಣ ಎಂಬ, ಗುಣವಾಚಕಗಳನ್ನು ಕನ್ನಡದಲ್ಲಿ ಹೇಗೆ ಬಳಸಲಾಗುತ್ತಿದೆ ಎಂಬುದನ್ನು ಗಮನಿಸೋಣ. ಎಲ್ಲ ಕಡೆಗೂ ಅನ್ವಯಿಸುವ ಎಂಬ ಅರ್ಥ ಇದಕ್ಕೆ ಇದೆಯಾದರೂ ಹೆಚ್ಚಾಗಿ ಈ ಪದವನ್ನು ಹೆಚ್ಚೂ ಅಲ್ಲದ ಕಡಿಮೆಯೂ ಅಲ್ಲದ ಎಂಬ ಅರ್ಥದಲ್ಲೇ ಬಳಸುತ್ತೇವೆ. ಸಾಧಾರಣ ಮಳೆ, ಸಾಧಾರಣ ಬೆಲೆ ಏರಿಕೆ, ಸಾಧಾರಣ ಮತದಾನ ಇತ್ಯಾದಿ ಪ್ರಯೋಗಗಳನ್ನು ಗಮನಿಸಿ. ಈ ಅರ್ಥವುಳ್ಳ ಪದಕ್ಕೆ–ತೆ ಎಂಬ, ಕನ್ನಡದಲ್ಲಿ ಬಳಕೆಯಲ್ಲಿರುವ ಪ್ರತ್ಯಯವನ್ನು ಸೇರಿಸಿ ಸಾಧಾರಣತೆ ಎಂಬ ರೂಪವನ್ನು ಪಡೆಯಲಾಗಿದೆ. ಸಂಸ್ಕೃತ ಪದಗಳಲ್ಲಿ –ತಾ ಎಂದು ಕೊನೆಗೊಳ್ಳುವ ಪದಗಳು ಕನ್ನಡಕ್ಕೆ ಬಂದಾಗ ತೆ ಎಂದು ಬದಲಾಗುತ್ತವೆ. ಪ್ರಸನ್ನತಾ ಎಂಬುದು ಪ್ರಸನ್ನತೆ ಎಂದಾಗುತ್ತದೆ. ಆದರೆ ಸಾಧಾರಣತಾ ಎಂಬ ಪ್ರಯೋಗ ಕನ್ನಡದಲ್ಲಿ ಇಲ್ಲ. ಇಲ್ಲಿರುವುದು ಕನ್ನಡದ–ತೆ ಪ್ರತ್ಯಯವೇ ಆಗಿದೆ. ಕೊರತೆ, ಮಿಗುತೆ,ಅಡಕತೆ ಮುಂತಾದ ಪದಗಳನ್ನು ಗಮನಿಸಿ. ಹೀಗೆ ಸಂಸ್ಕೃತ ಪದಗಳಿಗೆ ಕನ್ನಡದ –ತೆ ಪ್ರತ್ಯಯ ಹತ್ತಿರುವ ಇನ್ನಿತರ ಪ್ರಯೋಗಗಳೆಂದರೆ ಪ್ರಾಯೋಜಕತೆ, ಭಾವಾಂಧತೆ, ಪ್ರಸಿದ್ಧತೆ, ಸಂಗೀತತೆ ಇತ್ಯಾದಿ. ಇವೆಲ್ಲ ಕನ್ನಡದಲ್ಲಿ ಬಳಕೆಯಾಗಿವೆ.

**ಪುನರೊತ್ತಾಯ**

ಪತ್ರಿಕೆಯೊಂದರ ವರದಿಯಲ್ಲಿ ತಲೆಬರೆಹವಾಗಿ ಕಾಣಿಸಿಕೊಂಡ ಪ್ರಯೋಗವಿದು. ಒತ್ತಾಯ ಎಂಬ ಕನ್ನಡದ ಪದಕ್ಕೆ ಪುನರ್ ಎಂಬ ಪೂರ್ವ ಪ್ರತ್ಯಯವನ್ನು ಸೇರಿಸಿ ಈ ರಚನೆಯನ್ನು ಪಡೆಯಲಾಗಿದೆ. ಕನ್ನಡ ಮತ್ತು ಸಂಸ್ಕೃತ ಪದ ಪ್ರತ್ಯಯಗಳ ನಡುವೆ ಆಗುತ್ತಿರುವ ಈ ಬಗೆಯ ಹೊಸ ಪದ ನಿರ್ಮಾಣದ ಬಗೆಗೆ ಈಗಾಗಲೇ ಹಲವು ನಿದರ್ಶನಗಳನ್ನು ನೀಡಲಾಗಿದೆ. ಈ ಬಗೆಯ ಸಂಧಿಗಳಲ್ಲಿ ಎರಡನೆಯ ಪದ ಯಾವ ಭಾಷೆಗೆ ಸೇರಿರುತ್ತದೋ ಆ ಭಾಷೆಯ ಸಂಧಿ ನಿಯಮಗಳೇ ಬಳಕೆಯಾಗುತ್ತವೆ. ಇದೊಂದು ನಿಯಮ.

**ಭೀತಿವಾದಿ**

ಉಗ್ರವಾದಿ, ಆತಂಕವಾದಿ, ಭಯೋತ್ಪಾದಕ ಮುಂತಾದ ಪದಗಳ ಸಾಲಿಗೆ ಇದೊಂದು ಹೊಸ ಸೇರ್ಪಡೆ. ಭೀತಿಯನ್ನು ಉಂಟುಮಾಡುವ ವ್ಯಕ್ತಿ ಭೀತಿವಾದಿ ಎಂದು ವಿವರಣೆ ನೀಡಬಹುದು. ಆದರೆ ಇದರಲ್ಲಿ ಎರಡು ಪ್ರಶ್ನೆಗಳು ಅಡಕವಾಗಿವೆ. ಒಂದು ರಚನೆ ಹೆಚ್ಚು ಬಳಕೆಯಲ್ಲಿ ಇರುವಾಗ ಅದಕ್ಕೆ ಬದಲಾಗಿ ಹೊಸತೊಂದು ರಚನೆಯನ್ನು ರೂಪಿಸುವುದು ಅಗತ್ಯವೇ ಎಂಬುದು ಒಂದು ಪ್ರಶ್ನೆ, ವಾದ, ವಾದಿ ಎಂಬ ವಾರ್ಗಿಕಗಳನ್ನು ಬಳಸಿ ಹತ್ತು ಹಲವು ಪದಗಳನ್ನು ರೂಪಿಸುವ ಕ್ರಮವೊಂದು ಕನ್ನಡದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿದೆ. ಆದರೆ, ಇದು ಯಾವುದೇ ತಾತ್ವಿಕ ಪರಿಪ್ರೇಕ್ಷ್ಯಕ್ಕೆ ಸಂಬಂಧಿಸಿದ ಪರಿಭಾಷೆಯಲ್ಲ. ಹಾಗಾಗಿ ಅತಿಭಾರದ ರಚನೆಯಂತೆ ತೋರುತ್ತದೆ. ಉಗ್ರಗಾಮಿ ಎಂಬುದು ಹೆಚ್ಚು ಸೂಕ್ತ ಪದ. ಆತಂಕವಾದಿ, ಭೀತಿವಾದ ಕೇವಲ ಪರ್ಯಾಯ ಪದಗಳು.

**ಲೇಖನ ಚಿಹ್ನೆಗಳು**

ಕಳೆದ ಬರೆವಣಿಗೆಯಲ್ಲಿ ಪದಗಳ ನಡುವೆ ತೆರಪನ್ನು ಬಿಟ್ಟು ಬರೆಯುವ ಬಗೆಯನ್ನು ಕುರಿತಂತೆ ಕೆಲವು ಮಾತುಗಳನ್ನು ಬರೆದಿದ್ದೇನೆ. ಹೀಗೆಯೇ ಬರೆಯುವಾಗ ಲೇಖನ ಚಿಹ್ನೆಗಳನ್ನು ಬಳಸುವ ಬಗೆಯಲ್ಲೂ ಕೆಲವು ಅಸ್ಪಷ್ಟತೆಗಳಿವೆ; ಗೊಂದಲಗಳಿವೆ. ವಾಕ್ಯದ ಕೊನೆಯಲ್ಲಿ ಪೂರ್ಣವಿರಾಮ ಚಿಹ್ನೆಯನ್ನು ಬಳಸುವಲ್ಲಿ ಮಾತ್ರ ಖಚಿತತೆ ಇದೆ. ಉಳಿದೆಲ್ಲ ಚಿಹ್ನೆಗಳ ಬಳಕೆಯಲ್ಲೂ ಒಂದಲ್ಲ ಒಂದು ಬಗೆಯ ಗೊಂದಲವಿದೆ. ಮುಖ್ಯವಾಗಿ ಅಲ್ಪ ವಿರಾಮದ ಬಳಕೆಯನ್ನು ಕುರಿತು ಈಗ ಕೆಲವು ಮಾತುಗಳನ್ನು ಗಮನಿಸಬಹುದು. ನಮಗೆ ಲೇಖನ ಚಿಹ್ನೆಗಳು ಇಂಗ್ಲಿಶಿನಿಂದ ಬಂದಿವೆ. ಅವುಗಳನ್ನು ಬಳಸುವ ನಾವು ನಮ್ಮ ಭಾಷೆಯ ಜಾಯಮಾನವನ್ನು ಗಮನಿಸಬೇಕು. ಓದಿನಲ್ಲಿ ವಾಕ್ಯಭಾಗಗಳ ಜೋಡಣೆ ಮತ್ತು ತೆರಪುಗಳ ಮೂಲಕವೇ ಅರ್ಥಪ್ರತೀತಿಗೆ ಅಡ್ಡಿಗಳು ಇರದಿದ್ದರೆ ಅಲ್ಪವಿರಾಮಗಳನ್ನು ವಾಕ್ಯಗಳಲ್ಲಿ ಬಳಸುವುದು ಅಗತ್ಯವಿಲ್ಲ. ಕನ್ನಡ ಬರೆವಣಿಗೆಯಲ್ಲಿ ಅಲ್ಪ ವಿರಾಮಗಳ ಬಳಕೆಗೆ ಮಾನ್ಯತೆಯುಳ್ಳ ಮತ್ತು ಪ್ರಮಾಣೀಕೃತವಾದ ಯಾವುದೇ ನಿಯಮವನ್ನು ರೂಪಿಸಲು ಸಾಧ್ಯವಿಲ್ಲ. ಹಾಗಾಗಿ ಸಾಧ್ಯವಿದ್ದಷ್ಟು ಅದರ ಬಳಕೆಯನ್ನು ಕಡಿಮೆ ಮಾಡುವುದು ಸೂಕ್ತ. ಇಂಗ್ಲಿಶಿನಲ್ಲೂ ಇಂಥ ಲೇಖನ ಚಿಹ್ನೆಗಳ ಬಳಕೆ ಕಡಿಮೆಯಾಗುತ್ತಿದೆ ಎನ್ನುವುದನ್ನು ಗಮನಿಸಬಹುದು.

**ಸರ್ಕಾರ/ಸರಕಾರ**

ಈ ಎರಡು ರೂಪಗಳಲ್ಲಿ ಯಾವುದು ಸರಿ ಎನ್ನುವ ಪ್ರಶ್ನೆಯನ್ನು ಓದುಗರೊಬ್ಬರು ಕೇಳಿದ್ದಾರೆ. ಸರ್ಕಾರ್ ಎಂಬುದು ಮೂಲಪದ (ಪರ್ಶಿಯನ್-ಅರಾಬಿಕ್) ಆಗಿರುವುದರಿಂದ ಸರಕಾರ ಎಂದೇ ಬರೆಯುವುದು ಸರಿಯಲ್ಲವೇ ಎಂಬ ಸಲಹೆಯನ್ನೂ ಮುಂದಿರಿಸಿದ್ದಾರೆ. ಈ ಸಲಹೆ ಸಾಧುವಾಗಿದೆ. ಆದರೆ ಸಮಸ್ಯೆ ಇಷ್ಟು ಸರಳವಾಗಿಲ್ಲ. ಇಂತಹ ಇನ್ನೂ ಹಲವು ಪ್ರಯೋಗಗಳನ್ನು ಗಮನಿಸೋಣ. ಸರ್ದಾರ/ಸರದಾರ, ಸರ್ಹದ್ದು/ಸರಹದ್ದು, ಸರ್ಪಂಚ/ಸರಪಂಚ, ದರ್ಖಾಸ್ತು/ದರಖಾಸ್ತು, ಇಸ್ಸಾಲು/ ಇರಸಾಲು, ತರ್ಕಾರಿ/ತರಕಾರಿ ಇವೇ ಮುಂತಾದವು. ಈ ಜೋಡಿಗಳಲ್ಲಿ ಎರಡೂ ರೂಪಗಳಿಗೆ ಸಮಾನವಾದ ಬಳಕೆ ಇದೆಯೆಂದು ನಾನು ಹೇಳುತ್ತಿಲ್ಲ. ಆದರೆ ಎರಡೂ ರೂಪಗಳನ್ನು ಬಳಕೆಯಲ್ಲಿ ಆಗಾಗ ಕಾಣುತ್ತೇವೆ. ಸಾಮಾನ್ಯವಾಗಿ ಎರಡನೆಯ ರೂಪ ಬರವಣಿಗೆಯಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತದೆ. ಈ ಕ್ರಮಾನುಸಾರ ಸರಕಾರ ಎಂಬುದೇ ಸರಿಯಾಗುತ್ತದೆ. ಒತ್ತಕ್ಷರಗಳ ನಡುವೆ ಸ್ವರವೊಂದನ್ನು ಸೇರಿಸುವ ಕ್ರಮ ನಡುಗನ್ನಡದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿತ್ತು. ಆತುಮ, ಭಕುತ, ಶಕುತಿ, ರಕುತ, ಮುಕುತಿ, ಮೂರುತಿ ಮುಂತಾದ ರೂಪಗಳು ಬರವಣಿಗೆಯಲ್ಲಿ ಮಾನ್ಯವಾಗಿದ್ದವು. ಕನ್ನಡದಲ್ಲಿ ಈ ಬಗೆಯ ಎರಡೆರಡು ರೂಪಗಳ ಬಳಕೆಗೆ ದೊಡ್ಡ ಚರಿತ್ರೆಯೇ ಇದೆ ಎಂಬುದನ್ನು ಗುರುತಿಸಲು ಈ ಮೇಲಿನ ಉದಾಹರಣೆಯನ್ನು ನೀಡಿದ್ದೇನೆ. ಒಟ್ಟಾರೆ ಸರಕಾರ ಮತ್ತು ಸರ್ಕಾರ ಎಂಬ ಎರಡೂ ರೂಪಗಳನ್ನು ಬರೆವಣಿಗೆಯಲ್ಲಿ ಬಳಸಬಹುದು. ಆದರೆ ಉಳಿದೆಲ್ಲ ಇಂತಹ ರೂಪಗಳು ಬರೆವಣಿಗೆಯಲ್ಲಿ ಬಳಕೆಯಾಗುತ್ತಿರುವ ಕ್ರಮವನ್ನು ಅನುಸರಿಸುವುದಾದರೆ ಸರಕಾರ ಎನ್ನುವುದು ಹೆಚ್ಚು ಸೂಕ್ತ.

**ಹಿಂಬಾಕಿ**

'ಸರಕಾರಿ ನೌಕರರಿಗೆ ತುಟ್ಟಿಭತ್ಯೆಯ ಹಿಂಬಾಕಿಯನ್ನು ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ನೀಡಲಾಗುತ್ತದೆ' ಎನ್ನುವ ಹೇಳಿಕೆ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹಿಂಬಾಕಿ ಎಂಬ ಪದವನ್ನು ಅರಿಯರ್ಸ್ ಎಂಬ ಇಂಗ್ಲಿಶ್ ಪದಕ್ಕೆ ಸಂವಾದಿಯಾಗಿ ಬಳಸಿದಂತಿದೆ. ಬಾಕಿ ಎಂದರೆ ಸಾಲದೆ? ಹಿಂಬಾಕಿ ಎನ್ನುವ ಪದದಿಂದ ಬರುವ ವಿಶೇಷ ಅರ್ಥವೇನು? ಹಿಂದಿನ ಎನ್ನುವ ರೂಪವನ್ನು ಹಿನ್/ಹಿಮ್ ಎಂದು ಸಂಕ್ಷಿಪ್ತಗೊಳಿಸಿ ಬಳಸುವುದು ಕನ್ನಡದಲ್ಲಿ ಹಿಂದಿನಿಂದಲೂ ಇರುವ ಕ್ರಮವೇ ಆಗಿದೆ. ಹಿಂಬಾಗಿಲು, ಹಿಂಗಾರು, ಹಿಮ್ಮಡಿ, ಹಿಮ್ಮೆಟ್ಟು ಮುಂತಾದ ಪ್ರಯೋಗಗಳು ನಮಗೆ ಪರಿಚಿತವೇ ಆಗಿವೆ. ಹಿಂಬಾಕಿ ಹೊಸ ಪ್ರಯೋಗ. ಎರಡು ಬೇರೆ ಬೇರೆ ಬಾಕಿಗಳಿದ್ದಾಗ ಮಾತ್ರ ಹಿಂಬಾಕಿ ಎಂಬ ಪದಕ್ಕೆ ಅರ್ಥ ಒದಗುತ್ತದೆ. ಇಲ್ಲದಿದ್ದಲ್ಲಿ ಬಾಕಿ ಎನ್ನುವುದೇ ಸರಿ.

**ಹಿಂತೆಗೆತ**

'ಬಂಡವಾಳ ಹಿಂತೆಗೆತಕ್ಕೆ ಅಡ್ಡಿ' ಎನ್ನುವ ವಾಕ್ಯದಲ್ಲಿ ಹಿಂತೆಗೆತ ಎನ್ನುವ ಪದದ ಅರ್ಥ ಸರಳವಾಗಿದೆ. ಹಿಂದಕ್ಕೆ ತೆಗೆದುಕೊಳ್ಳುವುದು ಎಂದು ಅದರ ಅರ್ಥ ತಾನೆ?

ಕನ್ನಡದಲ್ಲಿ ಹಿಂದೆಗೆ ಎಂಬ ಪದವೊಂದಿದೆ. 'ಜವಾಬ್ದಾರಿಯನ್ನು ಹೊರಲು ಎಲ್ಲರೂ ಹಿಂದೆಗೆಯುತ್ತಾರೆ' ಎನ್ನುವ ವಾಕ್ಯವನ್ನು ನೋಡಿ. ಹಿಂದೆಗೆ ಎನ್ನುವ ಪದದಲ್ಲಿ ಹಿನ್ ಎಂಬ ಪದಭಾಗ ಮತ್ತು ತೆಗೆ ಎಂಬ ಕ್ರಿಯಾಪದಗಳಿವೆ. ಹೀಗಾಗಿ ಹಿಂದೆಗೆತ ಎಂಬ ರೂಪವನ್ನು ನಾವು ನಿರೀಕ್ಷಿಸಬಹುದೇ ಹೊರತು ಹಿಂತೆಗೆತ ಎನ್ನುವುದನ್ನಲ್ಲ. ಇರಲಿ. ಹಿಂತೆಗೆತ ಎನ್ನುವ ಪ್ರಯೋಗದಲ್ಲಿ ತಪ್ಪೇನೂ ಇಲ್ಲ. ಆದರೆ ತೆಗೆತ ಎನ್ನುವ ಪ್ರಯೋಗವೇ ಕನ್ನಡದಲ್ಲಿ ಇದ್ದಂತಿಲ್ಲ. ಹಾಗಾಗಿ ಹಿಂತೆಗೆ ಎಂಬ ರೂಪದಿಂದಲೇ ಹಿಂತೆಗೆತ ಎನ್ನುವ ರಚನೆಯನ್ನು ಪಡೆಯಬೇಕಾಗಿದೆ.

**ಶೈಲೀಕೃತ**

ತುಂಬಾ ಆಕರ್ಷಕವಾಗಿ ಆಡುವ ಕ್ರಿಕೆಟ್ ಆಟಗಾರರೊಬ್ಬರನ್ನು ಶೈಲೀಕೃತ ಬ್ಯಾಟ್ಸಮನ್ ಎನ್ನಬಹುದೆ? ಹಾಗೆ ಒಂದು ಪತ್ರಿಕೆಯಲ್ಲಿ ಬರೆಯಲಾಗಿದೆ. ಶೈಲೀಕೃತ ಎಂಬುದಕ್ಕೆ ಶೈಲಿಯುಳ್ಳ ಎಂಬ ಅರ್ಥವಿರುವಂತೆ ಯಾವುದೋ ಒಂದು ಶೈಲಿಗೆ ಕಟ್ಟುಬಿದ್ದ ಎಂಬ ಅರ್ಥವೂ ಇದೆ. ಎರಡನೆಯ ಅರ್ಥದಲ್ಲಿ ಶೈಲೀಕೃತ ಎನ್ನುವುದು ಗುಣಕ್ಕಿಂತ ಕೊರತೆಯೊಂದನ್ನು ಹೇಳಿದಂತೆ ಆಗುತ್ತದೆ. ಅಂದರೆ ಆ ಆಟಗಾರ ತನ್ನ ಆಟದ ಒಂದು ಶೈಲಿಗೆ ಕಟ್ಟುಬಿದ್ದಿರುವುದನ್ನು ಮತ್ತು ಅದರಿಂದ ಹೊರಬರಲಾಗದೇ ಇರುವುದನ್ನು ಸೂಚಿಸಿದಂತಾಯ್ತು. ಇಂಗ್ಲಿಶ್‌ನ ಸ್ಟೈಲೈಜ್ಡ್ ಮತ್ತು ಸ್ಟೈಲಿಶ್ ಎಂಬ ಎರಡು ಪದಗಳಿಗೆ ಬೇರೆ ಬೇರೆ ಅರ್ಥಗಳಿವೆ. ಇವೆರಡು ಅರ್ಥಗಳನ್ನು ಶೈಲೀಕೃತ ಎಂಬ ಪದದಿಂದ ಪಡೆಯುವುದು ಸಾಧ್ಯವಿಲ್ಲ. ಸ್ಟೈಲಿಶ್ ಎಂಬುದಕ್ಕೆ ಆಕರ್ಷಕ ಎನ್ನುವ ಪದ ಸರಿಹೋಗುತ್ತದೆ. ಹೆಚ್ಚೆಂದರೆ ಆಕರ್ಷಕ ಶೈಲಿಯ ಎಂದು ಬೇಕಾದರೆ ವಿವರಿಸಬಹುದು.

**ಇರಿಸು/ಇಡು**

ಈ ಎರಡೂ ಕ್ರಿಯಾರೂಪಗಳು ಬಹುಮಟ್ಟಿಗೆ ಸಮಾನಾರ್ಥಕಗಳಂತೆ ಬಳಕೆಯಾಗುತ್ತವೆ. ಇಡು ಎಂಬುದಕ್ಕೆ ಒಂದು ಹೆಚ್ಚಿನ ಸೌಲಭ್ಯವಿದೆ. ಇದಕ್ಕೆ ಇಸು ಸೇರಿಸಿ ಪ್ರೇರಣಾರ್ಥಕ ರೂಪವನ್ನು ಪಡೆಯಬಹುದು. 'ಕೊಠಡಿಯನ್ನು ಶುಚಿಯಾಗಿ ಇಟ್ಟಿದ್ದೇನೆ' ಮತ್ತು 'ಕೊಠಡಿಯನ್ನು ಶುಚಿಯಾಗಿ ಇಡಿಸಿದ್ದೇನೆ' ಎಂಬ ಎರಡು ವಾಕ್ಯಗಳಲ್ಲಿ ಅರ್ಥವ್ಯತ್ಯಾಸವಿದೆ. ಈ ವ್ಯತ್ಯಾಸವನ್ನು ಹೊಂದಿರುವ ಎರಡು ವಾಕ್ಯಗಳನ್ನು ಇರಿಸು ಕ್ರಿಯಾರೂಪವನ್ನು ಬಳಸಿ ರಚಿಸುವುದು ಸುಲಭವಲ್ಲ. ಹೀಗಾಗಿ ಇಡು ರೂಪಕ್ಕೆ ಹೆಚ್ಚಿನ ಬಳಕೆ ಸಾಧ್ಯ. ಇರಿಸು ಎಂಬುದು ಕ್ರಮೇಣ ಬಳಕೆಯಿಂದ ಹೊರ ಹೋಗುತ್ತದೆ. ಇವೆರಡರ ಜೊತೆಗೆ ಕೆಲವು ಉಪಭಾಷೆಗಳಲ್ಲಿ ಇಕ್ಕು ಮತ್ತು ಮಡಗು ಎಂಬ ರೂಪಗಳೂ ಇವೆ ಎನ್ನುವುದನ್ನು ಮರೆಯಬಾರದು.

**ಪದಗಳ ನಡುವೆ ಅಂತರ-3**

ಬರೆಯುವಾಗ ಅಥವಾ ಮುದ್ರಿಸುವಾಗ ಪದಗಳ ನಡುವೆ ಅಂತರವನ್ನು ಇರಿಸುವುದನ್ನು ಕುರಿತು ಈಗಾಗಲೇ ಕೆಲವು ಸಂಗತಿಗಳನ್ನು ನಾವು ಈ ಅಂಕಣದಲ್ಲಿ

ಚರ್ಚಿಸಿದ್ದೇವೆ. ಮೂರು ಅಥವಾ ಅದಕ್ಕಿಂತ ಹೆಚ್ಚು ನಾಮಪದಗಳು ಒಟ್ಟಾಗಿ ಬಂದಾಗ ಅವುಗಳ ನಡುವೆ ಹೇಗೆ ತೆರಪನ್ನು ನೀಡಬೇಕು ಎಂಬುದು ಒಂದು ಮುಖ್ಯ ಪ್ರಶ್ನೆಯಾಗಿದೆ. ಸಾಮಾನ್ಯವಾಗಿ ಇಂತಹ ರಚನೆಗಳಲ್ಲಿ ಪ್ರತಿಯೊಂದು ಪದದ ನಡುವೆಯೂ ಸಮಾನ ಅಂತರವಿರಿಸಿ ಬರೆಯುವ ಕ್ರಮ ರೂಢಿಯಲ್ಲಿದೆ. ಇದು ಮುದ್ರಣದಲ್ಲೂ ಕಂಡುಬರುವ ಲಕ್ಷಣವಾಗಿದೆ. **ಕನ್ನಡ ಸಾಹಿತ್ಯ ಪರಿಷತ್ತು, ರಾಜ್ಯ ಸಚಿವ ಸಂಪುಟ, ಬೆಂಗಳೂರು ನಗರ ಪಾಲಿಕೆ, ಮಲೆನಾಡು ಅಭಿವೃದ್ಧಿ ಮಂಡಳಿ** ಇತ್ಯಾದಿ ಉದಾಹರಣೆಗಳನ್ನು ಗಮನಿಸಿ. ಹೀಗೆ ಬರೆಯುವುದರಿಂದ ಯಾವ ತೊಂದರೆಯೂ ಇಲ್ಲವಾದರೂ ಕೆಲವೊಮ್ಮೆ ಅರ್ಥದ ಅಸ್ಪಷ್ಟತೆ ಉಂಟಾಗಬಹುದು. ಆದರೆ ಈಗಿರುವಂತೆ ಇದಕ್ಕೆ ಪರಿಹಾರವಿಲ್ಲ. ಪ್ರಸಂಗವನ್ನು ಅನುಸರಿಸಿ ಅರ್ಥದ ಅಸ್ಪಷ್ಟತೆಯನ್ನು ನಿವಾರಿಸಿಕೊಳ್ಳಬೇಕಾಗುತ್ತದೆ. ಈ ಮೂರು ಪದಗಳು ಎರಡು ಬೇರೆ ಬೇರೆ ಸಾಲುಗಳಲ್ಲಿ ಹರಡಿ ಹೋಗಿದ್ದರೆ ಮೊದಲ ಸಾಲಿನ ಕೊನೆಯ ಪದ ಮತ್ತು ಎರಡನೆಯ ಸಾಲಿನ ಮೊದಲ ಪದಗಳ ನಡುವೆ ಅಂತರ ಇದೆಯೋ ಇಲ್ಲವೋ ಎಂಬುದು ಓದುವ ನಮಗೆ ಮುಖ್ಯ ಸಮಸ್ಯೆ ಅಲ್ಲ. ಆದರೆ ಗಣಕದಲ್ಲಿ ಕಾರ್ಯವಾಹಿಗಳನ್ನು ಬರೆಯುವವರಿಗೆ ಇದೊಂದು ಸಮಸ್ಯೆಯೇ ಸರಿ. ಅದನ್ನು ಅವರು ಸಮರ್ಥವಾಗಿ ಎದುರಿಸಬಲ್ಲರೆಂದು ತೋರುತ್ತದೆ. ಆದರೆ ಅವರಿಗೆ ಭಾಷಿಕವಾಗಿ ಸೂಕ್ತ ವಿವರಣೆಯನ್ನು ನೀಡುವುದು ಅಗತ್ಯ.

**ಅರೆಲಿಂಗಿ**

ಇತ್ತೀಚೆಗೆ ಪತ್ರಿಕೆಯೊಂದರಲ್ಲಿ ಈ ಪದ ಪ್ರಯೋಗವನ್ನು ಕಂಡೆ. ಹೆಣ್ಣೂ ಅಲ್ಲದ, ಗಂಡೂ ಅಲ್ಲದ ವ್ಯಕ್ತಿಗಳನ್ನು ಈ ಹೆಸರಿನಿಂದ ಸೂಚಿಸಲಾಗಿತ್ತು. ಟ್ರಾನ್ಸ್‌ಸೆಕ್ಸುಯಲ್ ಆದವರನ್ನು ಅರೆಲಿಂಗಿ ಎಂದು ಕರೆಯುವುದು ಎಷ್ಟು ಸರಿ? ಈ ಪ್ರಯೋಗಕ್ಕೆ ಕಾರಣವನ್ನು ಹುಡುಕುವುದು ಕುತೂಹಲಕಾರಿ. ಎರಡು ವಿರುದ್ಧ ಸ್ಥಿತಿಗಳ ನಡುವಣ ಹಂತವನ್ನು ಕೆಲವೊಮ್ಮೆ ಹೀಗೆ ಅರೆ ಎಂಬ ಪದಭಾಗದಿಂದ ಸೂಚಿಸುವ ಪದ್ಧತಿ ಕನ್ನಡದಲ್ಲಿದೆ. ಉದಾ: ಅರೆನಿದ್ದೆ (ನಿದ್ದೆ ಎಚ್ಚರಗಳ ನಡುವಣ ಸ್ಥಿತಿ, ಅರೆಹುಚ್ಚು (ಪ್ರಜ್ಞೆ ಮತ್ತು ಹುಚ್ಚುಗಳ ನಡುವಣ ಹಂತ) ಹೀಗೆ ಇನ್ನೂ ಹಲವು ಪ್ರಯೋಗಗಳಿವೆ. ಅರೆಲಿಂಗಿ ಎಂದು ಕರೆಯಲಾಗುವ ವ್ಯಕ್ತಿಗಳನ್ನು ತೃತೀಯ ಲಿಂಗಿ ಅಥವಾ ಉಭಯಲಿಂಗಿ ಎಂದು ಕನ್ನಡದಲ್ಲಿ ಕರೆದಿರುವುದುಂಟು.

**ಮಿಂಚಂಚೆ**

ವಾಚಕರೊಬ್ಬರು ಈಚೆಗೆ ತಮ್ಮ ಪತ್ರದಲ್ಲಿ ಈ ಪದವನ್ನು ಬಳಸಿದ್ದಾರೆ. ಇದು ಇ-ಮೇಲ್ ಸಂವಾದಿಯಾಗಿ ಬಳಕೆಯಾಗಿದೆ. ಪ್ರಯೋಗ ಚೆನ್ನಾಗಿದೆ. ಮಿಂಚಿನ ವೇಗದಲ್ಲಿ ತಲುಪುವ ಅಂಚೆ ಎನ್ನುವ ಅರ್ಥ ಪ್ರತೀತವಾಗುವಂತಿದೆ. ಅಂಚೆ ಎಂಬುದು ಹಂಸದ ತದ್ಭವ. ಹಂಸಗಳನ್ನು ಸಂದೇಶವಾಹಕಗಳನ್ನಾಗಿ ಬಳಸುತ್ತಿದ್ದುದರ ಸೂಚಕವಾಗಿ ನಮ್ಮ ಇಂದಿನ ಟಪಾಲು ವ್ಯವಸ್ಥೆಗೂ ಅಂಚೆ ಎಂದೇ ಹೆಸರಾಗಿದೆ. ಮಿಂಚಂಚೆಯಲ್ಲಿ ಮಿಂಚೂ ಇಲ್ಲ; ಅಂಚೆಯೂ (ಅಂದರೆ ಭೌತಿಕ ಕಾಗದ) ಇಲ್ಲ. ಆದರೂ ಅದು ಮಿಂಚಂಚೆ.

**ಪ್ರಧಾನ್ಯತೆ**

ವ್ಯಾಕರಣದ ನಿಯಮಗಳ ಪ್ರಕಾರ ಈ ಪ್ರಯೋಗ ತಪ್ಪು. ಪ್ರಧಾನ ಎಂಬುದರ ಭಾವನಾಮ ಪ್ರಾಧಾನ್ಯ ಆಗುತ್ತದೆ ಅಥವಾ ಪ್ರಧಾನತೆ ಆಗಬಹುದು. ಕನ್ನಡದಲ್ಲಿ ಇನ್ನೂ ಕೆಲವು ಪ್ರಯೋಗಗಳನ್ನು ಗಮನಿಸಿ. ಸುಂದರ, ಸೌಂದರ್ಯ, ಉದಾರ, ಔದಾರ್ಯ, ಸ್ಥಿರ, ಸ್ಥೈರ್ಯ, ಹೀಗೆ. ಆದರೆ ಪ್ರಾಧಾನ್ಯತೆ, ಪ್ರಾಮುಖ್ಯತೆಯಂತಹ ಪ್ರಯೋಗಗಳಿಗೆ ಎಷ್ಟು ಹೆಚ್ಚಿನ ಬಳಕೆ ಇದೆಯೆಂದರೆ ಇವುಗಳನ್ನು ಬಳಕೆಯಿಂದ ಹೊರಹಾಕಲು ಯಾವ ಶಾಸನದಿಂದಲು ಸಾಧ್ಯವಿಲ್ಲವೇನೊ?

**ಪದಗಳ ನಡುವೆ ಗೆರೆ**

ಕೆಲವರು ಕನ್ನಡ ಪದಗಳನ್ನು ಬರೆಯುವಾಗ ಮುದ್ರಿಸುವಾಗ ಪದಗಳ ನಡುವೆ ಚಿಕ್ಕ ಅಡ್ಡಗೆರೆಯನ್ನು ಸೇರಿಸುವುದುಂಟು. ಸ್ವ–ಪ್ರೇರಣೆ, ಮೈ–ಮನ, ಪಿಡುಗು–ಪೀಡೆ ಇತ್ಯಾದಿ. ಇವೆಲ್ಲವೂ ಒಂದೇ ಪತ್ರಿಕೆಯ ಒಂದೇ ಸಂಚಿಕೆಯಿಂದ ಸುಮ್ಮನೆ ತೆಗೆದ ಪ್ರಯೋಗಗಳು. ಇಂಗ್ಲಿಶ್‌ನಲ್ಲಿ ಹೈಫನೇಟೆಡ್ ಪದಗಳೆಂಬ ಒಂದು ಗುಂಪಿದೆ. ಕನ್ನಡದಲ್ಲಿ ಆ ಬಗೆಯ ಪದಗಳಿಲ್ಲ. ಆದರೂ ಈ ರೀತಿ ಚಿಕ್ಕ ಅಡ್ಡಗೆರೆಗಳನ್ನು ಎಳೆಯ ಹೋಗುವುದು ಅಗತ್ಯವಿಲ್ಲ. ಮತ್ತೆ ಕೆಲವರು ಪದಗಳ ಒಳಗೆ ಇಂತಹ ಅಡ್ಡಗೆರೆಗಳನ್ನು ಎಳೆಯುವುದುಂಟು. ಸಾಮಾನ್ಯವಾಗಿ ಒಂದು ಪದದ ಕೆಲವು ಅಕ್ಷರಗಳು ಒಂದು ಸಾಲಿನ ಕೊನೆಯಲ್ಲಿ ಬಂದು ಉಳಿದ ಅಕ್ಷರಗಳು ಮುಂದಿನ ಸಾಲಿಗೆ ದಾಟಿದಾಗ ಮೊದಲ ಸಾಲಿನ ಕೊನೆಯ ಅಕ್ಷರದ ಅನಂತರ ಹೀಗೆ ಚಿಕ್ಕ ಅಡ್ಡಗೆರೆ ಎಳೆಯುವುದುಂಟು. ಗಣಕಗಳಲ್ಲಿ ಈ ಸಮಸ್ಯೆಯನ್ನು ಪರಿಹರಿಸಲಾಗಿದೆ. ಆದರೆ ಕನ್ನಡ ಬರವಣಿಗೆಯ ಜಾಯಮಾನದ ನಿಟ್ಟಿನಲ್ಲಿ ನೋಡಿದಾಗ ಹೀಗೆ ಚಿಕ್ಕ ಅಡ್ಡಗೆರೆಗಳನ್ನು ಸಾಲಿನ ಕೊನೆಯಲ್ಲಿ ಒಂದೇ ಪದದ ನಡುವೆ ಎಳೆಯುವುದು ಕೂಡ ಅಗತ್ಯವಿಲ್ಲ.

**ತಡರಾತ್ರಿ**

ಈಚೆಗೆ ಪತ್ರಿಕೆಯೊಂದರಲ್ಲಿ ಕಂಡುಬಂದ ಪ್ರಯೋಗ. ಇಂಗ್ಲಿಶ್‌ನ ಲೇಟ್‌ನೈಟ್ ಎಂಬುದಕ್ಕೆ ಸಂವಾದಿಯಾಗಿ ಈ ಪದವನ್ನು ಬಳಸಿದಂತಿದೆ. ಸರಿರಾತ್ರಿ ಎಂಬುದು ಸಾಮಾನ್ಯವಾಗಿ ಬಳಕೆಯಾಗುತ್ತಿರುವ ಪದ. ಸರಿರಾತ್ರಿ ಎಂದರೆ ಕೇವಲ ಹನ್ನೆರಡು ಗಂಟೆ ಎಂದು ಮಾತ್ರ ಅರ್ಥವಲ್ಲ. ಹನ್ನೆರಡು ಗಂಟೆ ಮೀರಿ ನಸುಕಿನವರೆಗಿನ ಅವಧಿಯನ್ನು ಆ ಪದದಿಂದ ಸೂಚಿಸಬಹುದಾಗಿದೆ. ತಡರಾತ್ರಿ ಎನ್ನುವ ಈ ಹೊಸಪದ ಇದೇ ಅರ್ಥವನ್ನು ನೀಡಲೆಂದು ಬಳಕೆಯಾಗಿದೆ.

**ಮೂವತ್ತರ ದಶಕ/ಮೂರನೆಯ ದಶಕ**

ಹಲವು ಬಾರಿ ಈ ಎರಡೂ ರಚನೆಗಳನ್ನು ಸಮಾನಾರ್ಥಕಗಳೆಂದು ತಿಳಿದು ಬಳಸುವುದುಂಟು. ಮತ್ತೆ ಕೆಲವು ಸಂದರ್ಭಗಳಲ್ಲಿ ಇವೆರಡರಲ್ಲಿ ಯಾವುದನ್ನು ಬಳಸಬೇಕು ಎಂಬ ಗೊಂದಲಕ್ಕೆ ಸಿಲುಕುವುದೂ ಉಂಟು. ಉದಾ: 1935ರಿಂದ 38ರ ಅವಧಿಯನ್ನು

ಇಪ್ಪತ್ತನೆಯ ಶತಮಾನದ ಮೂರನೆಯ ಶತಕ ಎನ್ನಬೇಕೋ ಅಥವಾ ಮೂವತ್ತರ ದಶಕ ಎನ್ನಬೇಕೋ? ಮೂವತ್ತರ ದಶಕ ಎನ್ನುವುದು 1930ರಿಂದ 1939ರ ಅವಧಿಯನ್ನು ಸೂಚಿಸುತ್ತದೆ. ಮೂರನೆಯ ದಶಕ ಎನ್ನುವುದು 1921ರಿಂದ 1930ರವರೆಗಿನ ಕಾಲಾವಧಿಯನ್ನು ಸೂಚಿಸುತ್ತದೆ. ಮೇಲಿನ ಪ್ರಶ್ನೆಯಲ್ಲಿ ಮೂವತ್ತರ ದಶಕ ಎನ್ನುವುದೇ ಸರಿ. ಅಥವಾ ನಾಲ್ಕನೆಯ ದಶಕ ಎಂದು ಬೇಕಾದರೆ ಹೇಳಬಹುದು.

**ಮೂರನೆಯ/ಮೂರನೆ/ಮೂರನೇ**

ಈ ಮೂರರಲ್ಲಿ ಯಾವುದು ಸರಿ? ಅಂಕಿಗಣನೆಯಲ್ಲಿ ಸ್ಥಾನಸೂಚಕ ಸಂಖ್ಯೆಯನ್ನು ಸೂಚಿಸಲು ಅನೆಯ ಎಂಬ ಪ್ರತ್ಯಯವನ್ನು ಕನ್ನಡದಲ್ಲಿ ಬಳಸುತ್ತೇವೆ. ಮೊದಲನೆಯ, ಒಂದನೆಯ, ಹತ್ತನೆಯ, ನೂರನೆಯ ಹೀಗೆ. ಕನ್ನಡದ ಎಲ್ಲ ಸಂಖ್ಯಾವಾಚಕಗಳೂ ಉಕಾರದಿಂದಲೇ ಕೊನೆಗೊಳ್ಳುತ್ತವೆಯಾಗಿ –ಅನೆಯ ಸೇರಿಸಿದಾಗ ಯಾವ ರೂಪ ಸಿಗುತ್ತದೆ ಎಂಬ ಬಗ್ಗೆ ಗೊಂದಲಗಳಿಲ್ಲ. ಸಾವಿರ, ಲಕ್ಷ, ಕೋಟಿ ಮುಂತಾದ ಪದಗಳ ವಿಷಯ ಬಂದಾಗ ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ. ಆದರೆ ಇಂಥ ಸಂದರ್ಭಗಳು ತುಂಬಾ ಕಡಿಮೆ. ಹಾಗಾಗಿ ಹೆಚ್ಚು ಕಾಡಿಸುವುದಿಲ್ಲ. ಮೇಲೆ ಹೇಳಿದ ಮೂರನೆ ಅಥವಾ ಮೂರನೇ ರೂಪಗಳು ಸರಿಯಲ್ಲ. ಅನೆಯ ರೂಪದಲ್ಲಿ ಷಷ್ಠೀ ವಿಭಕ್ತಿಯನ್ನು ಸೂಚಿಸುವ ಯಕಾರ ಲೋಪಗೊಳ್ಳುವುದರಿಂದ ಅನೇ ಎಂಬ ರೂಪ ಸಿದ್ಧಗೊಳ್ಳುತ್ತದೆ ಎಂದು ತಿಳಿದರೆ ಮೂರನೇ ಎಂಬ ರೂಪವನ್ನು ಒಪ್ಪಬಹುದು.

**ನಿಸ್ಸಾಹಸ**

ಈಚೆಗೆ ಪತ್ರಿಕೆಯ ವರದಿಯೊಂದರಲ್ಲಿ ಕಂಡುಬಂದ ಪದವಿದು. ಸಾಹಸವಿಲ್ಲದಿರುವಿಕೆಯನ್ನು ಸೂಚಿಸಲು ನಿಸ್ಸಾಹಸ ಎಂಬ ಪದವನ್ನು ಬಳಸಲಾಗಿದೆ. 'ಕನ್ನಡಿಗರಲ್ಲಿ ನಿಸ್ಸಾಹಸಿಗಳು.....' ಎಂಬ ವಾಕ್ಯದಲ್ಲಿ ಇದೇ ಅರ್ಥವಿದೆ. ಸಾಹಸಕ್ಕೆ ದುರ್ ಪೂರ್ವಪ್ರತ್ಯಯವನ್ನು ಸೇರಿಸಿ ದುಸ್ಸಾಹಸ ಎಂಬ ಪದವನ್ನು ರೂಪಿಸಿ ಬಳಸಲಾಗುತ್ತಿತ್ತು. ನಿಸ್ಸಾಹಸ ಹೊಸ ರಚನೆಯೆಂದು ತೋರುತ್ತದೆ. ಸಂಸ್ಕೃತದ ನಿರ್, ದುರ್, ಮತ್ತು ಅ ಎಂಬ ಪೂರ್ವಪ್ರತ್ಯಯಗಳನ್ನು ಸೇರಿಸಿ ಪಡೆಯುವ ರೂಪಗಳ ನಡುವೆ ಅರ್ಥವ್ಯತ್ಯಾಸವನ್ನು ಕನ್ನಡದಲ್ಲಿ ಖಚಿತವಾಗಿ ಗುರುತಿಸುವುದು ಹಲವು ವೇಳೆ ಕಷ್ಟವಾಗುತ್ತದೆ. ಉದಾಹರಣೆಗೆ ಅಸಹಾಯಕ ಮತ್ತು ನಿಸ್ಸಹಾಯಕ ಎಂಬ ರೂಪಗಳ ನಡುವೆ ಅರ್ಥ ವ್ಯತ್ಯಾಸವಿದ್ದರೂ ಬಳಕೆಯಲ್ಲಿ ಅದು ಗೋಚರವಾಗುವ ಸಂಭವ ಕಡಿಮೆ

**ಚಿಹ್ನೆ/ಚಿನ್ಹೆ/ಚಿನ್ನೆ**

ಬರೆವಣಿಗೆಯಲ್ಲಿ ಈ ಮೂರೂ ರೂಪಗಳು ಕಾಣಸಿಗುತ್ತವೆ. ಮೊದಲನೆಯದು ಸರಿ. ಕನ್ನಡದ ಧ್ವನಿರಚನೆಯಲ್ಲಿ ಹ್ ಮತ್ತು ನ್ ಗಳು ಅನುಕ್ರಮವಾಗಿ ಬರಲಾರವು. ಹಾಗಾಗಿ ಉಚ್ಚಾರಣೆಯಲ್ಲಿ ಆ ಅನುಕ್ರಮ ಅದಲು ಬದಲಾಗುತ್ತದೆ. ಈ ಉಚ್ಚಾರಣೆಯ ಕ್ರಮವೇ ಬರೆವಣಿಗೆಯಲ್ಲೂ ಕಾಣಿಸುವುದರಿಂದಾಗಿ ಚಿನ್ಹೆ ಎಂಬ ರೂಪ ರೂಢಿಗೆ

ಬಂದಿದೆ. ತ್ ಮತ್ತು ಸ್ ಗಳು ಕನ್ನಡದಲ್ಲಿ ಅನುಕ್ರಮವಾಗಿ ಬರಲಾರವು. ಅಂಥ ಅನುಕ್ರಮವಿರುವ ಉತ್ಸವ ಎಂಬ ಪದವನ್ನು ಹಲವರು ಉಸ್ತವ ಎಂದು ಉಚ್ಚರಿಸುವುದನ್ನು ಕೇಳಬಹುದು. ಆದರೆ ಅದು ಬರೆವಣಿಗೆಯಲ್ಲಿ ಕಂಡುಬಂದಿಲ್ಲ. ಚಿನ್ನೆ ಎಂಬುದನ್ನು ತದ್ಭವವಾಗಿ ಒಪ್ಪಬಹುದು. ಇಂಥದೇ ಸಮಸ್ಯೆ ಮಧ್ಯಾಹ್ನ, ಮಧ್ಯಾನ್ಹ ಮತ್ತು ಮಧ್ಯಾನ್ನ ಎಂಬ ರೂಪಗಳಲ್ಲೂ ಇದೆ. ಮೊದಲನೆಯದು ಸರಿ. ಮೂರನೆಯದು ತದ್ಭವವಾಗಿ ಸರಿ. ನಡುವಿನದು ಉಚ್ಚಾರಣೆಯ ಸಮಸ್ಯೆಯ ಫಲಿತ.

**ಏಕಪಾತ್ರಾಭಿನಯ**

ಈ ಪದವನ್ನು ಕುರಿತು ಓದುಗರೊಬ್ಬರು ಪ್ರಶ್ನೆಯನ್ನೆತ್ತಿದ್ದಾರೆ. ಒಬ್ಬನೇ ವ್ಯಕ್ತಿ ಹಲವು ಪಾತ್ರಗಳನ್ನು ಅಭಿನಯಿಸುವ ಪ್ರಸಂಗವನ್ನು ನಾವು ಏಕಪಾತ್ರಾಭಿನಯ ಎನ್ನುವುದು ಸರಿಯಲ್ಲ; ಅದನ್ನು ಬಹುಪಾತ್ರಾಭಿನಯ ಎನ್ನಬೇಕು ಎಂಬುದು ಅವರ ತರ್ಕ. ಅವರ ವಿವರಣೆ ಸರಿ. ಆದರೆ ಭಾಷೆಯಲ್ಲಿ ಪದ ಮತ್ತು ಪದಾರ್ಥಗಳ ಸಂಬಂಧ ಯಾವಾಗಲೂ ತರ್ಕಬದ್ಧವಾಗಿರುವುದಿಲ್ಲ. ಉದಾಹರಣೆಗೆ ಕುಡಿಯುವ ನೀರು ಮತ್ತು ಕುದಿಯುವ ನೀರು ಎಂಬ ಎರಡು ರಚನೆಗಳನ್ನು ಗಮನಿಸಿ. ತೋರಿಕೆಗೆ ಎರಡೂ ರಾಚನಿಕ ಸಾಮ್ಯತೆಯನ್ನು ಹೊಂದಿವೆ. ಆದರೆ ಅರ್ಥಗ್ರಹಿಕೆ ಮಾತ್ರ ಬೇರೆ ಬೇರೆ ಬಗೆಯಲ್ಲಿ ಆಗಬೇಕು. ಕುದಿಯುವ ನೀರು ಎಂಬಲ್ಲಿ ನೀರಿನ ಒಂದು ಸ್ಥಿತಿಯನ್ನು ನಾವು ಹೇಳುತ್ತಿದ್ದೇವೆ. ಅಲ್ಲಿ ನೀರು ಕುದಿಯುತ್ತಿದೆ ಎಂಬ ಅರ್ಥವಿದೆ. ಆದರೆ ಕುಡಿಯುವ ನೀರು ಎಂಬಲ್ಲಿ ಅದು ನೀರಿನ ಸ್ಥಿತಿಯನ್ನು ಹೇಳುತ್ತಿಲ್ಲ. ಅಂದರೆ ನೀರು ಕುಡಿಯುತ್ತಿದೆ ಎಂಬ ಅರ್ಥವನ್ನು ಹೇಳಲು ಬರುವುದಿಲ್ಲ. ಅರ್ಥದ ಜಗತ್ತು ಬಲು ಸಂಕೀರ್ಣ. ಅದಿರಲಿ. ಏಕಾಪಾತ್ರಭಿನಯ ಎಂಬುದು ಇಂಗ್ಲಿಶಿನ ಮಾನೋಆಕ್ಟಿಂಗ್ ಎಂಬ ಪದದ ಯಥಾನುವಾದ. ಅದು ಒಂದು ಕ್ರಿಯಾನಾಮವೆಂಬುದನ್ನು ಗಮನಿಸಬೇಕು. ಹೀಗಾಗಿ ಇನ್ನೊಂದು ಪರ್ಯಾಯ ಪದವನ್ನು ನೀಡುವುದು ತಪ್ಪಲ್ಲವಾದರೂ ಹಾಗೆ ಮಾಡುವ ಮೂಲಕ ಭಾಷಾರಚನೆಗಳ ಅತಾರ್ಕಿಕತೆಯನ್ನು ತೊಡೆಯಬಹುದೆಂದು ಭಾವಿಸುವುದು ಅಷ್ಟು ಸರಿಯಲ್ಲ.

**ಅನಾಕ್ರಮಣ**

ಈ ಪದ ಈಚೆಗೆ ಬಳಕೆಯಾದದ್ದು ಗಮನಕ್ಕೆ ಬಂದಿದೆ. ಇದರ ಅರ್ಥ ಅಸ್ಪಷ್ಟ. ಆಕ್ರಮಣ ಇಲ್ಲದಿರುವುದು ಅನಾಕ್ರಮಣವೋ ಅಥವಾ ಆಕ್ರಮಣ ಅಲ್ಲದಿರುವುದನ್ನು ಅದು ಸೂಚಿಸುತ್ತದೆಯೋ? ಕನ್ನಡದಲ್ಲಿ ಈ ಗೊಂದಲ ಹಲವು ಕಡೆಗಳಲ್ಲಿ ಕಾಣುತ್ತದೆ. ಅ/ಅನ್ ಮತ್ತು ನಿರ್ ಎಂಬ ಪೂರ್ವಪ್ರತ್ಯಯಗಳಲ್ಲಿ ಮೊದಲನೆಯದು ವಿರೋಧವನ್ನು, ಎರಡನೆಯದು ನಿಷೇಧವನ್ನು ಸೂಚಿಸುತ್ತದೆಯೆಂದು ಗುರುತಿಸಿಕೊಳ್ಳುವುದು ಅಗತ್ಯ. ಆಗ ಅನಾಯಾಸ ಮತ್ತು ನಿರಾಯಾಸಗಳ ನಡುವೆ ಅರ್ಥ ವ್ಯತ್ಯಾಸ ಗೊತ್ತಾಗುತ್ತದೆ. ಆಯಾಸ ಅಲ್ಲದುದು ಅನಾಯಾಸ; ಅಯಾಸವಿಲ್ಲದಿರುವುದು ನಿರಾಯಾಸ. ಈಗ ಅನಾಕ್ರಮಣ ಅರ್ಥವೇನಾಗುತ್ತದೆ?

**ನಾಗರಿಕ/ನಾಗರೀಕ**

ಇವೆರಡೂ ರೂಪಗಳನ್ನು ಕನ್ನಡ ಬರವಣಿಗೆಯಲ್ಲಿ ನಾವು ನೋಡುತ್ತಿದ್ದೇವೆ. ಮೊದಲನೆಯದು ಸರಿ. ನಾಗರೀಕತೆ ಎಂದು ಬರೆಯುವುದೂ ಉಂಟು. ಇಲ್ಲಿಯೂ ನಾಗರಿಕತೆ ಎಂಬುದು ಸಾಧು ರೂಪ. ನಗರ ಪದದಿಂದ ಸಾಧಿತವಾಗುವ ಪದವಿದು. ನಾಗರೀಕ, ನಾಗರೀಕತೆ ರೂಪಗಳು ಎಷ್ಟು ವ್ಯಾಪಕವಾಗಿ ಬಳಕೆಯಾಗುತ್ತಿವೆಯೆಂದರೆ ಅವನ್ನು ಅಸಾಧು ರೂಪಗಳೆಂದು ವಾದಿಸಿ ಸರಿ ರೂಪಗಳಿಗೆ ಹೊರಳಿಸುವುದು ಬಹುಶಃ ಅಸಾಧ್ಯವೆಂದೇ ತೋರುತ್ತದೆ.

**ಹೆಚ್ಚು/ಹೆಚ್ಚಿನ**

ಕನ್ನಡ ವ್ಯಾಕರಚನೆಯಲ್ಲಿ ಈ ಎರಡೂ ರೂಪಗಳನ್ನು ಕೆಲವರು ಸಮಾನಾರ್ಥಕಗಳಂತೆ ಬಳಸುವುದುಂಟು. 'ಹೆಚ್ಚಿನ ಖರ್ಚಿಲ್ಲದೆ ಕೆಲಸ ಮುಗಿಯಿತು' ಮತ್ತು 'ಹೆಚ್ಚು ಖರ್ಚಿಲ್ಲದೆ ಕೆಲಸ ಮುಗಿಯಿತು' ಎಂಬ ವಾಕ್ಯಗಳನ್ನು ಗಮನಿಸಿ. ಹೆಚ್ಚಿನ ಎಂಬುದಕ್ಕೆ ಬದಲಾಗಿ ಹೆಚ್ಚುವರಿ ಎಂಬ ಪದವನ್ನು ಕೆಲವರು ಬಳಸುವುದುಂಟು. ಹೆಚ್ಚಿನ/ಹೆಚ್ಚುವರಿ ಎಂಬಲ್ಲಿ ನಿಗದಿಯಾದುದನ್ನು ಮೀರಿದ ಎನ್ನುವ ಅರ್ಥ ಮುಖ್ಯವಾಗುತ್ತದೆ. ಈ ಅರ್ಥ ಹೆಚ್ಚು ಎಂಬ ಪದದಲ್ಲಿ ಇಲ್ಲ. 'ಅಣೆಕಟ್ಟಿನಿಂದ ಹೆಚ್ಚಿನ/ಹೆಚ್ಚುವರಿ ನೀರನ್ನು ಹೊರಬಿಡಲಾಯಿತು' ಎಂಬ ವಾಕ್ಯದಲ್ಲಿ ಹೆಚ್ಚಿನ/ಹೆಚ್ಚುವರಿ ಎಂಬ ಪದಕ್ಕೆ ಬದಲಾಗಿ ಹೆಚ್ಚು ಎಂಬ ಪದವನ್ನು ಬಳಸುವುದು ಸಾಧ್ಯವಿಲ್ಲ. ಅಂದರೆ, ಹೆಚ್ಚು ಮತ್ತು ಹೆಚ್ಚಿನ ಎಂಬ ಪದಗಳ ನಡುವೆ ಸೂಕ್ಷ್ಮವಾದ ಅರ್ಥವ್ಯತ್ಯಾಸಗಳಿವೆ.

**ನಾಳೆಯ/ನಾಳಿನ**

ಈ ಎರಡು ರೂಪಗಳೂ ಬೇರೆ ಬೇರೆ ಸಂದರ್ಭಗಳಲ್ಲಿ ಬಳಕೆಯಾಗುತ್ತಿದ್ದರೂ ಇವೆರಡರ ಅರ್ಥ ಒಂದೇ ಎಂಬಂತೆ ವ್ಯವಹರಿಸಲಾಗುತ್ತಿದೆ. ಬಹುಖ್ಯಾತವಾದ ಆತ್ಮ ಚರಿತ್ರೆಯೊಂದರ ಹೆಸರು 'ನಾಳಿನ ಚಿಂತ್ಯಾಕ' ಎಂದಿದೆ. ಅಲ್ಲಿ ನಾಳೆಯ ಎಂಬ ರೂಪವನ್ನು ಬಳಸಲು ಸಾಧ್ಯವಿದೆ. ಇದೇ ರೀತಿ ನಿನ್ನಿನ ಮತ್ತು ನಿನ್ನೆಯ ಎಂಬ ರೂಪಗಳು ಬಳಕೆಯಲ್ಲಿವೆ. ಕೊಂಚ ವಿವರಗಳನ್ನು ಗಮನಿಸಿದರೆ ಷಷ್ಠೀ ವಿಭಕ್ತಿಯ ಪ್ರತ್ಯಯವಿರುವ ರೂಪವೇ (ನಾಳೆಯ) ಸಾಧುವಾದುದೆಂದು ತೋರುತ್ತದೆ. ಸ್ಥಾನ (ದೇಶ) ಸೂಚಕ ರೂಪಗಳಿಗೆ ಇನ ಪ್ರತ್ಯಯ ಹತ್ತುವಂತೆ ತೋರುತ್ತದೆ. ಹಿಂದಿನ, ಮುಂದಿನ. ಮೇಲಿನ, ಕೆಳಗಿನ ಇತ್ಯಾದಿ. ಕಾಲಸೂಚಕ ರೂಪಗಳಿಗೆ ಆ ಪ್ರತ್ಯಯ ಸೇರುತ್ತದೆ. ನಾಳೆಯ, ನಿನ್ನೆಯ, ವಾರದ, ದಿನದ ಇತ್ಯಾದಿ. ಈ ನಿಯಮಕ್ಕೆ ವಿನಾಯಿತಿಗಳಿರಬಹುದಾದರೂ ಒಂದಲ್ಲ ಒಂದು ವಿಧದಲ್ಲಿ ಈ ರೂಪಗಳನ್ನು ವಿವರಿಸಿಕೊಳ್ಳುವುದು ಅಗತ್ಯವಾಗಿದೆ.

**ವಾಕ್ಯದ ನಡುವೆ ಪ್ರಶ್ನಾರ್ಥಕ ಚಿಹ್ನೆಗಳು**

ಕೆಲವು ದಿನಗಳ ಹಿಂದೆ ಪದಗಳ ನಡುವೆ ಅಡ್ಡಗೆರೆ ಸೇರಿಸುವ ವಿಧಾನವನ್ನು ಕುರಿತು ಬರೆದಿದ್ದೆ. ಪ್ರಶ್ನಾರ್ಥಕ ಚಿಹ್ನೆಯನ್ನು ಸಾಮಾನ್ಯವಾಗಿ ವಾಕ್ಯದ ಕೊನೆಯಲ್ಲಿ

ಬಳಸುತ್ತೇವೆ. ಒಂದು ವಾಕ್ಯವನ್ನು ಉಲ್ಲೇಖಿಸುತ್ತಿದ್ದರೆ ಮತ್ತು ಆ ವಾಕ್ಯ ಪ್ರಶ್ನಾರ್ಥಕವಾಗಿದ್ದರೆ ಆಗ ಅಂತರ್ಗತ ವಾಕ್ಯದ ಕೊನೆಯಲ್ಲಿ ಪ್ರಶ್ನಾರ್ಥಕ ಚಿಹ್ನೆ ಬರಬಹುದು. ಆದರೆ ಈ ಮುಂದಿನ ವಾಕ್ಯವನ್ನು ಗಮನಿಸಿ. 'ಈ ಯೋಜನೆಗೆ ಎಷ್ಟು ಹಣ ವೆಚ್ಚವಾಗುತ್ತದೆ? ಎನ್ನುವುದನ್ನು ನಾವೀಗ ಚರ್ಚಿಸಬೇಕಾಗಿದೆ. ಈ ವಾಕ್ಯದಲ್ಲಿ ಒಂದು ಪ್ರಶ್ನೆ ಇದೆ. ಆದರೆ ಅದನ್ನು ಸೂಚಿಸುವ ಚಿಹ್ನೆಯನ್ನು ವಾಕ್ಯದಲ್ಲಿ ಬರೆಯುವ ಅಗತ್ಯವಿಲ್ಲ. ಆದರೆ ಇಂತಹ ಕಡೆಗಳಲ್ಲೂ ಪ್ರಶ್ನಾರ್ಥಕ ಚಿಹ್ನೆಯನ್ನು ಕೆಲವರು ಬರೆಯುವುದುಂಟು. ಮತ್ತೆ ಕೆಲವರಿಗೆ ಅದನ್ನು ಬರೆಯುವುದು ಅಗತ್ಯವೋ ಅಲ್ಲವೋ ಎಂಬ ಬಗೆಗೆ ಸಂದೇಹಗಳಿರುತ್ತವೆ. ಇಂತಹ ಕಡೆ ಅದನ್ನು ಬರೆಯದಿರುವುದೇ ಸರಿ.

**ದನಶಾಲೆ**

ಗೋಶಾಲೆ ಎಂಬ ಪದವನ್ನು ಬಳಕೆಯಲ್ಲಿ ನೋಡಿದ್ದೇವೆ. ಅದರ ಬದಲಿಗೆ ಪತ್ರಿಕೆಯೊಂದರಲ್ಲಿ 'ದನಶಾಲೆ' ಎಂಬ ಪ್ರಯೋಗವನ್ನು ಈಚೆಗೆ ಕಂಡೆ. ಇಲ್ಲಿರುವ ಶಾಲೆಗೆ ಕನ್ನಡದಲ್ಲಿರುವ ಕಲಿಸುವ/ಕಲಿಯುವ ಸ್ಥಳ ಎನ್ನುವ ಅರ್ಥವಿಲ್ಲ. ಧರ್ಮಶಾಲೆಯಲ್ಲೂ ಶಾಲೆ ಇದೆ ಎನ್ನುವುದನ್ನು ಗಮನಿಸಿ. ಗೋ ಎನ್ನುವ ಸಂಸ್ಕೃತ ಪದಕ್ಕೆ ಬದಲಾಗಿ ದನ ಎನ್ನುವ ಪದವನ್ನು ಇಲ್ಲಿ ಬಳಸಲಾಗಿದೆ. ದನ, ಪಶು ಎಂಬ ಅರ್ಥವನ್ನು ನೀಡುವ ತುರು ಎಂಬುದು ಅಚ್ಚಗನ್ನಡ ಪದ. ಈಗ ಅದರ ಬಳಕೆ ಕಡಿಮೆಯಾಗಿದೆ. ಅನ್ಯಮೂಲದ ಪದಗಳು ಕನ್ನಡದ ಪದಗಳನ್ನು ಬಳಕೆಯಿಂದ ಹೊರತಳ್ಳುತ್ತಿರುವುದಕ್ಕೆ ಇಂತಹ ಹಲವು ನಿದರ್ಶನಗಳಿವೆ.

**ಮೇಲಿನ/ಮೇಲಣ**

ಇವೆರಡು ಪ್ರಯೋಗಗಳೂ ಸಮಪ್ರಮಾಣದಲ್ಲಿ ಬಳಕೆಯಾಗುತ್ತಿವೆ. ಸಮಾನಾರ್ಥಕಗಳೆಂಬಂತೆ ಬಳಸುವುದನ್ನು ಕಾಣುತ್ತೇವೆ. ಇದೇ ರೀತಿ ಮುಂದಣ/ ಮುಂದಿನ, ಹಿಂದಣ/ಹಿಂದಿನ, ಕೆಳಗಣ/ಕೆಳಗಿನ ಎಂಬ ಜೋಡಿರೂಪಗಳೂ ಬಳಕೆಯಲ್ಲಿವೆ. ಕೆಲವೊಮ್ಮೆ ಮುಂದಲ, ಹಿಂದಲ ಎಂಬ ರೂಪಗಳೂ ಆಗಾಗ ಬಳಕೆಯಾಗುವುದನ್ನು ನೋಡುತ್ತೇವೆ. ಇವುಗಳಲ್ಲಿ ಮುಂದಣ, ಹಿಂದಣ ಮುಂತಾದ ರೂಪಗಳು ನಡುಗನ್ನಡ ಕಾಲದವು. ವಚನಗಳಲ್ಲೂ ಈ ರೂಪಗಳು ಸಿಗುತ್ತವೆ. ಅವುಗಳ ಜಾಗದಲ್ಲಿ ಬಂದಿರುವ ಮುಂದಿನ, ಹಿಂದಿನ ಮುಂತಾದ ರೂಪಗಳಲ್ಲಿ ಇನ ಪ್ರತ್ಯಯವಿದೆ ಎಂದು ವಿವರಿಸಬಹುದೇ ಹೊರತು ಈ ಪ್ರತ್ಯಯವೇ ಏಕೆ ಬಂದು ಸೇರುತ್ತಿದೆ ಎನ್ನುವುದನ್ನು ನಾವಿನ್ನೂ ವಿವರಿಸಿಕೊಳ್ಳಬೇಕಾಗಿದೆ. ಸ್ಥಾನನಿರ್ದೇಶಕ ಪದಗಳ ಬಳಕೆಯಲ್ಲಿ ಈ ಪ್ರತ್ಯಯ ನಿಯಮವೆಂಬಂತೆ ಬಂದು ಸೇರುತ್ತಿದೆ. ಮುಂದಲ, ಹಿಂದಲ ರೂಪಗಳು ಕನ್ನಡದ ಕೆಲವು ಪ್ರಾದೇಶಿಕ ಉಪಭಾಷೆಗಳಲ್ಲಿ ಮಾತ್ರ ಕಂಡು ಬರುತ್ತವೆ.

**ಪದದ ಕೊನೆಯಲ್ಲಿ ದೀರ್ಘ ಸ್ವರ**

ಆಟೋ. ಸೋಡಾ. ಕ್ಯಾಮೆರಾ. ಅಮೆರಿಕಾ ಮುಂತಾದ ಪದಗಳ ಕೊನೆಯಲ್ಲಿ ದೀರ್ಘ ಸ್ವರವನ್ನು ಬರೆಯಬೇಕೇ ಎಂಬ ಸಮಸ್ಯೆ ಇದೆ. ಕನ್ನಡದ ಯಾವ ಪದವೂ

ದೀರ್ಘ ಸ್ವರದಿಂದ ಕೊನೆಯಾಗುವುದಿಲ್ಲ. ಸಮುಚ್ಚಯ ವಾಚಕ, ಅವಧಾರಣಾ ವಾಚಕ ಪ್ರತ್ಯಯವಾಗಿ ಮಾತ್ರ ದೀರ್ಘ ಸ್ವರ ಊಕಾರವನ್ನು ಬಳಸುತ್ತೇವೆ. ನಾನೂ, ಅವರೂ, ಈಗಲೂ ಇತ್ಯಾದಿ. ಪದದ ಭಾಗವಾಗಿ ದೀರ್ಘಸ್ವರ ಪದದ ಕೊನೆಯಲ್ಲಿ ಬರದು. ಇದೇ ನಿಯಮವನ್ನು ಅನ್ಯಭಾಷೆಯಿಂದ ಪಡೆದ ರೂಪಗಳಿಗೂ ನಾವು ಅನ್ವಯಿಸಿಕೊಳ್ಳುವುದು ಸರಿ. ಕ್ಯಾಮೆರಾ ಎಂಬಲ್ಲಿ ಆಕಾರಾಂತವೇ ಇರಬೇಕೆಂದು ಖಚಿತವಾಗಿ ಹೇಳಲು ಯಾವ ನಿಯಮಗಳೂ ಇಲ್ಲ. ಕನ್ನಡದ ಸಹಜ ಪ್ರವೃತ್ತಿಯಿಂದ ಹ್ರಸ್ವಸ್ವರದಿಂದ ಪದವನ್ನು ಕೊನೆಗೊಳಿಸುವುದು ಸರಿ.

**ಗೈರು**

ಈ ಪರ್ಸೋ-ಅರಾಬಿಕ್ ಮೂಲದ ಪದ ಸಾಮಾನ್ಯವಾಗಿ ನಾಮಪದದ ಪೂರ್ವದಲ್ಲಿ ಸೇರಿ ಬಳಕೆಯಾಗುತ್ತದೆ. ಗೈರುಹಾಜರು ಹೆಚ್ಚು ಬಳಕೆಯಲ್ಲಿರುವ ರಚನೆ. ಹಾಜರಾಗದಿರುವುದು, ಹಾಜರಿಲ್ಲದಿರುವುದು ಎಂದೇ ಇದರ ಅರ್ಥ. ಗೈರ್ ಎಂಬುದಕ್ಕೆ ಅನ್ಯ, ಬೇರೆ ಅಲ್ಲದ, ಇಲ್ಲದ ಎಂಬ ಬೇರೆ ಬೇರೆ ಅರ್ಥಗಳಿವೆ. ಈಚೆಗೆ ಕನ್ನಡದಲ್ಲಿ ಗೈರು ಎಂಬುದನ್ನು ಸ್ವತಂತ್ರ ಪದವನ್ನಾಗಿ ಬಳಸುವ ಪ್ರವೃತ್ತಿ ಕಾಣುತ್ತಿದೆ. 'ಪರಿಶೀಲನಾ ಸಭೆಗೆ ತಹಶೀಲ್ದಾರ್ ಗೈರು' ಎಂಬ ಶೀರ್ಷಿಕೆಯಲ್ಲಿ ಇಂಥ ಪ್ರಯೋಗವಿದೆ. ಇದು ಗೈರ್ ಪದದ ಮೂಲಾರ್ಥವನ್ನು ಬದಲಾಯಿಸಿ ಬಳಸಿರುವ ಯತ್ನವಾಗಿ ಕಾಣುತ್ತದೆ.

**ಮಿದುಳಚ್ಚು**

ಬೆರಳಚ್ಚು, ನೆರಳಚ್ಚು, ಕೊರೆಯಚ್ಚು ಎಂಬ ಮಾದರಿಯಲ್ಲಿ ಇರುವ ಪದ ಮಿದುಳಚ್ಚು. ಮೊದಲ ಮೂರು ಪದಗಳಲ್ಲಿ ಆ ಪದಗಳು ನಿರ್ದಿಷ್ಟವಾದ ಭೌತಿಕ ವಸ್ತುಗಳನ್ನು ಸೂಚಿಸುತ್ತವೆ. ಮಿದುಳಚ್ಚು ಎಂಬುದು ಒಂದು ಗಣಕ ಗ್ರಹಿಕೆ. ಇಮೇಜಿಂಗ್ ಎಂಬ ಪದಕ್ಕೆ ಸಂವಾದಿಯಾಗಿ ಈ ಪದವನ್ನು ಬಳಸಲಾಗಿದೆ. ಮೆದುಳು ಹೇಗಿದೆ ಎಂಬುದನ್ನು ನಿರ್ದಿಷ್ಟ ತಂತ್ರಜ್ಞಾನದ ಮೂಲಕ ಗಣಕದ ತೆರೆಯ ಮೇಲೆ ನೋಡುವುದು ಸಾಧ್ಯ. ಇಲ್ಲಿ ಯಾವ ಭೌತಿಕ ವಸ್ತುವೂ ಪ್ರತಿನಿಧಿತವಾಗುವುದಿಲ್ಲ. ಹಾಗಾಗಿ ಈ ಪ್ರಯೋಗ ಅಷ್ಟು ಸರಿಯಲ್ಲ. ಇಲ್ಲಿ ಇನ್ನೊಂದು ಗೊಂದಲವಿದೆ. ಮೆದುಳು ಮತ್ತು ಮಿದುಳು ಎಂಬ ಎರಡು ಪ್ರಯೋಗಗಳೂ ಕನ್ನಡದಲ್ಲಿ ಬಳಕೆಯಲ್ಲಿವೆ. ಮೆದುಳು ಎಂಬುದು ಸ್ವೀಕಾರಾರ್ಹ ಪ್ರಯೋಗ. ಮಿದುಳು ಒಂದು ವಿಕಲ್ಪ ಪ್ರಯೋಗವಾಗಿ ಮಾತ್ರ ತೋರುತ್ತದೆ.

**ಹಿತಾಶಯ**

ಇದೊಂದು ಹೊಸ ರಚನೆ. 'ಶುಭಾಶಯ ಎಂಬ ಪದದ ಮಾದರಿಯಲ್ಲಿ ರೂಪುಗೊಂಡಿದೆ. ಶುಭವನ್ನು ಆಶಿಸುವುದು ಶುಭಾಶಯವಾದರೆ ಹಿತವನ್ನು ಬಯಸುವುದು ಹಿತಾಶಯ. ಹಿತ ಎಂದರೆ ಒಳಿತು, ಅಪ್ಯಾಯಮಾನ ಎಂಬ ಅರ್ಥಗಳಿವೆ. ಸಹಿತ ಎಂಬ ಪದ ಗುಣವಾಚಕವಾದಾಗ ಹಿತವಾದ, ಒಳಿತಾದ ಎಂಬ ಅರ್ಥಗಳೇ ಇರುತ್ತವೆ. ಆದರೆ ಸಹಿತ ಎಂಬ ಪದ ಕನ್ನಡದಲ್ಲಿ ಒಡನೆ, ಒಟ್ಟಿಗೆ ಎಂಬ ಅರ್ಥದಲ್ಲೂ

ಬಳಕೆಯಾಗುತ್ತದೆ. ಈ ಅರ್ಥದಲ್ಲಿ ಬಳಕೆಯಾಗುವ ಸಹಿತ ಪದವನ್ನು ಸ+ಹಿತ ಎಂದು ವಿಭಜಿಸಲು ಬರುವುದಿಲ್ಲ. ಅದನ್ನು ಸಹದಿಂದ ನಿಷ್ಪನ್ನಗೊಳಿಸಬೇಕಾಗುತ್ತದೆ.

**ಅವಳಿ/ದ್ವಿ**

ಇವೆರಡೂ ಸಮಾನಾರ್ಥಕ ಪದಗಳಲ್ಲ. ದ್ವಿ ಎಂಬುದು ಸಂಖ್ಯಾವಾಚಕ. ಎರಡು ಎಂಬ ಅರ್ಥವನ್ನು ಮಾತ್ರ ನೀಡುತ್ತದೆ. ಅವಳಿ ಎಂಬಲ್ಲಿಯೂ ಎರಡು ಎಂಬ ಅರ್ಥವಿದ್ದರೂ ಅಲ್ಲಿ ಜೋಡಿ ಎಂಬ ಹೆಚ್ಚಿನ ಅರ್ಥವೂ ಇದೆ. ಅವಳಿ ನಗರ ಎಂಬ ಪ್ರಯೋಗವನ್ನು ಗಮನಿಸಿ. ಯಾವುದೋ ಎರಡು ನಗರಗಳನ್ನು ಅವಳಿ ನಗರಗಳೆಂದು ಕರೆಯುವುದಿಲ್ಲ. ಅವೆರಡರ ನಡುವೆ ಯಾವುದಾದರೊಂದು ಬಗೆಯ ನಿಕಟತೆ ಇರಬೇಕಾಗುತ್ತದೆ. ಈಚೆಗೆ ಕನ್ನಡ ಪತ್ರಿಕೆಗಳು ಅವಳಿ ಪೌರತ್ವ ಮತ್ತು ದ್ವಿಪೌರತ್ವ ಎಂಬ ಪದಗಳನ್ನು ಸಮಾನಾರ್ಥಕಗಳು ಎಂಬಂತೆ ಬಳಸಿವೆ. ಹೊರನಾಡಿನ ಭಾರತೀಯರಿಗೆ ನೀಡುವ ವಿಶೇಷ ಸವಲತ್ತನ್ನು ದ್ವಿಪೌರತ್ವವೆಂದು ಕೆಲವರು ಕರೆದಿದ್ದರೆ, ಮತ್ತೆ ಕೆಲವರು ಅವಳಿ ಪೌರತ್ವ ಎಂದು ಕರೆದಿದ್ದಾರೆ. ಈ ಹೊಸ ಸವಲತ್ತಿನ ಸ್ವರೂಪವನ್ನು ಗಮನಿಸಿದರೆ ಅವಳಿ ಪೌರತ್ವ ಎಂಬುದು ಹೆಚ್ಚು ಸೂಕ್ತ ಪ್ರಯೋಗ. ಡ್ಯುಯೆಲ್ ಎಂಬುದನ್ನು ಯಥಾನುವಾದ ಮಾಡಿದಾಗ ದ್ವಿ ಎಂಬುದು ಸರಿ ಹೋಗುತ್ತದೆ. ದ್ವಿ ಎಂಬುದು ತ್ರಿ ಚತುರ್ ಎಂಬ ಸಾಧ್ಯತೆಗಳನ್ನೂ ಒಪ್ಪುತ್ತದೆ. ಆದರೆ ಇಲ್ಲಿ ಗರಿಷ್ಠ ಎರಡು ದೇಶಗಳ ಪೌರತ್ವ ಮಾತ್ರ ಇರುವುದರಿಂದ ಅವಳಿ ಎಂಬುದು ಸರಿಯಾದ ರೂಪ.

ಅವಳಿ ಪೌರತ್ವ ಎಂಬ ಅರ್ಥದಲ್ಲೇ ಪತ್ರಿಕೆಯೊಂದರಲ್ಲಿ ದ್ವಂದ್ವ ಪೌರತ್ವವೆಂಬ ಪ್ರಯೋಗ ಕಂಡುಬಂದಿತು. ದ್ವಂದ್ವ ಎಂಬ ಪದಕ್ಕೆ ಜೋಡಿ ಎನ್ನುವ ಅರ್ಥವನ್ನು ನೀಡುವುದು ಸಾಧ್ಯ. ಆದರೆ ಅಲ್ಲಿ ಎದುರುಬದಿರು ಅಥವಾ ಮುಖಾಮುಖಿ ಎಂಬ ಅರ್ಥವೂ ಸೇರಿಕೊಳ್ಳುತ್ತದೆ. ಉದಾ: ದ್ವಂದ್ವ ಯುದ್ಧ. ಪೌರತ್ವದ ವಿಷಯದಲ್ಲಿ ಇದು ಸಲ್ಲುವ ಅರ್ಥವಲ್ಲ. ಹಾಗಾಗಿ ದ್ವಂದ್ವ ಪೌರತ್ವವೆಂಬ ಪ್ರಯೋಗವನ್ನು ಒಪ್ಪುವುದು ಸಾಧ್ಯವಾಗದು. ಡ್ಯುಯಲ್ ಎಂಬ ಇಂಗ್ಲಿಶ್ ಪದಕ್ಕೆ ಇರುವ ಜೋಡಿಯ ಮುಖಾಮುಖಿ ಎನ್ನುವ ಅರ್ಥದಿಂದಲೇ ಈ ಪ್ರಯೋಗ ರೂಪುಗೊಂಡ ಹಾಗಿದೆ.

**ವಲಸಿತ**

ವಲಸೆ ಹೋದ ಎನ್ನುವ ಅರ್ಥದಲ್ಲಿ ವಲಸಿತ ಎನ್ನುವ ಪ್ರಯೋಗವನ್ನು ಈಚೆಗೆ ಓದಿದೆ. ಭಾರತೀಯ ವಲಸಿತ ಸಮುದಾಯ ಎಂಬ ಪ್ರಯೋಗದಲ್ಲಿ ಅನ್ಯ ದೇಶಗಳಿಗೆ ವಲಸೆ ಹೋದ ಭಾರತೀಯರು ಎನ್ನುವ ಅರ್ಥ ವಿವಕ್ಷಿತವಾಗಿದೆ. ಮಾದರಿ: ವಿಕಾಸ–ವಿಕಸಿತ; ಸಂಸ್ಕೃತ ಪದರಚನೆಯ ನಿಯಮವನ್ನು ಬಳಸಿ ಇಂತಹ ರೂಪಗಳನ್ನು ರಚಿಸುವುದು ಕನ್ನಡದಲ್ಲಿ ಒಂದೇ ಸಮನೆ ಮುಂದುವರೆಯುತ್ತಿದೆ. ನನ್ನ ಗಮನಕ್ಕೆ ಬಂದ ಇಂತಹ ಕೆಲವು ಪ್ರಯೋಗಗಳು ಹೀಗಿವೆ. ಚುಕ್ಕಿತ (ಸ್ಪಾಟೆಡ್), ಅಳವಡಿತ, ಜೋಡಿತ, ನಮೂದಿತ, ಶಿಫಾರಿತ, ತಯಾರಿತ, ಗೊಂದಲಿತ, ಸಂಗ್ರಹಿತ, ಅನುಕರಿತ, ಬೆಂಬಲಿತ ಇತ್ಯಾದಿ. ಇವೆಲ್ಲವೂ ಒಂದೊಂದು ವಿಶಿಷ್ಟ ಸಂದರ್ಭದಲ್ಲಿ ಬಳಕೆಯಾಗಿ ಮತ್ತೆ ಎಲ್ಲೂ ಕಾಣಿಸಿಕೊಂಡಿಲ್ಲ.

**ತೀರ/ತೀರಾ**

ತೀರ ಎಂಬ ರೂಪವನ್ನು ಗುಣವಾಚಕವನ್ನಾಗಿಯೂ ಬಳಸಬಹುದೆಂದು ನಿಘಂಟುಗಳು ತಿಳಿಸುತ್ತವೆ. 'ತೀರ ತಡವಾಗಿ ಬರಬೇಡ' ತೀರಾ ಎಂದೂ ಕೆಲವರು ಬರೆಯುವುದುಂಟು. ತೀರ ಎಂಬುದು ತುಂಬ ಮತ್ತು ಬಹಳ ಎಂಬ ಪದಗಳಿಗೆ ಸಮಾನಾರ್ಥಕವಾಗಿಯೂ ಬಳಕೆಯಾಗುವಂತೆ ತೋರುತ್ತದೆ. ಆದರೆ ತುಂಬ ಎಂಬ ರೂಪವನ್ನು ಬಳಸುವ ಕಡೆಗಳಲ್ಲೆಲ್ಲಾ ತೀರ ಎನ್ನುವುದನ್ನು ಬಳಸುವುದು ಸಾಧ್ಯವಿಲ್ಲ. 'ತುಂಬ ಮಳೆ' ಎಂಬಲ್ಲಿ 'ತೀರ ಮಳೆ' ಎನ್ನುವುದು ಅಷ್ಟು ಸರಿಯಾದ ಪ್ರಯೋಗವೆನಿಸುವುದಿಲ್ಲ. ತೀರ ಎನ್ನುವುದು ವಿಶೇಷಣವಾಗಿ ಬಳಕೆಯಾದರೂ ಅದು ಬೇರೊಂದು ವಿಶೇಷಣ (ನಾಮ ಅಥವಾ ಕ್ರಿಯಾ)ದ ಪರಿಣಾಮವನ್ನು ಹೆಚ್ಚಿಸುವ ಕೆಲಸವನ್ನು ಮಾಡುವ ಪ್ರಸಂಗವೇ ಹೆಚ್ಚೆಂದು ತೋರುತ್ತದೆ. ಈ 'ತೀರ' ಎಂಬ ರೂಪಕ್ಕೂ ಬಹಳ ಹಳೆಯ ಚರಿತ್ರೆ ಇದ್ದಂತಿಲ್ಲ.

**ನಾಟಕೀಯ/ಸಿನಿಮೀಯ**

ಸಂದರ್ಭಾನುಸಾರ ಈ ಎರಡೂ ಪದಗಳನ್ನು ನಾವು ಬಳಸುವಾಗ ಇವೆರಡರ ನಡುವೆ ಇರಬಹುದಾದ ಅರ್ಥವ್ಯತ್ಯಾಸದ ಬಗೆಗೆ ಗಮನಹರಿಸುವುದಿಲ್ಲ: ಸಮಾನಾರ್ಥಕಗಳೋ ಎಂಬಂತೆ ಪರಿಗಣಿಸುತ್ತೇವೆ. ಅನಿರೀಕ್ಷಿತ ಮತ್ತು ಅಸಹಜ ಘಟನೆಗಳನ್ನು ವಿವರಿಸುವಾಗ ಈ ಪದಗಳನ್ನು ಬಳಸುತ್ತೇವೆಯಲ್ಲವೇ? ನಾಟಕದಲ್ಲಿ ಅಥವಾ ಸಿನಿಮಾದಲ್ಲಿ ಬರುವ ಘಟನೆಗಳು ಅನಿರೀಕ್ಷಿತ ಅಥವಾ ಅಸಹಜ ಎಂದು ತಿಳಿಯಬಹುದೇ? ಹಾಗೆ ತಿಳಿಯಲು ಯಾವುದೇ ಕಾರಣಗಳಿಲ್ಲ. ಮಾತಿನ ವೈಖರಿಯನ್ನು, ನಡೆನುಡಿಗಳನ್ನು ವಿವರಿಸುವಾಗ ಸಾಮಾನ್ಯವಾಗಿ ನಾಟಕೀಯ ಎಂಬ ಪದವನ್ನು ಬಳಸುತ್ತೇವೆ. ಅಂದರೆ ಅಸಹಜವಾದ ರೀತಿಯಲ್ಲಿ ನಡೆಯುವುದು ನುಡಿಯುವುದನ್ನು ನಾಟಕೀಯ ಎನ್ನಲಾಗುತ್ತದೆ. ನಾಟಕದಲ್ಲಿ ನಟ/ನಟಿ ತನ್ನ ಸಹಜವಾದ ಬಗೆಯನ್ನು ಮರೆಮಾಚಿ ಇನ್ನೊಂದು ಪಾತ್ರದ ಗುಣ ಲಕ್ಷಣಗಳನ್ನು ನಿರೂಪಿಸುವ ಬಗೆಯನ್ನು ನಟನೆ ಎನ್ನುವುದಾದರೆ ಅದೇ ಬಗೆಯ ವರ್ತನೆ ಜೀವನದಲ್ಲಿ ಅಸಹಜ ಅಥವಾ ನಾಟಕೀಯ ಎನ್ನಿಸಿಕೊಳ್ಳುತ್ತದೆ. ಸಿನಿಮಾದಲ್ಲಿ ಘಟನೆಗಳು ನಿರೂಪಿತವಾಗುವಾಗ ಯಾವ ಘಟನೆ ಬೇಕಾದರೂ ಒಂದಾದ ಮೇಲೊಂದು ಬರುವುದು ಸಾಧ್ಯ, ಅಲ್ಲಿ ಅನಿರೀಕ್ಷಿತವಾದುದು ಸಂಭವನೀಯ. ನಿಜಜೀವನದಲ್ಲಿ ಹೀಗೆ ಅನಿರೀಕ್ಷಿತವಾದುದು ನಡೆದಾಗ ಸಿನಿಮೀಯ ಎನ್ನುತ್ತೇವೆ. ಅಂದರೆ ಅಸಹಜವಾದುದು ನಾಟಕೀಯ; ಅನಿರೀಕ್ಷಿತವಾದುದು ಸಿನಿಮೀಯ.

**ಬಂಧನ/ಬಂದೀಖಾನೆ**

ಬಂಧನ ಮತ್ತು ಬಂಧಿ ಇವೆರಡೂ ಬೇರೆಬೇರೆ ಮೂಲದ ಪದಗಳು. ಬಂಧ, ಬಂಧನ, ಬಂಧಿ ಇವೆಲ್ಲವೂ ಸಂಸ್ಕೃತ ಮೂಲದಿಂದ ಬಂದಿವೆ. ಈ ಪದಗಳಲ್ಲಿ ಮಹಾಪ್ರಾಣ ಬರೆಯುವುದು ಸಹಜ ಮತ್ತು ರೂಢಿ. ಆದರೆ ಬಂದೀಖಾನೆ ಎಂಬ

ಪದವು ಪರ್ಸೋ–ಅರಾಬಿಕ್ ಮೂಲದಿಂದ ಬಂದಿದೆ. ಬಂದ್ ಎಂಬ ಪದವೂ ಇದರ ಸಂಬಂಧಿಯೇ. ಇಲ್ಲಿ ಮಹಾಪ್ರಾಣ ಬರೆಯುವ ಅಗತ್ಯವಿಲ್ಲ. ಬಂಧಿ ಎಂದರೂ ಬಂಧನದಲ್ಲಿರುವ ವ್ಯಕ್ತಿ ಎಂಬ ಅರ್ಥ ಬರುತ್ತದೆ. ಹಾಗಾಗಿ ಖೈದಿ ಎನ್ನುವ ಅರ್ಥದಲ್ಲಿ ಬಂದಿ ಮತ್ತು ಬಂಧಿ ಎಂಬ ಎರಡೂ ಪದಗಳನ್ನು ಬಳಸುವ ಅವಕಾಶವಿದೆ.

**ಸಕಾರ/ನಕಾರ/ಚಕಾರ**

ಈ ಬಗೆಯ ಪದಗಳು ಬಳಕೆಯಲ್ಲಿ ಇವೆ. ಮಾತಿಗೆ ಉತ್ತರ ನೀಡುವಾಗ ಏಕಾಕ್ಷರಗಳನ್ನು ಬಳಸುವ ಬಗೆಯೊಂದು ಉಂಟಷ್ಟೆ. ಸ, ನ ಮತ್ತು ಚ ಎಂಬ ಧ್ವನಿಗಳ ಮೂಲಕ ಉತ್ತರ ನೀಡುವ ಕ್ರಮವನ್ನು ಸಕಾರ, ನಕಾರ ಮತ್ತು ಚಕಾರಗಳೆಂದು ಹೇಳುವುದುಂಟು. ಇವು ನಿರ್ದಿಷ್ಟ ಪ್ರತಿಕ್ರಿಯೆಗಳನ್ನು ಸೂಚಿಸುತ್ತವೆ. ಏನಾದರೂ ಪ್ರತಿಕ್ರಿಯೆ ಸೂಚಿಸುವುದು ಅಥವಾ ಸೂಚಿಸದಿರುವುದನ್ನು ಚಕಾರವೆತ್ತುವುದು ಎನ್ನುತ್ತೇವೆ. ಸಾಮಾನ್ಯವಾಗಿ ಉತ್ತರ ನೀಡದಿರುವಾಗ ಚಕಾರವೆತ್ತಲಿಲ್ಲ ಎನ್ನುವುದು ರೂಢಿ. ಒಪ್ಪಿಗೆಯನ್ನು ನೀಡುವುದು ಸಕಾರಾತ್ಮಕ ಉತ್ತರವಾಗುತ್ತದೆ. ಸಮ್ಮತಿಯನ್ನು ಸೂಚಿಸದಿರುವುದು ನಕಾರಾತ್ಮಕ ಉತ್ತರ. ಸಕಾರಾತ್ಮಕ ಎನ್ನುವುದಕ್ಕೆ ಧನಾತ್ಮಕ ಅಥವಾ ಇತ್ಯಾತ್ಮಕ ಎಂಬ ರೂಪಗಳೂ ಬಳಕೆಯಲ್ಲಿವೆ. ಹಾಗೆಯೇ ನಕಾರಾತ್ಮಕ ಎನ್ನುವುದಕ್ಕೆ ಋಣಾತ್ಮಕ ಅಥವಾ ನೇತ್ಯಾತ್ಮಕ ಎಂಬ ರೂಪಗಳೂ ಇವೆ. ವಿದ್ಯುತ್ ಸಂಬಂಧದ ವಿವರಣೆಯಲ್ಲಿ ಧನಾತ್ಮಕ ಮತ್ತು ಋಣಾತ್ಮಕ ಎನ್ನುವ ಪದಗಳಿಗೆ ಧ್ರುವ (ಧೃವಅಲ್ಲ)ಗಳು ಎಂಬ ವಿಶೇಷ ಅರ್ಥವೂ ಇದೆ.

**ಪ/ಫ/ಫ಼**

ಕನ್ನಡದಲ್ಲಿ ಪ ಮತ್ತು ಫಗಳು ಬರೆವಣಿಗೆಯಲ್ಲಿ ಕಂಡು ಬರುವ ಧ್ವನಿಗಳು. ಆದರೆ ಉಚ್ಚಾರಣೆಯಲ್ಲಿ ಕೇಳಿ ಬರುವ ಧ್ವನಿಗಳೆಂದರೆ ಪ ಮತ್ತು ಫ಼ ಫ ಮತ್ತು ಫ಼ಗಳ ನಡುವೆ ಏನು ವ್ಯತ್ಯಾಸವಿದೆ? ಫ ಎಂಬುದು ಮಹಾಪ್ರಾಣ. ಪ ಉಚ್ಚರಿಸುವಾಗ ಹೆಚ್ಚು ಒತ್ತಡದಿಂದ ಉಸಿರನ್ನು ಹೊರಹಾಕಿದರೆ ಅದು ಫ ಎಂದು ಕೇಳಿಸುತ್ತದೆ. ಆದರೆ ಫ಼ ಉಚ್ಚರಿಸುವಾಗ ಉಸಿರು ಹೆಚ್ಚು ಒತ್ತಡದಿಂದ ಹೊರ ಬರುವುದು ಮಾತ್ರವಲ್ಲ; ತುಟಿಗಳ ನಡುವೆ ಕಿರಿದಾದ ಜಾಗವನ್ನು ಉಂಟುಮಾಡಿ ಆ ಧ್ವನಿಯನ್ನು ಉಚ್ಚರಿಸುತ್ತೇವೆ. ಹೆಚ್ಚು ಜನರು ಪದಮಧ್ಯದಲ್ಲಿ ಫ಼ಕಾರವನ್ನು ಸಹಜವೆಂಬಂತೆ ಉಚ್ಚರಿಸುತ್ತಾರೆ. ವಿಫಲ, ಅಪಘಾತ ಮುಂತಾದ ಪದಗಳ ಉಚ್ಚಾರಣೆಯನ್ನು ಮತ್ತೆಮತ್ತೆ ಕೇಳಿಸಿಕೊಳ್ಳಿ. ಈ ಅಂಶ ಸ್ಪಷ್ಟವಾಗುತ್ತದೆ. ಫ಼ಕಾರ (F) ಇಂಗ್ಲಿಶಿನಲ್ಲಿ ಒಂದು ಮುಖ್ಯ ಧ್ವನಿ. ಈ ಧ್ವನಿಯನ್ನು ಹೊಂದಿರುವ ಪದಗಳನ್ನು ಕನ್ನಡದಲ್ಲಿ ಬಳಸುವಾಗ ಸಾಮಾನ್ಯವಾಗಿ ಫ಼ದ ಬದಲು ಫವನ್ನು ಬರೆಯುವುದು ರೂಢಿ. ಉದಾ: ಫೀ, ಕಾಫಿ, ಫೈನ್ ಇತ್ಯಾದಿ. ಆದರೆ ಬರೆದಿರುವ ಫ ವನ್ನು ಮಹಾಪ್ರಾಣದಂತೆ ಉಚ್ಚರಿಸುವ ಬದಲು ಹೆಚ್ಚಾಗಿ ಫ಼ಕಾರ ಸಹಿತವಾಗಿಯೇ ಉಚ್ಚರಿಸುತ್ತೇವೆ. ಕೆಲವರು ಪದಾದಿಯ ಫ಼ಕಾರವನ್ನು ಪಕಾರ (ಅಲ್ಪ ಪ್ರಾಣದಂತೆ ಉಚ್ಚರಿಸುತ್ತಾರೆ) ಈವರೆಗೆ ನಮ್ಮ ಬರವಣಿಗೆಯಲ್ಲಿ, ಕೊನೆಯ ಪಕ್ಷ ಮುದ್ರಣ ಮತ್ತು ಗಣಕಗಳಲ್ಲಿ ಫ಼ಕಾರವನ್ನು ಬರೆಯುವ ವಿಧಾನ ಹೆಚ್ಚಾಗುತ್ತಿದೆ.

## ಮಹಾಪ್ರಾಣಗಳು

ನಮ್ಮ ಶಾಲಾವ್ಯಾಕರಣಗಳು ವರ್ಣಮಾಲೆಯಲ್ಲಿ ಹತ್ತು ಮಹಾಪ್ರಾಣಾಕ್ಷರಗಳನ್ನು ನಿರೂಪಿಸುತ್ತವೆ. ಅವುಗಳನ್ನು ಬರೆಯಲು ಕಲಿಸುವುದುಂಟು. ಆದರೆ ಮಹಾಪ್ರಾಣಗಳನ್ನುಳ್ಳ ಪದಗಳಲ್ಲಿ ಬಹುಪಾಲು ಸಂಸ್ಕೃತದಿಂದ ಬಂದು ಸೇರಿರುವಂತಹವು. ಈ ಮಾತನ್ನು ನಿರಾಕರಿಸುವ ಕೆಲವರು ಕನ್ನಡದ ಕೆಲವು ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳಲ್ಲಿ ಮಹಾಪ್ರಾಣಗಳ ಬಳಕೆ ಉಚ್ಚಾರಣೆಯಲ್ಲೂ ಇರುವುದನ್ನು ಉದಾಹರಣೆಯಾಗಿ ನೀಡುತ್ತಾರೆ. ಬೀದರ್, ಗುಲ್ಬರ್ಗಾ ಮತ್ತು ಧಾರವಾಡ ಪ್ರದೇಶದಲ್ಲಿ ಘಾಳಿ, ಘಾಬರಿ, ಧೊರಿ ಮುಂತಾದ ಪದಗಳು ಕೇಳಿ ಬರುತ್ತವೆ. ಆದ್ದರಿಂದ ಕನ್ನಡಕ್ಕೆ ಮಹಾಪ್ರಾಣಗಳು ಅವಶ್ಯವೆನ್ನುವುದುಂಟು. ಹೀಗಿದ್ದರೂ ಆ ಪ್ರದೇಶದ ಶಾಲೆಗಳಲ್ಲೂ ಈ ಪದಗಳನ್ನು ಅಲ್ಪಪ್ರಾಣಗಳನ್ನು ಬಳಸಿ ಬರೆಯುತ್ತಾರೆ ಎಂಬುದನ್ನು ಗಮನಿಸಬೇಕು. ಅಂದರೆ ಉಚ್ಚಾರಣೆಗೆ ಸಂಬಂಧಿಸಿದಂತೆ ಮತ್ತು ಬರೆವಣಿಗೆಗೆ ಸಂಬಂಧಿಸಿದಂತೆ ಮಹಾಪ್ರಾಣಗಳಿಗೆ ಬೇರೆಬೇರೆ ನಿಯಮಗಳು ಬಳಕೆಯಾಗುವಂತಿದೆ. ಬರೆವಣಿಗೆಗಾದರೂ ಮಹಾಪ್ರಾಣ ಅಗತ್ಯವೇ ಎಂಬುದು ಬೇರೆಯೇ ಪ್ರಶ್ನೆ.

ಒಂದು ವೇಳೆ ಮಹಾಪ್ರಾಣಗಳನ್ನು ಕನ್ನಡ ಬರೆವಣಿಗೆಯಿಂದ ಕೈಬಿಟ್ಟೆವೆಂದು ತಿಳಿಯೋಣ. ಆಗ ಏನಾಗುತ್ತದೆ? ಮುಖ, ಧಾರೆ, ಫಲ, ಭೇದ, ಭಯ ಮುಂತಾದ ಪದಗಳನ್ನು ಮುಕ, ದಾರೆ, ಪಲ, ಬಯ ಎಂದು ಬರೆಯಬೇಕಾಗುತ್ತದೆ. ಇದರಿಂದ ಮುಜುಗರವಾಗುತ್ತದೆ ಎನ್ನುವುದು ಒಂದು ಸಂಗತಿ. ಇನ್ನೊಂದು ಸಂಗತಿಯುಂಟು. ರಥ ಎನ್ನುವುದನ್ನು ರತ, ಧನ ಎನ್ನುವುದನ್ನು ದನ ಎಂದೆಲ್ಲ ಬರೆದರೆ ತಪ್ಪು ಅರ್ಥಗಳು ಬರುತ್ತವೆಯಲ್ಲವೇ? ಅಥವಾ ದನ ಎಂಬುದಕ್ಕೆ ಆಗ ಎರಡು ಅರ್ಥಗಳಾಗುತ್ತವೆ. ಹಾಗೆಯೇ ರತ ಎಂಬುದಕ್ಕೂ ಕೂಡ. ಹೀಗೆ ಒಂದೇ ರೂಪಕ್ಕೆ ಎರಡು ಅರ್ಥಗಳಿರುವುದು ಭಾಷೆಗೆ ಅಸಹಜವಲ್ಲ. ಸಂದರ್ಭಾನುಸಾರ ಆಯಾ ಅರ್ಥಗಳನ್ನು ನಾವು ಗ್ರಹಿಸುತ್ತೇವೆ. ಅಲ್ಲದೆ ಹೀಗೆ ಮಹಾಪ್ರಾಣಗಳನ್ನು ಬರೆವಣಿಗೆಯಿಂದ ತೊರೆಯುವುದರಿಂದ ಎರಡರ್ಥವುಳ್ಳ ಪದಗಳು ಕನ್ನಡದಲ್ಲಿ ಎಷ್ಟು ಉಂಟಾಗಬಹುದು? ಇಪ್ಪತ್ತೆರಡು ಎಂದು ತಜ್ಞರು ಲೆಕ್ಕ ಹಾಕಿದ್ದಾರೆ. ಇದು ಬಹು ದೊಡ್ಡ ಸಮಸ್ಯೆಯಲ್ಲ. ಆದರೆ ಮುಜುಗರದ ಮಾತಿದೆಯಲ್ಲ; ಅದೇ ದೊಡ್ಡ ಸಮಸ್ಯೆ. ಅದನ್ನು ಮೀರಲು ಬಹುಜನರು ಸಿದ್ಧರಿಲ್ಲ.

ಕನ್ನಡದಲ್ಲಿ ಮಹಾಪ್ರಾಣಗಳನ್ನು ಬಳಸಿ ಬರೆಯುವ ಇನ್ನೊಂದು ಬಗೆಯ ಪದಗಳಿವೆ. ಇವು ಸಂಸ್ಕೃತ ಮೂಲದವಲ್ಲ. ಇಂಗ್ಲಿಶ್ ಅಥವಾ ಪರ್ಸೋ-ಅರಾಬಿಕ್ ಮೂಲದವು. ಕಛೇರಿ, ಛೇರ್ಮನ್, ಆಫೀಸು, ಖಬರ್, ಲಂಚಖೋರ, (ಅರಬಿ) ಠಾಕಣ, ಫೋನು, ಥಿಂಕ್ ಮುಂತಾದ ಪದಗಳು. ಈ ಎಲ್ಲ ಪದಗಳು ಮೂಲ ಉಚ್ಚಾರಣೆಯಲ್ಲಿ, ಅಂದರೆ ಆಯಾ ಮೂಲಭಾಷೆಗಳಲ್ಲಿ ಮಹಾಪ್ರಾಣಯುಕ್ತವಾಗಿಲ್ಲ. ಏಕೆಂದರೆ ಆ ಭಾಷೆಗಳಲ್ಲಿ ಮಹಾಪ್ರಾಣಗಳೇ ಇಲ್ಲ. ಇಂಗ್ಲಿಶ್, ಅರಾಬಿಕ್ ಮತ್ತು ಪರ್ಶಿಯನ್‌ಗಳಲ್ಲಿ ಇರುವ, ಆದರೆ ಕನ್ನಡದಲ್ಲಿ ಇಲ್ಲದ ಕೆಲವು ಧ್ವನಿಗಳನ್ನು ನಾವು ಬರೆಯುವಾಗ ಮಹಾಪ್ರಾಣಾಕ್ಷರಗಳನ್ನು ಬಳಸುತ್ತೇವೆ. ಈ ಹಿಂದೆ ಪ/ಫ ಮತ್ತು

ಘಗಳ ಬಗ್ಗೆ ಬರೆದ ಟಿಪ್ಪಣಿಯನ್ನು ಗಮನಿಸಿ. ಒಂದು ವೇಳೆ ಆ ಪದಗಳನ್ನು ಅಲ್ಪ ಪ್ರಾಣಾಕ್ಷರಗಳನ್ನು ಬಳಸಿ ಬರೆದರೆ ಅದರಿಂದ ಮೂಲಉಚ್ಚಾರಣೆಗೆ ಅನ್ಯಾಯವಾಗುತ್ತದೆ ಎಂದು ವಾದಿಸಲು ಬರುವುದಿಲ್ಲ. ಏಕೆಂದರೆ ನಾವು ಮಹಾಪ್ರಾಣಾಕ್ಷರ ಬಳಸಿ ಬರೆದರೂ ಅದು ಮೂಲಉಚ್ಚಾರಣೆಯಾಗಿರುವುದಿಲ್ಲ.

ಮಹಾಪ್ರಾಣಗಳನ್ನು ಬಳಸಿ ಬರೆಯುವ ಇನ್ನೊಂದು ಬಗೆಯ ಪದಗಳು ಕನ್ನಡದಲ್ಲಿವೆ. ಇವು ಅನುಕರಣ ವಾಚಿಗಳು. ಝಲ್ಲನೆ, ಝಳಝಳ, ಫಕ್ಕನೆ, ಫಲಫಲ, ಥಳಥಳ ಇತ್ಯಾದಿ. ಇಂತಹ ಪದಗಳ ಸಂಖ್ಯೆ ಯಾವುದೇ ಭಾಷೆಯಲ್ಲಿ ಬಹಳ ಕಡಿಮೆ. ಕನ್ನಡದಲ್ಲಿ ಹೀಗೆ ಮಹಾಪ್ರಾಣಗಳನ್ನು ಬಳಸಿ ಬರೆಯುವ ಅನುಕರಣವಾಚಿಗಳ ಸಂಖ್ಯೆ ಇನ್ನೂ ಕಡಿಮೆ. ಅನುಕರಣವಾಚಿಗಳು ಸಾಮಾನ್ಯವಾಗಿ ಕಣ್ಣು ಅಥವಾ ಕಿವಿಗೆ ಸಂಬಂಧಿಸಿದ ಅನುಭವವೊಂದನ್ನು ನಿರೂಪಿಸುತ್ತಿರುತ್ತವೆ. ಅವಧಾರಣೆಗಾಗಿ ಅಂತಹ ಪದಗಳನ್ನು ಬರೆಯುವಾಗ ಮಹಾಪ್ರಾಣಗಳನ್ನು ಬರೆಯುವುದು ರೂಢಿಯಲ್ಲಿದೆ. ಅವುಗಳಿಗೆ ಖಚಿತ ನಿಯಮಗಳನ್ನು ನಿರೂಪಿಸಲು ಬರುವುದಿಲ್ಲ. ತಟ್ಟನೆ ಅಥವಾ ಥಟ್ಟನೆ ಎನ್ನುವುದರಿಂದ ಪರಿಣಾಮದಲ್ಲಿ ಏನೂ ವ್ಯತ್ಯಾಸವಾಗಲಾರದು. ಈ ಅನುಕರಣವಾಚಿಗಳನ್ನು ಅಲ್ಪಪ್ರಾಣಾಕ್ಷರಗಳನ್ನು ಬಳಸಿ ಬರೆಯುವುದರಿಂದ ಏನೂ ತೊಂದರೆಯಾಗುವುದಿಲ್ಲ.

**ಹೇಳಿತೀರದು/ಹೇಳತೀರದು**

ಹಿರಿಯ ಬರೆಹಗಾರ ಯಶವಂತ ಚಿತ್ತಾಲರು (ಅವರ ಅನುಮತಿ ಇಲ್ಲದೆ ಅವರನ್ನು ಇಲ್ಲಿ ಹೆಸರಿಸಿದ್ದೇನೆ) ಈ ಎರಡು ರೂಪಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಮೊದಲ ರೂಪ ಅವರ ಬಳಕೆಯಲ್ಲಿದೆ. ಎರಡನೆಯ ರೂಪವೂ ಬೇರೆಯವರ ಬಳಕೆಯಲ್ಲಿ ಕಾಣಸಿಗುತ್ತಿರುವುದರಿಂದ ಅವರಿಗೆ ಸಂದೇಹ ಉಂಟಾಗಿದೆ. ಎಷ್ಟು ಹೇಳಿದರೂ ಮುಗಿಯದು ಎಂಬ ಅರ್ಥದಲ್ಲಿ ಹೇಳಿತೀರದು ಎಂಬ ರೂಪವೇ ಸರಿ. ಆದರೆ ಎಷ್ಟು ಪ್ರಯತ್ನಪಟ್ಟರೂ ಹೇಳಲು ಸಾಧ್ಯವಾಗದು ಎಂಬ ಅರ್ಥದಲ್ಲಿ ಹೇಳತೀರದು ಎಂಬ ಪ್ರಯೋಗ ಸರಿಯಾಗದು. ಹೇಳ ಎಂಬುದು ಹೇಳಲು ಎಂಬುದರ ಸವಕಳಿ. ಉದಾ: ನೋಡಲುಬನ್ನಿ/ನೋಡಬನ್ನಿ, ತಿನ್ನಲು ಬನ್ನಿ/ತಿನ್ನಬನ್ನಿ, ಕಟ್ಟಲು ಬನ್ನಿ/ ಕಟ್ಟಬನ್ನಿ ಇತ್ಯಾದಿ. ಆದರೆ ಹೇಳಲಾಗದು ಎಂಬುದಕ್ಕೆ ಪರ್ಯಾಯವಾಗಿ ಹೇಳತೀರದು ಎಂಬ ರೂಪದ ಬಳಕೆಯೇ ಸರಿಯೆಂದು ತೋರುತ್ತದೆ.

**ಪಾಕಿಸ್ತಾನ/ಪಾಕಿಸ್ಥಾನ**

ಈ ಎರಡು ರೂಪಗಳಲ್ಲಿ ಯಾವುದು ಸರಿ ಎಂಬ ಬಗ್ಗೆ ಈವರೆಗೆ ಸಂದೇಹಗಳು ಇದ್ದ ಹಾಗೆ ತೋರುತ್ತಿಲ್ಲ. ಆದರೆ ಕೆಲವು ಸಮಯದಿಂದ ಈಚೆಗೆ ಪಾಕಿಸ್ಥಾನ ಎಂಬ ರೂಪ ನಿಯತವಾಗಿ ಪತ್ರಿಕೆಗಳಲ್ಲಿ ಕಾಣತೊಡಗಿದೆ. ಸ್ತಾನ್ ಎಂಬುದು ಪರ್ಶಿ

ಅರಾಬಿಕ್ ಮೂಲದ ದೇಶವಾಚಿಪದ ಉದಾ: ತುರ್ಕಿಸ್ತಾನ, ಅಫಘಾನಿಸ್ತಾನ, ಹಿಂದೂಸ್ತಾನ ಇತ್ಯಾದಿ. ಸ್ಥಾನ ಇದು ಸಂಸ್ಕೃತ ಮೂಲದ ದೇಶವಾಚಿ ಪದ. ಪಾಕಿಸ್ತಾನ ಪದ ಹೇಗೆ ನಿರ್ಮಾಣಗೊಂಡಿತು ಎಂಬ ಬಗ್ಗೆ ಈಗಾಗಲೇ ಗೊತ್ತಿರುವ ವಿಷಯ. ಯಾವ ಯಾವ ನಾಡುಗಳಿಂದ ಆ ದೇಶವನ್ನು ವಿಭಜಿಸಿ ನಿರ್ಮಿಸಲಾಯಿತೋ ಆ ನಾಡುಗಳ ಮೊದಲ ಅಕ್ಷರಗಳು ಆ ಹೆಸರಿನಲ್ಲಿ (ಪಾಕಿ) ಇವೆಯೆಂಬ ಪ್ರತೀತಿ ಇದೆ. ಅಲ್ಲಿರುವ ಸ್ತಾನವಂತೂ ಸ್ಥಾನವಲ್ಲ; ಅದು ಸ್ತಾನವೇ ಸರಿ.

**ಬದಲಿಲ್ಲ**

**ಭಾರತದ ನಿಲುವು ಬದಲಿಲ್ಲ**. ಈ ವಾಕ್ಯದಲ್ಲಿ ಬದಲಿಲ್ಲ ಎಂದರೇನು? ಇದು ಪತ್ರಿಕೆಗಳಲ್ಲಿ ಆಗಾಗ ಕಾಣಿಸಿಗುವ ಪ್ರಯೋಗ. ಬದಲಾವಣೆ ಇಲ್ಲ ಎಂಬ ಅರ್ಥದಲ್ಲಿ ಬದಲಿಲ್ಲ ಎಂಬ ರೂಪವನ್ನು ಬಳಸಿದ ಹಾಗಿದೆ. ಹೀಗಾಗ ಬೇಕಾದರೆ ಅದರ ಹಿಂದಿನ ನಾಮಪದಕ್ಕೆ ಅಲ್ಲಿ ಎಂಬ ವಿಭಕ್ತಿ ಪ್ರತ್ಯಯ (ಅಥವಾ ಮತ್ತೆ ಯಾವುದಾದರೂ ಸೂಕ್ತ ವಿಭಕ್ತಿ ಪ್ರತ್ಯಯ)ಸೇರಬೇಕು. ಆ ಹಿಂದಿನ ನಾಮಪದ ಪ್ರಥಮಾ ವಿಭಕ್ತಿಯಲ್ಲಿ ಇರುವುದು ಸಾಧ್ಯವಿಲ್ಲ. ಉದಾ: ಭಾರತದ ನಿಲುವಿನಲ್ಲಿ ಬದಲಾವಣೆ ಇಲ್ಲ. ದಿನದ ಉಷ್ಣತೆಯಲ್ಲಿ ಬದಲಾವಣೆ ಇಲ್ಲ. ಈ ವಾಕ್ಯಗಳು ಸರಿ. ಆದರೆ **ದಿನದ ಉಷ್ಣತೆ ಬದಲಾವಣೆ ಇಲ್ಲ** ಎಂಬ ವಾಕ್ಯ ಸರಿಯಲ್ಲ. ಬದಲು ಎಂಬುದು ಒಂದು ನಾಮಪದ. ಅದಕ್ಕೆ ಇಲ್ಲ ಎಂಬ ರೂಪವನ್ನು ಸೇರಿಸುವುದಾದರೆ ಮೇಲೆ ಹೇಳಿದ ನಿಯಮದ ಪಾಲನೆ ಅನಿವಾರ್ಯ. ಏಕೆ ಈ ತಪ್ಪು ಪ್ರಯೋಗವಾಗುತ್ತಿದೆ ಎಂದರೆ ಬದಲು ಪದವನ್ನು ಒಂದು ಕ್ರಿಯಾಅವ್ಯಯ ಎಂದೋ (ಉದಾ: ಹೇಳಲು, ನೋಡಲು, ಓಡಲು) ಅಥವಾ ಕ್ರಿಯಾಪದವೆಂದೋ (ಉದಾ: ಕದಲು) ತಿಳಿಯಲಾಗಿದೆ. ಇದು ರೂಪಸಾಮ್ಯದಿಂದ ಆಗಿರುವ ಗೊಂದಲವೆಂದು ತೋರುತ್ತದೆ.

**ಬದಲಲಿ**

'ಬದಲಿಲ್ಲ' ಎಂಬ ಪ್ರಯೋಗವನ್ನು ಕುರಿತು ಬರೆದ ಅನಂತರದಲ್ಲಿ ಇನ್ನೊಂದು ಪತ್ರಿಕೆಯಲ್ಲಿ 'ಬದಲಲಿ' ಎಂಬ ಪ್ರಯೋಗ ಕಾಣ ಸಿಕ್ಕಿತು. ಬದಲಾಗಲಿ ಎಂಬ ಅರ್ಥದಲ್ಲಿ ಈ ಪ್ರಯೋಗ ಮಾಡಲಾಗಿದೆ. ನೋಡಲಿ, ಬರಲಿ, ಹೋಗಲಿ, ಮಾಡಲಿ ಮುಂತಾದ ಪ್ರಯೋಗಗಳನ್ನು ಗಮನಿಸಿದರೆ 'ಅಲಿ' ಎಂಬ ಸಂಭಾವನಾರ್ಥ ಪ್ರತ್ಯಯವು ಕ್ರಿಯಾಧಾತುಗಳಿಗೆ ಮಾತ್ರ ಸೇರುತ್ತದೆ ಎನ್ನುವುದು ಗೊತ್ತಾಗುತ್ತದೆ. ಬದಲು ಎನ್ನುವುದು ನಾಮಪದ. ಇದನ್ನು ಕ್ರಿಯಾರೂಪಕ್ಕೆ ಪರಿವರ್ತಿಸದ ಹೊರತು 'ಅಲಿ' ಎಂಬುದು ಸೇರಲಾರದು.

**ಕಂಡವರು ಎಂದರೇನು?**

ಕಂಡವರು ಎಂದರೆ ಪರಿಚಿತರು ಎಂಬ ಅರ್ಥ. ಈ ಅರ್ಥದಲ್ಲಿ 'ಗಾಂಧೀಜಿ ಕಂಡ ಭಾರತ', 'ನಾನು ಕಂಡ ಹಿಮಾಲಯ' ಮುಂತಾದ ವಾಕ್ಯಗಳು ರೂಪುಗೊಂಡಿವೆ.

ಆದರೆ 'ಕಂಡಕಂಡವರಿಗೆಲ್ಲ ನಾನು ಉತ್ತರ ಹೇಳಬೇಕಾಗಿಲ್ಲ' ಎಂಬ ವಾಕ್ಯಗಳಲ್ಲಿ ಕಂಡ ಎಂದರೆ ಪರಿಚಿತ ಎನ್ನುವುದಕ್ಕಿಂತ ಯಾರೋ, ಗೊತ್ತುಗುರಿಯಿಲ್ಲದ, ಅಪರಿಚಿತ ಎಂಬ ಅರ್ಥಗಳೇ ಇದ್ದಂತಿವೆ. ಮೇಲೆ ಹೇಳಿದ ವಾಕ್ಯಗಳಲ್ಲಿ ಕಂಡ ಎಂದರೆ ಪರಿಚಿತ, ಗೊತ್ತಿರುವ ಎಂಬ ಅರ್ಥವನ್ನು ಹೇಳುವುದು ಸಾಧ್ಯವೇ ಎಂದು ಆಲೋಚಿಸಿ, ಆ ಪಲ್ಲಟಕ್ಕೆ ಕಾರಣಗಳೇನು? ಅಪರಿಚಿತ ಎನ್ನುವ ಅರ್ಥದ ಕಂಡ ಎಂಬುದು ಬೇರೆಯದೇ ಪದ. ಇದು ಕಾಣ್ ಎಂಬ ಕನ್ನಡದ ಧಾತುವಿನಿಂದ ಬಂದುದಲ್ಲ. ಇತರ ಕೆಲವು ದ್ರಾವಿಡ ಭಾಷೆಗಳಲ್ಲಿ ಕಂಡ ಎಂಬುದಕ್ಕೆ ಅಪರಿಚಿತ ಎನ್ನುವ ಅರ್ಥದ ರೂಪಗಳಿವೆ. ತಮಿಳು: ಕಂಡವನ್=ಕಣ್ಣಿಗೆ ಬಿದ್ದ ಯಾರೋ ಸಂಬಂಧವಿಲ್ಲದ ವ್ಯಕ್ತಿ. ಕಂಡವಳ್=ಅಪರಿಚಿತ ಹೆಂಗಸು, ಸಂಬಂಧವಿಲ್ಲದ ಹೆಂಗಸು, ಕಂಡಾರ್=ಅಪರಿಚಿತರು. ಕೋತ ಭಾಷೆಯಲ್ಲಿ: ಕಂಡೋನ್=ಸಂಬಂಧಿತನಲ್ಲದ ವ್ಯಕ್ತಿ. ಕಂಡೋಳ್=ಅಪರಿಚಿತ ಹೆಂಗಸು. ಈ ರೂಪಗಳನ್ನು ಗಮನಿಸಿದರೆ ಕನ್ನಡದ ಈ 'ಕಂಡ' ಕೂಡ ಬೇರೆಯ ಪದವೆಂದು ತಿಳಿಯುತ್ತದೆ. ಮೇಲೆ ಹೆಸರಿಸಿದ ಭಾಷೆಗಳೆಲ್ಲವೂ ಕನ್ನಡ ಬಂಧುಭಾಷೆಗಳು.

### ಇಲ್ಲದ/ಇರದ

ಇವೆರಡೂ ರೂಪಗಳನ್ನು ಸಮಾನಾರ್ಥಕಗಳಂತೆ ಬಳಸುವುದು ರೂಢಿ, ಇಲ್ಲದ ಮತ್ತು ಇರದ ರೂಪಗಳು ನಾಮಪದಗಳಿಗೆ ಮತ್ತು ಕ್ರಿಯಾರೂಪಗಳಿಗೆ ಸೇರಬಲ್ಲವು. ಉದಾ: ಪರಿಚಯವಿಲ್ಲದ/ಪರಿಚಯವಿರದ, ನಗೆಯಿಲ್ಲದ/ನಗೆಯಿರದ, ನೋಡಿಲ್ಲದ/ ನೋಡಿರದ, ಹೇಳಿಲ್ಲದ/ಹೇಳಿರದ ಇತ್ಯಾದಿ. ಎಷ್ಟೇ ನಿದರ್ಶನಗಳನ್ನು ಗಮನಿಸಿದರೂ ಈ ಎರಡೂ ರೂಪಗಳಿಗೆ ಸಮಾನಾರ್ಥಕ ಬಳಕೆ ಇರುವಂತೆಯೇ ತೋರುತ್ತದೆ. ಆದರೆ 'ಇಲ್ಲದ' ಎಂಬ ರೂಪ ಕ್ರಿಯಾ ಅವ್ಯಯವೊಂದಕ್ಕೆ ಸೇರುವ ಸಾಧ್ಯತೆ ಇರುವಂತೆ 'ಇರದ' ಎಂಬ ರೂಪ ಸೇರುವ ಸಾಧ್ಯತೆ ಇಲ್ಲ. ಉದಾ. 'ಬರಲಿಲ್ಲದ' ಎಂಬ ರೂಪವಿರುವಂತೆ 'ಬರಲಿರದ' ಎಂಬ ರೂಪ ಸಾಧ್ಯವಿಲ್ಲ. ಒಂದು ವೇಳೆ ಅಂಥ ರೂಪವೊಂದು ಸಾಧ್ಯವೆಂದು ವಾದಿಸಿದರೂ ಎರಡೂ ರೂಪಗಳ ಅರ್ಥದಲ್ಲಿ ಸಾಕಷ್ಟು ವ್ಯತ್ಯಾಸಗಳು ಇರಲೇಬೇಕು.

### ಸಂತಾಪ ಸೂಚಿಸು, ಪ್ರತಿಭಟನೆ ವ್ಯಕ್ತಪಡಿಸು, ಶುಭಾಶಯ ಕೋರು

ಇವೆಲ್ಲ ದಿನವೂ ನಾವು ಕಾಣುವ ಕ್ರಿಯಾರೂಪಗಳು, ಇವುಗಳನ್ನು ಭಾಷಿಕಕ್ರಿಯೆಗಳು ಎನ್ನುತ್ತೇವೆ. ನಾವು ಬಳಸುವ ಭಾಷೆಯಲ್ಲಿ ಬರುವ ಕ್ರಿಯಾಪದಗಳನ್ನು ಒಮ್ಮೆ ಎಚ್ಚರದಿಂದ ಗಮನಿಸೋಣ. ಕೆಲವು ಕ್ರಿಯಾಪದಗಳಿಗೆ ಲೋಕಸಂವಾದಿಯಾದ ಘಟನೆಯೊಂದು ನಡೆದಿರುವುದು ಅಗತ್ಯ. 'ಅವನು ಶತಕವನ್ನು ಗಳಿಸಿದನು' ಎಂಬಲ್ಲಿ ನೂರು ರನ್‌ಗಳನ್ನು ಪಡೆದ ಘಟನೆ ವಾಸ್ತವವಾಗಿ ನಡೆದಿರಬೇಕು. ಇಲ್ಲದಿದ್ದರೆ ವಾಕ್ಯದ ಪ್ರಸ್ತಾವವನ್ನು ಸುಳ್ಳು ಎನ್ನುತ್ತೇವೆ. ಆದರೆ ಈ ಮಾತನ್ನು ಎಲ್ಲ ಕ್ರಿಯಾಪದಗಳಿಗೂ ಅನ್ವಯಿಸಲು ಬರುವುದಿಲ್ಲ. **'ಶ್ರೀಯುತರ ನಿಧನಕ್ಕೆ ಸಚಿವರು ಅತೀವ ಸಂತಾಪ ವ್ಯಕ್ತಪಡಿಸಿದರು'** ಎಂಬ ವಾಕ್ಯವನ್ನು ಗಮನಿಸಿ. 'ಅತೀವ ಸಂತಾಪ ವ್ಯಕ್ತಪಡಿಸುವ' ಕ್ರಿಯೆ ವಾಸ್ತವವಾಗಿ ನಡೆಯುವ ಘಟನೆಯಲ್ಲ. ಅದು ಭಾಷಿಕವಾಗಿ ಮಾತ್ರ ಸಂಭವಿಸುವ ಕ್ರಿಯೆ. ಏಕೆಂದರೆ

ಈ ವಾಕ್ಯದ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಯಾವ ಪರಿಕರಗಳೂ ಇಲ್ಲ. ಈ ಬಗೆಯ ಕ್ರಿಯೆಗಳನ್ನು ಭಾಷಿಕಕ್ರಿಯೆಗಳು ಎನ್ನುತ್ತೇವೆ.

**ಮಾಲೀಕ/ಮಾಲಿಕ/ಮಾಲಕ**

ಈ ಮೂರೂ ರೂಪಗಳು ಬರೆಹ ಹಾಗೂ ಮಾತಿನಲ್ಲಿ ಬಳಕೆಯಲ್ಲಿವೆ. ಪರ್ಸೋ-ಅರಾಬಿಕ್ ಮೂಲದ ಈ ಪದ ಮಾಲಿಕ್ ಆಗಿ ಹಿಂದಿ ಮತ್ತು ಉರ್ದುವಿನಲ್ಲಿ ಬಳಕೆಯಲ್ಲಿದೆ. ಮಾಲಿಕ ಎನ್ನುವ ಪದಕ್ಕೆ ಹೂಮಾಲೆಯನ್ನು ಕಟ್ಟುವವ ವ್ಯಕ್ತಿ ಎಂಬ ಅರ್ಥವನ್ನು ನಿಘಂಟುಗಳು ಕೊಡುತ್ತವೆ. ಈ ಅರ್ಥಕ್ಕೆ ಕಾರಣಗಳು ಸ್ಪಷ್ಟ. ಮಾಲಾ ಎಂಬ ಸಂಸ್ಕೃತ ಪದದಿಂದ ಅದನ್ನು ಸಾಧಿಸಬಹುದು. ಆದರೆ ಯಜಮಾನ ಎಂಬ ಅರ್ಥದಲ್ಲಿ ಮಾಲಿಕ ಎಂಬ ರೂಪವೇ ಸರಿಯಾದುದು. ಮರಾಠಿ ಪ್ರಭಾವವಿರುವ ಕನ್ನಡ ಪ್ರದೇಶಗಳಲ್ಲಿ ಮಾಲಕ ಎಂಬ ರೂಪ ಬಳಕೆಯಲ್ಲಿದೆ. ಮಾಲ್ಕಿ ಎಂಬ ಸಂಬಂಧಿತ ಪದವೂ (ಅನುಭೋಗದ ಹಕ್ಕು ಎಂಬ ಅರ್ಥ) ಬಳಕೆಯಲ್ಲಿದೆ.

**ಬೇಸಗೆ/ಬೇಸಿಗೆ**

ಈ ಎರಡೂ ರೂಪಗಳು ಚಾಲ್ತಿಯಲ್ಲಿವೆ. ಬೇಸಗೆ ಎಂಬುದು ಬಳಕೆಯಲ್ಲಿ ಎಷ್ಟು ಹಳೆಯದೋ ಬೇಸಿಗೆ ಎಂಬುದೂ ಅಷ್ಟೇ ಹಳೆಯದು. ನಿಘಂಟುಗಳು ವೈಶಾಖ ಎಂಬ ಸಂಸ್ಕೃತ ಪದದ ತದ್ಭವವೆಂದು ಇದನ್ನು ಗುರುತಿಸುತ್ತವೆ. (ಮಧ್ಯ ಆರ್ಯನ್ ಭಾಷೆಗಳಲ್ಲಿ ಬರುವ ಬೈಸಾಕಿ ರೂಪವನ್ನು ನೆನಪು ಮಾಡಿಕೊಳ್ಳಿ) ಕನ್ನಡದ ದಾಯಾದಿ ಭಾಷೆಗಳಾದ ತಮಿಳು, ಕೊಡವ, ತುಳುಗಳಲ್ಲಿ ಈ ಪದ ವೇಸಿಗಯ್, ವೇಸಿಗ ಎಂದಾಗಿ ಬಳಕೆಯಲ್ಲಿದೆ. ಮೇಲುನೋಟಕ್ಕೆ ಬಿಸಿಲಿಗೂ ಬೇಸಗೆಗೂ ಸಂಬಂಧವಿರುವುದರಿಂದ ಇವೆರಡು ಪರಸ್ಪರ ಒಂದೇ ಮೂಲದಿಂದ ಬಂದಿರಬಹುದು ಎಂದು ತೋರುವುದು ಸಹಜ. ಆದರೆ ಬಿಸಿಲು ಅಚ್ಚ ದೇಶ್ಯಪದ.

**ಮದ್ಯ ಸೇವಿಸಿ ವಾಹನ ನಡೆಸಬೇಡಿ**

ಈ ಎಚ್ಚರಿಕೆಯ ವಾಕ್ಯವನ್ನು ಹಲವು ಕಡೆಗಳಲ್ಲಿ ನಾವು ನೋಡುತ್ತೇವೆ. (ಹಾಗೆ ನಮಗೆ ಕಾಣಸಿಗುವ ವಾಕ್ಯ ಹೀಗಿರುತ್ತದೆ. ಮದ್ಯಪಾನ ಸೇವಿಸಿ ವಾಹನ ಚಲಿಸಬೇಡಿ. ಇದನ್ನು ನಾನು ತಿದ್ದಿ ಬರೆದಿದ್ದೇನೆ.) ಈ ವಾಕ್ಯವನ್ನು ಎರಡು ಸಾಲುಗಳಲ್ಲಿ ಬರೆದರೆ ಏನಾಗುತ್ತದೆ? ಮದ್ಯಸೇವಿಸಿ/ವಾಹನ ಚಲಿಸಬೇಡಿ. ಅಂದರೆ ಮೊದಲ ಸಾಲು ಒಂದು ಪೂರ್ಣವಾಕ್ಯವಾಗಿ ತೋರುತ್ತದೆ. ಮತ್ತು ಮದ್ಯ ಸೇವಿಸುವ ಮತ್ತು ವಾಹನ ನಡೆಸುವ ಎರಡು ಕ್ರಿಯೆಗಳ ನಡುವೆ ಯಾವುದೇ ಸಂಬಂಧ ಗೋಚರವಾಗುವುದಿಲ್ಲ. ಇಂಥ ಇನ್ನಿತರ ವಾಕ್ಯಗಳನ್ನು ನೋಡಿ. ಮನೆ ಕಸಗುಡಿಸಿ/ರಸ್ತೆಗೆ ಎಸೆಯಬೇಡಿ; ಸಿಗರೇಟು ಸೇದಿ/ಎಸೆಯಬೇಡಿ. ಇದಕ್ಕೆ ಕನ್ನಡ ಕ್ರಿಯಾಪದಗಳ ಸ್ವರೂಪವೇ ಕಾರಣವಾಗಿದೆ. ಸಾಮಾನ್ಯವಾಗಿ ಉಕಾರಾಂತ ಕ್ರಿಯಾಧಾತುಗಳು ಮತ್ತು ಇಸು ಪ್ರತ್ಯಯ ಸೇರಿ ಆಗಿರುವ ಕ್ರಿಯಾಪದಗಳಲ್ಲಿ ಈ ಗೊಂದಲಗಳು ಉಂಟಾಗುತ್ತವೆ. ಇಂತಹ ಪ್ರಸಂಗಗಳು ಹೆಚ್ಚಿಲ್ಲವಾದರೂ ಆಗಾಗ, ಅಲ್ಲಲ್ಲಿ ಕಾಣಸಿಗುತ್ತವೆ.

**ಅಲ್ಲ, ನಾನು ಹೇಳೋದು**

ಹೀಗೆ ವಾಕ್ಯಗಳು ಆರಂಭವಾಗುವುದುಂಟು. ಸಾಮಾನ್ಯವಾಗಿ ಸಂಭಾಷಣೆಯಲ್ಲಿ ಅಲ್ಲಿಯವರೆಗೆ ಮಾತನಾಡುವ ವ್ಯಕ್ತಿಯೊಬ್ಬರು ತಮ್ಮ ಮಾತನ್ನು ಮೊದಲು ಮಾಡುವಾಗ ಈ ಪ್ರಯೋಗವನ್ನು ಮಾಡುವುದುಂಟು. ಇಲ್ಲಿರುವ ಅಲ್ಲ ಎಂಬ ಪದಕ್ಕೆ ಯಾವುದೇ ನಿಷೇಧಾರ್ಥವಿಲ್ಲ. ಇಂತಹ ಪದಗಳನ್ನು ಸಂಕಥನಸೂಚಕಗಳೆಂದು ಕರೆಯುತ್ತಾರೆ. ಇವುಗಳಿಗೆ ನಿರ್ದಿಷ್ಟ ಅರ್ಥವಿರುವುದಿಲ್ಲ; ಆದರೆ ಗೊತ್ತಾದ ಕೆಲಸವಿರುತ್ತದೆ. ಆ ಕೆಲಸ ಸಂಭಾಷಣೆ ಅಥವಾ ಮಾತಿಗೆ ಸಂಬಂಧ ಪಟ್ಟಿರುತ್ತದೆ. ಈ ಬಗೆಯ ಹಲವಾರು ಸಂಕಥನಸೂಚಕಗಳನ್ನು ನಾವು ಬಳಸುತ್ತೇವೆ. ನೋಡಿ, ಏನು, ಗೊತ್ತಾ ಇತ್ಯಾದಿ. ಅನ್ಯಭಾಷೆಯ ಪದಗಳನ್ನೂ ಈ ಕೆಲಸಕ್ಕೆ ಬಳಸುವುದುಂಟು. ಸೋ, ಬಟ್, ಆಕ್ಚುಯಲಿ ಇತ್ಯಾದಿಗಳು. ಈ ಸೂಚಕಗಳು ವಾಕ್ಯದ ಮೊದಲೇ ಬರಬೇಕೆಂದಿಲ್ಲ. ವಾಕ್ಯದ ನಡುವೆ ಅಥವಾ ಕೊನೆಯಲ್ಲಿ ಕೂಡಾ ಬರಬಲ್ಲವು.

**ಅಮ್ಮಮ್ಮ**

ಅಮ್ಮಮ್ಮ, ಅಮ್ಮಮ್ಮಾ ಎಂಬ ರೂಪಗಳು ಅಚ್ಚರಿಯನ್ನು ಸೂಚಿಸುವ ಪದಗಳಾಗಿ ಬಳಕೆಯಾಗುತ್ತವೆ. ಅಗಾಧತೆಯನ್ನು, ಗಹನತೆಯನ್ನು ಸೂಚಿಸಲು ಈ ಪದಗಳನ್ನು ಬಳಸುವುದುಂಟು. ಆದರೆ ಕನ್ನಡದ ಕೆಲವು ಉಪಭಾಷೆಗಳಲ್ಲಿ ತಾಯಿಯ ತಾಯಿಯನ್ನು (ಅಂದರೆ ಅಜ್ಜಿಯನ್ನು) ಅಮ್ಮಮ್ಮ ಎಂದು ಕರೆಯುವುದುಂಟು. ಇದು ತೆಲುಗಿನ ಪ್ರಭಾವದಿಂದ ಬಂದ ಪ್ರಯೋಗವಾಗಿರುವಂತಿದೆ. ಮತ್ತೆ ಕೆಲವು ಸಾಮಾಜಿಕಭಾಷೆಗಳಲ್ಲಿ ತಾಯಿಯ ಅಕ್ಕನನ್ನು (ಅಂದರೆ ದೊಡ್ಡಮ್ಮನನ್ನು) ಅಮ್ಮಮ್ಮ ಎನ್ನುವುದುಂಟು. ಆದರೆ ಈ ಬಳಕೆ ತುಂಬಾ ಕಡಮೆ. (ಕಡಮೆಯೋ ಕಡಿಮೆಯೋ ಎಂದು ಕೇಳಬೇಡಿ. ಇದೂ ಕೂಡ ಬಹು ಚರ್ಚಿತವಾದ ಪದವೇ ಆಗಿದೆ. ಕರಾವಳಿಯ ಭಾಷಾತಜ್ಞರು ಕಡಮೆ ಎಂಬ ರೂಪವನ್ನು ಬಳಸಿದ್ದುಂಟು)

**ಅನನುಕರಣೀಯ**

ಈಚೆಗೆ 'ಶ್ರೀಯುತರ ವಿದ್ವತ್ತು ಮತ್ತು ಪಾಂಡಿತ್ಯ ಅನನುಕರಣೀಯ' ಎಂಬ ವಾಕ್ಯವನ್ನು ಓದಿದೆ. ಕೊಂಚ ಗಲಿಬಿಲಿಯಾಯಿತು. ಅನುಕರಣೀಯ ಎಂಬ ಪದ ಅಲ್ಲಿ ನಿರೀಕ್ಷಿತ. ವಾಕ್ಯವನ್ನು ಬರೆದವರ ಉದ್ದೇಶ ಸ್ಪಷ್ಟ. ಆ ವಿದ್ವತ್ತು ಮತ್ತು ಪಾಂಡಿತ್ಯವನ್ನು ಯಾರೂ ಅನುಕರಿಸಲಾರರು ಎಂದು ಅವರು ಹೇಳಬೇಕಾಗಿದೆ. ಆದರೆ ವಾಕ್ಯದಲ್ಲಿ ಬರುವ ಅರ್ಥವೇ ಬೇರೆ. ಅನನುಕರಣೀಯ ಎಂದರೆ ಅನುಕರಿಸಬಾರದುದು ಎಂಬ ಅರ್ಥ ಬರುತ್ತದೆ. ಅನನುಕರಣೀಯ ಎಂದರೆ ಅನುಕರಿಸಬಾರದು ಎಂಬ ಅರ್ಥಕೂಡ ಸಾಧ್ಯ. ಇದು ಅವರ ಅರ್ಥವಿರಲಾರದು. ಸಂಭವ, ಅಸಂಭವ ಮತ್ತು ಅಸಂಭವನೀಯ ಎಂಬ ಮೂರು ರೂಪಗಳನ್ನು ಪರಿಶೀಲಿಸಿದರೆ ಇಲ್ಲಿನ ಗೊಂದಲ ಏನೆಂಬುದು ಗೊತ್ತಾಗುತ್ತದೆ. ನಿಷೇಧವು ಸಂಭವಕ್ಕೆ ಸೇರುವುದೋ ಅಥವಾ ಅಸಂಭವಕ್ಕೆ ಸೇರುವುದೋ ಎಂಬುದೇ ಸಮಸ್ಯೆ. ಹಾಗೆಯೇ ಅನನುಕರಣೀಯ ಎಂಬಲ್ಲಿ ಅನ್ ಎಂಬ ನಿಷೇಧ ಅನುಕರಣಕ್ಕೋ ಅಥವಾ ಅನುಕರಣೀಯಕ್ಕೋ?

**ಹೈದೆ**

ಹುಡುಗಿ, ಅದರಲ್ಲೂ ಪಡ್ಡೆ ಹುಡುಗಿ ಎನ್ನುವ ಅರ್ಥದಲ್ಲಿ ಹೈದೆ ಎಂಬ ಪ್ರಯೋಗ ಈಚೆಗೆ ಓದಲು ಸಿಕ್ಕಿತು. ಹೈದೆಯರು ಎಂಬ ಬಹುವಚನ ರೂಪವೂ ಅಲ್ಲಿ ಬಳಕೆಯಾಗಿತ್ತು. ಹೈದ ಎಂದರೆ ಹುಡುಗ. ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಈ ರೂಪ ಈಗಲೂ ಬಳಕೆಯಲ್ಲಿದೆ. ಹೈಕಳು ಎಂದರೆ ಹುಡುಗರು ಅಥವಾ ಹುಡುಗಿಯರು ಎಂಬ ಅರ್ಥವಿದೆ. ಆದರೆ ಹುಡುಗಿ ಎನ್ನುವ ಅರ್ಥದಲ್ಲಿ ಹೈದೆ ಎನ್ನುವ ರೂಪ ಹಿಂದೆ ಬಳಕೆಯಾಗಿಲ್ಲ. ಪಸುಳೆ, ಹಸುಳೆ ಎಂದರೆ ಎಳೆಯ ಮಗು. ಪೆಯ್ಯ ಎಂದರೆ ಎಳೆಗರು. ಹಲವು ದ್ರಾವಿಡ ಭಾಷೆಗಳಲ್ಲಿ ಎಳೆಗರು ಎಂಬ ಅರ್ಥದಲ್ಲಿ ಸಂವಾದಿ ರೂಪಗಳಿವೆ. ತೆಲುಗಿನಲ್ಲಿ ಪೈದಲ್ಲಿ ಎಂದರೆ ಹೆಂಗಸು. ಗೊಂಡಿಯಲ್ಲಿ ಪೆದಿ ಎಂದರೆ ಹುಡುಗಿ. ಹೈದ ಎಂಬ ರೂಪವನ್ನು ಬಳಸಿದವರು ಈ ಎಲ್ಲ ಪ್ರಯೋಗಗಳನ್ನು ಗಮನಿಸಿದ್ದಾರೆಂದಲ್ಲ. ಅದರ ಹಿನ್ನೆಲೆಗೆ ಈ ಮಾತುಗಳನ್ನು ಗಮನಿಸಬಹುದು ಎಂದಷ್ಟೇ ಈ ವಿವರಣೆ.

**ಸದೆ**

ಸಾಮಾನ್ಯವಾಗಿ ಸದೆ ಬಡಿಯುವುದು ಎಂಬ ಮಾದರಿಯಲ್ಲಿ ಈ ಪದದ ಬಳಕೆಯನ್ನು ಕಾಣುತ್ತೇವೆ. ಅಂದರೆ ಅದನ್ನು ಒಂದು ನಾಮಪದವನ್ನಾಗಿ ಗ್ರಹಿಸುತ್ತಿದ್ದೇವೆ. ಆದರೆ ಇದೊಂದು ಕ್ರಿಯಾಪದ. ಒಂದು ಬಳಕೆಯನ್ನು ಗಮನಿಸಿ 'ಬೌಲಿಂಗ್ ಮೇಲಾಟದಲ್ಲಿ ಆಸೀಸನ್ನು ಸದೆದ ಪಾಕ್' ಇದೊಂದು ಅಪರೂಪದ ಕ್ರಿಯಾಧಾತು. ಪಂಪನ ಕಾಲದಿಂದಲೂ ಬಳಕೆಯಲ್ಲಿದೆ. ತದೆ ಎಂಬುದು ಇದರ ಪರ್ಯಾಯ ರೂಪ. ಇನ್ನೊಂದು ಅಂಶವನ್ನು ಗಮನಿಸಬಹುದು. ಕನ್ನಡದ ಎಕರಾಂತ ಕ್ರಿಯಾಧಾತುಗಳಿಗೆ ಇಕಾರಾಂತ ರೂಪಗಳೂ ಬಳಕೆಯಲ್ಲಿವೆ. ಉದಾ: ಬರೆ/ಬರಿ, ತೆಗೆ/ತೆಗಿ, ಹೊಡೆ/ಹೊಡಿ, ಕರೆ/ಕರಿ ಇತ್ಯಾದಿ. ಹಾಗಾಗಿ ಸದೆಗೆ ಪರ್ಯಾಯವಾಗಿ ಸದಿ ಎಂಬ ರೂಪವನ್ನೂ ನಿರೀಕ್ಷಿಸಬಹುದಲ್ಲವೇ?

**ಹಸಿರು ನಿಶಾನೆ**

"ಸಚಿವರು ಸಮಾರಂಭದಲ್ಲಿ ಯೋಜನೆಗೆ ಹಸಿರು ನಿಶಾನೆ ತೋರಿಸಿದರು" ಎಂಬ ವಾಕ್ಯವನ್ನು ಗಮನಿಸಿ. ಆ ಸಮಾರಂಭದಲ್ಲಿ ಸಚಿವರು ಕೈಯಲ್ಲಿ ಯಾವ ಹಸಿರು ಬಾವುಟವನ್ನೂ ಹಿಡಿದಿರದಿದ್ದರೂ ಹೀಗೆ ಹೇಳುವುದನ್ನು ನಾವು ಒಪ್ಪಿಕೊಳ್ಳುತ್ತೇವೆ. ಹಾಗಿದ್ದಲ್ಲಿ ಇಲ್ಲಿ ಹಸಿರು ನಿಶಾನೆ ತೋರಿಸುವುದು ಎಂದರೇನು? ಮುಂದುವರೆಯಲು ಒಪ್ಪಿಗೆಯನ್ನು ನೀಡುವುದು ಎಂದು ತಾನೆ. ಹಸಿರು ನಿಶಾನೆ ಎಂಬ ಪ್ರಯೋಗ ತುಂಬ ಹಳೆಯದಲ್ಲ. ಇಂಗ್ಲಿಶ್ ಭಾಷೆ ಮತ್ತು ರೈಲು ಪ್ರಯಾಣ ವ್ಯವಸ್ಥೆಯೊಡನೆ ಕನ್ನಡಕ್ಕೆ ಬಂದಂತೆ ತೋರುತ್ತದೆ. ರೈಲಿಗೆ ಗ್ರಿನ್ ಸಿಗ್ನಲ್ ತೋರಿಸುತ್ತಾರಷ್ಟೆ.

ಹೀಗೆ ಇಂಗ್ಲಿಶ್ ಭಾಷೆಯ ವಾಗ್ರೂಢಿಗಳನ್ನು ಕನ್ನಡಕ್ಕೆ ಅನುವಾದಿಸಿಕೊಂಡು ಬಳಸುವುದನ್ನು ಒಪ್ಪಿಕೊಂಡಿದ್ದೇವೆ. ಅಂತಹ ವಾಗ್ರೂಢಿಗಳು ಇಂಗ್ಲಿಶಿನಿಂದ ಬಂದಿವೆ ಎಂಬುದೂ ಎಷ್ಟೋ ವೇಳೆ ನಮಗೆ ಗೊತ್ತಾಗುವುದೇ ಇಲ್ಲ. 'ವಿದ್ವಾಂಸರು ಆ ಸಮಸ್ಯೆಯ

ಬಗ್ಗೆ ಬೆಳಕು ಚೆಲ್ಲಿದರು' ಎಂಬ ವಾಕ್ಯವನ್ನು ನೋಡಿ. ಅಲ್ಲಿ ಬೆಳಕು ಚೆಲ್ಲು ಎಂದರೇನು? ನಮಗೆ ಈವರೆಗೆ ಗೊತ್ತಿರದ ಇಲ್ಲವೇ ಗೊತ್ತಿದ್ದರೂ ನಮಗೆ ಕಾಣದಿದ್ದ ಸಂಗತಿಗಳನ್ನು ತಿಳಿಸಿಕೊಟ್ಟರು ಎಂದು ಆ ಮಾತಿನ ಅರ್ಥ. ಇದೂ 'ಟು ಥ್ರೋ ಲೈಟ್' ಎಂಬ ವಾಗ್ರೂಢಿಯಿಂದ ಮೈತಳೆದಿರುವ ಕನ್ನಡ ರಚನೆ.

ಕನ್ನಡದಲ್ಲಿ ಹೀಗೆ ಹೊಸದಾಗಿ ರೂಪಿಸಿಕೊಂಡ ವಾಗ್ರೂಢಿಗಳೆಲ್ಲವೂ ಕನ್ನಡದ ಜಾಯಮಾನಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತವೆ ಎಂದು ಹೇಳಲು ಬರುವುದಿಲ್ಲ. ಕೆಲವು ಅಸಹಜವಾಗಿ ತೋರಿದರೆ ಮತ್ತೆ ಕೆಲವು ನಗೆಪಾಟಲಿಗೆ ಗುರಿಯಾಗುತ್ತವೆ. ಮತ್ತೂ ಕೆಲವು ನಗೆಹನಿಗಳಿಗೂ ಕಾರಣವಾಗುವುದುಂಟು. ಕನ್ನಡ ಬಳಸಲು ಹಠಮಾಡಿದ ಅಧಿಕಾರಿಯೊಬ್ಬರು ತಮ್ಮ ಕಡತ ಟಿಪ್ಪಣಿಯಲ್ಲಿ 'ಸರಿಯಾದ ಕಾಲುವೆಯಲ್ಲಿ ಹರಿದು ಬರಲಿ' ಎಂದು ಬರೆದದ್ದುಂಟು. 'ಸೆಂಡ್ ಥ್ರೂ ಪ್ರಾಪರ್ ಚಾನೆಲ್' ಎಂಬುದನ್ನು ಕನ್ನಡದಲ್ಲಿ ಹೇಳಲು ಯತ್ನಿಸಿದ್ದರ ಪರಿಣಾಮವಿದು. ಈಚಿನ ದಿನಗಳಲ್ಲಿ ಇಂಗ್ಲಿಶ್ ಬರವಣಿಗೆಯನ್ನು ತುರ್ತಾಗಿ ಕನ್ನಡಕ್ಕೆ ಅನುವಾದಿಸುವ ಭರದಲ್ಲಿ ಅಲ್ಲಿರುವ ಹಲವಾರು ವಾಗ್ರೂಢಿಗಳನ್ನು ಇದ್ದಕ್ಕಿದ್ದಂತೆ ಕನ್ನಡಕ್ಕೆ ಅನುವಾದಿಸುವುದು ಹೆಚ್ಚಾಗಿದೆ. ಆದರೆ ವಾಗ್ರೂಢಿಗಳು ಒಂದು ಭಾಷೆಯನ್ನಾಡುವವರ ಸಾಂಸ್ಕೃತಿಕ ನೆನಪುಗಳಿಗೆ ಹೊಂದಿಕೊಳ್ಳದಿದ್ದರೆ ಅವು ಆ ನುಡಿಯಲ್ಲಿ ನೆಲೆಯೂರಲಾರವು.

## ನಲ್ಲ ನಲ್ಲೆ

ಬಸವನಗೌಡ ಕೆ (ಹಗರಿಬೊಮ್ಮನಹಳ್ಳಿ) ಇವರು ಕೇಳುವ ಪ್ರಶ್ನೆ ಹೀಗಿದೆ: 'ನಲ್ಲ-ನಲ್ಲೆ, ಪ್ರಿಯ-ಪ್ರಿಯೆ ಎಂಬ ಪದಗಳಂತೆ ಲಲನೆ-ಲಲನ ಎಂಬ ಪದಗಳನ್ನು ಯಾಕೆ ಬಳಸಬಾರದು? ಬಳಸಿದರೆ ತಪ್ಪೇನು?' ನಲ್ಲ-ನಲ್ಲೆ ಇವು ಕನ್ನಡ ಪದಗಳು. ಪ್ರಿಯೆ ಇದು ಸಂಸ್ಕೃತದ ಪ್ರಿಯಾ ಪದದ ತದ್ಭವ. (ಮಾದರಿ: ರಮಾ>ರಮೆ, ಉಮಾ>ಉಮೆ, ಅಪ್ಸರಾ>ಅಪ್ಸರೆ ಮುಂತಾದವು) ಪ್ರಿಯಾ ಎಂಬ ಇನ್ನೊಂದು ರೂಪವನ್ನು ಕನ್ನಡದಲ್ಲಿ ಇರುವಂತೆಯೇ ಬಳಸುತ್ತೇವೆ. ಅದು ಪ್ರಿಯನನ್ನು ಕೂಗಿ ಕರೆಯುವ ಪದ. (ಹಾ ಪ್ರಿಯಾ ಪ್ರಶಾಂತ ಹೃದಯ ಹಾನಿ ಹೊಂದಿದೆಯಾ) ಈ ಪದದ ಕೊನೆಗೆ ಬರು ದೀರ್ಘ ಸ್ವರ ಕೂರಿಕರೆಯುವ ಪದಗಳಲ್ಲಿ ಕಾಣಿಸಿಕೊಳ್ಳುತ್ತದೆ. ರಂಗಾ, ಚನ್ನಾ, ಸೀತೇ, ದೇವೀರೀ ಮೂತಾದವು ಹೀಗೆ ದೀರ್ಘ ಸ್ವರದಿಂದ ಕೊನೆಗೊಳ್ಳುವ ಸಂಸ್ಕೃತದ ಸ್ತ್ರೀಲಿಂಗ ರೂಪಗಳನ್ನು ಕನ್ನಡ ಒಂದೋ ಎಕಾರಾಂತ ಮಾಡಿಕೊಳ್ಳುತ್ತದೆ ಇಲ್ಲವೇ ಆ ದೀರ್ಘ ಸ್ವರವನ್ನು ಹ್ರಸ್ವವನ್ನಾಗಿ ಮಾಡಿಕೊಳ್ಳುತ್ತದೆ. ಉದಾ: ಸೀತಾ>ಸೀತೆ, ನಟೀ>ನಟಿ ಮುಂತಾದವು. ಲಲನ ಎಂಬ ಪುಲ್ಲಿಂಗ ರೂಪವನ್ನು ಕನ್ನಡದಲ್ಲಿ ರೂಪಿಸಿಕೊಳ್ಳಲು ಆಗುವುದಿಲ್ಲ. ಆದರೆ ನಲ್ಲ/ನಲ್ಲೆ ಈ ಪದಗಳಿಗೆ ಕನ್ನಡದ ದನಿ ಕಟ್ಟುಗಳು ಹೊಂದುತ್ತವೆ. ಈ ದನಿಕಟ್ಟನ್ನು ಕನ್ನಡದ್ದಲ್ಲದ ಪದಗಳಲ್ಲಿ ಬಳಸುವುದಿಲ್ಲ.

## ಬರೆಹದಲ್ಲಿ ಸರಿ ತಪ್ಪು

ಈ ಅಂಕಣದ ಓದುಗರಾಗಿರುವ ಹಲವು ಕನ್ನಡ ಅಧ್ಯಾಪಕರು ಮತ್ತೆ ಮತ್ತೆ ಒಂದು ತಗಾದೆಯ ಮಾತನ್ನು ನನ್ನೆದುರು ಹೇಳುತ್ತಿರುತ್ತಾರೆ. ಈಗಾಗಲೇ ಮಕ್ಕಳು

ಬರೆಯುತ್ತಿರುವ ಕನ್ನಡ ದೋಷಗಳಿಂದ ಕೂಡಿದೆ. ಅವುಗಳನ್ನು ತಿದ್ದುವುದು ಹೇಗೆ ಎನ್ನುವುದೇ ನಮಗೆ ತಲೆನೋವಾಗಿದೆ. ಇನ್ನು ನೀವು ಹೇಳುವಂತೆ ಅವರ 'ತಪ್ಪು'ಗಳಿಗೆಲ್ಲ ಮಣೆಹಾಕುತ್ತ ಹೋದರೆ ಕನ್ನಡದ ಗತಿ ಏನು ಎಂದು ಕೇಳುತ್ತಿರುತ್ತಾರೆ. ಮೊದಲನೆಯದಾಗಿ ನಾನು ತಪ್ಪುಗಳಿಗೆ ಮಣೆ ಹಾಕಬೇಕೆಂದು ಎಲ್ಲಿಯೂ ಹೇಳಿಲ್ಲ; ಆದರೆ ನಾವು ತಪ್ಪು ಎಂದು ತಿಳಿಯುವ ರೂಪಗಳು ಏಕೆ ಹಲವು ಕಡೆ ಮತ್ತೆಮತ್ತೆ ಕಾಣಿಸಿಕೊಳ್ಳುತ್ತವೆ ಎನ್ನುವುದನ್ನು ಗೊತ್ತು ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದೇನೆ. ಎರಡನೆಯದಾಗಿ ಮಕ್ಕಳು ಬರವಣಿಗೆಯಲ್ಲಿ ಮಾಡುತ್ತಿರುವ ತಪ್ಪುಗಳು ಯಾವುವು ಎನ್ನುವುದನ್ನು ಕುರಿತು ಕಲಿಸುವ ಅಧ್ಯಾಪಕರು ತಲೆಕೆಡಿಸಿಕೊಳ್ಳುತ್ತಿಲ್ಲ. ಒಬ್ಬೊಬ್ಬರೂ ಬೇರೆ ಬೇರೆ ಬಗೆಯ ತಪ್ಪುಗಳನ್ನು ಮಾಡುತ್ತಿದ್ದಾರೆಯೇ ಇಲ್ಲವೇ ಒಂದೇ ಬಗೆಯ ತಪ್ಪುಗಳನ್ನು ಹಲವರು ಮಾಡುತ್ತಿದ್ದಾರೆಯೇ ಎಂಬುದನ್ನು ಗುರುತಿಸುತ್ತಿಲ್ಲ. ಶಾಲೆಗಳಲ್ಲಿ ಕನ್ನಡವನ್ನು ಬರೆಯುವ ವಿದ್ಯಾರ್ಥಿಗಳು ಕನ್ನಡ ನುಡಿಯನ್ನು ಕಲಿಯುವ ತರಗತಿಗಳಲ್ಲಿ ಮಾತ್ರವಲ್ಲದೆ ಹಲವು ವಿಷಯಗಳನ್ನು ಕಲಿಯುವ ತರಗತಿಗಳಲ್ಲೂ ಕನ್ನಡವನ್ನು ಬರೆಯುತ್ತಿರುತ್ತಾರೆ. ಹೀಗಿರುವಾಗ ಕನ್ನಡ ತರಗತಿಗಳಲ್ಲಿ ಮಾಡುವ ತಪ್ಪುಗಳಿಗೂ ಬೇರೆ ವಿಷಯಗಳನ್ನು ಕನ್ನಡದಲ್ಲಿ ಬರೆಯುವಾಗ ಮಾಡುವ ಕನ್ನಡ ತಪ್ಪುಗಳಿಗೂ ಏನಾದರೂ ವ್ಯತ್ಯಾಸವಿದೆಯೇ ಎನ್ನುವುದನ್ನು ಕೂಡ ನೋಡಬೇಕು ಮತ್ತು ವ್ಯತ್ಯಾಸಗಳಿದ್ದರೆ ಕಾರಣಗಳನ್ನು ತಿಳಿಯಬೇಕಾಗಿದೆ.

ಸೊಟ್ಟ ಬರವಣಿಗೆಯನ್ನು ಬದಿಗಿಟ್ಟರೆ ವಿದ್ಯಾರ್ಥಿಗಳ ಬರಹಗಳಲ್ಲಿ 1) ಕಾಗುಣಿತದ ತಪ್ಪುಗಳು ಮತ್ತು 2) ರಚನೆಯ ತಪ್ಪುಗಳು ನಮಗೆ ಕಾಣುತ್ತವೆ. ಒಂದು ಪದದ ಬರಹ ರೂಪ ಕಣ್ಣಿನ ಮೂಲಕ ಚಿತ್ರದಂತೆ ಮೆದುಳಿನಲ್ಲಿ ಬೇರೂರದಿದ್ದರೆ ಅಂತಹ ಪದಗಳನ್ನು ಬರೆಯುವಾಗ ಮಕ್ಕಳು ತಾವು ಕಿವಿಯಲ್ಲಿ ಕೇಳಿದ ದನಿಗಳ ಸರಣಿಯನ್ನು ಬರಹದಲ್ಲಿ ಮೂಡಿಸುತ್ತಿರುತ್ತಾರೆ. ಕೇಳಿಸಿಕೊಳ್ಳುವಾಗ ಆಗಿರುವ ತೊಂದರೆಗಳು ಬರವಣಿಗೆಯಲ್ಲೂ ಮೈತಳೆಯುವುದು ಸಹಜ ತಾನೆ. ಆಗ ಕಾಗುಣಿತ ದೋಷಗಳು ಉಂಟಾಗುತ್ತವೆ. ಈ ದೋಷಗಳು ಒಬ್ಬೊಬ್ಬರಲ್ಲಿ ಒಂದೊಂದು ಬಗೆಯುಲ್ಲಿ ಆಗುತ್ತಿರುವುದಿಲ್ಲ. ಅಂತಹವೂ ಕೆಲವು ಇರಬಹುದು. ಅವುಗಳನ್ನು ಬದಿಗಿಟ್ಟರೆ ಎಲ್ಲರೂ ಹೆಚ್ಚಾಗಿ ಒಂದೇ ಬಗೆಯ ಕಾಗುಣಿತದ ತಪ್ಪುಗಳನ್ನು ಮಾಡುತ್ತಿದ್ದರೆ ಆಗ ಅದನ್ನು ಸರಿಪಡಿಸಲು ಒಬ್ಬೊಬ್ಬರನ್ನು ತಿದ್ದುತ್ತ ಕುಳಿತರೆ ಸಾಲದು. ನಮ್ಮ ಕಲಿಕೆಯ ಬಗೆಯಲ್ಲಿಯೇ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ.

ಹೀಗೆಯೇ ರಚನೆಯ ನೆಲೆಯಲ್ಲಿ ಕಾಣಿಸಿಕೊಳ್ಳುವ ತಪ್ಪುಗಳಿಗೆ ಹಲವು ಕಾರಣಗಳಿರುತ್ತವೆ. 1. ಮಕ್ಕಳ ಮೊದಲ ನುಡಿ ಕನ್ನಡ ಅಲ್ಲದಿದ್ದರೆ ಅವರ ಮೊದಲ ನುಡಿಯ ಪದರಚನೆಯ ನಿಯಮಗಳು ಕನ್ನಡದಲ್ಲೂ ತಲೆಹಾಕಬಹುದು. 2. ಕನ್ನಡದ ಬೇರೆ ಬಗೆಗಳನ್ನು ಆಡುವ ಮಕ್ಕಳಾದರೆ ಆ ಕನ್ನಡದ ಬಗೆಗಳಲ್ಲಿ ಇರುವ ಪದರೂಪಗಳು ಬರವಣಿಗೆಯಲ್ಲಿ ಕಾಣಿಸುತ್ತವೆ. 3. ಕಲಿಕೆಯ ನೆಲೆಯಲ್ಲಿ ಪದರಚನೆಯ ನಿಯಮಗಳು ಗಟ್ಟಿಯಾಗಿ ನೆಲೆಯೂರದಿದ್ದರೆ ಆಗಲೂ ಈ ಬಗೆಯ ತಪ್ಪುಗಳು ಆಗುತ್ತವೆ. ಅಂದರೆ ಮಕ್ಕಳ ಬರವಣಿಗೆಯಲ್ಲಿ ತಪ್ಪುಗಳಾಗುತ್ತಿವೆ ಎನ್ನುತ್ತಾ ಕೊರಗುವ ಬದಲು ಅದರ ಮೂಲಚೂಲಗಳನ್ನು ಹುಡುಕಿ ತಿದ್ದುವುದಕ್ಕೆ ಬೇಕಾದ ದಾರಿಗಳನ್ನು ಕಂಡುಕೊಳ್ಳುವುದು ಸರಿಯಾದ ಬಗೆಯಾಗುತ್ತದೆ.

**ಶ, ಷ ಮತ್ತು ಸ**

ಸು. ಕೃಷ್ಣನೆಲ್ಲಿ (ಬೆಳಗಾಂ) ಇವರು ಶ, ಷ ಮತ್ತು ಸ ಎಂಬ ಉಲಿ ಮತ್ತು ಬರಹ ಗುರುತುಗಳ ಬಗೆಗೆ ಬರೆದದ್ದನ್ನು ಗಮನಿಸಿದ್ದಾರೆ. ಅವರು ಕಾಗದದಲ್ಲಿ ಮಂಡಿಸುತ್ತಿರುವುದು ಇಷ್ಟೆ: ಶ,ಷ ಮತ್ತು ಸಗಳು ಬೇರೆ ಬೇರೆ ಉಲಿಗಳು. ಈ ಉಲಿಗಳನ್ನು ಬೇರೆಯಾಗಿ ನುಡಿಯಬೇಕು ಮತ್ತು ಬರೆಯಬೇಕು. ಈ ಮಾತನ್ನು ತಿಳಿಸಿಕೊಡಲು ಸಂಸ್ಕೃತ ನುಡಿಯಿಂದ ಹಲವು ಪದಗಳನ್ನು ಪಟ್ಟಿ ಮಾಡಿಕೊಟ್ಟಿದ್ದಾರೆ. ಸಂಸ್ಕೃತ ನುಡಿಯನ್ನು ಮಾತ್ರ ನೋಡಿದರೆ ಈ ಮೂರು ಉಲಿಗಳನ್ನು ಬೇರೆಬೇರೆಯಾಗಿ ಇರಿಸಬೇಕು ಎನ್ನುವ ಮಾತು ದಿಟ. ಆದರೆ ಕನ್ನಡನುಡಿ ಮತ್ತು ಬರಹಗಳು ಈ ಮೂರು ಉಲಿಗಳನ್ನು ಬೇರೆಬೇರೆಯಾಗಿ ಇರಿಸಿಲ್ಲ ಎನ್ನುವುದೇ ಈ ಅಂಕಣಕಾರ ಹೇಳುತ್ತಿರುವ ಮಾತು. ಯಾವುದು ಸಂಸ್ಕೃತ ನುಡಿಗೆ ಸರಿಯೋ ಅದು ಕನ್ನಡಕ್ಕೆ ಸರಿಯಾಗಬೇಕಿಲ್ಲ. ಯಾವುದು ಕನ್ನಡಕ್ಕೆ ಸರಿಯೋ ಅದು ಸಂಸ್ಕೃತಕ್ಕೆ ಸರಿಹೊಂದಬೇಕಿಲ್ಲ ಎನ್ನುವುದನ್ನೂ ನಾವು ಒಪ್ಪಿಕೊಳ್ಳಬೇಕು. ಕನ್ನಡದ ಮಟ್ಟಿಗೆ ಶ ಮತ್ತು ಷ ಎಂಬ ಎರಡು ನುಡಿಗಳನ್ನು ಬೇರೆಯಾಗಿ ಇರಿಸುವ ಪದಗಳು ಇಲ್ಲ. ಇರುವ ಪದಗಳು ಸಂಸ್ಕೃತದಿಂದ ಬಂದಿರುವಂತಹವು. ಇವುಗಳ ತದ್ಭವಗಳೂ ಬಳಕೆಯಲ್ಲಿವೆ. ಹೀಗೆ ಶ ಮತ್ತು ಷಗಳನ್ನು ಬೇರೆಯಾಗಿ ಇರಿಸದಿದ್ದರೆ ಒಂದೇ ಪದಕ್ಕೆ ಒಂದಕ್ಕಿಂತ ಹೆಚ್ಚು ತಿರುಳು ಇರುವಂತಾಗಿ ಗೊಂದಲ ಉಂಟಾಗುವುದೆಂಬ ದಿಗಿಲಿಗೆ ಹಿಂಜರಿಯಬೇಕಿಲ್ಲ. ಏಕೆಂದರೆ ಹಾಗೆ ಒಂದು ನುಡಿಯಲ್ಲಿ ಹತ್ತಾರು ಅಂತಹ ಪದಗಳು ಇದ್ದೇ ಇವೆ. (ಮೊರೆ,ತೆರೆ,ಕರಿ,ಆಳು ಮುಂತಾದವು)ಹಾಗಾಗಿ ಶ.ಷ ಮತ್ತು ಸಗಳಲ್ಲಿ ಈಗ ಶ ಮತ್ತು ಸಗಳನ್ನು ಮಾತ್ರ ಉಳಿಸಿಕೊಳ್ಳುವುದೇ ಸರಿಯಾದ ದಾರಿ.

ಇಳಿಮನೆ ಸುಭಾಶ್ಚಂದ್ರ ಹೆಗಡೆ (ಹುಬ್ಬಳ್ಳಿ) ಇವರು ಅಜ್ಜಿ/ಆಜಿ ಪದಗಳನ್ನು ಕುರಿತು ಬರೆದದ್ದನ್ನು ಒಪ್ಪಲು ಆಗದೆನ್ನುತ್ತಾರೆ. ಅವರ ಪ್ರಕಾರ ಕುಸುಮಾಜಿ, ರತ್ನಾಜಿ ಪದಗಳಲ್ಲಿ ಇರುವುದು ಗೌರವ ಸೂಚಕವಾಗಿ ಬಳಕೆಯಾಗುವ ಜಿ ಎಂಬ ಪದಭಾಗ. (ಉದಾ. ಗಾಂಧೀಜಿ, ಗುರೂಜಿ ಮುಂ) ಆದರೆ ಜಿ ಎಂಬುದು ಒಂದು ಪ್ರತ್ಯಯವಲ್ಲ. ತನಗೆ ತಾನೆ ಸ್ವತಂತ್ರ ಪದವಾಗಿಯೂ ಬಳಕೆಯಾಗಲ್ಲುದು. ಕನ್ನಡದಲ್ಲಿ ಅಲ್ಲದಿದ್ದರೂ ಹಿಂದಿಯಲ್ಲಿ ಇದನ್ನು ಕೇಳುತ್ತೇವೆ. ಈ ಜಿ ಎಂಬ ಪದಭಾಗ ಗೌರವಸೂಚಕವಾಗಿ ಬಳಕೆಯಾಗುವುದೆಂಬುದು ದಿಟ. ಆದರೆ ಇದು ಆಜಿ ಅಲ್ಲ. ಜಿ ಎನ್ನುವುದು ಜೀಯ ಎಂಬುದರ ಕಿರಿರೂಪವಿದ್ದೀತು. ಜೀಯರ್ ಎಂಬ ಪದ ತಮಿಳಿನಲ್ಲಿ ಇದೆಯಷ್ಟೆ. ಈಚೆಗೆ ಈ ಪದಭಾಗ ಗಂಡು ಹೆಣ್ಣು ಪದಗಳಿಗೆಲ್ಲ ಸೇರುತ್ತಿದೆ. ಆಜಿ ಹಾಗಲ್ಲ.

**ಅನ್ಯತ್ರ ಅಲಭ್ಯ**

ಮುಂಡರಗಿಯ ನೀಲಕಂಠಪ್ಪ ಪತ್ತಾರ ಅವರು 'ನಿಮಗಿದು ಅನ್ಯತ್ರ ಅಲಭ್ಯ' ಎಂಬ ವಾಕ್ಯವನ್ನು ಬರೆದು ಅದು ತಮಗೆ ಅರ್ಥವಾಗಲಿಲ್ಲವೆಂದು ಹೇಳಿದ್ದಾರೆ. ಇದು ಯಾವುದೋ ಜಾಹೀರಾತಿನಲ್ಲಿ ಕಂಡು ಬಂದ ವಾಕ್ಯವಿರಬೇಕು. 'ಪ್ರಚಾರ ಮಾಡುತ್ತಿರುವ ವಸ್ತು ಬೇರೆಲ್ಲೂ (=ಅನ್ಯತ್ರ) ಸಿಗದು(=ಅಲಭ್ಯ) ;ನಮ್ಮಲ್ಲಿ ಮಾತ್ರ

ದೊರಕುತ್ತದೆ ' ಎಂದು ಹೇಳುವುದು ಈ ವಾಕ್ಯದ ತಿರುಳು. ಕನ್ನಡದಲ್ಲಿ ಹೇಳಬಹುದಾದ ಮಾತನ್ನು ಉಚ್ಚರಿಸಲು, ಓದಿ ಅರಿಯಲು ತೊಡಕು ತರುವ ಸಂಸ್ಕೃತದ ಪದಗಳನ್ನು ಬಳಸಿ ಹೇಳುವುದು ಹೆಚ್ಚು ಕಡೆ ಕಂಡುಬರುತ್ತದೆ. ಈ ವಾಕ್ಯ ಈ ಬಗೆಯ ತೊಡಕಿನ ರಚನೆಗಳಿಗೆ ಒಂದು ಉದಾಹರಣೆ. ಓದುವವರನ್ನು ಗಮನದಲ್ಲಿರಿಸಿಕೊಂಡು ಕನ್ನಡ ಪದಗಳನ್ನೇ ಬಳಸಿ ಬರವಣಿಗೆಯನ್ನು ಮಾಡುವುದು ಸರಿಯಾದದ್ದು.

**ಕನ್ನಡಿಸು, ಲಂಬಿಸು, ಪತ್ರಿಸು**

ತೂಲಹಳ್ಳಿ(ಹರಿಹರ)ಯ ಟಿ. ಬಸವರಾಜ್ ಅವರು ಕನ್ನಡಿಸು, ಲಂಬಿಸು, ಪತ್ರಿಸು ಮುಂತಾದ ಪದರಚನೆಗಳ ಬಗೆಗೆ ಕೇಳಿದ್ದಾರೆ.

–ಇಸು ಎಂಬ ಪ್ರತ್ಯಯಕ್ಕೆ ಹಲವು ಕೆಲಸಗಳಿವೆ. ಹಿಂದಿನಿಂದಲೂ ಬೇರೆ ಭಾಷೆಯಿಂದ ಪಡೆದುಕೊಂಡ ನಾಮಪದಗಳಿಗೆ –ಇಸು ಪ್ರತ್ಯಯವನ್ನು ಸೇರಿಸಿ ಅದನ್ನೊಂದು ಕ್ರಿಯಾಪದವನ್ನಾಗಿ ಮಾಡುವುದು ಬಳಕೆಯಲ್ಲಿದೆ. ಆಡು ಮಾತಿನಲ್ಲಿ ಹೀಗಾಗುತ್ತಿತ್ತೋ ಇಲ್ಲವೋ ತಿಳಿಯದು. ಕವಿಗಳಂತೂ ಹೀಗೆ ಮಾಡುತ್ತಿದ್ದುದಂತೂ ದಿಟ. ಲಂಬಿಸು(ಲಂಬ+ಇಸು)= ಉದ್ದಮಾಡು, ಪತ್ರಿಸು (ಪತ್ರ+ಇಸು)= ಕಾಗದ ಬರೆ ಈ ಬಗೆಯ ರಚನೆಗಳು. ಕನ್ನಡಿಸು ರಚನೆಯಲ್ಲಿ ನಾಮಪದ ಕನ್ನಡವೇ ಆಗಿದೆ. ಕೆಲವರು ಕನ್ನಡಿ ಎಂಬ ಪದಕ್ಕೂ –ಇಸು ಪ್ರತ್ಯಯವನ್ನು ಸೇರಿಸಿ ಕನ್ನಡಿಸು ರೂಪವನ್ನು ಪಡೆಯುವುದುಂಟು. ಬೇಂದ್ರೆಯವರು ಕನ್ನಡಿಯಲ್ಲಿ ಕಾಣುವಂತೆ ಮಾಡು ಎಂಬ ಅರ್ಥವನ್ನು ನೀಡುವಂತೆ 'ಕನ್ನಡಿಸು' ಪದರಚನೆಯನ್ನು ಬಳಸಿದ್ದಾರೆ. ಕನ್ನಡ ಪದಕ್ಕೆ –ಇಸು ಸೇರಿಸಿದಾಗ ದೊರಕುವ ಕನ್ನಡಿಸು ರೂಪಕ್ಕೆ ಕನ್ನಡದಲ್ಲಿ ಹೇಳು ಎಂಬ ಅರ್ಥ ಬರುತ್ತದೆ. ಈಚೆಗೆ ಬೇರೆ ಭಾಷೆಯ ನಾಮಪದಗಳಿಗೂ –ಇಸು ಹತ್ತಿಸುವುದುಂಟು. ಫೋನಿಸು, ಕುರ್ಚಿಸು, ಕಾಗದಿಸು ಮುಂತಾದ ರಚನೆಗಳು ಬರವಣಿಗೆಯಲ್ಲಿ ಆಗಾಗ ಕಂಡುಬರುತ್ತವೆ. ಅದರಲ್ಲೂ ನಗೆಬರಹಗಳಲ್ಲಿ ಈ ಬಗೆಯ ಪದರಚನೆಗಳು ಹೆಚ್ಚು. ಬರವಣಿಗೆಯಲ್ಲಿ ಕಂಡುಬರುವ ಈ ರಚನೆಗಳು ಕನ್ನಡ ಮಾತಾಡುವವರ ಗ್ರಹಿಕೆಯ ಪದಕೋಶದಲ್ಲಿ ಸೇರಿಕೊಳ್ಳಬಹುದು. ಆದರೆ ಅವರ ಬಳಕೆಯ ಪದಕೋಶದಲ್ಲಿ ಜಾಗ ಪಡೆಯುವುದಿಲ್ಲ.

**ಪ್ರಿ–ಪೂರ್ವ**

ಶ್ರೀ ಬಸವರಾಜ್ ಅವರು 'ಪೂರ್ವ ಪ್ರಾಥಮಿಕ ಶಿಕ್ಷಣ' ಪದರಚನೆಯು ಸರಿಯೇ ಎಂದು ಕೇಳುತ್ತಾರೆ. ಇದು ಆಡಳಿತ ಕನ್ನಡದಲ್ಲಿ ಮೈತಳೆದಿರುವ ಪದ. ಇಂಗ್ಲಿಶಿನಲ್ಲಿ ಪ್ರಿ– ಎಂಬುದನ್ನು ಪದದ ಮೊದಲಿನ ಭಾಗವನ್ನಾಗಿ ಹೊಂದಿರುವ ಹಲವು ರಚನೆಗಳಿವೆ.( ಪ್ರಿ ಯೂನಿವರ್ಸಿಟಿ, ಪ್ರಿ ಮ್ಯಾರಿಟಲ್, ಪ್ರಿ ಪೋಲ್ ಸರ್ವೆ, ಪ್ರಿ ಪೇಯ್ಡ್ ಮುಂತಾದವು) ಇಂತಹ ರಚನೆಗಳನ್ನು ಕನ್ನಡದಲ್ಲಿ ಹೇಳಲೆಂದು ಹೊಸ ಪದಗಳನ್ನು ರಚಿಸಿದವರು ಹೆಚ್ಚಾಗಿ ಸಂಸ್ಕೃತದಿಂದ ನಾವು ಪಡೆದುಕೊಂಡ ಪದಗಳನ್ನು ಬಳಸಿಕೊಳ್ಳುತ್ತಾರೆ. 'ಪೂರ್ವ ಪ್ರಾಥಮಿಕ ಶಿಕ್ಷಣ' ಕೂಡ ಇದೇ ಬಗೆಯದು. ಆದರೆ ಪ್ರಿ– ಎಂಬ ಪದದ ಮೊದಲಿನ ಭಾಗವನ್ನು ಕನ್ನಡದಲ್ಲಿ ಹೇಳುವಾಗ ಇಂಗ್ಲಿಶಿನ ಪದಗಳ ಸರಣಿಯ

ಮಾದರಿಯನ್ನು ಅನುಕರಿಸಬೇಕಿಲ್ಲ. ಪ್ರಿ ಮ್ಯಾರಿಟಲ್ ಎಂಬುದನ್ನು ವಿವಾಹ ಪೂರ್ವ ಎಂದು ಕನ್ನಡಿಸಿಕೊಳ್ಳಲಾಗಿದೆ. ಇದು ಕನ್ನಡದ ಪದರಚನೆಯ ಬಗೆಗೆ ಹತ್ತಿರವಾದುದು. ಹೀಗಾಗಿ 'ಪ್ರಾಥಮಿಕ ಪೂರ್ವ ಶಿಕ್ಷಣ' ಎಂಬುದು ಹೆಚ್ಚು ಸರಿಯಾದೀತು. ಇದಕ್ಕಿಂತ ಸರಿಯಾದ ರಚನೆಯನ್ನು ಹುಡುಕಿಕೊಳ್ಳುವವರೆಗೆ ಇದನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಇನ್ನೊಬ್ಬ ಓದುಗರು ಒಳಗಣ ಮತ್ತು ಒಳಗಿನ ಎಂಬ ರಚನೆಗಳ ನಡುವೆ ಅರ್ಥ ವ್ಯತ್ಯಾಸವಿದೆಯೇ ಮತ್ತು ಅವುಗಳಲ್ಲಿ ಯಾವುದು ಹೆಚ್ಚು ಸರಿ ಎಂದು ಕೇಳಿದ್ದಾರೆ. ಮೇಲಣ/ಮೇಲಿನ, ಕೆಳಗಣ/ಕೆಳಗಿನ, ಹೊರಗಣ/ಹೊರಗಿನ ಜೋಡಿ ರಚನೆಗಳು ಒಂದರ ಬದಲು ಇನ್ನೊಂದು ಬಳಕೆಯಾಗಬಲ್ಲವು. ತೆಂಕಣ, ಬಡಗಣ, ಮೂಡಣ, ಪಡುವಣ ರಚನೆಗಳಿಗೆ ಬದಲಾಗಿ ತೆಂಕಿನ, ಬಡಗಿನ, ಮೂಡಿನ, ಪಡುವಿನ ರಚನೆಗಳು ಬಳಕೆಯಾಗುವುದು ಕಡಿಮೆ. ಕರಾವಳಿಯ ಬರಹಗಾರರಲ್ಲಿ ಈ ರೂಪಗಳು ಆಗಾಗ ಬಳಕೆಯಾಗಿರುವುದುಂಟು. –ಇನ ರೂಪಗಳು ಹೆಚ್ಚಾಗಿ ಮಾತು ಮತ್ತು ಬರಹಗಳೆರಡರಲ್ಲೂ ಕಂಡು ಬಂದರೆ –ಅಣ ರೂಪಗಳು ಬರೆಹದಲ್ಲಿ ಮಾತ್ರ ಓದಲು ಸಿಗುತ್ತವೆ. ನಡುಗನ್ನಡದಲ್ಲಿ ಹೆಚ್ಚಾಗಿದ್ದ ಈ –ಅಣ ರೂಪಗಳು ಈಗ ಬಳಕೆಯಿಂದ ಹಿಂದೆ ಸರಿಯುವಂತೆ ತೋರುತ್ತದೆ. –ಅಣ ರೂಪಗಳಿಗೆ ಬಳಕೆಯೂ ಕಡಿಮೆ. ಅದನ್ನು ಬಳಸಿ ಹೊಸ ರಚನೆಗಳನ್ನು ಪಡೆಯುವುದು ಆಗದ ಮಾತು. ಆದರೆ –ಇನ ರೂಪಗಳಿಗೆ ಬಳಕೆ ಹೆಚ್ಚು. ದಿಕ್ಕು, ಜಾಗ ಸೂಚಿಸುವ ಪದಗಳಲ್ಲದೆ ಬೇರೆ ಎಲ್ಲ ಉಕಾರದಿಂದ ಕೊನೆಗೊಳ್ಳುವ ನಾಮಪದಗಳಿಗೂ –ಇನ ಸೇರಬಲ್ಲುದು. ನಾಡಿನ, ಕಾಲಿನ, ನೋಟಿನ, ಕಾರಿನ ಮುಂತಾದ ರೂಪಗಳಿವೆ. ಇಲ್ಲೆಲ್ಲ –ಅಣ ಬಳಕೆ ಆಗದು. ಇದರಿಂದ ತಿಳಿಯುವದೇನು? –ಅಣ ರೂಪಗಳು ಕನ್ನಡದಲ್ಲಿ ಎಂದೋ ಮೈತಳೆದು ಈಗ ಕೆಲವೇ ರಚನೆಗಳಲ್ಲಿ ಮಾತ್ರ ಉಳಿದುಕೊಂಡಿದ್ದರೆ –ಇನ ರೂಪಗಳು ಹೊಸದಾಗಿ ರಚನೆಯಾಗಬಲ್ಲುವು. ಈ –ಇನ ರೂಪಗಳೂ ಬರವಣಿಗೆಗೆ ಸೇರಿವೆ; ಮಾತಿಗಲ್ಲ. ಮಾತಿನಲ್ಲಿ –ಇನ ರೂಪಗಳು ಬದಲಾಗುತ್ತವೆ ನೋಡಿ: ಕಾಲ ಬೆರಳು (=ಕಾಲಿನ ಬೆರಳು), ನಾಡ ಜನರು (=ನಾಡಿನ ಜನರು), ಕಾರ ಬಾಗಿಲು (=ಕಾರಿನ ಬಾಗಿಲು) ನಾವು ಓದುವ ಕನ್ನಡ ಮತ್ತು ಕೇಳಿಸಿಕೊಳ್ಳುವ ಕನ್ನಡದಲ್ಲಿ ಹಲವು ಬದಲಾವಣೆಗಳಿರುತ್ತವೆ ಎನ್ನುವುದಕ್ಕೆ ಇದು ಒಂದು ಉದಾಹರಣೆ.

### ಈ ಕಾರ್ಯಕ್ರಮದ ಪ್ರಾಯೋಜಿಸಿದವರು

"ಈ ಕಾರ್ಯಕ್ರಮದ ಪ್ರಾಯೋಜಿಸಿದವರು" ಎನ್ನುವ ವಾಕ್ಯಭಾಗವನ್ನು ಮೇಲಿಂದ ಮೇಲೆ ಟಿವಿ ಚಾನೆಲ್‌ವೊಂದರಲ್ಲಿ ಕೇಳಿಬರುತ್ತದೆ. "ಈ ಕಾರ್ಯಕ್ರಮವನ್ನು ಪ್ರಾಯೋಜಿಸಿದವರು" ಇಲ್ಲವೇ "ಈ ಕಾರ್ಯಕ್ರಮದ ಪ್ರಾಯೋಜಕರು" ಎಂಬ ವಾಕ್ಯಗಳು ಸರಿಯಾದ ವಾಕ್ಯಗಳು. ಈ ವಾಕ್ಯಗಳ ಬದಲಾಗಿ ಈ ಮೇಲಿನ ವಾಕ್ಯಭಾಗವನ್ನು ಕೇಳಿದಾಗ ಏಕೆ ಹೀಗಾಗುತ್ತಿದೆ ಎಂಬ ಪ್ರಶ್ನೆ ಎದುರಾಗುತ್ತದೆ. ಇಂತಹುವೇ ಕೆಲವು ವಾಕ್ಯಗಳನ್ನು ನೋಡಿ: ಚಿತ್ರದ ನಿರ್ದೇಶಕರು/ ಚಿತ್ರವನ್ನು ನಿರ್ದೇಶಿಸಿದವರು. ಈ ಎರಡೂ ಸರಿಯಾದ ವಾಕ್ಯಗಳಾದರೆ ಚಿತ್ರದ ನಿರ್ದೇಶಿಸಿದವರು ಎಂಬುದು ಸರಿಯಲ್ಲ.

**ಹೋಲಿಕೆ**

ನಾವು ಯಾರೊಂದಿಗಾದರೂ ಮಾತಾಡುತ್ತಿದ್ದೇವೆ ಎಂದುಕೊಳ್ಳಿ. ಅವರಿಗೆ ನಾವು ಕಂಡದ್ದನ್ನೇನೊ ಹೇಳಬೇಕಿದೆ. ಆಗ 'ನಾವು ಕಂಡದ್ದನ್ನು' ತಿಳಿಸುವ ಬಗೆಯನ್ನು ನೋಡೋಣ. ನೀವು ಯಾರನ್ನೋ ನೋಡಿದ್ದೀರಿ. ಅವರು ಹೇಗಿದ್ದರೆಂಬುದನ್ನು ಹೇಳುವಾಗ ಅವರ ಎತ್ತರ, ಕೂದಲಿನ ಬಣ್ಣ, ತೊಗಲಿನ ಬಣ್ಣ, ನಡೆಯುವ ಬಗೆ ಹೀಗೆ ಅವರಿಗೆ 'ಸಂಬಂಧಪಟ್ಟ' ಒಂದು ಸಂಗತಿಯನ್ನು ಎತ್ತಿಕೊಂಡು ತಿಳಿಸುವುದು ಒಂದು ದಾರಿ. ಹಾಗೆ ಮಾಡುವ ಮೂಲಕ ನಾವು ಬಣ್ಣಿಸುತ್ತಿರುವ ಚಿತ್ರವನ್ನು ನಾವು ನಮ್ಮಲ್ಲೆ ಮತ್ತೆ ಕಟ್ಟಿಕೊಳ್ಳುತ್ತಿರುತ್ತೇವೆ. ಇದಲ್ಲದೆ ಇನ್ನೊಂದು ಹಾದಿಯನ್ನೂ ನಾವು ಹಿಡಿಯಬಹುದು. ಆಗ ನಾವು ಆ ವ್ಯಕ್ತಿಯ ಚಹರೆಗಳನ್ನು ಬೇರೆ ಯಾವುದಕ್ಕೂ ಹೋಲಿಸ ತೊಡಗುತ್ತೇವೆ. ನಾವು ನೀಡುವ ಹೋಲಿಕೆಗಳನ್ನು ನಮ್ಮ ಬೇರೆ ಯಾವುದೋ ಅನುಭವದಿಂದ ಪಡೆದುಕೊಂಡಿರುತ್ತೇವೆ. ಉದಾಹರಣೆಗೆ ಅವರು ಕೂದಲನ್ನು ಬಿಟ್ಟಿರುವ ರೀತಿಯನ್ನು ಬೇರೆ ಯಾರೋ ಕೂದಲು ಬಿಟ್ಟಿರುವ ರೀತಿಯಂತಿದೆ ಎನ್ನಬಹುದು. ತೊಟ್ಟ ಉಡುಗೆಯ ಬಣ್ಣವನ್ನು ಹೇಳುವಾಗ ಬೇರೆ ವಸ್ತುವಿನ ಬಣ್ಣದ ಹೋಲಿಕೆಯನ್ನು ಕೊಡಬಹುದು. ನೀಲಿ ಬಣ್ಣದ ಸೀರೆಯನ್ನು ಉಟ್ಟಿದ್ದರೆ 'ಆಕಾಶ ನೀಲಿ' ಎನ್ನಬಹುದು. ಈ ಬಗೆಯಲ್ಲಿ ನಾವು 'ಹೋಲಿಕೆ'ಗಳನ್ನು ಹುಡುಕಿ ಆ ಮೂಲಕ ನಾವು ಬಣ್ಣಿಸುತ್ತಿರುವ ವ್ಯಕ್ತಿಯ ಚಿತ್ರವನ್ನು ಮತ್ತೆ ಕಟ್ಟಿ ಕೊಡುತ್ತಿರುತ್ತೇವೆ. ಈ ಎರಡು ದಾರಿಗಳೂ ಬೇರೆ ಬೇರೆ. ಮೊದಲನೆಯದು ಮೂಲಸಂಗತಿಯೊಂದಿಗೆ 'ನಂಟನ್ನು ಹೊಂದಿರುವ' ವಿವರಗಳನ್ನು ನೆಮ್ಮಿದರೆ ಎರಡನೆದು ಮೂಲ ಸಂಗತಿಯೊಮದಿಎ 'ಹೋಲಿಕೆಯನ್ನು ಹೊಂದಿರುವ' ವಿವರಗಳನ್ನು ನೆಮ್ಮುತ್ತದೆ.

ಈ ಎರಡು ಬಗೆಗಳು ನಾವು ಭಾಷೆಯ ಮೂಲಕ ಅನುಭವ ಲೋಕವನ್ನು ತೆರದಿಡುವ ಎರಡು ದಿಕ್ಕುಗಳನ್ನು ಹೇಳುತ್ತವೆ. ಒಂದು ಚಿಕ್ಕ ಪ್ರಯೋಗವನ್ನು ಮಾಡೋಣ. ಈ ಪ್ರಯೋಗವನ್ನು ಬೇರೆಬೇರೆ ಕಾರಣಗಳಿಗಾಗಿ ಮನಶ್ಶಾಸ್ತ್ರಜ್ಞರು ಬಳಸುತ್ತಾರೆ. ನಿಮ್ಮೆದರು ಕುಳಿತು ಯಾರಾದರೂ 'ಮರ' ಎಂಬ ಪದವನ್ನು ಹೇಳಿದರು ಎಂದುಕೊಳ್ಳಿ. ಆಗ ನಿಮ್ಮ ಮನಸ್ಸಿನಲ್ಲಿ ಮೂಡುವ ಬೇರೆ ಪದಗಳ ಪಟ್ಟಿಯನ್ನು ಮಾಡಿ. ಈ ಪಟ್ಟಿಯಲ್ಲಿ ಎಲೆ, ಬೇರು, ಹಣ್ಣು, ನೆರಳು, ಕಾಯಿ.ಹಕ್ಕಿ, ಗೂಡು, ಸೌದೆ ಮುಂತಾದ ಪದಗಳಿರಬಹುದು. ಇವೆಲ್ಲವೂ ಒಂದಲ್ಲ ಒಂದು ಬಗೆಯಲ್ಲಿ 'ಮರ' ದೊಡನೆ **ನಂಟನ್ನು ಹೊಂದಿರುವ** ಪದಗಳೇ ಆಗಿವೆ. ಕೆಲವರ ಪಟ್ಟಿಯಲ್ಲಿ ನರ, ತರ, ಹರ, ಬರ, ಪುರ ಮುಂತಾದ ಪದಗಳು ಇದ್ದಾವು. ಈ ಪದಗಳು 'ಮರ'ಪದದೊಡನೆ ನಂಟು ಹೊಂದಿವೆ. ಈ ನಂಟು ಮರ ಎಂಬ ಪದದ ದನಿರಚನೆಯ ನೆಲೆಯದ್ದು; ಮರ ಎಂಬ ಲೋಕದ ವಸ್ತುವಿಗೂ ಈ ಪದಗಳಿಗೂ ನಂಟಿಲ್ಲ. ಎಲ್ಲ ಪದಗಳಿಗೂ ಎರಡು ನೆಲೆಗಳಿರುತ್ತವೆ. ಒಂದು ದನಿಯ ನೆಲೆ ಇನ್ನೊಂದು ತಿರುಳಿನ ನೆಲೆ. ಮರ ಪದ ಎಂಬದು ಮ್, ಅ, ರ್ ಮತ್ತು ಅ ಎಂಬ ದನಿಗಳ ಗುಂಪು. ಹಾಗಾಗಿ ಅದು ದನಿಯ ನೆಲೆ. ಇದಲ್ಲದೆ ಮರ ಪದಕ್ಕೆ ಲೋಕದ ಯಾವುದೋ ಒಂದು ವಸ್ತುವನ್ನು ಇಲ್ಲವೇ ವಸ್ತು ಸಮೂಹವನ್ನು ಹೇಳುವ ತಿರುಳಿನ ನೆಲೆಯೂ ಇರುತ್ತದೆ. ನಾವು

ಗಮನಿಸಿದ ಮೊದಲನೆ ಪಟ್ಟಿಯ ಪದಗಳು ತಿರುಳಿನ ನೆಲೆಯ ನಂಟನ್ನು ಹೇಳಿದರೆ ಎರಡನೆಯ ಪಟ್ಟಿಯ ಪದಗಳು ದನಿಯ ನೆಲೆಯ ನಂಟನ್ನು ಹೇಳುತ್ತವೆ. ಹೇಗಿದ್ದರೂ ಇವೆರಡೂ ಮರದೊಡನೆ ನಂಟನ್ನು ಹೊಂದಿರುವ ಪದಗಳೇ ಆಗಿವೆ.

ಮರ ಪದದ ಬದಲು 'ಹಕ್ಕಿ' ಎಂಬ ಪದ ಹೇಳಿದಾಗ ನೆನಪಿಗೆ ಬರುವ ಪದಗಳ ಪಟ್ಟಿಯಲ್ಲಿ ರೆಕ್ಕೆ, ಪುಕ್ಕ, ಕೊಕ್ಕು, ಗೂಡು ಇವು ಇರುವಂತೆ ವಿಮಾನ, ತಾಯಿ, ಹಾಡು ಮುಂತಾದ ಪದಗಳು ಇರುತ್ತವೆ ಎಂದುಕೊಳ್ಳಿ. ರೆಕ್ಕೆ, ಗೂಡು ಇವೆಲ್ಲವೂ ಹಕ್ಕಿಯೊಡನೆ ನಂಟನ್ನು ಹೊಂದಿರುವ ಪದಗಳು. ಆದರೆ ವಿಮಾನ, ತಾಯಿ ಇವುಗಳಿಗೂ ಹಕ್ಕಿಗೂ ಇರುವ ಸಂಬಂಧ ಹೋಲಿಕೆಯ ನೆಲೆಯವು. ಅಂದರೆ ಹಾರುವಿಕೆ, ಮರಿಗಳನ್ನು ಸಾಕುವಿಕೆ ಮುಂತಾದ ಗುಣಗಳನ್ನು ಸಮಾನವಾಗಿ ಹೊಂದಿರುವುದನ್ನು ಅವಲಂಬಿಸಿ ಹಕ್ಕಿ/ವಿಮಾನ, ಹಕ್ಕಿ/ತಾಯಿ ಈ ಜೋಡಿಗಳು ಮೈತಳೆಯುತ್ತವೆ. ಅಂದರೆ ಇವು ಹೋಲಿಕೆಯನ್ನು ನೆಮ್ಮಿಕೊಂಡಿವೆ.

ಭಾಷೆಯ ಮೂಲಕ ಲೋಕವನ್ನು ನೋಡುವ ಇಲ್ಲವೇ ಹೇಳುವ ಬಗೆಯಲ್ಲಿ ಇರುವ ಈ ಎರಡು ಹಾದಿಗಳು ಸಾಹಿತ್ಯದಲ್ಲಿ ಹೆಚ್ಚು ಮಹತ್ವವನ್ನು ಪಡೆದುಕೊಳ್ಳುತ್ತವೆ. ಸಾಹಿತ್ಯದ ಭಾಷೆಯನ್ನು ಈ ನಿಟ್ಟಿನಿಂದ ನೊಡಿದಾಗ ಅದರಲ್ಲಿನ ಬಣ್ಣನೆಗಳು ಹೀಗೆ ನಂಟು ಇಲ್ಲವೇ ಹೋಲಿಕೆಯನ್ನು ತಳಹದಿಯನ್ನಾಗಿ ಪಡೆದಿರುತ್ತವೆ ಎಂಬುದನ್ನು ಗುರುತಿಸಲಾಗಿದೆ. 'ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ..' ಎಂದು ಮೊದಲಾಗುವ ಲಕ್ಷ್ಮೀಶನ ಬಣ್ಣನೆಯನ್ನು ನೋಡಿ. ಅಂಬಕ(=ಕಣ್ಣು)ವನ್ನು ಚಕೋರ ಪಕ್ಷಿಗೆ ಮತ್ತು ಹೃದಯವನ್ನು ಕುಮುದಕ್ಕೆ ಹೋಲಿಸಲಾಗಿದೆ. ಆದರೆ ಚಕೋರಕ ಮತ್ತು ಕೋರಕ ಪದಗಳನ್ನು ಜೋಡಿಸುವಾಗ ಆ ಪದಗಳ ದನಿನೆಲೆಯ ನಂಟಿನ ಸಂಬಂಧವನ್ನು ಕವಿ ಗುರುತಿಸಿದ್ದಾನೆ. ಇಲ್ಲಿ ಎರಡೂ ನೆಲೆಯ ಜೋಡಣೆಗಳು ಬಳಕೆಯಾಗಿವೆ. ಇರುಳು ಕಾಳಗದಲ್ಲಿ ಬಂದ ರಕ್ಕಸನ ಕೋರೆದಾಡೆಗಳು 'ಕಾರಿರುಳ ಪಟ್ಟಣಕ್ಕೆ ಬಿಗಿದು ಕಟ್ಟಿದ ಚಂದ್ರತೋರಣ'ದಂತಿತ್ತು ಎಂದು ಕುಮಾರವ್ಯಾಸ ಬಣ್ಣಿಸಿದ್ದಾನೆ. ಇಲ್ಲಂತು ಹೋಲಿಕೆಯ ಸಂಬಂಧವೇ ಮೇಲುಗೈಪಡೆದಿದೆ. ಇಲ್ಲವಾದರೆ ಬಿಳಿಯ ಬಣ್ಣದ ಬಾಗಿದ ಕೋರೆದಾಡೆಗಳಿಗೂ ಚಂದ್ರನಿಗೂ ಸಂಬಂಧ ಎಲ್ಲಿಯದು?

ನಂಟಿನ ಸಂಬಂಧವನ್ನು ಹುಡುಕುವ ಬಗೆಯನ್ನು ಹೆಣ್ಣು ನೆಲೆಯೆಂದು, ಹೋಲಿಕೆಯ ಸಂಬಂಧವನ್ನು ಹುಡುಕುವ ಬಗೆಯನ್ನು ಗಂಡು ನೆಲೆಯೆಂದು ಹೇಳುವುದುಂಟು. ಈ ಮಾತನ್ನು ಎಚ್ಚರಿಕೆಯಿಂದ ನೋಡಬೇಕು. ಇಲ್ಲದಿದ್ದರೆ ತಪ್ಪು ತಿಳುವಳಿಕೆಯಾಗಬಹುದು. ಭಾಷೆಯಲ್ಲಿ ಹೆಣ್ಣು ಮತ್ತು ಗಂಡು ಎಂಬ ನೆಲೆಗಳಿವೆ ಎನ್ನುವುದನ್ನು ಮೊದಲು ಒಪ್ಪಬೇಕು. ಅಂದರೆ ಲೋಕಗ್ರಹಿಕೆಯಲ್ಲಿ ಇರುವ ಬೇರೆಬೇರೆ ಬಗೆಗಳನ್ನು ಹೀಗೆ ಹೆಣ್ಣು ಮತ್ತು ಗಂಡು ಬೇರೆಮಾಡಿ ನೋಡುವುದುಂಟು. ಆದರೆ ಇದು ಹೆಂಗಸು ಮತ್ತು ಗಂಡಸು ಎಂಬ ನೆಲೆಯ ವಿಭಜನೆಯಲ್ಲ. ಹೆಣ್ಣು ನೆಲೆಯ ಗ್ರಹಿಕೆ ಹೆಂಗಸು ಮತ್ತು ಗಂಡಸು ಇವರಿಬ್ಬರ ಭಾಷೆಯಲ್ಲೂ ಕಾಣಿಸಿಕೊಳ್ಳಬಹುದು. ಹಾಗೆಯೇ ಗಂಡು ನೆಲೆಯ ಗ್ರಹಿಕೆಗಳು ಕೂಡ ಈ ಇಬ್ಬರ ಭಾಷೆಯಲ್ಲಿ ಇರುವುದು

ಸಾಧ್ಯ. ಹೆಣ್ಣು ನೆಲೆಯ ಭಾಷೆಯಲ್ಲಿ ಬಣ್ಣನೆಗಳು ಹೆಚ್ಚಾಗಿ ನಂಟನ್ನು ನೆಮ್ಮಿಕೊಂಡಿರುತ್ತವೆ. ಗಂಡು ನೆಲೆಯ ಭಾಷೆಯಲ್ಲಿ ಬಣ್ಣನೆಗಳು ಹೆಚ್ಚಾಗಿ ಹೋಲಿಕೆಯನ್ನು ನೆಮ್ಮಿಕೊಂಡಿರುತ್ತವೆ.

ಒಂದು ಪ್ರಸಂಗವನ್ನು ಬಣ್ಣಿಸುವಾಗ ಆ ಪ್ರಸಂಗದ ನೆನೆಪು ಹಾರದಂತೆ ಅದಕ್ಕೆ ಸಂಬಂಧಿಸಿದ ಬೇರೆಬೇರೆ ಮಾಹಿತಿಗಳನ್ನು ಮಂಡಿಸುತ್ತ ಹೋಗುವ ಮಾದರಿಯನ್ನು ಗಮನಿಸಿ. ಇದು ಚುಕ್ಕಿಗಳನ್ನು ಇರಿಸಿ ರಂಗೋಲಿಯ ಗೆರೆಗಳನ್ನು ಎಳೆಯುತ್ತ ಹೋದಂತೆ. ಚಿಕ್ಕಿಗಳನ್ನು ಇಡುವಾಗಲೇ, ಬಿಡಿಸಬೇಕಾದ ರಂಗೋಲಿಯ ಗೆರೆ ಹಾಗೂ ಅದರ ಆಕಾರ ಬಿಡಿಸುವವರ ಎದುರು ಇರುತ್ತದೆ. ಆ ಚಿತ್ರಕ್ಕೆ ಕುಂದಾಗದಂತೆ ಎಲ್ಲ ಗೆರೆಗಳನ್ನು ಬಿಡಿಸುತ್ತ ಕಣ್ಮರೆಯಲ್ಲಿದ್ದ ಚಿತ್ತಾರ ಕಣ್ಣೆದುರು ಬರುವಂತೆ ಮಾಡಲಾಗುತ್ತದೆ. ಹೀಗಾಗಿ ಇದನ್ನು ಹೆಣ್ಣು ನೆಲೆಯೆಂದು ಕರೆಯಲಾಗಿದೆ.

ಬದಲಿಗೆ ಒಂದು ಪ್ರಸಂಗವನ್ನು ಬಣ್ಣಿಸುವಾಗ ಆ ಪ್ರಸಂಗವನ್ನು ಎಲ್ಲಿಯೂ ನೇರವಾಗಿ ಹೇಳದೆ ಬೇರೆ ಏನನ್ನೋ ಹೇಳುತ್ತ, ಹಾಗೆ ಹೇಳುತ್ತಿರುವುದಕ್ಕೂ ಮತ್ತು ಹೇಳಬೇಕಾಗಿರುವದಕ್ಕೂ ಇರುವ ಹೋಲಿಕೆಯನ್ನು ಮಾತ್ರ ನಾವು ಗಮನಿಸುವಂತೆ ಮಾಡುವುದು ಇನ್ನೊಂದು ಬಗೆ. ರೂಪಕಗಳನ್ನು ಕಟ್ಟುವವರು ಈ ಹಾದಿಯಲ್ಲಿರುತ್ತಾರೆ. ಇವರು ಇದರ ಬದಲು ಇನ್ನೊಂದನ್ನು ಹೇಳುವ ಮೂಲಕ ಒಂದರ ಮೂಲಕ ಇನ್ನೊಂದನ್ನು ನೋಡಲು ಹೇಳುತ್ತಾರೆ. ಇದು ಯಾವಾಗಲೂ ಇಬ್ಬಗೆಯಲ್ಲಿ ಕೆಲಸ ಮಾಡುತ್ತದೆ. 'ದಿಗುತಟದಲ್ಲಿ ಕಣ್ತೆರೆಯುತ್ತಿತ್ತು ಹಗಲಿನಕ್ಷಿ' ಎನ್ನುವ ಸಾಲನ್ನು ನೋಡಿ. ಇದು ಸೂರ್ಯೋದಯದ ಬಣ್ಣನೆ ಎನ್ನೋಣ. ಹಗಲಾದದ್ದು ಹಕ್ಕಿ ನಿದ್ರೆಯಿಂದ ಕಣ್ತೆರೆದ ಹಾಗೆ ಇತ್ತು ಎನ್ನೋಣವೇ. ಇಲ್ಲವೇ ಪಕ್ಷಿ ಕಣ್ತರೆದದ್ದು ಹಗಲಾದಂತೆ ಎನ್ನೋಣವೇ? ಅಕ್ಷಿ ಮತ್ತು ಪಕ್ಷಿ ಪದಗಳ ದನಿನೆಲೆಯ ಸಂಬಂಧವನ್ನು ನೋಡಿ. ದಾಸರು ತಮ್ಮ ಕೀರ್ತನೆಗಳಲ್ಲಿ ಕೃಷ್ಣನ ಬಾಲ್ಯದ ಬಣ್ಣನೆಗಳನ್ನು ಮಾಡುತ್ತಾರಷ್ಟೆ. ಇಲ್ಲೆಲ್ಲಾ ಕೃಷ್ಣನಲ್ಲಿರುವ ಲೋಕ ಸಹಜ ಬಾಲಕನನ್ನು ಕಂಡರೋ ಅಥವಾ ಲೋಕ ಸಹಜ ಬಾಲಕರಲ್ಲಿರುವ ಕೃಷ್ಣನನ್ನು ಕಂಡರೋ? ರೂಪಕಗಳ ಜಗತ್ತು ಹೀಗೆ ಇಬ್ಬದಿಯ ತುಯ್ತಕ್ಕೆ ಒಳಗಾಗುತ್ತದೆ. ಈ ಬಗೆಯ ನುಡಿ ಬಳಕೆಯನ್ನು ಗಂಡು ನೆಲೆಯೆಂದು ಗುರುತಿಸಲಾಗಿದೆ. ಏನೇ ಇರಲಿ ಈ ಎರಡು ಬಗೆಗಳು ನಮ್ಮನ್ನು ಮತ್ತಷ್ಟು ಹತ್ತಿರದಿಂದ ನುಡಿಯ ಬಳಕೆಯ ಲೋಕವನ್ನು ನೋಡಲು ಒತ್ತಾಯಿಸುತ್ತಿವೆ.

### ಪುನಾರಂಭ ಮತ್ತು ಪುನರಾರಂಭ

ಮಾರ್ಪಳ್ಳಿ ಶ್ರೀಪತಿ ರಾವ್(ನಗರ್ತ ಹಳ್ಳಿ, ಮೈಸೂರು) ಇವರು **ಪುನಾರಂಭ** ಮತ್ತು **ಪುನರಾರಂಭ** ಎಂಬ ರೂಪಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. **ಪುನಃ** ಎಂಬ ಪದರೂಪಕ್ಕೆ ಸೇರುವ ಎರಡನೆಯ ಪದದ ಮೊದಲ ಧ್ವನಿ ಯಾವುದು ಎಂಬುದನ್ನು ಅವಲಂಬಿಸಿದ ಕಟ್ಟು ಬಳಕೆಯಲ್ಲಿದೆ. ಅದರಂತೆ ಎರಡನೆಯ ಪದ ಸ್ವರದಿಂದ ಮೊದಲಾಗಿದ್ದರೆ ಆಗ ಪುನಃ ಎಂಬುದು **ಪುನರ್** ಎಂದು ಬದಲಾಗುತ್ತದೆ. ಈ ಕಟ್ಟಿನಂತೆ ಪುನಃ+ ಆರಂಭ ಎಂಬುದು ಪುನರಾರಂಭ ಎಂದೇ ಆಗ ಬೇಕು. ಪುನರಾಗಮನ. ಪುನರುದಯ, ಪುನರುಗಮ ಮುಂತಾದ ರೂಪಗಳನ್ನು ನೋಡಿ.

ಎರಡನೆಯ ಪದ ರಕಾರದಿಂದ ಮೊದಲಾಗುತ್ತಿದ್ದರೆ ಆಗ ಮಾತ್ರ ಪುನಃ ಎಂಬುದು ಪುನಾ ಎಂದು ಬದಲಾಗುತ್ತದೆ. ಉದಾ.ಗೆ ರಚನೆ ಪದಕ್ಕೆ ಸೇರುವಾಗ ಅದು ಪುನಾರಚನೆ ಎಂದಾಗುವುದು. ಹಾಗಾಗಿ ಪುನಾರಂಭ ಎಂಬುದು ತಿರುಳಿಲ್ಲದ ಪದವಾಗುತ್ತದೆ. (ಅಥವಾ ಮತ್ತೆ ರಂಭೆ ಎಂದು ತಿಳಿಯಬೇಕೆ?) ಇಂತಹ ಪ್ರಶ್ನೆಗಳಿಗೆ ಉತ್ತರ ಬರೆಯುವಾಗ ಬಳಕೆಯಲ್ಲಿ ಇರುವ ಎಲ್ಲ ರೂಪಗಳನ್ನೂ ಒಪ್ಪಬೇಕೇ ಅಥವಾ ಸರಿಯಾದ ರೂಪವನ್ನು ಮಾತ್ರ ಎಲ್ಲರೂ ಬಳಸುವಂತೆ ಹೇಳಬೇಕೆ? ಇದು ಸರಿಯಾದ ರೂಪ ಎಂದು ಹೇಳಿದ ಮಾತ್ರಕ್ಕೆ ಎಲ್ಲರೂ ಅದನ್ನು ಬಳಸುತ್ತಾರೆ ಎನ್ನುವಂತಿಲ್ಲ. ಇಂತಹ ಕಡೆ ಪತ್ರಿಕೆಗಳ ಪಾತ್ರ ದೊಡ್ಡದು. ಏಕೆಂದರೆ ಜನರು ಹೆಚ್ಚಾಗಿ ಪದಗಳ ಬರಹದ ರೂಪವನ್ನು ಎಡಬಿಡದೆ ನೋಡುವುದು ಪತ್ರಿಕೆಗಳಲ್ಲಿ ತಾನೆ. ಪತ್ರಿಕೆಗಳು ಸರಿಯಾದ ರೂಪಗಳನ್ನು ಬಳಸುವ ಮೂಲಕ ಜನರಿಗೆ ಮಾದರಿಯಾಗಬಹುದು. ಹೀಗಲ್ಲದೆ ಕೇವಲ ಶಾಲೆಯ ಕಲಿಕೆಯಿಂದಷ್ಟೇ ಬರೆಯುವವರು ಎಲ್ಲ ಪದಗಳ ಸರಿಯಾದ ಬರಹ ರೂಪಗಳನ್ನು ಅರಿತುಕೊಳ್ಳಬೇಕು ಎಂದು ಹೇಳಲಾಗುವುದಿಲ್ಲ.

**ಹೋಗಿಬಿಟ್ಟು, ಬಂದುಬಿಟ್ಟು., ಕೊಟ್ಟುಬಿಟ್ಟು, ತಿಂದುಬಿಟ್ಟು, ಹೇಳಿಬಿಟ್ಟು**

ಸೊಂ.ನಾ. ಶ್ರೀಧರಮೂರ್ತಿ (ದಾವಣಗೆರೆ) ಇವರು ಕನ್ನಡ ಮಾತಿನಲ್ಲಿ ಬರುವ **ಹೋಗಿಬಿಟ್ಟು, ಬಂದುಬಿಟ್ಟು., ಕೊಟ್ಟುಬಿಟ್ಟು, ತಿಂದುಬಿಟ್ಟು, ಹೇಳಿಬಿಟ್ಟು** ಮುಂತಾದ ರೂಪಗಳು ಸರಿಯೇ ಎಂದು ಕೇಳಿದ್ದಾರೆ. (ಈ ರೂಪಗಳಲ್ಲಿರುವ ಬಿಟ್ಟು ಎಂಬುದು ಕನ್ನಡ ಮಾತಾಡುವವರ ಕೆಲವರಲ್ಲಿ **ಬಿಟ್ಟೆ** ಎಂದೂ ಮತ್ತೆ ಕೆಲವರಲ್ಲಿ **ಬುಟ್ಟೆ** ಎಂದೂ ಆಗುವುದುಂಟು. ಹೀಗೆ **ಬಿಟ್ಟೆ, ಬುಟ್ಟೆ** ಎಂಬ ರೂಪಗಳನ್ನು ಬಳಸುವವರನ್ನು ಹಳ್ಳಿಗರೆಂದು, ಕಲಿತವರಲ್ಲವೆಂದು ತಿಳಿಯುವುದುಂಟು. ದೃಶ್ಯ ಮಾಧ್ಯಮಗಳಲ್ಲಿ ನಗೆಚಾಟಿಕೆಗೆ ಇಂತಹ ರೂಪಗಳನ್ನು ಪಾತ್ರಗಳ ಬಾಯಲ್ಲಿ ಹೇಳಿಸುವುದನ್ನು ಗಮನಿಸಬಹುದು) **ಕೊಟ್ಟುಬಿಟ್ಟು** ಎಂಬ ರೂಪವನ್ನು ಬಳಸುವಲ್ಲಿ **ಕೊಟ್ಟು** ಎಂಬ ರೂಪವನ್ನು ಬಳಸಿದರೆ ತಪ್ಪೇನೂ ಆಗುವುದಿಲ್ಲ. **ಎಲ್ಲರಿಗೂ ಕರೆಯೋಲೆ ಕೊಟ್ಟುಬಿಟ್ಟು ಬಾ** ಎಂಬ ವಾಕ್ಯವನ್ನು **ಎಲ್ಲರಿಗೂ ಕರೆಯೋಲೆ ಕೊಟ್ಟು ಬಾ** ಎಂದೂ ಹೇಳಲಡ್ಡಿಯಿಲ್ಲ. ಅಂದರೆ **ಕೊಟ್ಟುಬಿಟ್ಟು** ಎಂಬಲ್ಲಿ ಇರುವ ಬಿಟ್ಟು ಎಂಬುದಕ್ಕೆ ತಿರುಳಿನ ನೆಲೆಯಲ್ಲಿ ಹೆಚ್ಚಳವೇನೂ ಇದ್ದ ಹಾಗಿಲ್ಲ. ಕೆಲವೊಮ್ಮೆ ಒತ್ತು ನೋಡಿ ಹೇಳಲು ಇದನ್ನು ಬಳಸುತ್ತಿರಲೂಬಹುದು. ಉದಾ.ಗೆ **ನನ್ನ ಹಣ ನನಗೆ ಕೊಡು/ನನ್ನ ಹಣ ನನಗೆ ಕೊಟ್ಟುಬಿಡು**. ಏನೇ ಇರಲಿ ಬಿಡು ಎಂಬ ಕೆಲಸ ಪದಕ್ಕೆ ಯಾವ ತಿರುಳು ಇದೆಯೋ ಅದು ಈ ಪದರೂಪಗಳಲ್ಲಿ ಬಳಕೆಯಾಗುತ್ತಿಲ್ಲ ಎನ್ನುವುದಂತೂ ದಿಟ. ನುಡಿಯಲ್ಲಿ ಎರಡು ಬಗೆಯ ಕಟ್ಟುಗಳು ಇರುತ್ತವೆ. ಮೊದಲನೆಯದು ರಚನೆಯ ಕಟ್ಟುಗಳು. ಇವುಗಳನ್ನು ಮೀರಲಾಗುವುದಿಲ್ಲ. ಎರಡನೆಯ ಬಗೆಯವು ಬಳಕೆಯ ಕಟ್ಟುಗಳು. ಇವುಗಳನ್ನು ಪಾಲಿಸಲೇಬೇಕೆಂಬ ಒತ್ತಾಯವಿರುವುದಿಲ್ಲ. ಇವು ಏಕೆ ಮೈದಳೆದು ನುಡಿಯಲ್ಲಿ ನೆಲೆನಿಂತವು ಎಂಬುದನ್ನು ನುಡಿಯರಿಗರು ತಿಳಿಯಲು ಮುಂದಾಗುತ್ತಾರೆ. ಆದರೆ ಮಾತಾಡುವವರು ಈ ಕಟ್ಟುಗಳನ್ನು ಬಳಸುವುದು ಅವರ ಆಯ್ಕೆಗೆ ಬಿಟ್ಟದ್ದು. ಹಾಗಾಗಿ ಕೆಲಸ ಪದಗಳಲ್ಲಿ ಸೇರಿಕೊಳ್ಳುವ ಬಿಟ್ಟು ರೂಪದ ಸೇರಿಕೆಗೆ ಕನ್ನಡರಚನೆಯ ನೆಲೆಯಲ್ಲಿ ಯಾವುದೇ ಒತ್ತಾಯಗಳು ಇದ್ದಂತಿಲ್ಲ.

## ದಿವಂಗತ

ಆಕಾಶ್ ಇವರು **ದಿವಂಗತ** ಪದಕ್ಕೆ ವಿರುದ್ಧ ಪದವೇನು ಎಂದು ಕೇಳಿದ್ದಾರೆ. (ಇದು ಮಿಂಚಂಚೆಯಲ್ಲಿ ಬಂದ ಕಾಗದವಾದ್ದರಿಂದ ಊರು ಯಾವುದೆಂದು ಗೊತ್ತಾಗುತ್ತಿಲ್ಲ.) ವಿರುದ್ಧ ಪದಗಳ ಹುಡುಕಾಟ ನಮ್ಮನ್ನು ಎಲ್ಲಿಗೆ ಒಯ್ಯುತ್ತದೆಂದು ಹೇಳಬರುವುದಿಲ್ಲ. ನುಡಿಯಲ್ಲಿರುವ ಎಲ್ಲ ಪದಗಳಿಗೂ ವಿರುದ್ಧವಾದ ಪದವೊಂದು ಇರುತ್ತದೆ ಮತ್ತು ಇರಲೇ ಬೇಕು ಎಂಬ ತಿಳುವಳಿಕೆಯನ್ನು ಏಕೆ ಕಟ್ಟಿಕೊಡಲಾಗುತ್ತದೆಯೋ ತಿಳಿಯುತ್ತಿಲ್ಲ. ಪದದ ತಿರುಳನ್ನು ನೋಡಿ ವಿರುದ್ಧ ಪದವನ್ನು ಹುಡುಕುವುದುಂಟು. ( ಹಾಗೆಯೇ ಪದದ ರೂಪವನ್ನು ಅವಲಂಬಿಸಿ ನಿಷೇಧ ಪದಗಳನ್ನು ಕಟ್ಟುವುದುಂಟು) ಇದು ಕೆಲವೊಮ್ಮೆ ನಗೆಗೆ ಮತ್ತೆ ಕೆಲವೊಮ್ಮೆ ಅಪಾಯಕ್ಕೆ ನಮ್ಮನ್ನು ಗುರಿಯಾಗಿಸುತ್ತದೆ.. ದಿವಂಗತದಂತಹ ಪದಗಳಿಗೆ ವಿರುದ್ಧಪದ ಹುಡುಕುವುದಂತೂ ಕಣ್ಣು ಕಟ್ಟಿಕೊಂಡು ಗೋಡೆಗೆ ಡಿಕ್ಕಿ ಹೊಡೆದಂತೆ. ಇನ್ನಾದರೂ ನಮ್ಮ ಕಲಿಕೆಯ ಬಗೆಯಲ್ಲಿ ಮಕ್ಕಳು ವಿರುದ್ಧ ಪದಗಳ ಬೆನ್ನು ಹತ್ತಿ ಹೋಗದಂತೆ ನೋಡಿಕೊಳ್ಳಬೇಕಾಗಿದೆ. ಇದು ನುಡಿ ಕಲಿಕೆ ಮಾತ್ರ ಹೊಂದುವ ಮಾತಲ್ಲ. ಲೋಕವನ್ನೇ ಒಡೆದು ನೋಡುವ, ಒಂದು ಇನ್ನೊಂದಕ್ಕೆ ಎದುರು(=ವಿರುದ್ಧ) ಎಂದು ತಿಳಿಯುವ ಬಗೆ. ಹಾಗಾಗಿ ಎಚ್ಚರದಿಂದ ಇರಬೇಕಲ್ಲವೇ?

## ಸಣ್ಣ ರಾಜಕಯಮೆ

ತಿ. ನರಸೀಪುರ ತಾಲೂಕಿನ ರೈತರೊಬ್ಬರು ಬೆಳೆದ ದೇಸಿ ತಳಿ ಬತ್ತಗಳ ಹೆಸರುಗಳನ್ನು ತಿಳಿಸಿಕೊಡುವ ಬರಹವೊಂದು ಈಚೆಗೆ ಪ್ರಕಟವಾಗಿತ್ತು. ಅದರಲ್ಲಿ ಒಂದು ತಳಿಯ ಹೆಸರು **'ಸಣ್ಣ ರಾಜಕಯಮೆ'**. ಈ ಹೆಸರು ಏಕೆ ಬಂದಿದೆ ಎಂದು ನೋಡೋಣ. ಕಯಮೆ ಎಂದರೆ ಬತ್ತ. ಕನ್ನಡನಾಡಿನಲ್ಲಿ ಬತ್ತಕ್ಕೆ ನೆಲ್ಲು, ಕಳವಿ ಎಂಬ ಹೆಸರುಗಳಿವೆ. ಕಳವಿ ಎಂಬುದು ಹಳಗನ್ನಡದಲ್ಲಿದ್ದ ಕೞಮೆ ಎಂಬ ಪದದಿಂದ ಬಂದಿದೆ. ಕವಿರಾಜಮಾರ್ಗದಲ್ಲೇ ಈ ಪದದ ಬಳಕೆ ಇದೆ. ಕೞಮೆ, ಕೞಮ, ಕವಳಿ, ಕವಳಿ, ಕಳಮೆ, ಕಳವೆ ಇವು ದಾಖಲಾಗಿರುವ ಇತರ ರೂಪಗಳು. ಬೀದರ್ ಜಿಲ್ಲೆಯ ಮೂಡಣ ತಾಲೂಕುಗಳಲ್ಲಿ ಕಳವಿ, ಕಳ್ವಿ ರೂಪಗಳು ಈಗಲೂ ಬಳಕೆಯಲ್ಲಿವೆ. ಕೞಮೆ ಪದದಲ್ಲಿರುವ ರಳ ದನಿ ಕನ್ನಡದಲ್ಲಿ ಬದಲಾಗಿ ಹೋಯಿತು. ಅದರ ಜಾಗದಲ್ಲಿ ರ ಇಲ್ಲವೇ ಳ ದನಿಯನ್ನು ನುಡಿಯತೊಡಗಿದರೆಂದು ಗುರುತಿಸಲಾಗಿದೆ. ಆದರೆ ರಾಜಕಯಮೆ ಪದವನ್ನು ನೋಡಿದರೆ ರಳವನ್ನು ಯಕಾರವನ್ನಾಗಿ ಬದಲಿಸಿ ನುಡಿಯುವ ಒಂದು ಬದಲಾವಣೆ ತಮಿಳುನುಡಿಯ ನಂಟಿರುವ ಊರುಗಳಲ್ಲಿ ನಡೆದಿರುವಂತೆ ತೋರುತ್ತದೆ. ತಮಿಳಿನಲ್ಲಿ ಈಗಲೂ ರಳ ದನಿ ಇದೆ. ಬಳಕೆ ಇರದ ನಮ್ಮ ಕಿವಿಗೆ ಅದು ಯಕಾರದಂತೆ ಕೇಳಿಸಿದರೂ ಅಚ್ಚರಿಯಿಲ್ಲ. ಅಂದರೆ ಕಯಮೆ ಎಂಬುದು ಕನ್ನಡದ ಹಳೆಯ ಪದದ ಇಂದಿನ ರೂಪ. ಸಂಸ್ಕೃತದಲ್ಲಿ ಇರುವ ಕಲಮ ಮತ್ತು ಕೞಮೆಗಳಿಗೆ ನಂಟನ್ನು ಹುಡುಕುವುದುಂಟು. ಆದರೆ ಕನ್ನಡ ಮತ್ತು ದ್ರಾವಿಡ ನುಡಿಗಳಲ್ಲಿ ಮಾತ್ರ ಕಂಡುಬರುವ ದನಿ ೞ ಈ ಪದದಲ್ಲಿ ಇರುವುದರಿಂದ ಇದು ಕನ್ನಡದ್ದೇ ಪದವೆಂದು ತಿಳಿಯ ಬಹುದಾಗಿದೆಯಲ್ಲವೇ?

**ಮರಳುಗಾಡು, ಬೆಂಗಾಡು, ಸುಡುಗಾಡು**

ಬಿ.ಆರ್ (ಬೆಂಗಳೂರು) ಇವರು **ಮರಳುಗಾಡು, ಬೆಂಗಾಡು, ಸುಡುಗಾಡು** ಮುಂತಾದ ಪದಗಳಲ್ಲಿರುವ ಕಾಡು ಪದದ ತಿರುಳು ಏನು ಎಂದು ಕೇಳಿದ್ದಾರೆ. ಕಾಡು ಹೆಸರು ಪದವಾಗಿ ಬಳಕೆಯಾದಾಗ ಅದಕ್ಕೆ ಗಿಡಮರಗಳು ಬೆಳೆದಿರುವ ಮತ್ತು ಪ್ರಾಣಿಗಳು ವಾಸಿಸುವ ಜಾಗ ಎಂಬ ತಿರುಳು ಇದ್ದರೂ ಜನರಿಂದ ದೂರವಾದ ನೆಲವನ್ನೂ ಕಾಡು ಎಂದು ಹೇಳುವುದುಂಟು. ನಾಡು ಎಂಬುದಕ್ಕೆ ಎದುರಾಗಿ ಕಾಡು ಪದ ಬಳಕೆಯಾಗುತ್ತದೆ. ಜನರಿರುವ ,ಅವರಿಗೆ ನೆರವಾಗುವ, ಕಟ್ಟುಪಾಡುಗಳಿರುವ ನೆಲ ನಾಡು. ಜನರಿಲ್ಲದ ತಂತಾನೆ ಇರುವ ಕಟ್ಟುಪಾಡುಗಳಿಲ್ಲದ ನೆಲ ಕಾಡು. ಮೇಲೆ ಹೇಳಿದ ಪದಗಳಲ್ಲಿ ಕಾಡು ಎಂಬುದು ಈ ತಿರುಳಿನಲ್ಲಿ ಬಳಕೆಯಾಗಿದೆ. ಹಳ್ಳಿಗಾಡು ಎಂಬ ಪದವೂ ಇದೆ. ಇದು ಜನರಿರುವ ಜಾಗವನ್ನು ಹೇಳಿದರೂ ಹಿಂದಿನ ಆಡಳಿತದ ಬಗೆಯಲ್ಲಿ ಹಳ್ಳಿಗಳು ನಾಡುಗಳ ಚೌಕಟ್ಟಿನಲ್ಲಿ ಬರುತ್ತಿರಲಿಲ್ಲ. ಬೇಕುಬೇಕಾದಂತೆ ಯಾವ ಹಿಡಿತಕ್ಕೂ ಒಳಗಾಗದೆ ಬೆಳೆದುಕೊಂಡ ಜನವಸತಿ ಜಾಗಗಳನ್ನು ಹೀಗೆ ಹಳ್ಳಿಗಾಡುಗಳೆಂದು ತಿಳಿಯುತ್ತಿದ್ದಂತೆ ತೋರುತ್ತದೆ.

**ಮತ್ತು, ಹಾಗೂ**

ಶರತ್ ಕಿರಣ್ (ಹೂವಿನ ಹಡಗಲಿ) ಇವರು **ಮತ್ತು , ಹಾಗೂ** ಈ ಎರಡು ಪದಗಳ ಬಳಕೆಯ ಬಗೆಗೆ ಒಂದು ಕೇಳ್ವಿಯನ್ನು ಮುಂದಿಟ್ಟಿದ್ದಾರೆ. ಈ ಎರಡೂ ಪದಗಳಲ್ಲಿ **ಮತ್ತು** ಎಂಬುದು ಹಿಂದಿನಿಂದಲೂ ಬಳಕೆಯಲ್ಲಿತ್ತು. ಆದರೆ ಅದರ ತಿರುಳು ಈಗ ಬೇರೆಯಾಗಿದೆ. **ಹಾಗೂ** ಎಂಬುದಂತೂ ತೀರಾ ಈಚೆಗೆ ಬಳಕೆ ಬಂದಿರುವ ಪದ. **ಮತ್ತು** ಎಂಬುದಕ್ಕೆ **ಉಳಿದ, ಇತರ** ಎಂಬ ತಿರುಳು ಹಿಂದೆ ಇದ್ದತು. ಈಗಲೂ **ಮತ್ತೊಂದು, ಮತ್ತೊಮ್ಮೆ. ಮತ್ತೋರ್ವ** ಎಂಬ ಪದಗಳಲ್ಲಿ ಈ ತಿರುಳು ಉಳಿದುಕೊಂಡಿಧೆ. ಈಗ **ಮತ್ತು** ಎಂಬುದಕ್ಕೆ **ಅಲ್ಲದೆ ,ಜೊತೆಗೆ** ಎಂಬ ತಿರುಳು ಬಂದಿದೆ. **ಹಾಗೂ** ಎಂಬುದು ಬೇರಿಲ್ಲದ ಪದ. **ಹಾಗೆ** (<**ಅಹಗೆ**) ಎಂಬ ಪದವಿದೆ. **ಅದರಂತೆ, ಆ ಮಾದರಿಯಲ್ಲಿ** ಎಂಬ ತಿರುಳು ಅದಕ್ಕಿದೆ. ಇದು ತಿರುಳಿನಲ್ಲಿ **ಅಂತೆ/ಅಂತಹ** ಪದಕ್ಕೆ ಹತ್ತಿರವಾಗಿದೆ. **ಸಿಂಹದಂತೆ ಹೋರಾಡಿದ/ ಸಿಂಹದ ಹಾಗೆ ಹೋರಾಡಿದ** ಎಂಬ ಬಳಕೆಗಳನ್ನು ನೋಡಿ. ಕೆಲವರೂ **ಹಾಗೆ** ಬದಲಿಗೆ **ಹಾಗೆಯೂ** ಎಂದು ಬಳಸುವುದುಂಟು. ಹಾಗೂ ಎಂಬುದು **ಹಾಗೆಯೂ**ದಿಂದ ಬಂದಂತೆ ಕಾಣುತ್ತಿದೆ. ಕೆಲವರು **ಹಾಗು** ಎಂದಷ್ಟೇ ಬರೆಯುವುದುಂಟು ಇದಕ್ಕಂತೂ ಬೇರೂ ಇಲ್ಲ; ಬುಡವೂ ಇಲ್ಲ. ಈ ಪದರೂಪವನ್ನು ಬಳಕೆಯಿಂದ ದೂರವಿಟ್ಟಷ್ಟೂ ಒಳ್ಳೆಯದು

ಈಗ **ಮತ್ತು, ಹಾಗೂ** ಎಂಬ ಪದಗಳಲ್ಲಿ ಒಂದರ ಬದಲಿಗೆ ಇನ್ನೊಂದನ್ನು ಬಳಸಲು ಬರುವುದೆಂಬಂತೆ ಕನ್ನಡಿಗರು ತಿಳಿದಿರುವಂತೆ ತೋರುತ್ತದೆ. ಪತ್ರಿಕೆಗಳು ಬರಹದಲ್ಲಿ, ಟಿವಿ ಮೊದಲಾದ ಮಾಧ್ಯಮಗಳು ಮಾತಿನಲ್ಲಿ ಈ ಎರಡು ಪದಗಳ ಬಳಕೆಯನ್ನು ಬೇರೆ ಬೇರೆಯಾಗಿ ಇಡಲು ಮುಂದಾಗಿಲ್ಲ. ಹೀಗೆ ಬೇರೆ ಬೇರೆಯಾಗಿಡಲು ಕಟ್ಟುಗಳನ್ನು ಇರಿಸಿದರೂ ಅದನ್ನು ಬಿಡದೆ ಪಾಲಿಸುವಂತೆ ಮಾಡುವುದು ಆಗದ

ಮಾತಾಗಿಬಿಟ್ಟಿದೆ. ಏನೇ ಇರಲಿ ಒಂದು ಕಟ್ಟನ್ನು ಈ ಅಂಕಣದಲ್ಲಿ ಮುಂದಿಡುತ್ತಿದ್ದೇನೆ. ಎರಡು ಬೇರೆ ಬೇರೆಯಾದ, ನಂಟಿಲ್ಲದ ಪದಗಳನ್ನು ಒಟ್ಟುಗೂಡಿಸಿ ಹೇಳುವಾಗ ಅಲ್ಲಿ **ಮತ್ತು** ಪದವನ್ನು ಬಳಸಬೇಕು. ಉದಾ.**ಭಾರತ ಮತ್ತು ಅಮೆರಿಕಾ ದೇಶಗಳ ನಡುವೆ ಈ ಬಗೆಗೆ ತಕರಾರುಗಳಿವೆ**. ಎರಡು ಹೆಸರು ಪದಗಳಲ್ಲಿ ಒಂದು ಇನ್ನೊಂದರ ಭಾಗವಾಗಿದ್ದರೆ ಆಗ ಅಂತಲ್ಲಿ **ಹಾಗೂ** ಪದವನ್ನು ಬಳಸಬೇಕು. ಉದಾ. **ಭಾರತ ಹಾಗೂ ಅದರ ನೆರೆ ರಾಷ್ಟ್ರಗಳು ಈ ಬಗೆಗೆ ತಟಸ್ಥವಾಗಿರಲಾರವು**. ಈ ಕಟ್ಟು ಸರಿ ಎನಿಸಿದರೆ ಅದನ್ನು ಪಾಲಿಸಬಹುದಾಗಿದೆ.

**ಸಂಸ್ಕೃತ ಪದಗಳನ್ನು ಹೆಚ್ಚು ಬಳಕೆ**

ಕನ್ನಡ ಬರವಣಿಗೆಯಲ್ಲಿ ಸಂಸ್ಕೃತ ಪದಗಳನ್ನು ಹೆಚ್ಚು ಬಳಸುತ್ತಿರುವುದು ಎಲ್ಲರಿಗೂ ತಿಳಿದಿರುವುದೇ. ಹೀಗೆ ಮಾಡುವ ಬದಲು ಅಂತಹ ಸಂಸ್ಕೃತ ನುಡಿಯ ಪದಗಳ ಜಾಗದಲ್ಲಿ ಕನ್ನಡ ಪದಗಳನ್ನು ಹೆಚ್ಚು ಹೆಚ್ಚು ಬಳಸಬೇಕೆಂದು ಹೇಳುತ್ತಿರುವುದೂ ಕೂಡ ಹೊಸದೇನಲ್ಲ. ಆದರೆ ಹೀಗೆ ಕನ್ನಡಬರಹದಿಂದ ಸಂಸ್ಕೃತ ನುಡಿಯ ಪದಗಳನ್ನು ಹೊರಗಿರಿಸಿದರೆ ಕನ್ನಡನುಡಿ ಬಡವಾಗುವುದೆಂದು ಹೇಳುವವರೂ ಇದ್ದಾರೆ. ನಾವು ಹೇಳಬೇಕಾದ್ದನ್ನೆಲ್ಲಾ ಸರಿಯಾಗಿ ಮತ್ತು ಇಡಿಯಾಗಿ ಹೇಳಲು ಕನ್ನಡ ನುಡಿಯ ಪದಗಳು ಮಾತ್ರ ಸಾಲುವುದಿಲ್ಲ;ಅದಕ್ಕಾಗಿ ಸಂಸ್ಕೃತ ನುಡಿಯ ಪದಗಳನ್ನು ಬಳಸಿಕೊಳ್ಳಬೇಕಾಗುವುದೆಂದು ಅವರು ಹೇಳುತ್ತಾರೆ.

ಸುಮ್ಮನೆ ಮಾತಿಗೆ ಈ ನಿಲುವನ್ನು ಈಗ ಒಪ್ಪಿ ಮುಂದುವರೆಯೋಣ. ಅಂದರೇನಾಯ್ತು? ಒಂದು ನುಡಿಯ ಪದನೆರಿಕೆಯಲ್ಲಿ ಹೆಚ್ಚು ಹೆಚ್ಚು ಪದಗಳಿದ್ದಷ್ಟೂ ನಾವು ಹೇಳಬೇಕಾದ್ದನ್ನೆಲ್ಲಾ ಹೇಳಲು, ತಿಳಿಯ ಬೇಕದ್ದನ್ನೆಲ್ಲಾ ತಿಳಿಯಲು ಆಗುತ್ತದೆ ಎಂದಲ್ಲವೇ? ಒಂದು ನುಡಿಯಿಂದ ಇನ್ನೊಂದು ನುಡಿಗೆ ಪದಗಳನ್ನು ಪಡೆದುಕೊಳ್ಳುವಾಗ ದನಿ ಮತ್ತು ಅದರ ತಿರುಳುಗಳನ್ನು ಮಾತ್ರವೇ ಪಡೆದುಕೊಳ್ಳುತ್ತಿರುವುದಿಲ್ಲ. ಜೊತೆಗೆ ಆ ಪದಗಳು ನಮಗೆ ತಿಳುವಳಿಕೆಯ ಕಿಟಕಿಗಳೂ ಆಗಿಬಿಡುತ್ತವೆ. ಕಿಟಕಿಗಳಿದ್ದರೆ ಬೆಳಕು ಹೊರಗಿನಿಂದ ಒಳಬರಲು ನೆರವಾಗುತ್ತದೆ ಎನ್ನುವುದು ಎಷ್ಟು ದಿಟವೋ ಆ ಕಿಟಕಿಯ ಚೌಕಟ್ಟು ನಮಗೆ ಹೊರಗಿನ ನೋಟ ಕಾಣಿಸುವ ಬಗೆಯನ್ನೂ ತನ್ನ ಹಿಡಿತದಲ್ಲಿ ಇರಿಸಿಕೊಂಡು ಬಿಟ್ಟಿರುತ್ತದೆ ಎನ್ನುವುದೂ ಅಷ್ಟೇ ದಿಟ. ಅಂದರೆ ಪದಗಳು ದೊರಕಿದ ಮಾತ್ರಕ್ಕೆ ನಮಗೆ ನೋಡುವ ನೆಲೆಯಿಂದ ಬಿಡುಗಡೆ ದೊರಕುವುದಿಲ್ಲ. ಹಾಗಾಗಿಯೇ ಬುದ್ಧನಂತಹವರು ಸಂಸ್ಕೃತದ ಮೊರೆ ಹೋಗಲಿಲ್ಲ. ಜನರಾಡುವ ಪಾಲಿಯಲ್ಲಿ ತಮ್ಮ ತಿಳಿವನ್ನು ಮಂಡಿಸಲು ಹೊರಟರು. ಬುದ್ಧ ನುಡಿಯುವವರೆಗೂ ಪಾಲಿ ನುಡಿಯಲ್ಲಿ ಎಲ್ಲವನ್ನೂ ಹೇಳುವುದು ಆಗುವುದಿಲ್ಲ; ಅದಕ್ಕೆ ಸಂಸ್ಕೃತವೇ ಸರಿ ಎಂಬ ನಿಲುವು ಇದ್ದಿರಬೇಕಲ್ಲವೇ?

ಹೆಚ್ಚು ಹೆಚ್ಚು ಪದಗಳಿದ್ದಷ್ಟರಿಂದಲೇ ಸಂಸ್ಕೃತ ನುಡಿಯಲ್ಲಿ ಹೊಸ ತಿಳುವಳಿಕೆಗಳನ್ನು ತಿಳಿಸಿಹೇಳಲು ಆಗುವುದಿಲ್ಲ. ಇಂಗ್ಲಿಶಿನಲ್ಲೋ ಮತ್ತೆ ಯಾವುದೋ ಯುರೋಪಿನ ನುಡಿಯಲ್ಲಿ ಇರುವ ಹೊಸ ತಿಳುವಳಿಕೆಗಳನ್ನು ತರ್ಜುಮೆ ಮಾಡಿಕೊಂಡು ಸಂಸ್ಕೃತದಲ್ಲಿ

ಹೇಳಬಹುದು ಅಷ್ಟೆ. ವೇದಾಂತವೆಲ್ಲ ಸಂಸ್ಕೃತನುಡಿಯ ಬರವಣಿಗೆಯಲ್ಲಿ ಇದೆಯಾದರೂ ಹೊಸ ಭೌತಶಾಸ್ತ್ರದ ಅರಿಮೆಯೆಲ್ಲ ಸಂಸ್ಕೃತ ನುಡಿಯಲ್ಲಿ ತರ್ಜುಮೆಗೊಂಡೇ ಸಿಗಬೇಕಾಗಿದೆ. ಅಂದರೆ ಯಾವುದೇ ನುಡಿ ಎಷ್ಟೇ ತುಂಬಿಕೊಂಡ ಪದನೆರಿಕೆಯನ್ನು ಹೊಂದಿದ್ದರೂ ಅದಕ್ಕೆ ಎಲ್ಲ ತಿಳುವಳಿಕೆಯನ್ನು ಬರವಣಿಗೆಯಲ್ಲಾಗಲೀ ಮಾತಿನಲ್ಲಾಗಲೀ ಹೇಳುವ ಬಲ ತಂತಾನೇ ಒದಗಿಬರುವುದಿಲ್ಲ.

ಬೇರೆ ನುಡಿಗಳಿಂದ ರಾಶಿರಾಶಿ ಪದಗಳನ್ನು ತಂದು ನಾವು ಅವುಗಳನ್ನು ಬಳಸಿ ಎಲ್ಲವನ್ನೂ ತಿಳಿಯುವ/ ಹೇಳುವ ಬಲವನ್ನು ಪಡೆದುಕೊಳ್ಳುತ್ತೇವೆ ಎನ್ನುವುದು ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳುವ ಮಾತು. ನಿಡುಗಾಲದಲ್ಲಿ ಈ ಹಾದಿ ನಮ್ಮನ್ನು ಎಲ್ಲಿಗೆ ಕರೆದೊಯ್ಯುತ್ತದೆಂದರೆ ಕೈಹಿಡಿದು ನಡೆಸೆನ್ನನು ಎಂದು ಬೇಡುವ ನೆಲೆಗೆ ತಳ್ಳುತ್ತದೆ. ದಿಟ. ಪಡುವಣದ ಎಲ್ಲ ಅರಿಮೆಗಳನ್ನು ನಮ್ಮ ನುಡಿಯಲ್ಲಿ ಹೇಳಲು ಈಗ ಸಂಸ್ಕೃತ ಮತ್ತು ಇಂಗ್ಲಿಶ್ ಪದನೆರಿಕೆಯಿಂದ ಬಲ ಪಡೆದುಕೊಂಡಿದ್ದೇವೆ. ಆದರೆ ಹೀಗೆ ಅರಿಮೆಯನ್ನು ಪಡೆಯುವ ನೆಲೆಯಲ್ಲೇ ಯಾವಾಗಲೂ ನಿಲ್ಲಬೇಕೆ? ಕನ್ನಡ ಪಡೆಯುವ ನುಡಿಯಾಗಿ ಈಗ ಕೆಂಬೂತದಂತೆ ಗರಿಗೆದರಿಕೊಂಡಿದೆ. ಆದರೆ ಕೊಡುವ ನುಡಿಯಾಗುವುದು ಯಾವಾಗ?

ಹೊಚ್ಚ ಹೊಸ ತಿಳುವಳಿಕೆಯ ಬರಹವೊಂದು ಇಂಗ್ಲಿಶ್ ನುಡಿಯಲ್ಲಿದೆ ಎಂದುಕೊಳ್ಳಿ. ನಾವದನ್ನು ಕನ್ನಡಕ್ಕೆ ತಂದುಕೊಳ್ಳುತ್ತೇವೆ. ಅದಕ್ಕಾಗಿ ಕನ್ನಡದ ಪದಗಳನ್ನಲ್ಲದೆ ಸಂಸ್ಕೃತನುಡಿಯ ಪದಗಳನ್ನು ಬಳಸುತ್ತೇವೆ. ಹಾಗಲ್ಲದೆ ಆ ಬರಹವನ್ನು ಓದಿ ನಮಗೆ ತಿಳಿದದ್ದನ್ನು ಕನ್ನಡದಲ್ಲಿ ಹೇಳಲು ಹೊರಟಾಗಲೂ ಸುಳುವಿನ ಹಾದಿಯೆಂದು ಸಂಸ್ಕೃತ ನುಡಿಯ ಪದಗಳಿಗೆ ಮೊರೆಹೋಗುತ್ತೇವೆ. ಹೆಚ್ಚಿನ ಓದಿನಲ್ಲಿ ತೊಡಗುತ್ತಿರುವ ಕನ್ನಡ ಮಕ್ಕಳು ತರಗತಿಗಳ ಒಳಗೆ ಮತ್ತು ಹೊರಗೆ ಇದೇ ಹಾದಿಯನ್ನು ಹಿಡಿಯುತ್ತಿದ್ದಾರೆ. ಪತ್ರಿಕೆಗಳೂ ಹೆಚ್ಚಾಗಿ ಮೊದಲನೆಯ ಹಾದಿಯನ್ನು, ಆಗಾಗ ಎರಡನೆಯ ಹಾದಿಯನ್ನು ಹಿಡಿಯುತ್ತವೆ. ಇದರಿಂದ ತಿಳಿವು ಕನ್ನಡದಲ್ಲಿ ದೊರಕಿತು ಎಂದಾಯಿತು ಅಷ್ಟೆ. ಕನ್ನಡದ ತಿಳಿವು ಎನ್ನುವುದು ಯಾವುದು? ಅದು ಎಂದೂ ತಲೆ ಎತ್ತದೇನು? ಅದಕ್ಕಾಗಿ ಮೊದಲು ಹೆಜ್ಜೆ ಇಡಬೇಕಾದರೆ ಬಡಕಲಾಗಿ ತೋರಿದರೂ ಕನ್ನಡ ನುಡಿಯ ಪದಗಳು ಕಟ್ಟಿಕೊಡುವ ನೆಲೆಯಲ್ಲೆ ಎಲ್ಲ ತಿಳಿವನ್ನೂ ಮಂಡಿಸಲು ದಿಟ್ಟ ಹೆಜ್ಜೆಗಳನ್ನು ಇಡಬೇಕಾಗುತ್ತದೆ.

ಈಗ ಮೊದಲಿಗೆ ಬರೋಣ. ನಮ್ಮ ನುಡಿಯ ಪದನೆರಿಕೆಯಲ್ಲಿ ಹೆಚ್ಚು ಹೆಚ್ಚು ಬೇರೆ ನುಡಿಗಳಿಂದ ಪಡೆದುಕೊಂಡ ಪದಗಳಿದ್ದರೆ ಅದಷ್ಟೇ ಸಾಲದು. ಹೇಳಬೇಕಾದ್ದನ್ನು ಮಸುಕು ಮಾಡಲು ಕೂಡ ಈ ಪದಗಳು ಬಳಕೆಯಾಗಬಹುದು. ಬೇರೆ ಬೇರೆ ಅರಿಮೆಗಳನ್ನು ಕನ್ನಡದಲ್ಲಿ ಹೇಳಲೆಂದು ಬರೆದ ಎಷ್ಟೋ ಬರವಣಿಗೆಗಳು ಇದರಿಂದಾಗಿಯೇ ಓದುವವರಿಗೆ ಎಲ್ಲವನ್ನೂ ತಿಳಿಸುವಲ್ಲಿ ಸೋಲುತ್ತವೆ. ಒಟ್ಟಾರೆ ಹೇಳುವುದಾದರೆ ಕನ್ನಡದ ಪದಗಳನ್ನೇ ನೆಮ್ಮುವುದರಿಂದ ಇರುವಷ್ಟು ಕಿರಿದಾದ ಜಾಗದಲ್ಲೇ ಉಸಿರಾಡುವಂತೆ ಮೊದಮೊದಲು ಅನಿಸಿದರೂ ಮುಂದೆ ಅದರಿಂದ ಹೊಸಹೊಸ ಹೊರದಾರಿಗಳು ಕಾಣುವುದಂತೂ ದಿಟ.

## ಕರ್ತೃಪದ ಮತ್ತು ಕರ್ಮಪದ

ಜಗದೀಶ್ ಆರ್.ಕೆ (ಮೈಸೂರು) ಇವರು ಆಕಾಶವಾಣಿಯಲ್ಲಿ ಶಾಲೆಯ ಮಕ್ಕಳಿಗೆ ಕನ್ನಡ ಪಾಠಗಳನ್ನು ಹೇಳಿಕೊಡುವ ಒಂದು ಕಾರ್ಯಕ್ರಮದಲ್ಲಿ ಕಂಡು ಬಂದ ಸಂಗತಿಗಳನ್ನು ಹೇಳಿ ಒಂದು ಕೇಳ್ವಿಯನ್ನು ಮುಂದಿಟ್ಟಿದ್ದಾರೆ. ಆ ಕಾರ್ಯಕ್ರಮದಲ್ಲಿ ಕನ್ನಡ ವಾಕ್ಯಗಳಲ್ಲಿ ಇರುವ **ಕರ್ತೃಪದ** ಮತ್ತು **ಕರ್ಮಪದ**ಗಳನ್ನು ವಿವರಿಸಲು ಕೆಲವು ವಾಕ್ಯಗಳನ್ನು ಉದಾಹರಣೆಗಳನ್ನು ನೀಡಿದ್ದಾರೆ. **1.ಅಜ್ಜಿಯಲ್ಲಿ ಅಹಂಕಾರ ಮೂಡಿತು, 2.ಮಳೆ ನೆಲದ ಮೇಲೆ ಬೀಳುತ್ತದೆ, 3.ನಾನು ಹೊಳೆಯಲ್ಲಿ ಈಜಾಡುವೆ, 4.ಸೂರ್ಯನು ಪೂರ್ವದಲ್ಲಿ ಉದಯಿಸುತ್ತಾನೆ, 5.ಹುಡುಗಿಯು ವೃತ್ತದಲ್ಲಿ ಜಿಗಿಯುತ್ತಾಳೆ.** ಈ ವಾಕ್ಯಗಳಲ್ಲಿ ಕ್ರಮವಾಗಿ **ಅಹಂಕಾರ, ನೆಲ, ಹೊಳೆ, ಪೂರ್ವ ಮತ್ತು ವೃತ್ತಗಳು** ಇವು ಕರ್ಮಪದಗಳೆಂದು ಕಾರ್ಯಕ್ರಮದಲ್ಲಿ ಹೇಳಿಕೊಟ್ಟರಂತೆ. ಹಾಗೆಯೇ **ಅಜ್ಜಿ, ಮಳೆ, ನಾನು, ಸೂರ್ಯ, ಹುಡುಗಿ** ಇವು ಕರ್ತೃಪದಗಳೆಂದು ತಿಳಿಸಿದ್ದಾರೆ. ಅಜ್ಜಿ ಎಂಬುದು ಮೊದಲನೆಯ ವಾಕ್ಯದಲ್ಲಿ ಕರ್ತೃಪದವಾಗಬಲ್ಲುದೇ? ಹಾಗೆಯೇ ಕರ್ಮಪದಗಳೆಂದು ಹೇಳುತ್ತಿರುವ ಈ ಪದಗಳೆಲ್ಲ ದಿಟವಾಗಿಯೂ ಕರ್ಮಪದಗಳೇ ಎಂಬುದು ಜಗದೀಶ್ ಅವರ ಕೇಳ್ವಿ.

ನಮ್ಮ ಶಾಲೆಯ ವ್ಯಾಕರಣಗಳು ವಾಕ್ಯವನ್ನು ಕರ್ತೃ, ಕರ್ಮ ಮತ್ತು ಕ್ರಿಯಾಪದಗಳ ಸರಣಿ ಎಂದು ಬಣ್ಣಿಸುವ ಮಾದರಿಗೆ ಅಂಟಿಕೊಂಡಿವೆ. ಇದು ಎಲ್ಲ ಕಡೆಯೂ ಸರಿಹೊಂದುವುದಿಲ್ಲ. ಏಕೆಂದರೆ ಕರ್ಮಪದ ಎಂದರೇನು ಎಂಬ ಬಣ್ಣನೆಗೆ ಹೊಂದಿಕೊಳ್ಳುವ ಪದಗಳೇ ಇರದ ವಾಕ್ಯಗಳನ್ನೇನು ಮಾಡಬೇಕು. **ಹುಡುಗ ಓಡಿದನು, ಹಕ್ಕಿ ಹಾರುತ್ತದೆ** ಮುಂತಾದ ವಾಕ್ಯಗಳಲ್ಲಿ ಕರ್ಮಪದಗಳು ಇರುವುದಿಲ್ಲ. ಇಂತಹ ವಾಕ್ಯಗಳಲ್ಲಿ ಅಕರ್ಮಕ ಕೆಲಸಪದಗಳಿವೆ ಎಂದು ಬಣ್ಣಿಸುವುದುಂಟು. ಹೀಗಾಗಿ ಕೆಲಸಪದಗಳನ್ನು ಕರ್ಮಪದವುಳ್ಳವು (ಸಕರ್ಮಕ) ಮತ್ತು ಕರ್ಮಪದಗಳನ್ನು ಹೊಂದಲಾರದವು (ಅಕರ್ಮಕ) ಎಂದು ಗುಂಪುಮಾಡುವ ಬಗೆ ಬೆಳೆಯಿತು. ಹೀಗಾದರೂ ಗೋಜಲು ಮುಗಿಯುವುದಿಲ್ಲ. ಅಜ್ಜಿಯಲ್ಲಿ ಅಹಂಕಾರ ಮೂಡಿತು ಎಂಬ ವಾಕ್ಯದಲ್ಲಿ ಕೆಲಸಪದವು ಅಹಂಕಾರವು ಮೂಡಿದ್ದನ್ನು ಹೇಳುತ್ತಿದೆಯಷ್ಟೆ. ಅಂದರೆ ಆ ವಾಕ್ಯದಲ್ಲಿ ಅಹಂಕಾರ ಎನ್ನುವುದೇ ಕರ್ತೃವೆಂಬ ಬಣ್ಣನೆಗೆ ತಕ್ಕುದಾಗಿದೆಯೇ ಹೊರತು ಅಜ್ಜಿ ಪದವಲ್ಲ.

ವಾಡಿಕೆಯಲ್ಲಿ ದ್ವಿತೀಯಾ ವಿಭಕ್ತಿಪ್ರತ್ಯಯ ಸೇರಿರುವ ಪದವನ್ನು ಕರ್ಮಪದ ಎಂದು ಗುರುತಿಸಲು ಶಾಲೆಯಲ್ಲಿ ಮಕ್ಕಳಿಗೆ ಕುರುಡಾಗಿ ಹೇಳಿಕೊಡಲಾಗುತ್ತದೆ. ವಾಕ್ಯದಲ್ಲಿ ಯಾವ ಕೆಲಸ ನಡೆದಿದೆಯೋ ಆ ಕೆಲಸದ ಪರಿಣಾಮ ಯಾವುದರ ಮೇಲೆ ಆಗಿದೆ ಎಂಬುದನ್ನು ಕರ್ಮಪದ ಹೇಳುತ್ತದೆ ಎಂದು ತಿಳಿಯುವುದಾದರೆ ಆಗ ಈ ಕುರುಡು ನಿಯಮ ಸರಿಯಾಗಿಯೇ ಇದೆ. **ಹಕ್ಕಿ ಹಣ್ಣನ್ನು ತಿನ್ನುತ್ತಿದೆ** ಎಂಬ ವಾಕ್ಯದಲ್ಲಿ ತಿನ್ನುವ ಎಂಬ ಕೆಲಸಪದವಿದೆ. ಈ ಕೆಲಸವನ್ನು ಮಾಡುತ್ತಿರುವುದು ಹಕ್ಕಿಯಾದರೂ ತಿನ್ನುವಿಕೆಯ ಪರಿಣಾಮ ಹಣ್ಣಿನಲ್ಲಿ ಕಾಣುತ್ತಿರುವುದರಿಂದ ಹಣ್ಣು ಎಂಬುದು ಕರ್ಮಪದವೆಂದು ಶಾಲಾ ವ್ಯಾಕರಣಗಳು ಹೇಳುತ್ತವೆ. ಈ ನೆಲೆಯಲ್ಲಿ ನೋಡಿದಾಗ ಆಕಾಶವಾಣಿಯ ಪಾಠ ತಪ್ಪುದಾರಿಯಲ್ಲಿದೆ ಎನ್ನದೇ ಬೇರೆ ದಾರಿಯಿಲ್ಲ.

ವಾಕ್ಯದಲ್ಲಿ ಇರುವ ಕೆಲಸಪದ ಹೇಳುತ್ತಿರುವ ಕೆಲಸವನ್ನು ಮಾಡಿದವರು ಯಾರು ಎಂಬುದನ್ನು ಸೂಚಿಸುವ ಪದ ಆ ವಾಕ್ಯದಲ್ಲಿ ಇರಲೇಬೇಕೆಂದು ಹೇಳಲಾಗದು. **ಇಲ್ಲಿ ವಾಹನ ನಿಲ್ಲಿಸಬಾರದು** ಎಂಬ ವಾಕ್ಯದಲ್ಲಿ ಕರ್ತೃಪದ ಇದೆ ಎನ್ನಬಹುದೇ? ಹಾಗೆಯೇ **ಬಾಗಿಲು ತೆರೆದಿದೆ, ಗಾಳಿ ಬೀಸುತ್ತಿದೆ, ಪುಸ್ತಕ ಪ್ರಕಟಗೊಂಡಿದೆ** ಮುಂತಾದ ವಾಕ್ಯಗಳಲ್ಲೂ ಕರ್ತೃಪದವೆಂಬುದನ್ನು ತೋರಿಸಲು ಆಗುವುದಿಲ್ಲ. ಕೆಲವೊಮ್ಮೆ ವಾಕ್ಯದ ಕೆಲಸಪದ ಹೇಳುವ ಕೆಲಸವನ್ನು ಮಾಡುವವರು ಯಾರೋ ಇದ್ದರೂ ಅದನ್ನು ವಾಕ್ಯದಲ್ಲಿ ಕಾಣುವಂತೆ ಹೇಳಲೇಬೇಕಿಲ್ಲ. ಏಕೆಂದರೆ ಕೆಲಸಪದದಲ್ಲೇ ಇರುವ ಕೆಲವು ಪ್ರತ್ಯಯಗಳು ಕರ್ತೃವನ್ನು ನಮಗೆ ತಿಳಿಸಿಕೊಡುತ್ತವೆ. **ನಾಳೆ ಬರುತ್ತೇನೆ** ಎನ್ನುವ ವಾಕ್ಯದಲ್ಲಿ ನಾನು ಎಂಬುದು ಕರ್ತೃಪದವಾದರೂ ಅದನ್ನು ಹೇಳಬೇಕಿಲ್ಲ. **ಬರುತ್ತೇನೆ** ಎಂಬ ಪದದ ಕೊನೆಯ ಪ್ರತ್ಯಯಗಳೇ ಅದನ್ನು ನಮಗೆ ತಿಳಿಸಿಕೊಡುತ್ತಿವೆ.

ಇದೆಲ್ಲ ವಿವರಗಳನ್ನು ಗಮನಿಸಿದರೆ ನಾವು ವಾಕ್ಯಗಳನ್ನು ಒಡೆದು ನೋಡುವ ಬಗೆಯಲ್ಲೇ ಕೆಲವು ಬದಲಾವಣೆಗಳಾಗಬೇಕೆಂದು ತೋರುತ್ತದೆ. ವಾಕ್ಯಗಳನ್ನು ಪದಕಂತೆಗಳೆಂದು ಒಡೆಯುವುದಾದರೆ ಎರಡು ಬಗೆಯ ಪದಕಂತೆಗಳನ್ನು ಮೊದಲ ಹಂತದಲ್ಲಿ ಗುರುತಿಸುತ್ತೇವೆ. **ಹೆಸರುಪದ ಕಂತೆ** ಮತ್ತು **ಕೆಲಸಪದ ಕಂತೆ** ಎಂಬುವೇ ಈ ಎರಡು ಬಗೆಗಳು. **ನೂರಾರು ವರುಷ ಬದುಕಿದ್ದ ಮರ ನಿನ್ನೆ ಬೀಸಿದ ಗಾಳಿಯಿಂದ ಉರುಳಿಬಿತ್ತು** ಎಂಬ ವಾಕ್ಯದಲ್ಲಿ **ನೂರಾರು ವರುಷ ಬದುಕಿದ್ದ ಮರ** ಎಂಬುದು ಹೆಸರುಪದ ಕಂತೆ ಮತ್ತು **ನಿನ್ನೆ ಬೀಸಿದ ಗಾಳಿಗೆ ಉರುಳಿಬಿತ್ತು** ಎಂಬುದು ಕೆಲಸಪದ ಕಂತೆ. ಹೆಸರುಪದ ಕಂತೆ ಒಂದು ಹೆಸರು ಪದವನ್ನು ಬಣ್ಣಿಸುತ್ತಿರುತ್ತದೆ (ಮರ) ಹಾಗೆಯೇ ಕೆಲಸಪದ ಕಂತೆ ಒಂದು ಕೆಲಸಪದವನ್ನು ಬಣ್ಣಿಸುತ್ತಿರುತ್ತದೆ (ಉರುಳು). ಬಳಿಕ ಈ ಪದಕಂತೆಗಳಲ್ಲಿ ಒಳಗುಂಪುಗಳನ್ನು ಮಾಡಿಕೊಳ್ಳುವುದರಿಂದ ವಾಕ್ಯದ ಕಟ್ಟೋಣ ಹೇಗೆ ಆಗಿದೆ ಎನ್ನುವುದನ್ನು ಅರಿಯಬಹುದು. ಈ ನಿಟ್ಟಿನಲ್ಲಿ ನಮ್ಮ ಶಾಲಾ ವ್ಯಾಕರಣಗಳನ್ನು ತಿದ್ದಿ ಬರೆಯಬೇಕಿದೆ.

**ಕರದಲ್ಲೋ ಕೆರದಲ್ಲೋ**

ವೀರಭದ್ರಪ್ಪ (ದಾವಣಗೆರೆ)ಇವರು ಬರೆದಿದ್ದ ಸರ್ವಜ್ಞನ ತ್ರಿಪದಿಯ ಬಗೆಗೆ ತಮ್ಮ ನಿಲುವನ್ನು ಬರೆದು ತಿಳಿಸಿದ್ದಾರೆ. ಸರ್ವಜ್ಞ ತನ್ನ ತ್ರಿಪದಿಯಲ್ಲಿ 'ಕರೆಯದೇ ಬಂದವರನ್ನು ಯಾವುದರಲ್ಲಿ ಹೊಡೆಯಬೇಕೆಂದು ಹೇಳಿದ್ದಾನೆ (ಕರದಲ್ಲೋ ಕೆರದಲ್ಲೋ) ಎಂಬಂತಹ ಪ್ರಶ್ನೆಯೇ ತಪ್ಪು ಎನ್ನುವುದು ಇವರ ವಾದ. ಸರ್ವಜ್ಞನಂತಹ ಸಂತನಾದವನು ಹಾಗೆ ಯಾರನ್ನಾದರೂ ಹೊಡೆಯಬೇಕು ಎಂದು ಹೇಳಿರುವುದು ಸಾಧ್ಯವೇ ಇಲ್ಲ; ಹಾಗಾಗಿ ಆ ತ್ರಿಪದಿಯ ಕೊನೆಯ ಸಾಲನ್ನು 'ಕರ ಎತ್ತಿ ಮುಗಿಯಬೇಕೆಂದ ಸರ್ವಜ್ಞ' ಎಂದು ಓದಲು ಹೇಳುತ್ತಾರೆ. ತಲೆಮೊರೆಗಳನ್ನು ದಾಟಿಬಂದ ಬಾಯ್ದೆರೆಯ ರಚನೆಗಳನ್ನು ಕೇಳುಗರು ಹೇಗೆ ತಮಗೆ ಅನಿಸಿದಂತೆ ತಿದ್ದಿಕೊಳ್ಳುತ್ತಾರೆ ಎಂಬುದಕ್ಕೆ ಇದೂ ಒಂದು ಉದಾಹರಣೆ. ಇಲ್ಲಿ ಸರ್ವಜ್ಞ ಏನು ಹೇಳಿರಬಹುದು ಎಂದು ವಿದ್ವಾಂಸರು ಮಾಡುವ ಊಹೆಗಿಂತ, ಆತ ಏನನ್ನು ಹೇಳಿರಲು ಸಾಧ್ಯವೆಂದು ಕೇಳುಗರಾಗಿ ನಾವು ತಿಳಿಯುತ್ತೇವೋ ಅದೇ ಮುಂಚೂಣಿಗೆ ಬರುತ್ತದೆ. ಅದನ್ನೇ ಸರಿಯೆಂದು

ನಂಬತೊಡಗುತ್ತೇವೆ. ಹಾಗಾಗಿ ಹೀಗೆ 'ತಿದ್ದಿಕೊಂಡ' ಮೇಲಿನ ಓದೂ ಕೂಡ ಹಿಂದೆ ನಾನು ಹಿಂದೆ ಹೇಳಿದ ಮಾತಿಗೆ ಒತ್ತಾಸೆಯಾಗಿಯೇ ನಿಲ್ಲುತ್ತದೆ.

**ಗಲೀಜು ಮಾಡಬಾರದು. ತಪ್ಪಿದಲ್ಲಿ ದಂಡ ವಿಧಿಸಲಾಗುವುದು.**

ನಗರಪಾಲಿಕೆಯವರು ಜನರಿಗೆ ಸೂಚನೆ ಮತ್ತು ಎಚ್ಚರಿಕೆಯನ್ನು ನೀಡಲು ಬರೆಸಿದ್ದ ಬೋರ್ಡೊಂದರಲ್ಲಿ ಕಂಡದ್ದು: '**ಇಲ್ಲಿ ಗಲೀಜು ಮಾಡಬಾರದು. ತಪ್ಪಿದಲ್ಲಿ ದಂಡ ವಿಧಿಸಲಾಗುವುದು.**' ಇಂತಹ ರಚನೆಗಳ ಬಗೆಗೆ ಬರೆಯಬೇಕಾದುದು ಬಹಳವಿದೆ. ಆದರೆ ಈಗ ಇಲ್ಲಿ ಬಳಸಿರುವ '**ತಪ್ಪಿದಲ್ಲಿ**' ಎಂಬ ರಚನೆಯ ಬಗೆಗೆ ಕೆಲವು ಮಾತುಗಳನ್ನು ಬರೆಯುಬೇಕೆನಿಸಿದೆ. **ತಪ್ಪು** ಎಂಬ ಪದ ಹೆಚ್ಚಾಗಿ ನಾಮಪದವೆಂಬಂತೆ ಬಳಕೆಯಾಗುವುದಾದರೂ ಕನ್ನಡದಲ್ಲಿ ಇದಕ್ಕೆ ಕ್ರಿಯಾಪದವಾಗಿಯೂ ಬಳಕೆ ಇದೆ. **ದಾರಿತಪ್ಪು, ಮಾತುತಪ್ಪು** ಮುಂತಾದ ರಚನೆಗಳಲ್ಲಿ ಇದು ಕ್ರಿಯಾಪದವಾಗಿದೆ. '**ತಪ್ಪಿದಲ್ಲಿ**' ಎಂಬ ರಚನೆಯಲ್ಲಿಯೂ ಇದು ಕ್ರಿಯಾಪದವಾಗಿ ಬಳಕೆಯಾಗಿದೆ. ಮೇಲೆ ಹೇಳಿದ ವಾಕ್ಯಗಳಲ್ಲಿ ತಪ್ಪಿದಲ್ಲಿ ಎಂಬ ಶರತ್ತು ಹೇಳುವ ಮಾತನ್ನು ಬಳಸಬಹುದೇ? ಇಂತಹ ಶರತ್ತನ್ನು ಹೇಳುವ ಪದವನ್ನು ಬಳಸಬೇಕಾದರೆ ಹಿಂದಿನ ವಾಕ್ಯದಲ್ಲಿ ಏನನ್ನು ಮಾಡಬೇಕು ಎಂದು ಹೇಳಿರಬೇಕೇ ಹೊರತು ಏನನ್ನು ಮಾಡಬಾರದು ಎಂದಲ್ಲ. ಉದಾಹರಣೆಗೆ ಈ ಮುಂದಿನ ವಾಕ್ಯಗಳನ್ನು ನೋಡಿ. '**ಎಲ್ಲರೂ ಬೆಳಗಿನ ಆರು ಗಂಟೆಗೆ ಹಾಜರಿರಬೇಕು. ತಪ್ಪಿದಲ್ಲಿ ತಕ್ಕ ಶಾಸ್ತಿಯಾಗುವುದು.**' ಮೊದಲ ವಾಕ್ಯ ಏನನ್ನು ಮಾಡಬಾರದು ಎಂದು ಹೇಳುವಂತಿರುವಾಗ ಅಂದರೆ ನಿಷೇಧ ರೂಪದಲ್ಲಿರುವಾಗ ಶರತ್ತನ್ನು ಹೇಳುವ '**ತಪ್ಪಿದಲ್ಲಿ**' ಮಾದರಿಯ ಪದವನ್ನು ಬಳಸುವುದು ಸರಿಯಾಗಲಾರದು. ನಗರಪಾಲಿಕೆಯ ಸೂಚನೆಯಲ್ಲಿ '**ಈ ಜಾಗವನ್ನು ಶುಚಿಯಾಗಿಡಬೇಕು. ತಪ್ಪಿದಲ್ಲಿ ದಂಡವಿಧಿಸಲಾಗುವುದು**' ಎಂದು ಬರೆದರೆ ಅದು ಹೆಚ್ಚು ಸರಿಯಾದ ರಚನೆಯಾಗುತ್ತದೆ.

**ತಪ್ಪಿದಲ್ಲಿ** ಎಂಬುದೂ ಕೂಡ ಶರತ್ತು ಪದವಾಗಿ ಬಳಕೆಯಾಗುವುದು ಈಚೆಗೆ ಕಡಿಮೆಯಾಗುತ್ತಿದೆ. ಅದರ ಬದಲು **ತಪ್ಪಿದರೆ** ಎಂಬ ಪದವು ಹೆಚ್ಚಾಗಿ ಬಳಕೆಯಾಗುತ್ತದೆ. ತಪ್ಪಿದರೆ ಪದದಲ್ಲಿರುವ **–ಅರೆ** ಎಂಬ ಪ್ರತ್ಯಯ ಹಳಗನ್ನಡದಲ್ಲಿದ್ದ **–ಒಡೆ** ಎಂಬ ಪ್ರತ್ಯಯದ ಇಂದಿನ ರೂಪ. ಅದರ ತಿರುಳಿನಲ್ಲಿ ಬದಲಾವಣೆಗಳಾಗಿಲ್ಲ. ಆದರೆ ತಪ್ಪಿದಲ್ಲಿ ಪದದಲ್ಲಿರುವ –ಅಲ್ಲಿ ಎಂಬ ಪ್ರತ್ಯಯಕ್ಕೆ ಈ ಶರತ್ತು ಸೂಚಿಸುವ ಕೆಲಸ ನಡುಗನ್ನಡದಲ್ಲಿ ಬಂದು ಸೇರಿಕೊಂಡಂತಿದೆ.

**ಅವಶ್ಯ, ಆವಶ್ಯಕ, ಅತ್ಯವಶ್ಯ, ಅತ್ಯಾವಶ್ಯಕ, ಅತ್ಯವಶ್ಯಕ.**

ಕನ್ನಡ ಬರವಣಿಗೆಯಲ್ಲಿ ಬಳಕೆಯಲ್ಲಿರುವ ಇನ್ನೊಂದು ಪದಸರಣಿ ಗೊಂದಲವನ್ನು ಉಂಟು ಮಾಡುವಂತಿದೆ. **ಅವಶ್ಯ, ಆವಶ್ಯಕ, ಅತ್ಯವಶ್ಯ, ಅತ್ಯಾವಶ್ಯಕ, ಅತ್ಯವಶ್ಯಕ.** ಈ ಎಲ್ಲ ಪದಗಳಲ್ಲಿ ಯಾವುದು ಸರಿ ಯಾವುದು ಅಲ್ಲ ಎನ್ನುವ ಪ್ರಶ್ನೆ ಹಲವರನ್ನು ಕಾಡುತ್ತದೆ. ಇವೆಲ್ಲವೂ ಸಂಸ್ಕೃತ ನುಡಿಯಿಂದ ಬಂದು ಸೇರಿಕೊಂಡಿರುವ ಪದಗಳು. ಇವುಗಳಲ್ಲಿ ಸಂಸ್ಕೃತನುಡಿಯ ರಚನೆಯ ಕಟ್ಟುಗಳ ನಿಟ್ಟಿನಿಂದ **ಅತ್ಯವಶ್ಯಕ** ಎಂಬುದು ಸರಿಯಾದ ರಚನೆಯಲ್ಲ. **ಅತ್ಯವಶ್ಯಕ** ಎಂಬ ಪದದಲ್ಲಿ **ಅತಿ** ಮತ್ತು **ಅವಶ್ಯಕ** ಎಂಬ

ಪದಗಳು ಸೇರಿವೆ ಮತ್ತು ಇವುಗಳ ಸೇರ್ಪಡೆ ಸಂಸ್ಕೃತದ ಸಂಧಿಯ ನಿಯಮಕ್ಕೆ ತಕ್ಕಂತೆ ಇದೆಯಲ್ಲವೇ ಎಂದು ಕೇಳಬಹುದು. ಅದು ಸರಿ. ಆದರೆ **ಅವಶ್ಯಕ** ಎಂಬ ರೂಪವೇ ಸರಿಯಾದುದಲ್ಲ. ಆದರೆ ಕನ್ನಡದಲ್ಲಿ **ಅವಶ್ಯಕ** ಪದಕ್ಕೆ ಹೆಚ್ಚಿನ ಬಳಕೆ ದೊರಕಿಬಿಟ್ಟಿದೆ. ಉದಾಹರಣೆಗೆ ಈ ರಚನೆಗಳನ್ನು ನೋಡಿ: **ಅವಶ್ಯಕ ಸಾಮಗ್ರಿ ಅವಶ್ಯಕ ಸೇವೆ** ಮುಂತಾದವು. ಇದರಿಂದಾಗಿ **ಅತ್ಯವಶ್ಯಕ** ಎಂಬ ರೂಪ ಕೂಡ ರಚನೆಗೊಂಡು ನೆಲೆನಿಂತುಬಿಟ್ಟಿದೆ. ಅವಶ್ಯ > ಆವಶ್ಯಕ > ಅತ್ಯಾವಶ್ಯಕ ಇದು ಸರಿಯಾದ ಸರಣಿ. ಅವಶ್ಯಕ ಮತ್ತು ಅತ್ಯವಶ್ಯಕ ಪದಗಳನ್ನು ಬಳಕೆಯಲ್ಲಿ ಕಡಿಮೆ ಮಾಡುವುದು ಒಳ್ಳೆಯದು.

**ಅಹಿಂಸಾತುರ**

**ಅಹಿಂಸಾತುರ** ಎಂಬ ಪದವನ್ನು ಹೇಗೆ ಬೇರ್ಪಡಿಸಿ ನೋಡಬೇಕೆಂದು ಹೊಲನಗದ್ದೆ(ಉ.ಕ)ಯ ಜಿ.ಆರ್.ಹೆಗಡೆ ಕೇಳಿದ್ದಾರೆ. ಈ ಪದವನ್ನು ಅವರು ಎಲ್ಲಿ ನೋಡಿದರೋ ತಿಳಿಯದು. ಆದರೆ ಕನ್ನಡ ಪತ್ರಿಕೆಗಳಲ್ಲಿ ಚಲಾವಣೆಗೆ ಬರುತ್ತಿರುವ ಪದರಚನೆಗಳನ್ನು ನೋಡಿದರೆ ಇಂತಹದೊಂದು ರಚನೆ ಕಂಡುಬಂದಿದ್ದರೆ ಅಚ್ಚರಿಯೇನಿಲ್ಲ.(ಜಾಹೀರಾತೊಂದರಲ್ಲಿ **ಅಪೂರ್ಣ** ಎಂಬುದಕ್ಕೆ ಬದಲಾಗಿ **ಅಪೂರ್ತಿ** ಎಂಬ ಪದ ಬಳಕೆಯಾಗಿದೆ.) **ಅ-** ಎಂಬ ನಿಷೇಧ ಸೂಚಕ ಪ್ರತ್ಯಯವನ್ನು ಬಳಸಿ ಹೊಸಪದಗಳನ್ನು ಕಟ್ಟುವುದು ಕನ್ನಡದಲ್ಲಿ ಜಾರಿಯಲ್ಲಿದೆ. ಅಹಿಂಸಾತುರ ಪದರಚನೆಯನ್ನು ಅಹಿಂಸೆ+ಆತುರ ಎಂದೋ ಅ+ಹಿಂಸಾತುರ ಎಂದೋ ಒಡೆಯಲು ಬರುತ್ತದೆ. ಅರ್ಥದ ನಿಟ್ಟಿನಲ್ಲಿ ಎರಡನೆಯ ಬಗೆ ಹೆಚ್ಚು ಸರಿ. ಏಕೆಂದರೆ ಆಗ **ಹಿಂಸಾತುರ**(=ಹಿಂಸಿಸಲು ತುದಿಗಾಲಿನಲ್ಲಿ ನಿಂತಿರುವ) ಎಂಬ ರಚನೆಯ ಅರ್ಥವನ್ನು ನಿಷೇಧಿಸಲು ಅ-ಪ್ರತ್ಯಯವನ್ನು ಸೇರಿಸಿದಂತಾಗಿದೆ. ಆಗ ಹಿಂಸಿಸಲು ಬಯಸದ ಎಂಬ ಅರ್ಥವನ್ನು ಅಹಿಂಸಾತುರ ಪದರಚನೆಗೆ ನೀಡಲು ಸಾಧ್ಯ. ಏನೇ ಆಗಲಿ ಸೌಕರ್ಯದ ನೆಲೆಯಲ್ಲಿ ಇಂತಹ ರಚನೆಗಳು ಕಬ್ಬಿಣದ ಕಡಲೆಗಳೇ ಸರಿ.

**ಕೊಡುಗೆ ಕೊಡಿಗೆ**

**ಕೊಡುಗೆ** ಪದವನ್ನು **ಕೊಡಿಗೆ** ಎಂದು ಬರೆಯುವುದು ಸರಿಯಲ್ಲವೇ? ಇದು ಮೂಡಬಿದರಿಯ ಎಸ್.ತಿಪ್ಪೇಸ್ವಾಮಿಯವರ ಪ್ರಶ್ನೆ. ನಾವು ಒಂದು ಪದವನ್ನು ನುಡಿಯುವುದಕ್ಕೂ ಅದೇ ಪದವನ್ನು ಬರೆಯುವುದಕ್ಕೂ ಹೊಂದಾಣಿಕೆ ಎಷ್ಟೋ ವೇಳೆ ಇರುವುದಿಲ್ಲ. ಅಥವಾ ಒಂದೇ ಪದವನ್ನು ಒಂದಕ್ಕಿಂತ ಹೆಚ್ಚು ಬಗೆಯಲ್ಲಿ ಬರೆಯುತ್ತಿರುತ್ತೇವೆ. ಹಸಿರು, ಹಸುರು; ಉಸಿರು, ಉಸುರು; ಚಳವಳಿ, ಚಳುವಳಿ ಇವೇ ಮುಂತಾದವು ಉದಾಹರಣೆಗಳು. ಈ ಏರುಪೇರಿಗೆ ನಮ್ಮ ಉಚ್ಚಾರಣೆಯಲ್ಲಿ ಕೆಲವು ಕಾರಣಗಳಿವೆಯಾದರೆ, ನಮ್ಮ ಭಾಷೆ ಬೆಳೆದು ಬಂದ ಹಾದಿಯಲ್ಲಿ ಕೆಲವು ಕಾರಣಗಳಿರುತ್ತವೆ. ಕನ್ನಡ ಪದಗಳಲ್ಲಿ ಎರಡಕ್ಕಿಂತ ಹೆಚ್ಚು ಸ್ವರಗಳಿದ್ದಾಗ ಮೊದಲ ಸ್ವರ ಮಾತ್ರ ತನ್ನ ಚಹರೆಯನ್ನು ಉಚ್ಚಾರಣೆಯಲ್ಲಿ ಹಾಗೆಯೇ ಉಳಿಸಿಕೊಳ್ಳುತ್ತದೆ. ಆದರೆ, ಬಳಕೆಗೆ ಬರುವ ಸ್ವರಗಳು ಬೇರೆ ಬೇರೆ ಕಾರಣಗಳಿಂದ ತಮ್ಮ ಚಹರೆಯನ್ನು ಕಳೆದುಕೊಳ್ಳುವ ಸಾಧ್ಯತೆ ಇದೆ. ಕೆಲವೊಮ್ಮೆ ಸ್ವರಗಳನ್ನು ನಾವು ಉಚ್ಚಾರಣೆಯಲ್ಲಿ ಬಿಟ್ಟು ಬಿಡುವುದೂ

ಉಂಟು. ಬಳಪ>ಬಳ್ಪ, ಚಿಗುರು>ಚಿಗ್ರು, ಆದರೆ ಅವುಗಳನ್ನು ಬರೆಯುವಾಗ ಎಲ್ಲರಿಗೂ ಒಪ್ಪಿಗೆಯಾಗುವ ರೂಪವೊಂದನ್ನು ಉಳಿಸಿಕೊಳ್ಳಬೇಕಾಗುತ್ತದೆ. ಸಾಮಾನ್ಯವಾಗಿ ನಿಘಂಟುಗಳು ಈ ರೂಪಗಳನ್ನು ದಾಖಲಿಸುತ್ತವೆ.

ನಾವೀಗ ಗಮನಿಸುತ್ತಿರುವ ಕೊಡುಗೆ/ಕೊಡಿಗೆ ಜೋಡಿಯಲ್ಲಿ ಇನ್ನೂ ಒಂದು ಸಮಸ್ಯೆ ಇದೆ. ಹಳೆಗನ್ನಡದಲ್ಲಿ **–ಗೆ** ಎಂಬ ಪ್ರತ್ಯಯವನ್ನು ಕ್ರಿಯಾರೂಪಗಳಿಗೆ ಹತ್ತಿಸಿದಾಗ ಸಿಗುತ್ತಿದ್ದ ರೂಪಗಳಿಗೆ ಸಂಭಾವನಾರ್ಥವಿರುತ್ತಿತ್ತು. ಉದಾ. ಕಟ್ಟುಗೆ,(=ಕಟ್ಟಲಿ) ನೆಲಸುಗೆ( =ನೆಲಸಲಿ), ಮೆಟ್ಟುಗೆ(= ಮೆಟ್ಟಲಿ). ಈ ನಿಟ್ಟಿನಲ್ಲಿ ನೋಡಿದರೆ ಕೊಡುಗೆ ಎಂದಾಗ ಕೊಡಲಿ ಎಂಬ ಅರ್ಥ ಬರುತ್ತದೆ. ಆದರೆ ಈಗ **–ಗೆ** ಪ್ರತ್ಯಯಕ್ಕೆ ಈ ಕೆಲಸವಿಲ್ಲ. ಅದರ ಬದಲು ನಾವೀಗ **–ಅಲಿ** ಎಂಬ ಪ್ರತ್ಯಯವನ್ನು ಬಳಸುತ್ತಿದ್ದೇವೆ. ಹಾಗಾಗಿ ಕೊಡಿಗೆ, ಕೊಡುಗೆ ಎಂಬ ರೂಪಗಳ ನಡುವೆ ಅರ್ಥವ್ಯತ್ಯಾಸವಿರುವುದು ನಮಗೆ ಗೊತ್ತಾಗುವುದಿಲ್ಲ.

**ಅವರು, ನವರು, ರವರು, ಯವರು**

ಬೆಂಗಳೂರಿನ ಆರ್. ಪ್ರಕಾಶ್ ಎತ್ತಿರುವ ಸಮಸ್ಯೆ ಕೊಂಚ ಬೇರೆಯಾಗಿದೆ. ಹೆಸರಿನ ಮುಂದೆ ಗೌರವಸೂಚಕವಾಗಿ **ಅವರು, ನವರು, ರವರು, ಯವರು** ಮುಂತಾಗಿ ಬರೆಯುತ್ತೇವಲ್ಲವೇ? ಇದರಲ್ಲಿ ಯಾವುದು ಸರಿ ಎನ್ನುವುದು ಅವರ ಪ್ರಶ್ನೆ. ಗೌರವಸೂಚಿಸಲು ಹೆಸರಿನ ಮೊದಲು ಶ್ರೀ/ಶ್ರೀಮತಿ ಮುಂತಾದ ಪದಗಳನ್ನು ಸೇರಿಸುವುದು ವಾಡಿಕೆ. ಇದರ ಜೊತೆಗೆ ಹೆಸರಿನ ಕೊನೆಗೆ **ಅವರು** ಎಂಬ ಪದವನ್ನು ಸೇರಿಸುವುದು ಈಚಿನ ಬೆಳವಣಿಗೆ. ರು, ಗಳು ಎಂಬ ಎರಡು ಬಹುವಚನ ಪ್ರತ್ಯಯಗಳನ್ನು ಕೆಲವರು ಹೆಸರುಗಳ ಮುಂದೆ ಗೌರವಸೂಚಿಸಲೆಂದು ಸೇರಿಸುವುದುಂಟು. ದೇವೆಗೌಡರು, ಕೃಷ್ಣಶೆಟ್ಟರು, ನರಸಿಂಹಸ್ವಾಮಿಗಳು ಮುಂತಾದ ಉದಾಹರಣೆಗಳನ್ನು ಗಮನಿಸಿ. ಇಂತಹ ಕಡೆಗಳಲ್ಲಿ ಹೆಸರುಗಳ ಕೊನೆಗೆ ವಾರ್ಗಿಕಗಳೆಂದು ಗುರುತಿಸಲಾಗುವ ಗೌಡ, ಶೆಟ್ಟಿ, ಸ್ವಾಮಿ ಪದಗಳಿರುವುದರಿಂದಾಗಿ ರು/ಗಳು ಗಳನ್ನು ಸೇರಿಸಲು ಆಗುತ್ತದೆ. ಬರಿಯ ಹೆಸರಿದ್ದರೆ ಸಾಮಾನ್ಯವಾಗಿ ಈ ಸೇರ್ಪಡೆ ಸಾಧ್ಯವಾಗುವುದಿಲ್ಲ. ಅವರು ಎಂಬ ಗೌರವಸೂಚಕ ಪದ ಅದು ಇರುವಂತೆಯೇ ವ್ಯಂಜನಾಂತ ಹೆಸರುಗಳ ಮುಂದೆ ಸೇರುವಂತಿದೆ. (ಸಿಂಗ್ ಅವರು, ಚಂದರ್ ಅವರು, ಮೆನನ್ ಅವರು ಹೀಗೆ) ಇದು ಆಕಾರದಿಂದ ಕೊನೆಗೊಳ್ಳುವ ಹೆಸರುಗಳಿಗೂ ಹೊಂದುವ ನಿಯಮ. ಉದಾ. ರಾಜಾ ಅವರು, ಚಂದ್ರಾ ಅವರು, ರಾಣಾ ಅವರು. ಈ ವ್ಯಂಜನಾಂತ ಹೆಸರುಗಳ ಮತ್ತು ಆಕಾರಾಂತ ಹೆಸರುಗಳ ಮುಂದೆ ಕೆಲವೊಮ್ಮೆ **ರವರು** ಎಂದೂ ಹೇಳುವುದು/ಬರೆಯುವುದು ಉಂಟು. ಹೀಗೆ ಮಾಡಲು ಯಾವುದೇ ಕಾರಣಗಳಿಲ್ಲ. ರು ಎಂಬ ಗೌರವಸೂಚಕ ಪ್ರತ್ಯಯವನ್ನು ಮೊದಲು ಸೇರಿಸಿಕೊಂಡು ಬಳಿಕ ಮತ್ತೊಮ್ಮೆ ಅವರು ಎಂಬುದನ್ನು ಕೂಡಿಸುತ್ತಲೂ ಇರಬಹುದು. ಇದು ಊಹೆ ಮಾತ್ರ

ಇನ್ನು ಹೆಸರುಗಳು ಇಕಾರ ಇಲ್ಲವೇ ಎಕಾರದಿಂದ ಕೊನೆಯಾಗಿದ್ದರೆ ಆಗ **ಯವರು** ರೂಪ ಕಾಣಸಿಗುತ್ತದೆ. ಉದಾ. ಗಾಂಧಿಯವರು, ನಂದಿನಿಯವರು, ಬೇಂದ್ರೆಯವರು, ಲಿಗಾಡೆಯವರು ಹೀಗೆ. ಇಲ್ಲಿ ಕನ್ನಡದ ಸಂಧಿನಿಯಮವೊಂದು

ಇರುವಂತೆಯೇ ಬಳಕೆಯಾಗಿದೆ. (ಅ+ಇ/ಎ=ಯು). ನವರು ರೂಪವನ್ನು ಅಪ್ಪ,ಅಯ್ಯ,ಅಮ್ಮ,ಅಣ್ಣ,ಅಕ್ಕ ಎಂದು ಕೊನೆಗೊಳ್ಳುವ ಹೆಸರುಗಳ ಮುಂದೆ ಬಳಸುವಂತೆ ತೋರುತ್ತಿದೆ. ಸಿದ್ಧಲಿಂಗಯ್ಯನವರು,ರಾಮಯ್ಯನವರು, ಪುಟ್ಟಮ್ಮನವರು, ಬಸವಣ್ಣನವರು ಮುಂತಾದ ರೂಪಗಳನ್ನು ಗಮನಿಸಿ.

ಹೀಗಿದ್ದರೂ ಈ ಎಲ್ಲ ರೂಪಗಳ ಬಳಕೆಯ ನಿಯಮಗಳನ್ನು ತಪ್ಪಿಲ್ಲದಂತೆ ಹೇಳಲಾಗಿದೆ ಎನ್ನುವಂತಿಲ್ಲ. ಏಕೆಂದರೆ ಈ ಬಳಕೆ ಇನ್ನೂ ಕನ್ನಡದಲ್ಲಿ ನೆಲೆಗೊಂಡಿಲ್ಲ. ಅಲ್ಲಲ್ಲಿ ನಿಯಮಗಳನ್ನು ಮೀರುವ ಬಳಕೆಗಳೂ ಕಾಣಸಿಗುವುದುಂಟು. ನಮ್ಮ ಶಾಲ ವ್ಯಾಕರಣಗಳು ಇಂತಹ ಬಳಕೆಗಳನ್ನು ಏನು ಎಂದು ತಿಳಿಸದಿರುವುದೂ ಇದಕ್ಕೆ ಒಂದು ಕಾರಣ.

**ಕರ್ಬೊನ್**

ಸಂಕನಾಳ ಆರ್.ಎಸ್ (ಗಳತಗಾ, ಚಿಕ್ಕೋಡಿ) ಇವರು **ಕರ್ಬೊನ್** ಪದದ ತಿರುಳೇನು ಎಂದು ಕೇಳಿದ್ದಾರೆ. ಕರ್ಪು ಮತ್ತು ಪೊನ್ ಪದಗಳು ಕೂಡಿ ಕರ್ಬೊನ್ ಪದ ಹುಟ್ಟಿದೆ. ಪೊನ್ ಎಂದರೆ ಚಿನ್ನ ಎಂಬ ತಿರುಳು ಹಲವು ದ್ರಾವಿಡ ನುಡಿಗಳಲ್ಲಿ ಇದೆ. ಕನ್ನಡದಲ್ಲಿ ಈಗ ಬಳಕೆಯಲ್ಲಿರುವ ಹೊನ್ನು ಎಂಬ ಪದದ ಮೊದಲ ರೂಪವೇ ಪೊನ್. ಆದರೆ ಕನ್ನಡದಲ್ಲಿ (ಕೊಂಚಮಟ್ಟಿಗೆ ತಮಿಳಿನಲ್ಲಿ ಕೂಡ) ಪೊನ್ ಪದಕ್ಕೆ ಯಾವುದೇ ಲೋಹ ಎಂಬ ತಿರುಳು ಕೂಡ ಇತ್ತು. ಹಾಗಾಗಿ ಕರ್ಪು(=ಕಪ್ಪು) ಮತ್ತು ಪೊನ್ ಕೂಡಿ ಕರ್ಬೊನ್ ರೂಪವನ್ನು ಕಟ್ಟಲಾಗಿದೆ. ಕಪ್ಪು ಲೋಹವೆಂದರೆ ಕಬ್ಬಿಣ. (ತಮಿಳಿನಲ್ಲಿ ಕರುಂಪೊನ್) ಆದರೆ ಹಳಗನ್ನಡದಲ್ಲೇ ಕಬ್ಬಿಣ ಎಂಬ ರೂಪ ದೊರಕುತ್ತದೆ. ಆದ್ದರಿಂದ ಕರ್ಬೊನ್ ಎಂಬುದು ಹಳಗನ್ನಡದ ಕಟ್ಟುಗಳಿಗೆ ತಕ್ಕಂತೆ ಈಗ ಮೈದಳೆದಿರುವ ರಚನೆಯೂ ಆಗಿರಬಹುದು.

**ಪ್ರಕ್ಷಿಪ್ತ**

ರೇಣುಕಾರಾಧ್ಯ (ಕಡೂರು) ಇವರು **ಪ್ರಕ್ಷಿಪ್ತ** ಪದದ ತಿರುಳೇನು ಎಂದು ಕೇಳಿದ್ದಾರೆ. ಇದು ಸಂಸ್ಕೃತದಿಂದ ಬಂದು ಕನ್ನಡದಲ್ಲಿ ಸೇರಿರುವ ಪದ. ಹೊಸದಾಗಿ ಸೇರಿಸಿದ್ದು ಎಂಬ ತಿರುಳು ಈ ಪದಕ್ಕಿದೆ. ಮೊದಲು ಇರದಿದ್ದ ಆದರೆ ಈಗ ಬಂದು ಸೇರಿಕೊಂಡಿರುವ ಹೊಸದೆಲ್ಲ ಪ್ರಕ್ಷಿಪ್ತ ಎನಿಸಿಕೊಳ್ಳುತ್ತದೆ. ಸಹಜ ಬೆಳವಣಿಗೆಗಳು ಪ್ರಕ್ಷಿಪ್ತಗಳಲ್ಲ. ಈ ಪದವನ್ನೇ ಹೋಲುವ ಇನ್ನೊಂದು ಸಂಸ್ಕೃತ ಪದವೂ ಕನ್ನಡದಲ್ಲಿ ಬಳಕೆಯಲ್ಲಿದೆ. ಅದು ಪ್ರಕ್ಷೇಪ. ಹೊಸದಾಗಿ ಬಂದು ಸೇರಿಕೊಂಡದ್ದು ಎಂಬ ತಿರುಳಿನ ಜೊತೆಗೆ ಹೆಚ್ಚಾಗಿ ಇದನ್ನು ಹೊರಕ್ಕೆ ಎಸೆದದ್ದು ಎಂಬ ತಿರುಳಿನಲ್ಲಿ ಕೂಡ ಕನ್ನಡದಲ್ಲಿ ಬಳಸುವುದುಂಟು. ದೂರದೂರಕ್ಕೆ ಹಾರಿ ಹೋಗುವ ಕ್ಷಿಪಣಿಗಳನ್ನು ಪ್ರಕ್ಷೇಪಾಸ್ತ್ರಗಳು ಎಂದು ಕರೆಯುವುದುಂಟಷ್ಟೆ.

**ಕೌಶಲ ಮತ್ತು ಕೌಶಲ್ಯ**

ಚಂದ್ರಶೇಖರ ಎಚ್.ಎಲ್ (ಹಿರಿಯೂರು) ಇವರು **ಕೌಶಲ** ಮತ್ತು **ಕೌಶಲ್ಯ** ಪದಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಇವೆರಡೂ ಸಂಸ್ಕೃತದಿಂದ ಕನ್ನಡಕ್ಕೆ

ಬಂದು ಸೇರಿರುವ ಪದಗಳು. ಇವೆರಡೂ ರೂಪಗಳು ಸರಿಯೆಂದು ಸಂಸ್ಕೃತ ನಿಘಂಟುಗಳು ಹೇಳುತ್ತವೆ. ಅಲ್ಲದೆ ಇವೆರಡರ ತಿರುಳೂ ಬೇರೆಬೇರೆಯಲ್ಲ. ಒಂದೇ ಆಗಿದೆ. ಕುಶಲ ಪದದ ನಂಟನ್ನು ಪಡೆದಿರುವ ಪದಗಳಿವು. ಕನ್ನಡದ ಪದಗಳಾದ ಸೂಟಿ, ಚದುರು, ಚಳಕ ಗಳು ಕೌಶಲ ಪದದ ತಿರುಳನ್ನೇ ಹೊಂದಿವೆ. ಬದಲು ಪದಗಳಾಗಿ ಕನ್ನಡದ ಪದಗಳನ್ನೇ ಬಳಸಬಹುದು.

**ಸಾಧ್ಯವಿಲ್ಲ**

ಯಲ್ಲಾಪುರ ಕೃಷ್ಣಮೂರ್ತಿ (ಬೆಂಗಳೂರು) ಇವರು ಮುಂದಿನ ಮೂರು ವಾಕ್ಯಗಳನ್ನು ಬರೆದು ಅವುಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. **1. ನೀನು ಈ ಕಾರ್ಯವನ್ನು ಮಾಡಲು ಸಾಧ್ಯವಿಲ್ಲ. 2. ನಿನ್ನಿಂದ ಈ ಕಾರ್ಯವನ್ನು ಮಾಡಲು ಸಾಧ್ಯವಿಲ್ಲ. ಮತ್ತು 3. ನಿನಗೆ ಈ ಕಾರ್ಯವನ್ನು ಮಾಡಲು ಸಾಧ್ಯವಿಲ್ಲ.** ಈ ಮೂರೂ ವಾಕ್ಯಗಳೂ 'ಸರಿ'ಯಾಗಿವೆ. ಅಂದರೆ ವಾಕ್ಯದ ಕಟ್ಟುಗಳ ನೆಲೆಯಲ್ಲಿ ಇವು ಸರಿಯಾದ ವಾಕ್ಯಗಳೇ ಆಗಿವೆ. ಆದರೆ ಇವುಗಳ ಒಳರಚನೆ ಒಂದೇ ಬಗೆಯಲ್ಲಿ ಇಲ್ಲ. 2 ಮತ್ತು 3ನೆಯ ವಾಕ್ಯಗಳ ಒಳರಚನೆ ಒಂದು ಮಾದರಿಯಲ್ಲಿದೆ. 1ನೆಯ ವಾಕ್ಯದ ಒಳರಚನೆ ಬೇರೆಯಾಗಿದೆ. ಇದನ್ನು ತಿಳಿಯಲು 1ನೆಯ ವಾಕ್ಯದಲ್ಲಿರುವ ನೀನು ಪದವನ್ನು ವಾಕ್ಯದಲ್ಲಿ ಎಲ್ಲೆಲ್ಲಿ ಸೇರಿಸಬಹುದು ಎಂದು ನೋಡಿ. **ಈ ಕಾರ್ಯವನ್ನು** ಮತ್ತು **ಮಾಡಲು** ಪದಗಳ ನಡುವೆ ಮಾತ್ರ ಸೇರಿಸಬಹುದು. **ಸಾಧ್ಯವಿಲ್ಲ** ಎಂಬ ಪದದ ಮೊದಲಿಗೆ ನೀನು ಬರಲಾರದು. ಆದರೆ ನಿನ್ನಿಂದ ಮತ್ತು ನಿನಗೆ ಪದಗಳನ್ನು ಎರಡೂ ಕಡೆಗಳಲ್ಲಿ ಸೇರಿಸಬಹುದು. ಅಂದರೆ 1ನೆಯ ವಾಕ್ಯದಲ್ಲಿ **ಮಾಡಲು ಸಾಧ್ಯವಿಲ್ಲ** ಎಂಬುದು ಒಂದೇ ಪದಕಂತೆಯಾದರೆ ಉಳಿದೆರಡು ವಾಕ್ಯಗಳಲ್ಲಿ ಅದು ಹಾಗಿಲ್ಲ. ಇನ್ನೂ ಒಂದು ಬಗೆಯಲ್ಲಿ ಈ ವ್ಯತ್ಯಾಸವನ್ನು ತಿಳಿಯಬಹುದು. **ಮಾಡಲು ಸಾಧ್ಯವಿಲ್ಲ** ಎಂಬ ಪದಕಂತೆಯ ತಿರುಳನ್ನೇ ಹೊಂದಿರುವ **ಮಾಡಲಾರೆ** ಎಂಬ ಪದಕಂತೆಯನ್ನು ಮೂರೂ ವಾಕ್ಯಗಳಲ್ಲಿ ಬಳಸೋಣ. ಆಗ ಏನಾಗುತ್ತದೆ. ಆಗ 1ನೆಯ ವಾಕ್ಯ ಮಾತ್ರ ಉಳಿದುಕೊಳ್ಳುತ್ತದೆ. **ನಿನ್ನಿಂದ/ನಿನಗೆ ಈ ಕೆಲಸವನ್ನು ಮಾಡಲಾರೆ** ಎಂಬ ವಾಕ್ಯಗಳು ತಪ್ಪಾಗುತ್ತವೆ. ಮೊದಲು ಹೇಳಿದ ವಾಕ್ಯಗಳ ಪೂರ್ಣ ಕ್ರಿಯಾಪದದಲ್ಲಿ (ಸಾಧ್ಯವಿಲ್ಲ) ಪುರುಷ, ವಚನ ಮತ್ತು ಲಿಂಗವನ್ನು ಹೇಳುವ (ಆಖ್ಯಾತ ಪ್ರತ್ಯಯ) ಪದಭಾಗಗಳನ್ನು ಉಳಿಸಿಕೊಂಡರೆ ಪದಭಾಗಗಳು ಇಲ್ಲದಿರುವಂತೆ ಮಾಡಿರುವುದರಿಂದ ಕರ್ತೃ ಪದಕ್ಕೆ ಬೇರೆಬೇರೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಲು ಆಗಿದೆ. ಇನ್ನು ನಿನ್ನಿಂದ ಮತ್ತು ನಿನಗೆ ಇವೆರಡೂ ಒಂದೇ ರೀತಿಯಲ್ಲಿ ಕೆಲಸ ಮಾಡುತ್ತವೋ ಇಲ್ಲವೋ ಎಂಬುದು ಬೇರೆಯೇ ಪ್ರಶ್ನೆಯಾಗಿದೆ. ಈ ಟಿಪ್ಪಣಿಯಲ್ಲಿ ಅದನ್ನು ವಿವರಿಸಲು ಹೊರಡುವುದು ಆಗದು.

**ಅವುಗಳು**

ಎಚ್.ವಿ. ಶ್ರೀನಿವಾಸಮೂರ್ತಿ (ಮೆಣಸೆ, ಶೃಂಗೇರಿ ತಾ.) ಇವರು ಕನ್ನಡ ಬರವಣಿಗೆಯಲ್ಲಿ ಕಾಣಸಿಗುವ **ಅವುಗಳು** ಎಂಬ ರೂಪ ಸರಿಯೇ ಎಂದು ಕೇಳಿದ್ದಾರೆ. ಹೀಗೆ ಕೇಳಲು ಕಾರಣಗಳಿವೆ. **ಅವು** ಎಂಬ ಪದವೇ ಬಹುವಚನವಾಗಿರುವಾಗ ಅದಕ್ಕೆ ಮರಳಿ **–ಗಳು** ಎಂಬ ಬಹುವಚನ ಹೇಳುವ ಪ್ರತ್ಯಯವನ್ನು ಸೇರಿಸಬೇಕೆ ಎಂಬುದುಅವರ

ಪ್ರಶ್ನೆ. **ಅದು** ಏಕವಚನ ರೂಪ **ಅವು** ಅದರ ಬಹುವಚನ ರೂಪ. ಸರಿಯೇ ಸರಿ. ಅವುಗಳು ಎಂದು ಬಳಸಬೇಕಿಲ್ಲ ಎಂದು ಸಲೀಸಾಗಿ ಹೇಳಬಹುದು. ಆದರೆ ಬಳಸುತ್ತಿರುವುದೇಕೆ? ಅವು ಎಂಬುದು ಬಹುವಚನ ರೂಪ ಎಂದು ತಿಳಿಯದಿರುವುದರಿಂದಲೇ ಇಲ್ಲವೇ ಬೇರೆ ಏನಾದರೂ ಕಾರಣಗಳಿವೆಯೇ ಎನ್ನುವುದನ್ನು ನೋಡೋಣ. **ಅವುಗಳು** ರೂಪದ ಬಳಕೆ ಬಹಳ ಹಿಂದಕ್ಕೆ ಹೋಗುವುದಿಲ್ಲ. ಕಳೆದ ಶತಮಾನದಲ್ಲಿ ಇದು ನೆಲೆಗೊಂಡಂತೆ ಕಾಣುತ್ತದೆ. ಇದರೊಡನೆ **ಇವುಗಳು** ಎಂಬ ರೂಪವೂ ನೆಲೆಗೊಂಡಿದೆ. ಹಳಗನ್ನಡದ ಕಾಲದಲ್ಲಿಯೂ **ಅವರ್ಗಳ್, ಇವರ್ಗಳ್** ಎಂಬ ರೂಪಗಳು ಬಳಕೆಯಲ್ಲಿದ್ದವು. **ಅವರ್ / ಇವರ್** ಎಂಬ ರೂಪಗಳೆ ಬಹುವಚನದಲ್ಲಿರುವಾಗ ಮತ್ತೆ ಅಲ್ಲಿ **ಗಳ್** ಎಂಬ ಹೆಚ್ಚಿನ ಸೇರ್ಪಡೆ ಏಕೆ ಎಂದು ಕೇಳಬಹುದು. ಆದರೆ ಇದು ಈಗ ನಾವು, ಅವುಗಳು ಎಂಬ ರೂಪವನ್ನು ಬಳಸುತ್ತಿರುವುದಕ್ಕೆ ಒತ್ತಾಸೆಯಾಗಲಾರದು. **ಅವು** ಎಂಬ ರೂಪವನ್ನೇ ಬಳಸಿದರೆ ಏನಾಗುವುದೆಂದು ನೋಡೋಣ. ಅದು ಬಹುವಚನವನ್ನೇನೋ ಹೇಳುತ್ತದೆ. ಆದರೆ ಅದರ ದನಿರಚನೆ ಹೇಗಿದೆಯೆಂದರೆ ಅದಕ್ಕೆ ವಿಭಕ್ತಿ ಪ್ರತ್ಯಯಗಳನ್ನು ಸೇರಿಸಲು ಹೊರಟಾಗ ಗೋಜಲುಗಳಾಗುತ್ತವೆ. **ಅವನ್ನು** (>ಅವುಗಳನ್ನು) ಮತ್ತು **ಅವಕ್ಕೆ** (>ಅವುಗಳಿಗೆ) ಎಂಬ ಎರಡು ವಿಭಕ್ತಿ ಸಹಿತ ರೂಪಗಳು ಈಗಲೂ ಬಳಕೆಯಲ್ಲಿವೆ. ಆದರೆ ಉಳಿದ ವಿಭಕ್ತಿ ಪ್ರತ್ಯಯಗಳಾದ ಇಂದ, ಅ ಮತ್ತು ಅಲ್ಲಿ ಇಲ್ಲವೇ ಒಳಗೆ ಮುಂತಾದವನ್ನು ಸೇರಿಸಲು ಹೊರಟರೆ ಏನು ಮಾಡಬೇಕು? **ಅವಿಂದ, ಅವ,ಅವಲ್ಲಿ** ಎಂದು ಬರೆಯಲಾಗುವುದಿಲ್ಲ. ಹಾಗೆ ಬರೆದ ಉದಾಹರಣೆಗಳು ಇಲ್ಲ.

ಇದಕ್ಕೆ ಕನ್ನಡ ಪದರಚನೆಯ ಒಂದು ಚಹರೆ ಕಾರಣವಾಗಿರುವಂತೆ ತೋರುತ್ತದೆ. ಪದದಲ್ಲಿ ಮೊದಲನೆಯ ಸ್ವರ ಗಿಡ್ಡ (ಹ್ರಸ್ವ)ವಾಗಿದ್ದು ಎರಡನೆಯ ಸ್ವರ ಉಕಾರವಾಗಿದ್ದರೆ ಅಂತಹ ಪದಗಳು ಇತರ ಪದಗಳೊಡನೆ ಸಂಧಿಯಾಗುವಾಗ ಎರಡನೆಯ ಸ್ವರವಾದ ಉಕಾರವನ್ನು ಲೋಪಗೊಳಿಸಲು ಆಗುವುದಿಲ್ಲ. ಹಸು, ಕರು, ಮಗು ಮುಂತಾದ ಪದಗಳನ್ನು ನೋಡಿದರೆ ಮೇಲಿನ ಕಟ್ಟು ಯಾವ ಬಗೆಯದು ಎನ್ನುವುದು ಗೊತ್ತಾಗುತ್ತದೆ. **ಅವು** ಎಂಬುದು ಕೂಡ ಇಂತಹುದೇ ರಚನೆಯುಳ್ಳ ಪದ. **ಅದು** ಎಂಬ ಇನ್ನೊಂದು ಪದ ಕೂಡ ಹೀಗೆ ಇದೆಯಲ್ಲ ಎಂದು ಕೇಳಬಹುದು. ಆದರೆ **ಅದು** ಪದಕ್ಕೆ ಮೇಲೆ ಹೇಳಿದ ವಿಭಕ್ರಿ ಪ್ರತ್ಯಯಗಳು ಸೇರುವಾಗ ಅದು ಎಂಬುದಕ್ಕೆ ಬದಲು **ಅದರ್** (ಅದರಿಂದ, ಅದರ, ಅದರಲ್ಲಿ) ಎಂಬ ರೂಪವನ್ನು ಮಾಡಿಕೊಳ್ಳುತ್ತೇವೆ. ಅವು ಪದಕ್ಕೂ ಹೀಗೆ ಮಾಡಲು ಹೊರಟರೆ **ಅವರಿಂದ, ಅವರ, ಅವರಲ್ಲಿ** ಎಂಬ ರೂಪಗಳು ಹುಟ್ಟಿಕೊಳ್ಳುತ್ತವೆ. ಈ ಪದಗಳಿಗೆ ಬೇರೆಯೇ ಕೆಲಸವಿದೆ ಎನ್ನುವುದು ನಮಗೆಲ್ಲ ಗೊತ್ತಿದೆ. ಹಾಗಾಗಿ ಈ ಎಲ್ಲ ಗೋಜಲುಗಳಿಂದ ಹೊರಬರಲು ಅವುಗಳು ಎಂಬ ರೂಪವನ್ನು ಬಳಸುತ್ತಿರಬಹುದಲ್ಲವೇ?

**ಆಡುನುಡಿ ರೂಪಗಳು ತಪ್ಪೇ?**

ನಟರಾಜ್. ವಿ (ಕೊಳ್ಳೇಗಾಲ) ಇವರು ಆಡು ನುಡಿಯಲ್ಲಿ ಬರುವ ಪದರೂಪಗಳನ್ನು ತಪ್ಪು ಎಂದು ಹೇಳುವುದಾಗಲೀ ಆ ನುಡಿಯಲ್ಲಿ ಬರುವ ಬಗೆಯುಲ್ಲಿಯೇ

ಬರೆಯಬಾರದೆಂದಾಗಲೀ ಹೇಳುವುದು ಎಷ್ಟು ಸರಿ ಎಂದು ಕೇಳಿದ್ದಾರೆ. ಇದಕ್ಕಾಗಿ ಕೆಲವು ಉದಾಹರಣೆಗಳನ್ನೂ ಕೊಟ್ಟಿದ್ದಾರೆ. **ತಿಳುವಳಿಕೆ / ತಿಳಿವಳಿಕೆ** ಇಂತಹ ಇಂದು ಉದಾಹರಣೆ. **ಏತಕ್ಕೆ, ಏನಕ್ಕೆ, ಎಂತಕ್ಕೆ** ಇನ್ನೊಂದು ಉದಾಹರಣೆ. ಇವರ ಕಾಳಜಿಯನ್ನು ನಾನು ತಪ್ಪು ಎನ್ನುವುದಿಲ್ಲ. ಅಲ್ಲದೆ ಇದೇ ರೂಪ ಸರಿ,ಅದನ್ನಷ್ಟೆ ಬಳಸಬೇಕು ಎಂಬ ಹಟವನ್ನು ಹಿಡಿಯುವ ಮಾತುಗಳನ್ನು ಬರೆಯುತ್ತಿಲ್ಲ; ಹಾಗೆ ಬರೆಯದಿರುವುದೇ ಇಲ್ಲಿನ ಕೊರತೆ ಎನ್ನುವವರೂ ಇದ್ದಾರೆ. ಆದರೆ ಬೇರೆ ಬೇರೆ ರೂಪಗಳು ಚಾಲ್ತಿಯಲ್ಲಿದ್ದರೆ ಅವು ಹುಟ್ಟಿಕೊಳ್ಳಲು ಮತ್ತು ಬಳಕೆಗೆ ಬರಲು ಏನು ಕಾರಣಗಳಿರಬಹುದು ಎನ್ನುವುದನ್ನು ಹುಡುಕುವುದು ನನ್ನ ಗುರಿ. ಆಡುವ ಹಾಗೆಯೇ ಬರೆಯುವುದಾಗಲೀ ಬರೆದ ಹಾಗೆಯೇ ನುಡಿಯುವುದಾಗಲೀ ಯಾವಾಗಲೂ ಆಗದಿರುವ ಮಾತು. ಇದು ಕನ್ನಡವಲ್ಲದೆ ಎಲ್ಲ ಜನ ಬಳಕೆಯ ನುಡಿಗಳಿಗೂ ಹೊಂದುವ ಮಾತು. ಜನ ಬಳಸದ ನುಡಿಗಳಲ್ಲಿ ಮಾತ್ರ ನುಡಿಯುವ ರೂಪ ಮತ್ತು ಬರೆಯುವ ರೂಪ ಎಳ್ಳಷ್ಟೂ ಬದಲಾಗದೇ ಇರಬಹುದು. ಆಡುಮಾತಿನ ಕಟ್ಟಲೆಗಳೇ ಬೇರೆ; ಬರಹದ ಕಟ್ಟಲೆಗಳೇ ಬೇರೆ. ಕನ್ನಡ ಮಾತಾಡುವ ಕೆಲವು ಕಡೆಗಳಲ್ಲಿ ಗೊತ್ತಾದ ಪದರಚನೆಯಿರುವ ಪದಗಳ ಎರಡನೆಯ ಸ್ವರವನ್ನು ನುಡಿಯುವಾಗ ಬಿಟ್ಟುಬಿಡುವುದುಂಟು. ಉದಾಹರಣೆಗೆ ಆದ್ರೆ (ಆದರೆ), ಕೊಟ್ರೆ (ಕೊಟ್ಟರೆ), ಸನ್ಕೆ( ಸನಿಕೆ), ಗುದ್ಲಿ (ಗುದ್ದಲಿ) ಮುಂತಾದ ಪದಗಳನ್ನು ನೋಡಿ. ಅದರೆ ಬರವಣಿಗೆಯಲ್ಲಿ ಆಡುಮಾತಿನ ಈ ಕಟ್ಟಲೆಯನ್ನು ಬಳಸುವುದಿಲ್ಲ. ಮತ್ತೆ ಕೆಲವು ಕಡೆಗಳಲ್ಲಿ ಪದದ ಕೊನೆಯಲ್ಲಿ ವ್ಯಂಜನಗಳನ್ನು ಮಾತ್ರ ನುಡಿದರೂ ಬರೆಯುವಾಗ ಆ ವ್ಯಂಜನಗಳನ್ನು ಅಕಾರಂತವಾಗಿಯೇ ಬರೆಯುತ್ತಾರೆ. ಕಾಲೇಜ ಎಂದು ಬರೆದರೂ ನುಡಿಯುವವರು ಕೊನೆಯಲ್ಲಿ ಅಕಾರವನ್ನು ಹೇಳುವುದಿಲ್ಲ; ಕಾಲೇಜ್ ಎಂದೇ ನುಡಿಯುತ್ತಾರೆ. ಇದೆಲ್ಲವೂ ಕನ್ನಡದ ಆಡುರೂಪ ಮತ್ತು ಬರಹರೂಪಗಳ ಬಹು ಹರವಿನ ಚಿತ್ತಾರವನ್ನು ತೆರೆದಿಡುತ್ತವೆ.

**ಕೇಲು**

ಚಂದ್ರಯ್ಯ.ಕೆ. (ಹಿರಿಯೂರು) ಇವರು **ಕೇಲು** ಎನ್ನುವ ಪದದ ತಿರುಳೇನು ಎಂದು ಕೇಳಿದ್ದಾರೆ. ಇದು ಕೆಲವು ದ್ರಾವಿಡ ನುಡಿಗಳಲ್ಲಿ ಈಗಲೂ ಕಂಡು ಬರುವ ಪದ. ಕನ್ನಡದಲ್ಲಿ ಈಗ ಹೆಚ್ಚಾಗಿ ಬಳಕೆಯಲ್ಲಿಲ್ಲ. ಮಣ್ಣಿನಿಂದ ಮಾಡಿದ ಪಾತ್ರೆ ಎನ್ನುವುದು ಇದರ ತಿರುಳು. 'ದೇವರ ಕೇಲು' ಎಂಬ ರಚನೆಯನ್ನು ನೋಡಿ. ಇಲ್ಲಿ ಹರಕೆಯ ಹಣವನ್ನು ಹಾಕಬೇಕಾದ ಮಣ್ಣಿನ ಪಾತ್ರೆ ಎಂದು ಹೇಳಬೇಕಿದೆ. ಗುಡಿಗಳಲ್ಲಿ ಹರಕೆಯಹಣ ಹಾಕುವ ಹುಂಡಿಗಳಿಗೆ ಈಗ ಬೀಗ ಇರುತ್ತದೆ. ಮನೆಗಳಲ್ಲಿ ಹಿಂದೆ ಮಣ್ಣಿನ ಮಡಕೆಗಳ ರೂಪದಲ್ಲಿರುತ್ತಿದ್ದ ಈ ಪಾತ್ರೆಗಳನ್ನು ಒಡೆದಲ್ಲದೆ ಒಳಗಿರುವ ಕಾಸನ್ನು ಪಡೆಯಲು ಆಗುತ್ತಿರಲಿಲ್ಲ. ಹಾಗಾಗಿ ಅದು ಮಣ್ಣಿನ ಪಾತ್ರೆಯಾಗಿರುತ್ತಿತ್ತು.

**ಸತ್ತವರ ಕಳೇಬರ**

ನವೀನ್ (ಅರಸಿಕೆರೆ, ಹರಪನಹಳ್ಳಿ) ಇವರು ತಾವು ಓದಿದ ವಾಕ್ಯವೊಂದನ್ನು ಬರೆದು ಇದು ಸರಿಯಾದ ರಚನೆಯೇ ಎಂದು ಕೇಳಿದ್ದಾರೆ. ಆ ವಾಕ್ಯ ಹೀಗಿದೆ:

**'ಭೂಕಂಪಕ್ಕೆ ಸಿಲುಕಿ ಸತ್ತವರ ಕಳೇಬರಗಳು'** ರಚನೆಯ ಕಟ್ಟುಗಳ ನೆಲೆಯಲ್ಲಿ ಇದರಲ್ಲಿ ಯಾವ ತಪ್ಪೂ ಇಲ್ಲ. ಆದರೆ **ಸತ್ತವರ ಕಳೇಬರ** ಎನ್ನುವ ಪದರಚನೆ ಕೊಂಚ ವಿಚಿತ್ರವಾಗಿದೆ. ಕಳೇಬರ ಎನ್ನುವುದು ಸಂಸ್ಕೃತದ ಕಲೇವರ ಪದದ ತದ್ಭವ ರೂಪ. ಆ ನುಡಿಯಲ್ಲಿ ಶರೀರ, ದೇಹ ಎನ್ನುವ ತಿರುಳು ಇದೆ. ಕನ್ನಡದಲ್ಲೂ ಇದೇ ತಿರುಳಿನಲ್ಲಿ ಬಳಕೆಯಾಗಿದೆ. ಆದರೆ ಉಸಿರುನಿಂತ ದೇಹ ಎನ್ನುವುದು ಹೆಚ್ಚಿನ ತಿರುಳು. ಶವ ಎನ್ನುವ ಸಂಸ್ಕೃತ ಪದಕ್ಕೆ ಆ ತಿರುಳಿದೆ. ಇದೇ ತಿರುಳಿರುವ ಕನ್ನಡದ ಪದ ಹೆಣ. ಬಳಕೆಯಾದ ವಾಕ್ಯದಲ್ಲಿ ಸತ್ತವರ ದೇಹಗಳು ಎನ್ನುವ ತಿರುಳನ್ನು ಮಾತ್ರ ಗುರುತಿಸಿದರೆ ಅದರಲ್ಲಿ ತಪ್ಪೇನೂ ಕಾಣಿಸದು. ಆದರೆ ಕಳೇವರ ಪದಕ್ಕೆ ಶವ ಎಂಬ ತಿರುಳನ್ನು ಇರಿಸಿಕೊಂಡರೆ ಸರಿಯಾಗದು. ಆದರೆ ಕನ್ನಡದಲ್ಲಿ **ಸತ್ತ ಹೆಣ** ಎಂದು ಹೇಳುವುದು ವಾಡಿಕೆಯಲ್ಲಿದೆ. (ಅಂದರೆ ಸಾಯದ ಹೆಣಗಳೂ ಇರುತ್ತವೆಂದು ತಿಳಿಯಬೇಕೆ?)

**ಹೊಣೆ**

ಈಚೆಗೆ ಟಿವಿ ವಾಹಿನಿಯೊಂದರಲ್ಲಿ ಯಾವುದೋ ಹಳೆಯ ಕಾಲದ ಕಟ್ಟಡವೊಂದು ಈಗಲೂ ಹಾಳಾಗದೇ ಉಳಿದಿದೆ ಎಂದು ತಿಳಿಸುವ ಹೊತ್ತಿನಲ್ಲಿ ಕೇಳಿ ಬಂದ ವಾಕ್ಯ ಹೀಗಿತ್ತು: **'ಇದು ಅಂದಗೆಡದೆ ಇಷ್ಟು ಕಾಲ ಉಳಿದಿದೆಯೆಂದರೆ ಯಾರು ಇದಕ್ಕೆ ಹೊಣೆ?'** ಮೇಲುನೋಟಕ್ಕೆ ಇದು ಸರಿಯಾದ ವಾಕ್ಯವೆಂದೇ ತೋರುತ್ತದೆ. ಆದರೆ ಈ ವಾಕ್ಯದಲ್ಲಿ **ಹೊಣೆ** ಎಂಬ ಪದವನ್ನು ಬಳಸಿರುವುದು ಸರಿಯೇ ಎಂದು ಕೇಳಬೇಕಿದೆ. ಹೊಣೆ ಎಂಬುದು ಕನ್ನಡದ ಹಳೆಯ ರೂಪವಾದ **ಪೊಣೆ**ಯಿಂದ ಬಂದಿದೆ. ಪೊಣೆ ಪದ ಕೂಡ ನಡುಗನ್ನಡದಲ್ಲಿ ಹೆಚ್ಚು ಬಳಕೆಯಾದಂತೆ ತೋರುತ್ತದೆ. ಅದಿರಲಿ. ಯಾವುದು ಜವಾಬುದಾರಿಯೋ, ಮಾಡಬೇಕಾದ ಕೆಲಸವೋ ಅದನ್ನು ಹೊಣೆ ಎನ್ನುವುದು ಸರಿ. ಆದರೆ ಈ ಮುಂದಿನ ವಾಕ್ಯಗಳನ್ನು ನೋಡಿ: **'ನಾನು ಈ ಪರೀಕ್ಷೆಯಲ್ಲಿ ಮೊದಲ ರ್‍ಯಾಂಕ್ ಪಡೆಯಲು ನನ್ನ ತಂದೆತಾಯಿಗಳೇ ಹೊಣೆ.' 'ಊರಿನ ತುಂಬ ದಟ್ಟವಾದ ಹಸಿರು ತುಂಬಿರುವುದಕ್ಕೆ ಈ ಊರಿನ ಹಿರಿಯರೇ ಹೊಣೆ'** ಈ ವಾಕ್ಯಗಳಲ್ಲಿ ಹೊಣೆ ಪದವನ್ನು ಬಳಸಿದ್ದು ಸರಿಯಲ್ಲ. ನಾವು ಮಾಡಬೇಕಾದ ಕೆಲಸಗಳಲ್ಲಿ ಎರಡು ಬಗೆ ಇರುತ್ತದೆ. ಒಂದು ಬಗೆಯ ಕೆಲಸಗಳನ್ನು ಮಾಡುವುದು ನಮ್ಮ ಜವಾಬುದಾರಿ. ಅದನ್ನು ಮಾಡದಿದ್ದರೆ ಆಗ ನಮ್ಮಿಂದ ತಪ್ಪು ನಡೆದಿದೆ ಎಂದೇ ತಿಳಿಯಲಾಗುತ್ತದೆ. ಮತ್ತೊಂದು ಬಗೆಯ ಕೆಲಸಗಳನ್ನು ನಾವು ಮಾಡಬೇಕೆಂಬ ಒತ್ತಾಯ ನಮ್ಮ ಮೇಲೆ ಇರುವುದಿಲ್ಲ. ಆದರೆ ಆ ಕೆಲಸಗಳನ್ನು ಮಾಡಿದರೆ ಅದನ್ನು ನಮ್ಮ ಬಗೆಗೆ ಮೆಚ್ಚುಗೆಯ ಮಾತನ್ನಾಡಲು ಬಳಸಬಹುದು ಅಷ್ಟೆ. ರಸ್ತೆ ದಾಟ ಬೇಕೆಂದಿದ್ದಾಗ ಕೆಂಪು ದೀಪವಿದ್ದರೆ ದಾಟದೆ ನಿಲ್ಲುವುದು ಮೊದಲನೆಯ ಬಗೆಯ ಕೆಲಸ. ಅಲ್ಲಿಯೇ ಯಾರೋ ಕುರುಡರೋ, ದಾಟಲು ನೆರವು ಬೇಕಾದವರೋ ಇದ್ದರೆ ಅವರು ರಸ್ತೆ ದಾಟಲು ನೆರವಾಗುವುದು ಎರಡನೆಯ ಬಗೆಯ ಕೆಲಸ. ಮೊದಲನೆಯದನ್ನು ನಾವು ಮಾಡಲೇಬೇಕು ಅದನ್ನು ಮಾಡದಿದ್ದರೆ ಅದು ತಪ್ಪು. ಎರಡನೆಯ ಕೆಲಸವನ್ನು ನಾವು ಮಾಡಲೇಬೇಕೆಂದಿಲ್ಲ. ಅಂದರೆ ಆ ಕೆಲಸ ಮಾಡದಿದ್ದರೆ ತಪ್ಪು ಎಂದು ಹೇಳುವುದಿಲ್ಲ. ಹೊಣೆ ಎಂಬ ಮಾತನ್ನು ಮೊದಲನೆಯ ಬಗೆಯ ಕೆಲಸಗಳಿಗೆ ಬಳಸುತ್ತೇವೆ. ಆ ಜವಾಬುದಾರಿಗಳನ್ನು

ಹೊತ್ತು ನಡೆಸಬೇಕಾಗಿರುತ್ತದೆ. ಎರಡನೆಯ ಬಗೆಯ ಕೆಲಸಗಳು ಹೊಣೆಗಳಲ್ಲ. ಅಂತಹ ಕಡೆಗಳಲ್ಲಿ ಹೊಣೆ ಪದವನ್ನು ಬಳಸುವುದು ಸರಿಯಾಗದು. ಮೊದಲು ಹೇಳಿದ ವಾಕ್ಯವನ್ನು ನೋಡಿ. ಊರಿನ ಹಳೆಯ ಕಟ್ಟಡ ಹಾಳಾಗದಂತೆ ಯಾರೋ ದುಡಿದಿದ್ದಾರೆ; ದಿಟ. ಆದರೆ ಅವರ ಹೆಚ್ಚುಗಾರಿಕೆ. ಅವರು ಆ ಕೆಲಸ ಮಾಡಿ ತಮ್ಮ ಹೊಣೆಯನ್ನು ಹೊತ್ತಿದ್ದಾರೆ ಎನ್ನುವಂತಿಲ್ಲ. ಹಾಗೆಯೇ ಆ ಕಟ್ಟಡವನ್ನು ಕಾಯ್ದುಕೊಳ್ಳಲು ಏನೂ ಮಾಡದವರು ತಪ್ಪು ಮಾಡಿದ್ದಾರೆ ಎನ್ನುವಂತಿಲ್ಲ. (ಬೇಕೆಂತಲೇ ಆ ಕಟ್ಟಡಕ್ಕೆ ಹಾನಿ ಮಾಡಿದ್ದರೆ ಆಗ ಮಾತ್ರ ಅದನ್ನು ಹೊಣೆಗೇಡಿತನ ಎಂದು ಕರೆಯಬಹುದು)

**ಪ್ರತೀಕ ಮತ್ತು ದ್ಯೋತಕ**

ವಿನಾಯಕ ಗೌಡ ಕೆ. (ಹಗರಿಬೊಮ್ಮನ ಹಳ್ಳಿ) ಇವರು **ಪ್ರತೀಕ** ಮತ್ತು **ದ್ಯೋತಕ** ಪದಗಳ ತಿರುಳು ಒಂದೇ ಅಗಿದೆಯೋ ಇಲ್ಲ ಬೇರೆಬೇರೆಯೋ ಎಂದು ಕೇಳಿದ್ದಾರೆ. ಇವರೆಡೂ ಸಂಸ್ಕೃತದಿಂದ ಕನ್ನಡಕ್ಕೆ ವಲಸೆ ಬಂದಿರುವ ಪದಗಳು. ಪ್ರತೀಕ ಪದಕ್ಕೆ ಸಂಸ್ಕೃತ ನುಡಿಯಲ್ಲಿ ಹಲವು ನೆಲೆಯ ಬಳಕೆಗಳಿವೆ. ಆ ಲೆಕ್ಕದಲ್ಲಿ ನೋಡಿದರೆ ದ್ಯೋತಕ ಪದದ ಬಳಕೆ ಕಿರಿದಾದುದು. ಕನ್ನಡದಲ್ಲಿ ಈ ಎರಡೂ ಪದಗಳನ್ನೂ ಹೆಚ್ಚೂ ಕಡಿಮೆ ಒಂದೇ ತಿರುಳುಳ್ಳ ಪದಗಳೆಂಬಂತೆ ಬಳಸುವುದುಂಟು. ಉದಾ.ಗೆ ನೋಡಿ. ಈ ದೇವಾಲಯಗಳು ನಾಡಿನ ಶಿಲ್ಪಕಲೆಯ ಪ್ರತೀಕ/ದ್ಯೋತಕಗಳಾಗಿವೆ. ಅಂದರೆ ಯಾವುದೋ ಒಂದು ಸಂಗತಿಯನ್ನು ಇನ್ನೊಂದು ಸಂಗತಿಯು ಸೂಚಿಸುತ್ತಿದೆ; ಅದರ ಬಿಂಬವೆಂಬಂತೆ ಇದೆ ಎಂದು ಹೇಳುವಾಗ ಈ ಪದಗಳನ್ನು ಬಳಸುತ್ತಿದ್ದೇವೆ. ಇವೆಲ್ಲ ಆಲಂಕಾರಿಕ ಬಳಕೆಗಳು. ಅಂದರೆ ತಿರುಳಿನ ಕಡೆಗೆ ಮೊಗವಿರಿಸದೆ ಹೇಳುವ ಬಗೆ. ಚೆನ್ನಾಗಿ ಹೇಳಬೇಕು ಎಂಬ ಹಂಬಲದಲ್ಲಿ ಇಂತಹ ಪದಗಳನ್ನು ಬಳಸುತ್ತಿರುತ್ತೇವೆ. ಪ್ರತೀಕ ಪದವನ್ನು ಸಾಹಿತ್ಯ ವಿಮರ್ಶಕರು ಬಳಸುವ ಬಗೆಯನ್ನು ನೋಡಿದರೆ ಅದರ ಬದಲಾಗಿ ದ್ಯೋತಕವನ್ನು ಬಳಸಲು ಬರುವುದಿಲ್ಲ. ದಿಟದಲ್ಲಿ ದ್ಯೋತಕ ಪದವನ್ನು ಹೊಳೆಯುವುದು, ಬೆಳಗುವುದು, ಮಿನುಗುವುದು ಎಂಬ ತಿರುಳಿನೊಡನೆ ಬಳಕೆಮಾಡಬಹುದು. ಆದರೆ ಪ್ರತೀಕ ಪದವನ್ನು ಹೆಚ್ಚಿನ ಹರವಿನಲ್ಲಿ ಬಳಸಲು ಬರುತ್ತದೆ.

**ನುಡಿಗಟ್ಟು ಮತ್ತು ಪಡೆನುಡಿ**

ಕುಮಾರ್ (ನಂಜನಗೂಡು) ಇವರು **ನುಡಿಗಟ್ಟು** ಮತ್ತು **ಪಡೆನುಡಿ**ಗಳ ನಡುವೆ ಏನು ವ್ಯತ್ಯಾಸವೆಂದು ಕೇಳಿದ್ದಾರೆ. ಅವರೇ ಮುಂದುವರೆದು ಶಾಲಾ ಪಠ್ಯಪುಸ್ತಕಗಳಲ್ಲಿ ಪಡೆನುಡಿಗೆ **ಕಾಲಿಗೆ ಬುದ್ಧಿ ಹೇಳು, ಕಣ್ಣಲ್ಲಿ ಕಣ್ಣಿಡು** ಎಂಬ ಉದಾಹರಣೆಗಳನ್ನೂ, ನುಡಿಗಟ್ಟಿಗೆ **ಮಾರಣಹೋಮ, ಕಂಗಾಲು** ಮುಂತಾದ ಉದಾಹರಣೆಗಳನ್ನು ನೀಡಿರುವುದನ್ನು ಹೇಳಿದ್ದಾರೆ. ಹಾಗೆ ನೋಡಿದರೆ ಈಗಿರುವಂತೆ ಈ ಎರಡೂ ಪದಗಳನ್ನು ಒಂದೇ ತಿರುಳುಳ್ಳ ಪದಗಳನ್ನಾಗಿ ಬಳಸುತ್ತಿರುವುದನ್ನು ನೋಡಬಹುದು. ಪದಗಳಿಗೆ ಇರುವ ತಿರುಳು ಆ ಪದಗಳು ನುಡಿಗಟ್ಟು ಇಲ್ಲವೇ ಪಡೆನುಡಿಯಲ್ಲಿ ಬಳಕೆಯಾದಾಗ ಇರುವ ತಿರುಳು ಒಂದೇ ಆಗಿರುವುದಿಲ್ಲ. ಪಡೆನುಡಿ/ ನುಡಿಗಟ್ಟುಗಳಿಗೆ ಬಳಕೆಯಲ್ಲಿ ಬೇರೆಯೇ ತಿರುಳಿರುತ್ತದೆ. ಅದನ್ನು ನುಡಿಯನ್ನು ಬಳಸುವವರು ಮಾತಿನ ವರಸೆಯಲ್ಲಿ ಅರಿತು

ಬಳಸಬೇಕು. ಶಾಲೆಗಳಲ್ಲಿ ಇದನ್ನು ಕಲಿಸಿಕೊಡುವುದರಿಂದ ನುಡಿಯುವವರ ಮಾತು ಸಿರಿವಂತವಾಗುತ್ತದೆ. ಪಡೆನುಡಿ /ನುಡಿಗಟ್ಟುಗಳಲ್ಲಿ ಹೆಸರುಪದ ಕಂತೆಗಳಿರುವಂತೆ ಕೆಲಸ ಪದಕಂತೆಗಳಿರುತ್ತವೆ. ಅಂದರೆ ಜೊತೆಗೂಡಿದ ಪದಗಳೆಲ್ಲವೂ ಹೆಸರು ಪದಗಳೇ ಆಗಿರುವುದು ಒಂದು ಬಗೆ. ಉದಾ. ಕಲ್ಲುಮನಸ್ಸು, ಹೂನಗೆ, ಮನೆಹಾಳ ಮುಂತಾದವು. ಹಾಗಿಲ್ಲದೆ ಜೊತೆಗೂಡಿದ ಪದಗಳಲ್ಲಿ ಕೊನೆಯದು ಕೆಲಸ ಪದವಾಗಿರುವುದು ಇನ್ನೊಂದು ಬಗೆ ಉದಾ.ಗೆ ನೆಗೆದುಬೀಳು, ಕಾಲುಕೀಳು, ಎರಡೆಣಿಸು ಮುಂತಾದವು.

## ವರ್ಣಮಾಲೆಯ ಗುರುತುಗಳು

ಮರುಳಾರಾಧ್ಯ ಎನ್.ಎಂ. (ನಾಗರಹಾಳು, ಸಿರುಗುಪ್ಪ) ಕನ್ನಡ ವರ್ಣಮಾಲೆಯಲ್ಲಿ ಎಷ್ಟು ಗುರುತುಗಳಿವೆ ಎಂದು ಕೇಳಿದ್ದಾರೆ. ಇದು ಹಲವರನ್ನು ಕಾಡುವ ಪ್ರಶ್ನೆ. ಹಾಗೆ ನೋಡಿದರೆ ಇದು ಹಾಗೆ ಕಾಡಿಸಬೇಕಿಲ್ಲ. ಏಕೆಂದರೆ ಕನ್ನಡ ನುಡಿಯನ್ನು ಬರವಣಿಗೆಯಲ್ಲಿ 'ತೋರಿಸಲು' ವರ್ಣಮಾಲೆಯ ಗುರುತುಗಳನ್ನು ಬಳಸುತ್ತೇವೆ. ಆ ಗುರುತುಗಳು ಮಾತ್ರ ಸಾಲವು. ಜೊತೆಗೆ ಒತ್ತಕ್ಷರಗಳು ಮತ್ತು ಕಾಗುಣಿತದ ಗುರುತುಗಳು ಬೇಕಾಗುತ್ತವೆ. ನಾವು ನುಡಿಯುವ ಕನ್ನಡದಲ್ಲಿ ಇರುವ ಧ್ವನಿಗಳನ್ನೆಲ್ಲ ವರ್ಣಮಾಲೆಯ ಗುರುತುಗಳು ಇರುವಂತೆಯೇ ತೋರಿಸಲಾರವು. ಇನ್ನೂ ಮುಂದುವರೆದು ಹೇಳುವುದಾದರೆ ವರ್ಣಮಾಲೆಯ ಗುರುತುಗಳನ್ನು ಬಳಸಿ ನಮ್ಮ ಆಡುಮಾತನ್ನು ನಾವು ತಿಳಿದುಕೊಳ್ಳಲು ಬರುವುದಿಲ್ಲ. ವರ್ಣಮಾಲೆ ಎಂಬುದು ಒಂದು ಒಪ್ಪಂದ ಅಷ್ಟೆ. ಈಗ ವರ್ಣಮಾಲೆಯಲ್ಲಿ ಇಲ್ಲದ ಫ಼, ಜ಼ ಎಂಬ ಗುರುತುಗಳನ್ನು ಬರವಣಿಗೆಯಲ್ಲಿ ಬಳಸುತ್ತಿದ್ದೇವೆ. ಹಾಗೆಯೇ ಹಳಗನ್ನಡವನ್ನು ಬರೆದು ತೋರಿಸುವಾಗ ರಳ ಮತ್ತು ಶಕಟ ರೇಫಗಳನ್ನು ತೋರಿಸಲು ಬೇರೆಯೇ ಗುರತುಗಳು ಬೇಕು. ಎಂದರೇನಾಯ್ತು? ವರ್ಣಮಾಲೆಯಲ್ಲಿರುವ ಗುರುತುಗಳ ಸಂಖ್ಯೆ ನಮ್ಮ ಬಳಕೆಗೆ ತಕ್ಕಂತೆ ಬದಲಾಗುತ್ತಲೇ ಹೋಗುತ್ತಿರುತ್ತದೆ. ಈಗ ಹೆಚ್ಚು ಜನರಿಗೆ ಸ್ವರಗಳ ಸಾಲಿನಲ್ಲಿ ಬರುವ ಋ, ಅಂ ಮತ್ತು ಅಃ ಎಂಬ ಗುರುತುಗಳು ಕನ್ನಡ ವರ್ಣಮಾಲೆಯಲ್ಲಿ ಸೇರುತ್ತವೆಯೇ ಎಂಬ ಪ್ರಶ್ನೆ ಕಾಡುತ್ತಿದೆ. ಸಂಸ್ಕೃತ ಪದಗಳನ್ನು ಕನ್ನಡ ಲಿಪಿಯಲ್ಲಿ ಬರೆಯಲೆಂದೇ ಕನ್ನಡ ಲಿಪಿಯನ್ನು ಹೊಂದಿಸಿಕೊಂಡಿರುವುದರಿಂದ ಹೀಗೆ ಹೆಚ್ಚಿನ ಗುರುತುಗಳು ಕನ್ನಡ ವರ್ಣಮಾಲೆಯಲ್ಲಿ ಬಂದು ಸೇರಿವೆ. ಕನ್ನಡವನ್ನು ಬರೆಯಲು ಬೇಕಾದ ಇನ್ನೂ ಹೆಚ್ಚಿನ ಗುರುತುಗಳನ್ನು ಸೇರಿಸಬೇಕೇ ಮತ್ತು ಕನ್ನಡ ಬರವಣಿಗೆಯಲ್ಲಿ ಬಳಕೆಯಾಗದ ಗುರುತುಗಳನ್ನು ಕೈಬಿಡಬೇಕೆ ಎಂಬುದು ಈಗ ನಮ್ಮೆದುರು ಇರುವ ಪ್ರಶ್ನೆ. ಇದಕ್ಕೆ ಈಗ ಪರಿಹಾರವಿರುವಂತೆ ತೋರುತ್ತಿಲ್ಲ. ಅಲ್ಲಿಯವರೆಗೆ ಮಕ್ಕಳನ್ನು ಕನ್ನಡ ವರ್ಣಮಾಲೆಯಲ್ಲಿ ಎಷ್ಟು ಗುರುತುಗಳಿವೆ ಎಂದು ಕೇಳಿ ಗೊಂದಲಕ್ಕೆ ತಳ್ಳುವುದನ್ನಾದರೂ ನಿಲ್ಲಿಸಬಹುದುಲ್ಲವೇ? ಸರಕಾರ ನಡೆಸುವ ಸ್ಪರ್ಧಾ ಪರೀಕ್ಷೆಗಳಲ್ಲಿ ಈ ಬಗೆಯ ಪ್ರಶ್ನೆಗಳನ್ನು ಕೇಳಿ ಅದಕ್ಕೆ ಬರುವ ಹಲವು 'ತಪ್ಪು ಉತ್ತರಗಳನ್ನು' ಓದಿ ಮೋಜು ನೋಡುವುದು ಬಲ್ಲವರ ಹವ್ಯಾಸವಾಗಿಬಿಟ್ಟಿದೆ.

## ಸರಿಯಲ್ಲದ ವಾಕ್ಯಗಳು ಎಂದರೇನು?

ಕನ್ನಡ ಬರೆಯುವವರು 'ಸರಿಯಾದ' ವಾಕ್ಯಗಳನ್ನು ಬರೆಯುವುದಿಲ್ಲವೇಕೆ ಎಂದು ಕೇಳುವುದುಂಟು. ಸರಿಯಲ್ಲದ ವಾಕ್ಯಗಳು ಎಂದರೇನು? ಪದಗಳ ಕಾಗುಣಿತದಲ್ಲಿ

ತಪ್ಪುಗಳನ್ನು ಮಾಡುವುದು; ಸರಿಯಾದ ಪದಗಳನ್ನು ಬಳಸದಿರುವುದು ಮತ್ತು ವಾಕ್ಯರಚನೆಯ ಕಟ್ಟುಗಳನ್ನು ಮೀರುವುದು. ಈ ಮೂರು ತಪ್ಪುಗಳಲ್ಲಿ ಯಾವುದಾದರೊಂದು ಇದ್ದರೂ ಅದನ್ನು ತಪ್ಪುಬರಹ ಎನ್ನುತ್ತೇವೆ. ಇವುಗಳಲ್ಲಿ ಮೊದಲ ಎರಡನ್ನು ಈಗ ಬದಿಗಿರಿಸೋಣ. ಮೂರನೆಯದಾಗಿರುವ ವಾಕ್ಯದ ಕಟ್ಟುಗಳನ್ನು ಮೀರುವುದನ್ನು ಕುರಿತು ಕೆಲವು ಮಾತುಗಳು ಇಲ್ಲಿವೆ.

ಹೀಗೆ ತಪ್ಪಾಗಿ ವಾಕ್ಯಗಳನ್ನು ಬರೆಯುವುದನ್ನು ಎಚ್ಚರದಿಂದ ನೋಡುವ ನಾವು ಮಾತಿನಲ್ಲಿ ಇಂತಹುವೇ ತಪ್ಪುಗಳು ಆಗುತ್ತಿರುತ್ತವೆ ಎನ್ನುವುದನ್ನು ಮರೆಯುತ್ತೇವೆ. ಜನರೆದುರಿಗೆ ಹೇಳಿಕೆ ಕೊಡುವ ಮಾತಾಡುವ ರಾಜಕಾರಣಿಗಳ, ಕಲಿತವರ ನುಡಿಯಲ್ಲೂ ವಾಕ್ಯದ ಕಟ್ಟುಗಳು ಪಾಲನೆಯಾಗದಿರುವುದನ್ನು ಆ ಕಟ್ಟುಗಳನ್ನು ಮೀರುವುದನ್ನು ಗಮನಿಸಬಹುದು. ವಾಕ್ಯ ಪೂರ್ಣಗೊಳ್ಳದಿರುವುದು; ಮೊದಲಲ್ಲಿ ಬಂದ ವಾಕ್ಯದ ತುಂಡಿಗೂ ಬಳಿಕ ಬರುವ ವಾಕ್ಯದ ತುಂಡಿಗೂ ಹೊಂದಾಣಿಕೆ ಇಲ್ಲದಿರುವುದು ಇವೆಲ್ಲವೂ ನಡೆಯುತ್ತಿರುತ್ತವೆ. ಅಲ್ಲದೆ ನಾವು ಮಾತಾಡುವಾಗ ಇಡೀ ವಾಕ್ಯಗಳನ್ನು ಬಳಸುವುದೇ ಇಲ್ಲ. ಎದುರಿಗೆ ಇರುವವರು ಇಲ್ಲವೇ ಕೇಳಿಸಿಕೊಳ್ಳುತ್ತಿರುವವರು ನಮ್ಮ ವಾಕ್ಯದಲ್ಲಿ ಬಿಟ್ಟಿರುವುದನ್ನು ತುಂಬಿಕೊಳ್ಳುತ್ತಾರೆ ಎಂಬ ನಂಬಿಕೆಯ ಮೇಲೆ ಮಾತಾಡುತ್ತಿರುತ್ತೇವೆ. ಹಾಗಾಗಿ ಇಡಿಯಾದ ವಾಕ್ಯಗಳನ್ನು, ಕಟ್ಟುಗಳೆಲ್ಲವೂ ಇರುವ ವಾಕ್ಯಗಳನ್ನು ನಮ್ಮ ಮಾತುಗಳಲ್ಲಿ ನುಡಿಯುತ್ತಿರುವುದಿಲ್ಲ. ಹಾಗೆಂದರೆ ಆ ವಾಕ್ಯಗಳು ತಪ್ಪು ಎಂದಲ್ಲ. ವಾಕ್ಯದಲ್ಲಿ ಏನೆಲ್ಲವನ್ನೂ ಬಿಡಬಹುದು; ಏನೆಲ್ಲವನ್ನೂ ಬಿಡಲಾಗುವುದಿಲ್ಲ ಎಂಬ ಕಟ್ಟನ್ನು ಮಾತಾಡುವಾಗ ಬಿಟ್ಟುಕೊಡುವುದಿಲ್ಲ.

ಮಾತಾಡಲು ಕಲಿತವರು ಬರೆಯಲು ಹೊರಟಾಗ ಬರೆದ ವಾಕ್ಯಗಳು ಮಾತಿನಲ್ಲಿ ಬರುವ ವಾಕ್ಯಗಳ ಹಾಗಿರುವುದಿಲ್ಲ ಎಂಬುದನ್ನು ಗಮನವಿಟ್ಟು ಕಲಿಯಬೇಕಾಗುತ್ತದೆ. ಇದು ಮಾತನ್ನು ಕಲಿತ ಬಗೆಯ ಕಲಿಕೆಯಲ್ಲ. ತಪ್ಪುಗಳನ್ನು ಎಚ್ಚರದಿಂದ ತಿದ್ದಿಕೊಂಡು ಹೊಸ ಬಗೆಯ ಕಟ್ಟುಗಳನ್ನು ಪದಗಳ ಬಳಕೆಯನ್ನು ಮನದಟ್ಟುಮಾಡಿಕೊಳ್ಳಬೇಕಾಗುತ್ತದೆ. ನಮ್ಮ ಕಲಿಕೆಯ ಬಗೆಯಲ್ಲಿ ನುಡಿಯನ್ನು ಓದುವ ಮತ್ತು ಕೇಳಿ ತಿಳಿದುಕೊಳ್ಳುವ ನೆಲೆಗಳಿಗೆ ಇರುವ ಒತ್ತು ನುಡಿಯನ್ನು ಬರೆಯುವ ಮತ್ತು ಮಾತಾಡುವ ನೆಲೆಗಳಿಗೆ ದೊರೆಯುತ್ತಿಲ್ಲ. ಬರವಣಿಗೆ ಕೂಡ ಬರೆಸಿದ್ದನ್ನು ,ಈಗಾಗಲೇ ಅಚ್ಚಾಗಿರುವುದನ್ನು ಮರಳಿ ಬರೆಯುವ ಕೆಲಸಕ್ಕೆ ಕಟ್ಟುಬಿದ್ದಿದೆ. ಹಾಗಾಗಿ ಬರಹದಲ್ಲಿ ಹೊಸವಾಕ್ಯಗಳನ್ನು ಕಟ್ಟುವ ಬಗೆಯನ್ನು ಹೆಚ್ಚಿನ ಮಕ್ಕಳು ಕಲಿಯುವುದೇ ಇಲ್ಲ. ಆದರೆ ತಾವು ಬರೆಯಲಾಗದ ಮಾದರಿಯ ವಾಕ್ಯಗಳನ್ನು ಓದಿ ಇಲ್ಲವೇ ಕೇಳಿ ತಿಳಿದಕೊಳ್ಳಬಲ್ಲರು ಎಂಬುದನ್ನು ಮರೆಯುವಂತಿಲ್ಲ. ಎಂದರೇನಾಯ್ತು? ತಪ್ಪು ವಾಕ್ಯಗಳನ್ನು ಬರೆಯುತ್ತಿರುವುದಕ್ಕೆ ಕಾರಣಗಳು ನಮ್ಮ ಕಲಿಕೆಯಲ್ಲಿ ಅಡಗಿವೆ. ಅಲ್ಲಿ ತಿದ್ದುಪಡಿಯಾದ ಹೊರತು ಸರಿವಾಕ್ಯಗಳನ್ನು ಬರೆಯುವುದು ಆಗದ ಮಾತು. ಬರೆದ ವಾಕ್ಯದಲ್ಲಿ ಆಗುವ ತಪ್ಪುಗಳಿಗೆ ಹೇಳಿದ ಮೊದಲ ಎರಡು ಕಾರಣಗಳನ್ನು ತಿದ್ದುವುದು ಬೇರೆಯ ನೆಲೆಯನ್ನೇ ಬಯಸುತ್ತದೆ. ಅದನ್ನು ಬೇರೊಂದು ಸಲ ಚರ್ಚಿಸಲಾಗುತ್ತದೆ.

**ನೀನು ನಿನ್ನ ತಂದೆಗೆ ಎಷ್ಟನೇ ಮಗ?**

ಸುಧನ್ವ ಎ ಎಂಬ ಓದುಗರು ಮಿಂಚಚೆಯಲ್ಲಿ(ಇ-ಮೇಲ್) ಒಂದು ಕೇಳ್ವಿಯನ್ನು ಕಳಿಸಿದ್ದಾರೆ. ಅದು ಹೀಗಿದೆ: 'ನೀನು ನಿನ್ನ ತಂದೆಗೆ ಎಷ್ಟನೇ ಮಗ?' ಎಂಬ ವಾಕ್ಯವನ್ನು ಇಂಗ್ಲಿಶಿನಲ್ಲಿ ಹೇಳುವುದು ಹೇಗೆ ಎಂಬುದನ್ನು ತಿಳಿಸಿ. ಹೀಗೆ ಕೇಳಿದವರಿಗೆ ಸರಿಯಾದ ಬದಲನ್ನು ತಿಳಿದುಕೊಳ್ಳುವುದಕ್ಕಿಂತ ಹೆಚ್ಚಾಗಿ ಕನ್ನಡದಲ್ಲಿ ಸುಳುವಾಗಿ ಹೇಳಬಹುದಾದ್ದನ್ನು ಇಂಗ್ಲಿಶಿನಲ್ಲಿ ಹೇಳಲು ಎಷ್ಟು ತಡಬಡಾಯಿಸಬೇಕಾಗುತ್ತದೆ ನೋಡಿ ಎಂದು ತೋರಿಸಿಕೊಟ್ಟು ಮೋಜು ನೋಡುವ ಬಯಕೆ ಇದ್ದಂತಿರುತ್ತದೆ. ನುಡಿಗಳನ್ನು ಹೋಲಿಸುವವರು ಹೀಗೆ ಒಂದು ನುಡಿಯಲ್ಲಿ ಹೇಳಬಹುದಾದ್ದನ್ನು ಇನ್ನೊಂದು ನುಡಿಯಲ್ಲಿ ಹಾಗೆಯೇ ಹೇಳಲು ಆಗುವುದಿಲ್ಲ ಎಂದು ತೋರಿಸಿ ತಮ್ಮ ನುಡಿಯ ಮೇಲ್ಮೆಯನ್ನು ಎತ್ತಿ ಹಿಡಿಯುವುದು ಲಾಗಾಯ್ತಿನಿಂದಲು ನಡೆದು ಬಂದಿದೆ. ಆದರೆ ಇದು ಸರಿಯಾದ ಬಗೆಯಲ್ಲ. ನುಡಿಗಳ ಹೆಚ್ಚಳ ಎಂಬುದು ನಮ್ಮ ಬಯಕೆ ಮಾತ್ರ. ಇಂಗ್ಲಿಶಿನಲ್ಲಿ ಹೇಳಲಾಗುವ ಎಲ್ಲವನ್ನೂ ಕನ್ನಡದಲ್ಲಿ ಹೇಳಲಾಗುವುದಿಲ್ಲ ಎಂದು ಕನ್ನಡದ ಹಲವು ನುಡಿಯರಿಗರೇ ಆಗಾಗ ಹೇಳಿರುವುದುಂಟು. ಇದೂ ಕೂಡ ಸರಿಯಾದ ಮಾತಲ್ಲ. ಏನನ್ನೋ ಕನ್ನಡದಲ್ಲಿ ಇಲ್ಲವೇ ಇನ್ನೊಂದು ನುಡಿಯಲ್ಲಿ ಹೇಳಲಾಗುತ್ತಿಲ್ಲ ಎಂದು ನಾವು ಕೊರಗುವಾಗ ಹೇಳಬೇಕಾದ್ದು ಏನು ಎಂಬುದು ನಮಗೇ ಸರಿಯಾಗಿ ಗೊತ್ತಿರುವುದಿಲ್ಲ ಎನ್ನುವುದನ್ನು ಮರೆಯುತ್ತೇವೆ. ಅಲ್ಲದೇ ವಾಕ್ಯ ರಚನೆಯ ಕಟ್ಟುಗಳು ಒಂದು ನುಡಿಯಿಂದ ಇನ್ನೊಂದು ನುಡಿಗೆ ಬೇರೆ ಬೇರೆ ಆಗುವುದರಿಂದ ಒಂದು ನುಡಿಯಲ್ಲಿ ಹೇಳುವುದನ್ನು ಇನ್ನೊಂದು ನುಡಿಯಲ್ಲಿ ಹೇಳಲು ಬೇಕಾದರೆ ಆ ನುಡಿಯ ಎಲ್ಲ ಕಟ್ಟುಗಳನ್ನು ನಾವು ಸರಿಯಾಗಿ ಅರಿತಿಲ್ಲದಿರುವುದೂ ಒಂದು ಕೊರತೆಯಾಗಿರುತ್ತದೆ.

**ಬರವಣಿಗೆಯಲ್ಲಿ ತಪ್ಪುಗಳು**

ಚಿಕ್ಕವರು ಕನ್ನಡ ಬರೆಯುವಾಗ ತುಂಬ ತಪ್ಪುಗಳನ್ನು ಮಾಡುತ್ತಾರೆ ಎಂದು ಹೇಳದ ಮೇಸ್ಟ್ರುಗಳೇ ಇಲ್ಲ. ಆದರೆ ಈ ತಪ್ಪುಗಳಲ್ಲಿ **ಒಬ್ಬೊಬ್ಬರೇ ಮಾಡುವ ತಪ್ಪುಗಳು** ಮತ್ತು **ಹೆಚ್ಚು ಜನ ಮಾಡುವ ಒಂದೇ ಬಗೆಯ ತಪ್ಪುಗಳು** ಎಂದು ಎರಡು ಗುಂಪುಗಳಿವೆ. ಮೊದಲನೆಯ ಬಗೆಯ ತಪ್ಪುಗಳನ್ನು ಈಗ ಬದಿಗಿರಿಸೋಣ. ಹೆಚ್ಚು ಜನ ಒಂದೇ ಬಗೆಯ ತಪ್ಪುಗಳನ್ನು ಏಕೆ ಮಾಡುತ್ತಾರೆ? ಈ ಗುಂಪಿನ ತಪ್ಪುಗಳಲ್ಲಿ **1) ಕಾಗುಣಿತದ ತಪ್ಪುಗಳು 2) ರಚನೆಯ ಕಟ್ಟುಗಳ ತಪ್ಪುಗಳು ಮತ್ತು 3) ಪದಗಳನ್ನು ಸರಿಯಾಗಿ ಆಯ್ದುಕೊಳ್ಳದಿರುವ ತಪ್ಪುಗಳು** ಎಂದು ಒಳಗುಂಪುಗಳಿವೆ. ಇವುಗಳಲ್ಲಿ ಮೂರನೆಯ ಬಗೆಯ ತಪ್ಪುಗಳು ಕನ್ನಡ ಮಾತಾಡುವಾಗಲೂ ಆಗುತ್ತವೆ. ಎರಡನೆಯ ಬಗೆಯ ತಪ್ಪುಗಳೂ ಕೂಡ ಮಾತಿನಲ್ಲಿ ನುಸುಳುತ್ತವೆಯಾದರೂ ಅವು ಬರವಣಿಗೆಯಲ್ಲಿ ಕಾಣಿಸುವ ತಪ್ಪುಗಳಿಗಿಂತ ಬೇರೆಯೇ ಆಗಿರುವುದುಂಟು. ಈಗ ಈ ಟಿಪ್ಪಣಿಯಲ್ಲಿ ಮೊದಲನೆಯ ಬಗೆಯ ತಪ್ಪುಗಳನ್ನು ನೋಡೋಣ.

ಕಲಿಯುತ್ತಿರುವ ಮಕ್ಕಳು ಬರವಣಿಗೆಯಲ್ಲಿ ಯಾವ ಬಗೆಯ ಕಾಗುಣಿತದ ತಪ್ಪುಗಳನ್ನು ಮಾಡುತ್ತಾರೆ? ಹೆಚ್ಚು ತಪ್ಪುಗಳು ಮಹಾಪ್ರಾಣಗಳ ಗುರುತುಗಳನ್ನು

ಸರಿಯಾಗಿ ಬರೆಯುವುದರಲ್ಲಿ ಕಾಣಿಸುತ್ತವೆ ಎನ್ನುವುದುಂಟು. ಕನ್ನಡ ನುಡಿಯುವಲ್ಲಿ ಮಹಾಪ್ರಾಣಗಳನ್ನು ಸರಿಯಾಗಿ ಸರಿಯಾದ ಜಾಗದಲ್ಲಿ ನುಡಿಯಲೇಬೇಕಾದ ಒತ್ತಾಯ ಕನ್ನಡ ನುಡಿಯುವವರಲ್ಲಿ ಇಲ್ಲ. ಕನ್ನಡ ಕಲಿಸುವವರು ಕೂಡ ಬರವಣಿಗೆಯಲ್ಲಿ ಅದನ್ನು ಅಲ್ಪಪ್ರಾಣಗಳ ಗುರುತಿನಿಂದ ಬೇರೆ ಇರಿಸಲು ಬಳಸುವ ದಾರಿಯೊಂದಿದೆ. ಅದೆಂದರೆ ಚಿಕ್ಕ ಕ/ದೊಡ್ಡ ಕ ಎನ್ನುವುದು. ದೊಡ್ಡ ಕ ಎಂದರೆ ಖ ದ ಗುರುತು ಎಂದು ತಿಳಿದುಕೊಳ್ಳಬೇಕು. ಅಂದರೆ ನುಡಿಯುವಿಕೆಯಲ್ಲಿ ಅದನ್ನು ಬೇರೆ ಮಾಡಿ ತೋರಿಸಲು ಆಗದಿದ್ದಾಗ ಹೀಗೆ ಬಳಸುದಾರಿಯನ್ನು ಹಿಡಿಯಬೇಕಾಗುವುದಷ್ಟೆ. ಹಾಗಾಗಿ ಬರೆಯುವವರು ತಮ್ಮ ಬರವಣಿಗೆಯಲ್ಲಿ ಈ ಉಲಿಗಳ ಗುರುತುಗಳನ್ನು ಸರಿಯಾಗಿ ಬಳಸುವುದಿಲ್ಲ. ಮಹಾಪ್ರಾಣಗಳ ಗುರುತುಗಳನ್ನು ನೋಡಿ. ಹತ್ತು ಮಹಾಪ್ರಾಣಗಳಲ್ಲಿ ಢ/ಧ/ಫ/ಭಗಳು ತಮ್ಮ ಅಲ್ಪಪ್ರಾಣದ ಗುರುತುಗಳನ್ನೇ ಕೊಂಚ ಬದಲಿಸಿ ಬಳಸಿಕೊಳ್ಳುತ್ತವೆ. ಉಳಿದ ಏಳಕ್ಕೆ ಬೇರೆಬೇರೆ ಗುರುತುಗಳಿವೆ. ಆ ಏಳರಲ್ಲಿ ಫ/ಛ/ಝ/ಥ ಎಂಬ ಉಲಿಗಳ ಗುರುತುಗಳಲ್ಲಿ(ಢ/ಧ/ಫ/ಭ ಗಳಲ್ಲಿ ಇರುವಂತೆ) ಕೆಳಗಡೆ ಚಿಕ್ಕ ಉದ್ದ ಗೆರೆ (ಹೊಟ್ಟೆ ಸೀಳು, ಹೊಕ್ಕಳು ಸೀಳು) ಇದೆ. ಹೆಚ್ಚು ಜನರು ಫ/ಭ ಗುರುತುಗಳನ್ನು ಸರಿಯಾಗಿ ಬರೆಯುವಲ್ಲಿ ತಪ್ಪು ಮಾಡುತ್ತಾರೆ. ಅದರಲ್ಲೂ ಬ ಮತ್ತು ದ ಉಲಿಗಳು ಒಟ್ಟಾಗಿ ಬರುವ ಮತ್ತು ಅವುಗಳಲ್ಲೊಂದು ಮಹಾಪ್ರಾಣವಾಗಿರುವ ಪದಗಳಲ್ಲಿ ಈ ಗೊಂದಲ ಹೆಚ್ಚು. ಉದಾ.ಗೆ ಬಂಧು, ಪ್ರಬಂದ, ಬೋಧನೆ, ಭೇದ, ಬಂಧನ ಮುಂತಾದವು. ಅಲ್ಲದೆ ಅಲ್ಪಪ್ರಾಣಗಳ ಗುರುತು ಇರಬೇಕಾದ ಕಡೆಗಳಲ್ಲಿ ಮಹಾಪ್ರಾಣಗಳ ಗುರುತುಗಳನ್ನು ಬರೆಯುವುದೂ ಉಂಟು. ಉದಾ.ಗೆ **ವಿಧ್ಯಾರ್ಥಿ, ಸಧ್ಯ, ಹಾರ್ಧಿಕ** ಮುಂತಾದವು.

ಈ ಬಗೆಯ ತಪ್ಪುಗಳನ್ನು ತಿದ್ದುವುದು ಹೇಗೆ? ಮತ್ತೆ ಮತ್ತೆ ಬರೆಯುವಂತೆ ಮಾಡುವುದೇ ಸರಿಯಾದ ದಾರಿ ಎಂದು ಕಲಿಸುವವರು ಹೇಳುತ್ತಾರೆ. ಇದರ ಬದಲು ಕನ್ನಡ ಬರವಣಿಗೆಯಲ್ಲಿ ಮಹಾಪ್ರಾಣಗಳ ಗುರುತುಗಳನ್ನು ಕೈಬಿಟ್ಟರೆ ಏನಾಗುತ್ತದೆ? ಇದನ್ನು ಹೀಗೆ ಹೇಳೋಣ. ಒಂದು ವೇಳೆ ಬರೆಯುವವರು ಮಹಾಪ್ರಾಣಗಳ ಗುರುತುಗಳನ್ನು ಬಳಸದೇ ಇದ್ದರೆ ಅದನ್ನು ತಪ್ಪು ಎಂದು ಹೇಳುವುದನ್ನು ನಿಲ್ಲಿಸಿದರೆ ಹೇಗೆ?

ಈ ದಾರಿಯನ್ನು ಒಪ್ಪುವವರು ಕಡಿಮೆ. ಏಕೆಂದರೆ ಮಹಾಪ್ರಾಣಗಳ ಗುರುತುಗಳನ್ನು ಬಿಟ್ಟರೆ ಆಗ ತಪ್ಪು ಪದಗಳು ಕಾಣಿಸಿಕೊಳ್ಳುತ್ತವೆ. ಆ ಬರವಣಿಗೆಯನ್ನು ಓದುವವರು ತಿರುಳನ್ನು ತಪ್ಪಾಗಿ ತಿಳಿಯುವಂತಾಗುತ್ತದೆ ಎನ್ನುವುದು ಈ ದಾರಿಯನ್ನು ಒಪ್ಪದವರ ಮಾತು. ಮಹಾಪ್ರಾಣಗಳ ಗುರುತುಗಳನ್ನು ಬಿಟ್ಟು ಬರೆದರೆ ಕಣ್ಣಿಗೆ ಬೇರೆ ಬಗೆಯಲ್ಲಿ ಕಾಣುವ ಪದಗಳು ಉಂಟಾಗುತ್ತವೆ. ಕಠಿಣ/ಕಟಿಣ, ವಿಧಾನ/ವಿದಾನ, ಭಯ/ಬಯ, ಗಾಢ/ಗಾಡ ಹೀಗೆ. ಇಲ್ಲಿ ನಾವು ತಪ್ಪು ಎಂದು ಗುರುತಿಸುವ ಪದಗಳಿಗೆ ಬೇರೆ ತಿರುಳು ಇಲ್ಲ. ಅವುಗಳಿಗೆ ಮಹಾಪ್ರಾಣದ ಗುರುತಿರುವ ಪದಗಳ ತಿರುಳೇ ಹೊಂದಿಕೆಯಾಗುತ್ತದೆ. ಇನ್ನು ಕೆಲವು ಜೋಡಿಪದಗಳಿವೆ. ಧನ/ದನ, ರಥ/ರತ/, ಝರಿ/ಜರಿ, ಫಲ/ಪಲ, ಮಧ್ಯ/ಮದ್ಯ ಮುಂತಾದ ಜೋಡಿಪದಗಳಲ್ಲಿ ಎರಡೂ ಪದಗಳಿಗೂ ಬೇರೆ ಬೇರೆ ತಿರುಳಿವೆ. ಅಂದರೆ ಒಂದು ಗುರುತಿನ ಬಲು ಇನ್ನೊಂದನ್ನು ಬರೆದರೆ ಓದುವವರು ಗೊಂದಲಕ್ಕೆ ಒಳಗಾಗುವುದಿಲ್ಲವೇ? ಇಂತಹ ಸುಮಾರು

ಇಪ್ಪತ್ತೊಂದು ಜೋಡಿಗಳು ಕನ್ನಡ ಬರವಣಿಗೆಯಲ್ಲಿ ಇವೆ ಎಂದು ಗುರುತಿಸಲಾಗಿದೆ. ಅವುಗಳಲ್ಲಿ ಕೆಲವು ಜೋಡಿಪದಗಳು ಮಾತ್ರ ದಿನದಿನದ ಬರವಣಿಗೆಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಒಂದು ವೇಳೆ ಹಾಗೆ ಒಂದೇ ಗುರುತಿರುವ ಪದಗಳಿಗೆ ಬೇರೆ ಬೇರೆ ತಿರುಳಿದ್ದರೆ ಓದುವವರು ಆ ಪದ ಬಳಕೆಯಾದ ಬಗೆಯನ್ನು ನೋಡಿಕೊಂಡು ಸರಿಯಾದ ತಿರುಳನ್ನು ತಿಳಿದುಕೊಳ್ಳಬಲ್ಲರು. ಕನ್ನಡದಲ್ಲೇ ಒಂದೇ ಪದಕ್ಕೆ ಒಂದಕ್ಕಿಂತ ಹೆಚ್ಚು ತಿರುಳುಗಳಿರುವ ನೂರಾರು ಪದಗಳಿವೆ. ಉದಾ.ಗೆ ತೆರೆ, ಮೊರೆ, ಬರೆ, ಕರೆ, ಕಡೆ, ಸರಿ, ಆಳು, ಸಿಕ್ಕು ಹೀಗೆ ಪಟ್ಟಿ ಬೆಳೆಸಬಹುದು. ಅಂದರೆ ಮಹಾಪ್ರಾಣಗಳ ಗುರುತುಗಳನ್ನು ಬಿಟ್ಟು ಬರೆದರೆ ಬರವಣಿಗೆಯ ತಿರುಳನ್ನು ತಿಳಿಯುವುದಕ್ಕೆ ಅಡ್ಡಿಯೇನೂ ಆಗುವುದಿಲ್ಲ. ಕಣ್ಣಿಗೆ ಆಗುವ ಮುಜುಗರವನ್ನು ಕೊಂಚ ತಡೆದುಕೊಳ್ಳಬೇಕಾಗುತ್ತದೆ.

ಬರೆಯುವಾಗ ಮಹಾಪ್ರಾಣಗಳ ಗುರುತಗಳನ್ನು ಸರಿಯಾಗಿ ಬರೆಯದವರು ಅಂತಹ ಗುರುತುಗಳು ಸರಿಯಾಗಿ ಬಳಕೆಯಾಗಿರುವ ಬರವಣಿಗೆಯನ್ನು ಓದಲು ತೊಂದರೆಪಡುವುದಿಲ್ಲ. ಏಕೆಂದರೆ ಅವರದು ಕಣ್ಣೋದು. ಕಣ್ಣು ಗುರುತುಗಳನ್ನು ತಿಳಿಯಬಲ್ಲುದು. ಹಾಗಾಗಿ ಕನ್ನಡ ಬರವಣಿಗೆಯಲ್ಲಿ ಈವರೆಗೆ ಮಹಾಪ್ರಾಣಗಳನ್ನು ಬಳಸಿ ಬರೆದಲ್ಲೇ ಓದುವವರ ಪಾಲಿಗೆ ದೂರವಾಗುವುದಿಲ್ಲವೇ ಎಂದು ಆತಂಕದಿಂದ ಕೇಳಬೇಕಾಗಿಲ್ಲ.

### ಪ್ರಾಸ ಹೊಂದಾಣಿಕೆಯ ತೊಡಕು

ರಜತ (ಮಾರ್ಪಾಡಿ, ಮೂಡುಬಿದಿರೆ) ಒಂದು ಕೇಳ್ವಿಯನ್ನು ಮುಂದಿಟ್ಟಿದ್ದಾರೆ. ಶಾಲೆಯಲ್ಲಿ ಪದಗಳನ್ನು ನೀಡಿ ಅವುಗಳಿಗೆ ಪ್ರಾಸ ಹೊಂದಾಣಿಕೆಯಾಗುವ ಬೇರೆ ಪದಗಳನ್ನು ಬರೆಯಲು ಕೇಳುತ್ತಾರಷ್ಟೆ. ಹಾಗೆ **ತ್ಯಾಗಿ** ಎಂಬ ಪದವನ್ನು ನೀಡಿದಾಗ ಇವರು **ಮ್ಯಾಗಿ** ಎಂದು ಬರೆದಿದ್ದಾರೆ. ಟೀಚರು ಅದನ್ನು ತಪ್ಪು ಎಂದು ಗುರುತು ಹಾಕಿದ್ದಾರೆ. ಅದು ತಪ್ಪೇ ಎನ್ನುವುದು ಇವರ ಕೇಳ್ವಿ, ತ್ಯಾಗಿ ಪದಕ್ಕೆ ಮ್ಯಾಗಿ ಪ್ರಾಸಹೊಂದುವ ಪದ. ಇದರಲ್ಲಿ ತಪ್ಪಿಲ್ಲ. ಮ್ಯಾಗಿ ಎಂಬ ಪದ ಪದನೆರಿಕೆಯಲ್ಲಿ ಇಲ್ಲ ಎಂಬ ನೆಪದಿಂದ ಅದನ್ನು ತಪ್ಪು ಎಂದು ಟೀಚರು ಹೇಳಿರಬೇಕು. ನಗೆಯುಕ್ಕಿಸುವ ಬರಹಗಳಲ್ಲಿ ಹೀಗೆ ಇಲ್ಲದಿರುವ ಪದಗಳನ್ನು, ಸೋಗಿನ ಪದಗಳನ್ನು ಕೂಡ ಪ್ರಾಸಹೊಂದಿಕೆಗೆ ಬಳಸುವುದುಂಟು. ಹಳೆಯ ಪದ್ಯದ ಸಾಲೊಂದು ಹೀಗಿದೆ **"ಕೈನೆಟಿಕ್ ಹೋಂಡಾ ಹೀರೇಕಾಯಿ ಬೋಂಡಾ"** ಇಲ್ಲವೇ ಇದನ್ನು ಓದಿ. **"ವಿಶ್ವಾಮಿತ್ರ ಮೇನಕೆ ಡಾನ್ಸ್ ಮಾಡೋದು ಏನಕೆ?"** ಎರಡನೆಯ ಉದಾಹರಣೆಯಲ್ಲಿ **ಏನಕೆ** ಎಂಬುದು ಬರವಣಿಗೆಯಲ್ಲಿ ಬಳಕೆ ಇಲ್ಲದಿದ್ದರೂ ಸೋಗಿನ ಪ್ರಾಸವಾಗಿ ಹೊಂದಿಕೆಯಾಗುತ್ತದೆ. ಪ್ರಾಸ ಕವಿಯ ನಂಟನ್ನು ಪಡೆದಿರುವುದರಿಂದ ಮಕ್ಕಳು ನುಡಿಯ ಜಾಯಮಾನವನ್ನು ಸರಿಯಾಗಿ ಅರಿಯಲು ಅವರು ಹೊಸಪದಗಳನ್ನು ಕಟ್ಟಲು ನೆರವಾಗಬೇಕು. ತಪ್ಪು ಎಂದು ಹೀಗಳೆಯಬಾರದು. ತ್ಯಾಗಿ ಪದಕ್ಕೆ **ಅಗಿ, ತಗಿ, ಜಗಿ, ಮಗಿ** ಎಂದೆಲ್ಲ ಪ್ರಾಸ ಪದಗಳೆಂದು ಬರೆದರೆ ಅದನ್ನು ತಪ್ಪು ಎನ್ನೋಣ. ಏಕೆಂದರೆ ಕೊನೆಯ ಗಿಯನ್ನು ಮಾತ್ರ ನೋಡಿದರೆ ಸಾಲದು ಅದರ ಹಿಂದಿರುವ ತೆರೆದುಲಿ ಉದ್ದವಾಗಿದೆ (ತ್ಯಾ) ಎಂಬುದನ್ನು ಕೂಡ ನೋಡಿಕೊಂಡು ಪ್ರಾಸಪದ ಹುಡುಕಬೇಕು.

**ಸನ್**

ಗುರುಪ್ರಸಾದ್ ಬಿ ಎ (ರಾಮನಗರ) ಇವರ ಕೇಳ್ವಿ ಹೀಗಿದೆ. ಯಾವುದೇ ಮಾರಾಟಪತ್ರದ ಮೊದಲಲ್ಲಿ **ಸನ್** ಎಂದು ಬಳಸುವುದೇಕೆ? ದಾಖಲೆಗಳನ್ನು ಬರೆಯುವಾಗ ಅದನ್ನು ಯಾವ ದಿನದಂದು ಬರೆಯಲಾಯಿತು ಎನ್ನುವುದನ್ನು ತಿಳಿಸಲು ವರುಷವನ್ನು ಹೇಳಿ ಮೊದಲ ಮಾಡುವುದುಂಟು (ನಾವೀಗ ದಿನಾಂಕದಿಂದ ಮೊದಲು ಮಾಡುತ್ತೇವೆ; ಅಮೆರಿಕನ್ನರು ತಿಂಗಳಿನಿಂದ ಮೊದಲು ಮಾಡುತ್ತಾರೆ) ವರುಷವನ್ನು ಹೇಳುವ ಹಲವು ಬಗೆಗಳಿವೆ. ಶಾಲಿವಾಹನ ಶಕೆ, ವಿಕ್ರಮ ಶಕೆ, ಕ್ರಿಸ್ತ ಶಕೆ ಹಿಜ್ರಾ ಶಕೆ ಮುಂತಾದವು. ಹೆಚ್ಚಾಗಿ ಸನ್ ಎಂಬುದನ್ನು ಕ್ರಿಸ್ತಶಕೆಯನ್ನು ತಿಳಿಸುವಾಗ ಬಳಸುವುದುಂಟು. ಸನ್ ಎಂಬುದು ಪರ್ಸೋ-ಅರಾಬಿಕ್ ಕಡೆಯಿಂದ ಬಂದಿರುವ ಪದ.

**ಕೊಂಚ ಬಿಡುವು ಇಲ್ಲವೇ ಕಿರು ಬಿಡುವು**

ಆನಂದ ಎಸ್ ಎನ್ (ಕೆಂಗೇರಿ,ಬೆಂಗಳೂರು) ಇವರು ಒಂದು ಕೇಳ್ವಿಯನ್ನು ಬರೆದು ಕಳಿಸಿದ್ದಾರೆ. ಶಾಲೆಯ ವೇಳಾಪಟ್ಟಿಯಲ್ಲಿ ತರಗತಿಗಳ ನಡುವೆ ಮಕ್ಕಳಿಗೆ (ಮೇಸ್ಟ್ರುಗಳಿಗೂ)ನೀಡುವ ಬಿಡುವನ್ನು ತಿಳಿಸಲು ಯಾವ ಪದವನ್ನು ಬಳಸಬೇಕು. ಎಲ್ಲರಿಗೂ ತಿಳಿಯುವಂತಿಬೇಕು ಎನ್ನುವುದಾದರೆ **ಕೊಂಚ ಬಿಡುವು** ಇಲ್ಲವೇ **ಕಿರು ಬಿಡುವು** ಎಂಬ ಪದರಚನೆಯನ್ನು ಬಳಸುವುದು ಸರಿ ಎನಿಸುತ್ತದೆ. ಈಗಂತೂ ಮಕ್ಕಳು ಅದನ್ನು ಇಂಟರ್ವೆಲ್ ಎನ್ನಬೇಕೋ ಇಂಟ್ರವೆಲ್ ಎನ್ನಬೇಕೋ ಎಂಬ ಗೊಂದಲದಲ್ಲಿದ್ದಾರೆ.

**ಸಮಾನಾರ್ಥಕ ಪದ**

ನಾಗೇಂದ್ರಪ್ಪ ಪಿ. (ಬಳ್ಳಾರಿ) ಇವರು ಸಮಾನಾರ್ಥಕ ಪದಗಳನ್ನು ಕಲಿಸುವುದೇಕೆ ಎಂದು ಕೇಳಿದ್ದಾರೆ. ಹಾಗೆ ನೋಡಿದರೆ ಸಮಾನಾರ್ಥಕ ಪದ ಎನ್ನುವುದೇ ಸರಿಯಲ್ಲ. ಒಂದೇ ತಿರುಳುಳ್ಳ ಎರಡು ಪದಗಳು ನುಡಿಯಲ್ಲಿ ಇರಬಹುದೇ? ಹೌದು ಎನ್ನೋಣ. ಆಗ ಎರಡು ನಿಟ್ಟಿನಲ್ಲಿ ಒಂದೇ ತಿರುಳಿನಪದಗಳನ್ನು ನೋಡಬಹುದು. ಇನ್ನೊಂದು ನುಡಿಯಿಂದ ಅದೇ ತಿರುಳಿನ ಪದವನ್ನು ಪಡೆದುಕೊಂಡಾಗ ಒಂದೇ ತಿರುಳಿನ ಎರಡು ಪದಗಳು ನುಡಿಯಲ್ಲಿ ನೆಲೆಗೊಳ್ಳುವುದುಂಟು. **ಕಣ್ಣು** ಪದದ ಜೊತೆಗೆ **ಅಕ್ಷಿ** ಎಂಬ ಪದ ನೆಲೆ ನಿಂತಿರುವ ಹಾಗೆ. ಆದರೆ ಬಳಸುತ್ತ ಹೋದಂತೆ ಒಂದೇ ತಿರುಳಿನ ಈ ಪದಗಳನ್ನು ಬಳಸುವ ಬಗೆಯಲ್ಲಿ ಏರುಪೇರುಗಳು ಕಂಡು ಬರುತ್ತವೆ. **ಗುಂಡಿಗೆ** ಮತ್ತು **ಹೃದಯ** ಒಂದೇ ತಿರುಳಿನ ಪದಗಳು ಎನಿಸಿದರೂ ಎಲ್ಲ ಕಡೆಯೂ ಈ ಎರಡೂ ಪದಗಳಲ್ಲಿ ಒಂದನ್ನು ಇನ್ನೊಂದರ ಬದಲು ಬಳಸಲು ಆಗುವುದಿಲ್ಲ. **ಆತನನ್ನು ಎದುರಿಸಲು ಎಂಟು ಗುಂಡಿಗೆ ಇರಬೇಕು** ಎಂಬ ವಾಕ್ಯದಲ್ಲಿ, ಗುಂಡಿಗೆ ಪದದ ಬದಲು ಹೃದಯ ಪದವನ್ನು ಬಳಸಲು ಆಗುವುದಿಲ್ಲ. ಇನ್ನೊಂದು ನಿಟ್ಟಿನಿಂದ ನೋಡಿದರೆ ಒಂದೇ ತಿರುಳಿನ ಪದಗಳು ಮೇಲುನೋಟಕ್ಕೆ ಹಾಗೆ ಕಾಣಿಸುತ್ತವೆ. ಅದರಲ್ಲೂ ಸಂಸ್ಕೃತ ನುಡಿಯಿಂದ ಪಡೆದುಕೊಂಡ ಪದಗಳು ತೋರಿಕೆಗೆ ಒಂದೇ

ತಿರುಳು ಇರುವಂತೆ ಕಂಡರೂ ಅವುಗಳ ನಡುವೆ ಇಡಿಯಾದ ಹೋಲಿಕೆ ಇರಲೇ ಬೇಕಿಲ್ಲ. ಉದಾಹರಣೆಗೆ **ಸೂರ್ಯ, ಮಾರ್ತಾಂಡ, ಆದಿತ್ಯ, ಭಾನು, ರವಿ** ಇವೆಲ್ಲವೂ ಒಂದೇ ತಿರುಳಿನ ಪದಗಳು ಎನಿಸಿದರೂ ಅವುಗಳ ರಚನೆಯ ಸಿಟ್ಟಿನಲ್ಲಿ ಬೇರೆಬೇರೆ ಕತೆಗಳನ್ನೇ ಹುದುಗಿಸಿ ಇಟ್ಟುಕೊಂಡಿರುತ್ತವೆ. ಇನ್ನು ಒಂದೇ ತಿರುಳಿನ ಪದಗಳನ್ನು ಕಲಿಸುವುದರಿಂದ ಮಕ್ಕಳಲ್ಲಿ ಪದನೆರಿಕೆಯು ಬೆಳೆಯುತ್ತದೆ. ಯಾವಾಗಲೂ ಒಂದೇ ಪದಕ್ಕೆ ಗಂಟು ಬೀಳುವ ಬದಲು ಬೇರೆಬೇರೆ ಪದಗಳನ್ನು ಬೇಕೆನಿಸಿದಾಗ ಬಳಸಲು ಅವರು ಕಲಿಯುತ್ತಾರೆ.

**ಓದಿ ಹೇಳುವುದು**

ಟಿ ವಿ ವಾಹಿನಿಗಳಲ್ಲಿ ಸುದ್ದಿಗಳನ್ನು ಓದುವವರು ಕನ್ನಡವನ್ನು ನುಡಿಯುವ ಬಗೆಯಲ್ಲಿ ಇರುವ ತಪ್ಪುಗಳನ್ನು ಕುರಿತು ಹಲವರು ಮುನಿಸಿನಿಂದ ಮಾತಾಡುವುದನ್ನು ಕೇಳಿದ್ದೇವೆ. ಕನ್ನಡವನ್ನು ಮಾತಾಡುವವರೇ ಆಗಿರುವ ಈ ಸುದ್ದಿ ಓದುಗರು ತಪ್ಪಾಗಿ ಏಕೆ ನುಡಿಯುತ್ತಾರೆ? ಬೊ.ನಾ.ಕೃಷ್ಣಮೂರ್ತಿ (ಶಿವಮೊಗ್ಗ) ಇವರು ಎತ್ತಿ ಹೇಳುವ ಒಂದು ತಪ್ಪನ್ನು ನೋಡಿ. ಅದು ಹೀಗಿದೆ: ಸುದ್ದಿಗಳಲ್ಲಿ ಬರುವ **ಮಾಡಲಾಗುವುದು, ಹೇಳಲಾಗುವುದು, ನೀಡಲಾಗುವುದು** ಮಾದರಿಯ ಪದಗಳನ್ನು ನುಡಿಯುವಾಗ ಹೆಚ್ಚಿನ ಸುದ್ದಿ ಓದುಗರು ಆ ಪದಗಳಲ್ಲಿ ಇರುವ **'ಲಾಗುವುದು'** ಎಂಬುದನ್ನು ಬೇರೆಯಾಗಿಯೇ ನುಡಿಯುತ್ತಾರೆ. ಈ ತಪ್ಪು ಓದಿಗೆ ಓದುವವರು ನೇರವಾಗಿ ಕಾರಣರಲ್ಲ; ಈ ಸುದ್ದಿಗಳನ್ನು ಬರೆದವರು ನೇರವಾಗಿ ಕಾರಣ. ಏಕೆಂದರೆ ಮೇಲೆ ಹೇಳಿದ ಬಗೆಯ ಪದಗಳು ಕನ್ನಡದ ಬರವಣಿಗೆಯಲ್ಲಿ ಕಾಣಿಸಿಕೊಳ್ಳುವಂತಹವು. ಆಡುಮಾತಿನಲ್ಲಿ ಇಂತಹ ಪದಗಳು ಬರುವುದಿಲ್ಲ. ಬರವಣಿಗೆಯ ನುಡಿ ಕಣ್ಣಿಗೆ ದಕ್ಕುತ್ತದೆ. ಹಾಗಾಗಿ ಪದಗಳನ್ನು ಹೇಗೆ ಒಡೆದುಕೊಳ್ಳಬೇಕು ಎನ್ನುವುದನ್ನು ಕಣ್ಣು ಗುರುತಿಸಿಕೊಳ್ಳುತ್ತದೆ. ಅದಕ್ಕೆ ತಕ್ಕಂತೆ ಅಚ್ಚು ಮಾಡಿರುತ್ತಾರೆ. ಆದರೆ ನಾವು ಟಿ ವಿ ನೋಡುವಾಗ ಸುದ್ದಿಗಳನ್ನು ಕೇಳುತ್ತಿರುತ್ತೇವೆ. ಸುದ್ದಿಗಳನ್ನು ಓದುವವರು ಕಿವಿಗಳು ಒಪ್ಪುವಂತಹ ಬಗೆಯಲ್ಲಿ ನುಡಿಯಬೇಕಾಗುತ್ತದೆ. ಅವರಿಗೆ ಹಾಗೆ ಓದಲು ಅನುವಾಗುವ ಹಾಗೆ ಸುದ್ದಿಗಳನ್ನು ಬರೆದುಕೊಡಬೇಕಾಗುತ್ತದೆ. ಈ ಸುದ್ದಿಗಳೂ ಬರವಣಿಗೆಯಲ್ಲಿಯೇ ಇರುತ್ತವೆಯಾದರೂ ಅವು ಓದಿಕೊಳ್ಳಲೆಂದು ಬರೆದ ಹಾಗಿರಬಾರದು; ಓದಿ ಹೇಳಲು ತಕ್ಕಂತೆ ಬರೆದಹಾಗಿರಬೇಕು. ಟಿ ವಿ ಸುದ್ದಿಗಳನ್ನು, ನಿರೂಪಣೆಗಳನ್ನು ಬರೆಯುವವರು ಈ ಎರಡೂ ಬಗೆಯ ಬರವಣಿಗೆಗಳಿಗೆ ಇರುವ ವ್ಯತ್ಯಾಸಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಆಗ ಸುದ್ದಿಗಳನ್ನು ಓದುವವರು ತಪ್ಪಾಗಿ ಓದುತ್ತಿದ್ದಾರೆಂದು ನಮಗೆ ಅನಿಸತೊಡಗುತ್ತದೆ. ಹಾಗೆ ನೋಡಿದರೆ ಟಿ ವಿಗಳಲ್ಲಿ ಸುದ್ದಿಗಳನ್ನು ಓದುವವರು ಇರುವುದಿಲ್ಲ; ಓದಿ ಹೇಳುವವರು ಇರುತ್ತಾರೆ. ಅವರು ಓದುತ್ತಿದ್ದರೂ ಕೇಳುವ ನಮಗೆ ಅವರ ನುಡಿ ಮಾತಾಡಿದಂತೆ ಇರಬೇಕಾಗುತ್ತದೆ. ಅಂದರೆ ಅದಕ್ಕೆ ತಕ್ಕಂತೆ ಅವರಿಗೆ ದೊರಕುವ ಸುದ್ದಿ ಬರವಣಿಗೆ ಇರಬೇಕಾಗುತ್ತದೆ.

**ಪಾರ್ಥಿವ ಶರೀರ ಬಂದಿಳಿಯಿತು**

ಮಿಥುನ್. ಎಂ. ವಿ (ಕುರುದಗಡ್ಡಿ, ಹಗರಿ ಬೊಮ್ಮನಹಳ್ಳಿ) ಇವರು ವಾಕ್ಯವೊಂದನ್ನು ಬರೆದು ಇದು ಎಷ್ಟು ಸರಿ ಎಂದು ಕೇಳಿದ್ದಾರೆ. 'ಅವರ ಪಾರ್ಥಿವ ಶರೀರ ಬಂದಿಳಿಯಿತು'

ಇದು ಅವರು ಟಿ ವಿ ಯಲ್ಲಿ ಕೇಳಿದ ವಾಕ್ಯ. ಇಳಿಯಿತು ಎಂಬ ಕ್ರಿಯಾಪದ ಬಳಕೆಯಾಗ ಬೇಕಾದರೆಕೆಲಸವನ್ನು ಮಾಡಿದ ವಾಕ್ಯದ ಕರ್ತೃವೇ ಮಾಡಿರಬೇಕು ಎಂದಾಗುತ್ತದೆ. ಉದಾ. 'ಹಕ್ಕಿ ವೇಗವಾಗಿ ಕೆಳಗಿಳಿಯಿತು' ಇಲ್ಲಿ ಪಾರ್ಥಿವ ಶರೀರ ಹಾಗೆ ಮಾಡಲು ಆಗುವುದಿಲ್ಲ. ಆದ್ದರಿಂದ ಈ ವಾಕ್ಯ ತಪ್ಪು. ಇಂತಹ ತಪ್ಪು ವಾಕ್ಯಗಳನ್ನು ಬರೆಯುವವರು ತಾವು ಹೇಳಬೇಕಾದ್ದನ್ನು ಕನ್ನಡದಲ್ಲೇ ಮನನಮಾಡಿಕೊಂಡು ಹೇಳುವುದಿಲ್ಲ. ಬದಲಿಗೆ ಇಂಗ್ಲಿಶಿನ ವಾಕ್ಯದ ಬಲೆಗೆ ಬಿದ್ದು ಬಿಡುತ್ತಾರೆ. ಅದನ್ನು ಕನ್ನಡಕ್ಕೆ ಅನುವಾದಿಸಿಕೊಂಡರೆ ತಮ್ಮ ಕೆಲಸ ಮುಗಿಯಿತು ಎಂದುಕೊಳ್ಳುತ್ತಾರೆ. ಈ ವಾಕ್ಯ ಕೂಡ ಹಾಗೆಯೇ ಇಂಗ್ಲಿಶ್ ಸರಕು. ಈ ವಾಕ್ಯವನ್ನು ತಿದ್ದಿ ಬರೆಯುವುದು ಎನ್ನುವ ಮಾತಿಲ್ಲ. ಬದಲಿಗೆ ಬೇರೆಯೇ ವಾಕ್ಯವನ್ನು ಬರೆಯ ಬೇಕು. 'ಅವರ ಪಾರ್ಥಿವ ಶರೀರವಿದ್ದ ವಾಹನ ಬಂದು ತಲುಪಿತು' ಎಂದು ಹೇಳಿದರೆ ಸರಿಯಾದೀತು.

**ವಿಕಲಚೇತನ**

ಮಾರ್ಪಳ್ಳಿ ಶ್ರೀಪತಿರಾವ್ (ಬೆಂಗಳೂರು) ಇವರು ಅಂಗವಿಕಲ ಇಲ್ಲವೇ ವಿಕಲಾಂಗ ಎಂಬ ಪದಗಳಿಗೆ ಬದಲಾಗಿ ವಿಕಲಚೇತನ ಎಂಬ ಪದವನ್ನು ಬಳಸುವುದು ಸರಿಯೇ ಎಂದು ಕೇಳಿದ್ದಾರೆ. ವಿಕಲಚೇತನ ಎಂಬ ಪದ ಬಳಸಿದವರು ಕೇವಲ ಅಂಗ ಮಾತ್ರ ಊನವಾಗಿರುವವರನ್ನು ಮಾತ್ರವಲ್ಲದೆ ಯಾವುದೇ ಬಗೆಯೇ ವಿಕಲತೆ ಉಳ್ಳವರನ್ನಾದರೂ ಸೂಚಿಸುವ ಗುರಿಯನ್ನು ಹೊಂದಿದಂತಿದೆ. ಹಾಗಾಗಿ ತಿರುಳಿನ ನಿಟ್ಟಿನಲ್ಲಿ ಈ ಪದದ ಬಳಕೆಯನ್ನು ಒಪ್ಪದಿರಲು ಕಾರಣಗಳಿಲ್ಲ. ಆದರೆ ಇಂದಿನ ದಿನಗಳಲ್ಲಿ ವಿಕಲತೆ ಎನ್ನುವದನ್ನೇ ಎಲ್ಲರೂ ಒಪ್ಪುವಂತೆ ವಿವರಿಸುವುದು ಆಗುತ್ತಿಲ್ಲ. ಅಲ್ಲದೆ ವಿಕಲತೆ ಎಂದರೇನು ಎಂಬುದು ಗೊತ್ತಿದ್ದರೂ ಅಂತಹ ವಿಕಲತೆ ಉಳ್ಳವರನ್ನು ಬಣ್ಣಿಸಲು ಬೇರೆಯೇ ಪದಗಳನ್ನು ಬಳಸಬೇಕೆಂಬ ಒತ್ತಾಯಗಳು ಮೂಡುತ್ತಿವೆ. ಉದಾ.ಗೆ ನೋಡುವ, ಕೇಳುವ ಸಾಮರ್ಥ್ಯ ಎಲ್ಲರಲ್ಲೂ ಸಮಾನವಾಗಿರುವುದಿಲ್ಲ. ಹಾಗಿರುವಾಗ ಯಾರನ್ನು ಕುರುಡ ಮತ್ತು ಯಾರನ್ನು ಕಿವುಡ ಎಂದು ಕರೆಯಬೇಕು. ಒಂದುವೇಳೆ ಹಾಗೆ ಕರೆಯಲು ಒಂದು ಗಡಿಗೆರೆಯನ್ನು ಗುರುತಿಸಿಕೊಂಡರೂ ಆ ಬಗೆಯ ಊನತೆಯುಳ್ಳವರನ್ನು ಅದೇ ಊನತೆಯ ಮೂಲಕವೇ ಗುರುತಿಸುವ ಪದಗಳನ್ನು ಬಳಸಬಾರದೆಂಬ ತಿಳುವಳಿಕೆ ಈಗ ಮೂಡುತ್ತಿದೆ. ಹಾಗಾಗಿ ಬೇರೆ ಬಗೆಯ ಪದಗಳನ್ನು ಬಳಸುವುದನ್ನು ನೋಡುತ್ತಿದ್ದೇವೆ. ಉದಾಹರಣೆಗೆ ಇಂಗ್ಲಿಶಿನಲ್ಲಿ ಡಿಸೇಬಲ್ಡ್ ಎಂಬ ಪದದ ಬದಲಿಗೆ ದಿಫರೆಂಟ್ಲಿ ಏಬಲ್ಡ್ ಎಂಬ ಪದವನ್ನು ಬಳಸುತ್ತಿದ್ದಾರೆ. ಇವೆಲ್ಲವೂ ನಮ್ಮ ನುಡಿಗೂ ನಾವು ಸಮಾಜವನ್ನು ನೋಡುವ ನೆಲೆಗೂ ಸಂಬಂಧಿಸಿದ ಮಾತುಗಳಾಗಿವೆ. ಆ ನೆಲೆಗಳು ಬದಲಾದಂತೆ ನಮ್ಮ ನುಡಿಯಲ್ಲೂ ಬದಲಾವಣೆಗಳು ಆಗಲೇಬೇಕಾಗುತ್ತದೆ.

**ಕನ್ನಡಕ್ಕೆ ನೂರು ವ್ಯಾಕರಣಗಳು ಇರುವುದಿಲ್ಲ**

ಕನ್ನಡ ನುಡಿಯುವವರ ಬಗೆಗಳನ್ನು ಕನ್ನಡ ಬರವಣಿಗೆ ಒಳಗೊಳ್ಳುವಂತಿರಬೇಕು ಎಂದು ಹೇಳಿದ ಕೂಡಲೇ ಎಲ್ಲರೂ ಕನ್ನಡದ ಎಲ್ಲ ಒಳನುಡಿಗಳಿಗೆ ಒಂದೊಂದು

ವ್ಯಾಕರಣ ಬರೆಯುತ್ತ ಹೋದರೆ ಅದು ಎಂದೂ ಮುಗಿಯುವ ಕೆಲಸವಲ್ಲ ಎನ್ನುತ್ತಾರೆ. ಒಳನುಡಿಗಳ ರಚನೆಗಳು ಹೇಗಿರುತ್ತವೆ ಎಂದು ತೋರಿಸಿಕೊಡುವುದು ಬೇರೆ; ವ್ಯಾಕರಣವೇ ಬೇರೆ. ಕನ್ನಡಕ್ಕೆ ನೂರು ವ್ಯಾಕರಣಗಳು ಇರುವುದಿಲ್ಲ; ಇರುವುದು ಒಂದೇ ವ್ಯಾಕರಣ. ಅದರ ಕಟ್ಟುಗಳನ್ನು ಬಳಸಿಕೊಂಡೇ ಒಳನುಡಿಗಳು ಜನರ ನುಡಿಗಳಾಗಿವೆ. **ಅವನು ಶಾಲೆಗೆ ಹೋಗುತ್ತಾನೆ** ಎನ್ನುವ ವಾಕ್ಯವನ್ನು ನೊಡೋಣ. **ಅವನು** ಬದಲಿಗೆ **ಅವ, ಅಂವಾ, ಅವನ್, ಆತ** ಮುಂತಾದ ಪದಗಳನ್ನು ಬೇರೆಬೇರೆಯವರು ಬಳಸಿಯಾರು. **ಶಾಲೆಗೆ** ಪದದ ಬದಲು, **ಸಾಲಿಗ, ಸಾಲಿಗ್, ಇಸ್ಕೂಲ್ಗೆ. ಇಸ್ಕೋಲ್ಗೆ, ಸ್ಕೂಲಿಗೆ** ಮುಂತಾದ ಪದಗಳು ಕೇಳಿ ಬಂದಾವು. ಹಾಗೆಯೇ **ಹೋಗುತ್ತಾನೆ** ಪದದ ಜಾಗದಲ್ಲಿ **ಹೋಗ್ತಾನೆ. ಹೋಯ್ತಾನೆ. ಹೋತಾನೆ, ಓತಾನೆ, ಒಯ್ತಾನೆ, ಓತಾನೆ, ಓತಾನ** ಮುಂತಾದ ಪದಗಳನ್ನು ನಾವು ಕೇಳಿಸಿಕೊಳ್ಳಲು ಸಾಧ್ಯ. ಯಾವ ಪದವನ್ನು ಬಳಸಿದರೂ ಮೊದಲು ಹೇಳಿದ ವಾಕ್ಯದ ವ್ಯಾಕರಣದ ಕಟ್ಟು ಮಾತ್ರ ಬದಲಾಗುವುದಿಲ್ಲ. ಇಲ್ಲಿ ಶಾಲೆ ಎಂಬ ಹೆಸರು ಪದಕ್ಕೆ ಚತುರ್ಥಿ ವಿಭಕ್ತಿ ಪ್ರತ್ಯಯವನ್ನೇ ಸೇರಿಸಬೇಕು. ಆ ವಿಭಕ್ತಿ ಪ್ರತ್ಯಯದ ನುಡಿಯುವ ರೂಪಗಳು ಬೇರೆ ಬೇರೆಯಾಗಿದ್ದರೂ ಕಟ್ಟು ಮಾತ್ರ ಬದಲಾಗದು. ಕೊನೆಯ ಕೆಲಸ ಪದದ ಒಳರಚನೆಯಲ್ಲಿ ಬೇರು ಮತ್ತು ಕಾಲ ಹೇಳುವ ಪದರೂಪ ಮತ್ತು ಪುರುಷ, ವಚನ ಮತ್ತು ಲಿಂಗವನ್ನು ಹೇಳುವ ಪದರೂಪಗಳು ಸೇರಿರಲೇಬೇಕು. ಈ ಕಟ್ಟನ್ನು ನಾವು ಪಟ್ಟಿ ಮಾಡಿದ **ಹೋಗುತ್ತಾನೆ** ಪದದ ಬದಲೀ ರೂಪಗಳು ಮೀರಿಲ್ಲ. ಅಂದರೆ ಹತ್ತು ಬಗೆಯ ಕನ್ನಡ ಒಳನುಡಿಗಳಿದ್ದರೆ ಹತ್ತು ಬಗೆಯ ಕನ್ನಡ ವ್ಯಾಕರಣಗಳಿರುವುದಿಲ್ಲ.

ಕೆಲವರು ಇನ್ನೊಂದು ಕೇಳ್ವಿಯನ್ನು ಮುಂದಿಡುತ್ತಾರೆ. ಕಟ್ಟುಗಳನ್ನು ಮೀರುವುದು ಎಂದರೇನು? ಕನ್ನಡ ವ್ಯಾಕರಣದ ಒಂದು ಕಟ್ಟನ್ನು ನೋಡೋಣ. ಗುಣಪದದ ಬಳಿಕ ಹೆಸರು ಪದ ಬರಬೇಕು ಎನ್ನುವುದು ಒಂದು ಕಟ್ಟು. **ದೊಡ್ಡ ಮನೆ. ಕೆಂಪು ಹೂ, ಕೆಟ್ಟ ಸಿನಿಮಾ, ಓದಿದ ಹುಡುಗಿ, ಹೇಳಿದ ಮಾತು** ಮುಂತಾದವು ಈ ಕಟ್ಟಿಗೆ ತಕ್ಕ ರಚನೆಗಳು. ಒಂದು ವೇಳೆ **ಮನೆ ದೊಡ್ಡ, ಹೂ ಕೆಂಪು, ಸಿನಿಮಾ ಕೆಟ್ಟ,, ಹುಡುಗಿ ಓದಿದ, ಮಾತು ಹೇಳಿದ** ಎಂದರೇನಾಗುತ್ತದೆ? ಅವು ಯಾವುದು ಕನ್ನಡ ರಚನೆಗಳಾಗಿ ಉಳಿಯುವುದಿಲ್ಲ. ಇದು ಕನ್ನಡ ವ್ಯಾಕರಣದ ಕಟ್ಟು. ಕನ್ನಡದ ಯಾವ ಒಳನುಡಿಯೂ ಇದನ್ನು ಮೀರುವಂತಿಲ್ಲ. (ಆದರೆ ಕೆಲವು ಬೇರೆಬೇರೆ ನುಡಿಗಳು ಹೆಸರು ಪದಗಳ ಬಳಿಕ ಗುಣಪದವನ್ನು ಬಳಸುವ ಕಟ್ಟನ್ನು ಹೊಂದಿರುತ್ತವೆ. ಈಚೆಗೆ ಪತ್ರಿಕೆಗಳಲ್ಲಿ, ಟಿವಿಗಳಲ್ಲಿ **'ಎಲ್ ಸಾರಿ ರೋಹೊ'**– ರೋಜೊ ಎಂದು ಬರೆದರೂ ಅದು ನುಡಿಯುವಾಗ ರೋಹೊ ಎಂದಾಗುತ್ತದೆ– ಎಂಬ ಪುಸ್ತಕದ ಹೆಸರು ಬಂದಿತ್ತಷ್ಟೆ. ಸ್ಪ್ಯಾನಿಶ್ ನುಡಿಯಲ್ಲಿ ರೋಹೊ ಎಂದರೆ ಕೆಂಪು. ಇದು ಗುಣಪದ. ಇದು ಹೆಸರು ಪದ ಸ್ಯಾರಿ–ಸೀರೆ_ ಬಳಿಕ ಬಂದಿದೆ. ಕನ್ನಡದಲ್ಲಿ ಇರುವಂತೆ ಕೆಂಪು ಸೀರೆ ಅಲ್ಲ; ಸೀರೆ ಕೆಂಪು ಎಂದಿದೆ. ಕನ್ನಡದಲ್ಲಿ ಸೀರೆ ಕೆಂಪು ಎನ್ನುವುದು ಒಂದು ಪದಗುಚ್ಚವೇ ಆಗಿಬಿಡುತ್ತದೆ)

ಈ ಮುಂದಿನ ವಾಕ್ಯವನ್ನು ನಾವು ಮಾತಿನಲ್ಲಿ ಕೇಳಿಸಿಕೊಳ್ಳುತ್ತೇವೆ ಎನ್ನೋಣ. **'ಬರ್ತೀನಿ ಅಂದಿದ್ದೆ?'** ಈ ವಾಕ್ಯವನ್ನು ನುಡಿದವರು ಯಾರಿಗೋ ಕಾಯುತ್ತಿದ್ದು ಅವರು ಬಾರದೇ ಇದ್ದಾಗ ಇದನ್ನು ಮತ್ತೆ ಯಾವಾಗಲೋ ಇಲ್ಲವೇ ಆಗಲೇ ಫೋನಿನಲ್ಲಿ

ಹೇಳಿರಬಹುದು. ಇಲ್ಲಿ ನೀನು ಎಂಬ ಪದವೇ ಇಲ್ಲ. ಅಲ್ಲದೆ **'ನೀನು ಬರುತ್ತೇನೆ ಎಂದು ಹೇಳಿದ್ದೆ; ಬರಲೇ ಇಲ್ಲ'** ಎನ್ನುವ ವಾಕ್ಯಗಳ ಪದಗಳು ಜಾಗ ಬದಲಿಸಿಕೊಂಡು ಏನೇನೋ ಆಗಿದೆಯಲ್ಲ; ಇದು ವ್ಯಾಕರಣದ ಕಟ್ಟನ್ನು ಮೀರಿದಂತಲ್ಲವೇ ಎಂದು ಕೇಳಬಹುದು. ವಾಕ್ಯದ ಪದಗಳ ಜಾಗಗಳನ್ನು ಎರ್ರಾಬಿರ್ರಿ ಬದಲಿಸಲು ಬರುವುದಿಲ್ಲ. ಜಾಗ ಬದಲಾವಣೆಗೆ ಒಂದು ಕಟ್ಟು ಇರುತ್ತದೆ. ಅದನ್ನು ಮೀರಿದರೆ ತಪ್ಪು ವಾಕ್ಯಗಳು ಹುಟ್ಟಿಕೊಳ್ಳುತ್ತವೆ. ಮೇಲೆ ಹೇಳಿದ ವಾಕ್ಯವನ್ನೇ **'ಅಂದಿದ್ದೆ ಬರ್ತೀನಿ'** ಎಂದು ಹೇಳಿದರೆ ಏನಾಗುತ್ತದೆ ನೋಡಿ.

ಹಾಗಿದ್ದರೆ ಹಳಗನ್ನಡ, ನಡುಗನ್ನಡ, ಹೊಸಗನ್ನಡಗಳಿಗೆಲ್ಲ ಒಂದೇ ವ್ಯಾಕರಣವೇ ಎಂಬ ಕೇಳ್ವಿ ಎದುರಾಗುತ್ತದೆ. ಕನ್ನಡನುಡಿಯಲ್ಲಿ ಆಗುವ ಬದಲಾವಣೆಗಳು ಅದರ ವ್ಯಾಕರಣದ ಕಟ್ಟುಗಳಲ್ಲೂ ಬದಲಾವಣೆಗಳನ್ನು ತರುತ್ತವೆ. ಈ ಬದಲಾವಣೆಗಳೂ ಕೂಡ ಒಂದು ಗಡಿಗೆರೆಗಳೊಳಗೇ ನಡೆಯುತ್ತಿರುತ್ತವೆ. ಆದರೆ ಬದಲಾವಣೆಗಳು ಆಗುತ್ತಿರುತ್ತವೆ. ಇದನ್ನು ಗುರುತಿಸಲು ಒಂದು ಉದಾಹರಣೆಯನ್ನು ನೋಡಿ. **'ಊದುವರೆ ಕೊಳಲು. ಇಲ್ಲ ಬರಿ ಬಿದಿರು.'** ಇದು ಕವಿ ಬೇಂದ್ರೆಯವರ ಕವಿತೆಯ ಸಾಲು. ಇಲ್ಲ ಬಳಕೆಯಾದ ಊದುವರೆ ಎಂಬ ರಚನೆ ಹೊಸಗನ್ನಡದಲ್ಲಿ ಇಲ್ಲ. ಇದು ನಡುಗನ್ನಡಲ್ಲೂ ಇದ್ದಿತೋ ಇಲ್ಲವೋ ಖಚಿತವಾಗಿ ಹೇಳಲಾರೆ. ಆದರೆ ಹಳಗನ್ನಡದಲ್ಲಿ ಇದು ಸರಿಯಾದ ರಚನೆ. **ಊದುವ** ಎಂಬ ಕೆಲಸ ಪದದ ಕಾಂಡಕ್ಕೆ **ಅರೆ(<ಒಡೆ)** ಸೇರುವುದು ಹಳಗನ್ನಡದಲ್ಲಿ ಕಂಡು ಬರುತ್ತದೆ. ಪಂಪ ಬರೆದ ಸಾಲು: **'ಬೇಡುವೊಡೆ ಎಮ್ಮಯ್ಯನಂ ಬೇಡಿರೇ?'**ಇಲ್ಲಿ ಆ ಬಗೆಯ ರಚನೆ ಇದೆ. ಆದರೆ ಹೊಸಗನ್ನಡ ಈ ಕಟ್ಟನ್ನು ಹೊಂದಿಲ್ಲ. ಆದರೆ ಈ ಬಗೆಯಲ್ಲಿ ನುಡಿಯ ಕಟ್ಟುಗಳು ಗುರುತು ಸಿಗಲಾರದಂತೆ ಬದಲಾಗುವುದಿಲ್ಲ. ಹಾಗಾಗಿಯೇ ಈಗಲೂ ಹತ್ತನೆಯ ಶತಮಾನದ ಕನ್ನಡವನ್ನು ಈಗಲೂ ಕನ್ನಡ ಎಂದೇ ಹೇಳುತ್ತೇವೆ. ಒಟ್ಟಾರೆ ಕನ್ನಡದ ಒಳನುಡಿಗಳನ್ನು ಬರವಣಿಗೆಯಲ್ಲಿ ಒಳಗೊಳ್ಳಬೇಕು ಎಂಬ ಮಾತು ಹತ್ತಾರು ವ್ಯಾಕರಣಗಳ ದೂಳನ್ನು ಎಬ್ಬಿಸುವುದಿಲ್ಲ ಎಂದು ತಿಳಿದರೆ ಸಾಕು.

### ಮಾತಾಡಿದಂತೆಯೇ ಬರೆಯುವುದು ಬರೆದಂತೆಯೇ ಮಾತಾಡುವುದು

ಕನ್ನಡ ಮಾತು ಮತ್ತು ಬರಹಗಳಲ್ಲಿ ಯಾವುದು ಯಾವುದನ್ನು ಅನುಸರಿಸ ಬೇಕು? ಇದು ಈಗ ಚರ್ಚೆಗೆ ಒಳಗಾಗುತ್ತಿದೆ. ಮಾತಾಡಿದಂತೆಯೇ ಬರೆಯುವುದಾಗಲೀ ಬರೆದಂತೆಯೇ ಮಾತಾಡುವುದಾಗಲೀ ಎಂದೂ ಆಗದ ಮಾತು. (ಕರಾವಳಿಯಲ್ಲಿ ಕನ್ನಡ ಮಾತಾಡುವವರು ಬರೆದಂತೆಯೇ ಮಾತಾಡುತ್ತಾರೆ ಎಂದು ತಿಳಿದಿರುವವರು ಇದ್ದಾರೆ. ಆದರೆ ಅದು ಹಾಗಿಲ್ಲ ಎಂಬುದೇ ದಿಟ) ಆದರೂ ಬರೆಯುವವರು ಮತ್ತು ಓದುವವರೂ ಹೆಚ್ಚುತ್ತಿರುವ ಈ ಹೊತ್ತಿನಲ್ಲಿ ಬರಹ, ಮಾತಿಗೆ ಹತ್ತಿರವಾಗಿರಬೇಕೆಂಬ ನಿಲುವನ್ನು ತಳೆಯುವುದರಲ್ಲಿ ತಪ್ಪೇನೂ ಇಲ್ಲ.

ದನಿ, ಪದ ಮತ್ತು ವಾಕ್ಯ ಈ ಮೂರು ನೆಲೆಗಳಲ್ಲಿ ಬರಹ ಮಾತಿನಿಂದ ಬೇರೆಯಾಗುತ್ತಿದೆ. 1.ಮಾತಿನಲ್ಲಿ ಇರುವ ಕೆಲವು ದನಿಗಳಿಗೆ ಬರಹದಲ್ಲಿ ಲಿಪಿ ಗುರುತುಗಳೇ ಇಲ್ಲ. ಅಲ್ಲದೆ ಲಿಪಿ ಗುರುತುಗಳಿರುವ ಎಷ್ಟೋ ದನಿಗಳನ್ನು ಮಾತಿನಲ್ಲಿ ಬಳಸುವುದೇ

ಇಲ್ಲ. 2. ಕೆಲವು ಪದಗಳನ್ನು ನಾವು ನುಡಿಯುವ ಬಗೆಗೂ ಅದನ್ನು ಬರೆಯುವ ಬಗೆಗೂ ಹೊಂದಿಕೆಯಾಗುತ್ತಿಲ್ಲ. 3.ಜೊತೆಗೆ ಮಾತಿನಲ್ಲಿ ವಾಕ್ಯಗಳನ್ನು ಕಟ್ಟುವ ನೆಲೆ ಬರಹದಲ್ಲಿ ವಾಕ್ಯಗಳು ಮೈತಳೆಯುವ ನೆಲೆಗಳು ಬೇರೆಬೇರೆಯಾಗಿರುತ್ತವೆ. ಹೀಗಿರುವಾಗ ಮಾತು ಮತ್ತು ಬರಹಗಳನ್ನು ಹೊಂದಿಸುವುದು ಹೇಗೆ ಎಂಬ ಗೊಂದಲ ಕಾಡುತ್ತದೆ.

ಈ ಗಂಟನ್ನು ಬಿಡಿಸಿಕೊಳ್ಳಲು ತಕ್ಕ ಹಾದಿಯೊಂದನ್ನು ಹುಡುಕಬೇಕಿದೆ. ಒಂದು ಹೋಲಿಕೆಯನ್ನು ನೋಡೋಣ. ಬಿಜಾಪುರದವರು ಮಾತಾಡುವ ಕನ್ನಡ ಮತ್ತು ಚಾಮರಾಜನಗರದವರು ಮಾತಾಡುವ ಕನ್ನಡ ಬೇರೆಬೇರೆ ಎಂಬಂತೆ ಕೇಳುತ್ತದೆ. ಅರಿತುಕೊಳ್ಳಲು ಮುಂದಾಗದಿದ್ದರೆ ಬಿಜಾಪುರದ ಕನ್ನಡ ನನಗೆ ತಿಳಿಯುವುದಿಲ್ಲ ಎಂದು ಚಾಮರಾಜನಗರದವರು ಮೊಗದಿರುಹಿ ನಡೆಯಬಹುದು. ಆದರೆ ದಿಟವಾಗಿ ಹಾಗಾಗುವುದಿಲ್ಲ. ಕನ್ನಡ ನುಡಿಯುವವರು ತಾವು ಮಾತಾಡುವ ಕನ್ನಡದ ಒಳನುಡಿಯ ಜತೆಗೆ ಇನ್ನೂ ಹಲವು ಕನ್ನಡ ಒಳನುಡಿಗಳನ್ನು ಕೇಳಿ ಅರಿತುಕೊಳ್ಳುವ ಚಳಕವನ್ನು ಕಲಿತುಕೊಂಡಿರುತ್ತಾರೆ. ಬೇರೆ ಕನ್ನಡ ಒಳನುಡಿಗಳಲ್ಲಿ ತಾವೆ ನುಡಿಯದೇ ಹೋದರೂ ಅದನ್ನು ಕೇಳಿಸಿಕೊಂಡು ಅರಿತುಕೊಳ್ಳಬಲ್ಲರು. ಬರಹ ಮತ್ತು ಮಾತು ಇವೆರಡನ್ನೂ ಕನ್ನಡದ ಎರಡು ಒಳನುಡಿಗಳೆಂದು ತಿಳಿಯೋಣ. ಮಾತಾಡುವ ಎಲ್ಲರೂ ಬರೆಯದಿದ್ದರೂ ಓದುವವರಾಗಿರುತ್ತಾರೆ. ಬರೆಯುವವರಂತೂ ಮಾತಾಡುವವರೂ ಆಗಿರುತ್ತಾರೆ. ಅಂದರೇನಾಯ್ತು? ಬರಹವೆಂಬ ಒಳನುಡಿಯನ್ನು ಮಾತಾಡುವವರು ಓದಿ ತಿಳಿಯುವ ಚಳಕವನ್ನು ಕಲಿಯುತ್ತಾರೆ.(ತಾವೇ ಬರೆಯುವುದನ್ನು ಕಲಿಯಲೂ ಬಹುದು. ಕಲಿತರೂ ಬಳಸದೇ ಹೋಗಬಹುದು)

ಮೇಲೆ ಹೇಳಿದ ಹೋಲಿಕೆಯನ್ನು ಕೊಂಚ ಮುಂದುವರೆಸೋಣ. ಬಿಜಾಪುರದ ಕನ್ನಡ ಒಳನುಡಿಯನ್ನು ಬಳಸುವವರು ತಮ್ಮ ಮಾತನ್ನು ಕೇಳಸಿಕೊಳ್ಳುತ್ತಿರುವವರು ಚಾಮರಾಜನಗರದವರೋ ಕೋಲಾರದವರೋ ಎಂದು ತಿಳಿದಾಗ ತಮ್ಮ ಒಳನುಡಿಯ ಕಚ್ಚಾಗುರುತುಗಳನ್ನು ಕೊಂಚ ಕಡಿಮೆಮಾಡಿ ಕೇಳಿಸಿಕೊಳ್ಳುತ್ತಿರುವವರಿಗೆ ತಿಳಿಯುವ ಬಗೆಯಲ್ಲಿ ಪದಗಳನ್ನು ಸೇರಿಸುವುದು, ನುಡಿಯುವ ಬಗೆಯಲ್ಲಿ ಬದಲು ಮಾಡಿಕೊಳ್ಳುವುದು ಮುಂತಾದ ಕೆಲಸಗಳನ್ನು ಮಾಡುತ್ತಿರುತ್ತಾರೆ. ಇನ್ನೂ ಮುಂದುವರೆದು ನೋಡಿದರೆ ಒಂದೊಮ್ಮೆ ಕೋಲಾರದವರು ಬಿಜಾಪುರದವರ ಒಳನುಡಿಯನ್ನು ಬಳಸಲು ಹೊರಟರೆ ಆಗ ಅವರ ಮಾತಿನ ವರಸೆಯಲ್ಲಿ ತಪ್ಪುಗಳಾಗುವುದಷ್ಟೆ. ಆದರೆ ಬಿಜಾಪುರದವರು ಆ ತಪ್ಪುಗಳನ್ನು ಒಪ್ಪಿ ಸಹಿಸಿಕೊಳ್ಳಬೇಕಾಗುತ್ತದೆ. ಬರಹ ಕೂಡ ಇದೇ ಬಗೆಯ ಬದಲಾವಣೆಗಳನ್ನು ಮಾಡಿಕೊಳ್ಳಬೇಕು ಎಂದು ತಿಳಿಯಬಹುದೇ? ಓದುವವರಿಗೆ ತೊಂದರೆಯಾಗದಂತೆ ತನ್ನ ಕಚ್ಚಾಗುರುತುಗಳನ್ನು ಬಿಟ್ಟುಕೊಡಲು ಬರಹ ಮುಂದಾಗಬೇಕು. ಬರೆಯುವವರು ತಮ್ಮ ಮಾತಿನ ಚಹರೆಗಳನ್ನು ಬರಹದಲ್ಲಿ ತಂದರೆ ಆಗ ಆ ಬಗೆಯ ಬರಹಗಳನ್ನು ತಾಳಿಕೊಳ್ಳಬೇಕಾಗುತ್ತದೆ. ಇದು ಒಂದು ನಡುವಣ ಹಂತ. ಮಾತಿನ ಸಮುದಾಯಗಳು ಬರಹ ಮತ್ತು ಮಾತು ಎಂಬ ಎರಡು ಒಳನುಡಿಗಳ ಬೇರುಗಳನ್ನು ಗಟ್ಟಿಗೊಳಿಸಿಕೊಳ್ಳುವವರೆಗೆ ಈ ಬಗೆಯ ಕೊಡುಕೊಳೆಗಳನ್ನು ತಾಳಿಕೊಳ್ಳಬೇಕಾಗುತ್ತದೆ.

ಸರಿತಪ್ಪುಗಳನ್ನು ಹುಡುಕುವವರು ಮಾತನ್ನು ಗುರಿಯನ್ನಾಗಿ ಇರಿಸಿಕೊಳ್ಳುವುದಿಲ್ಲ. ಹೆಚ್ಚಾಗಿ ಬರಹವನ್ನು ಗುರಿಯಾಗಿಟ್ಟುಕೊಳ್ಳುತ್ತಾರೆ. ಬರಹದಲ್ಲಿ ಬಳಸಬೇಕಾದ ದನಿ ಗುರುತುಗಳನ್ನು ಲಿಪಿ ರೂಪದಲ್ಲಿ ಸರಿಯಾಗಿ ಇರಿಸಬೇಕು. ಪದಗಳ ಬರಹ ರೂಪವೆಂಬುದು ನುಡಿಯುವಿಕೆಗೆ ಹತ್ತಿರವಾಗಿರದೆ, ಬರಹದಲ್ಲಿ ಒಪ್ಪಿಕೊಂಡ ಬಗೆಗೆ ಹತ್ತಿರವಾಗಿರಬೇಕೆಂಬ ಬಯಕೆಯನ್ನು ಮುಂದಿಡುತ್ತಾರೆ. ಶಾಲೆಗಳಲ್ಲಿ ಕಲಿಸುವವರ ನೆಲೆ ಹೀಗೆಯೇ ಇರುವುದಷ್ಟೆ. ದನಿಗಳ ನೆಲೆಯಲ್ಲಿ ಮಹಾಪ್ರಾಣಗಳೆಂಬ ದನಿಗಳ ಲಿಪಿಗುರುತುಗಳನ್ನು ಬರಹದಲ್ಲಿ ಬಿಡದೇ ಬಳಸುತ್ತಿದ್ದೇವೆ. ಮಾತಿನಲ್ಲಿ ಆ ದನಿಗಳ ಬಳಕೆ ನಾವು ತಿಳಿದಿರುವ ಬಗೆಯಲ್ಲಿ ಇಲ್ಲ. ಮಾತಿನ ಚಹರೆಗಳನ್ನು ಬರಹದಲ್ಲಿ ತರುವವರು ತಮ್ಮ ಬರವಣಿಗೆಯಲ್ಲಿ ಮಾಹಾಪ್ರಾಣಗಳ ಲಿಪಿಗುರುತುಗಳನ್ನು ಸರಿಯಗಿ ಬಳಸುತ್ತಿಲ್ಲ. ಹೀಗಾದಾಗ ಏನು ಮಾಡಬೇಕು? ಇದರಿಂದ ಹೊರಬರಲು ಎರಡು ದಾರಿಗಳಿವೆ. ಒಂದು: **ಮಹಾಪ್ರಾಣಗಳ ಲಿಪಿಗುರುತುಗಳನ್ನು ಬರೆಯುವಾಗ ತಪ್ಪು ಮಾಡುವುದುನ್ನು ತಾಳಿಕೊಳ್ಳುವುದು**( ಬಿಜಾಪುರದವರು ಕೋಲಾದರವರನ್ನು ತಾಳಿಕೊಂಡಂತೆ) ಎರಡು: **ಮಹಾಪ್ರಾಣಗಳಿರುವ ಪದಗಳನ್ನೇ ಬರಹದಲ್ಲಿ ಕಡಿಮೆ ಮಾಡುವುದು**. ನಮಗೆ ಗೊತ್ತಿರುವಂತೆ ಮಹಾಪ್ರಾಣಗಳನ್ನು ನಾವು ಮತ್ತೊಂದು ನುಡಿಯಿಂದ ಪಡೆದುಕೊಂಡ ಪದಗಳಲ್ಲೇ ಹೆಚ್ಚು ಬಳಸುವುದು. ಇಂಗ್ಲಿಶ್. ಪರ್ಸೋ ಅರಾಬಿಕ್ ಪದಗಳಲ್ಲಿ ಗೊಂದಲ ಹೆಚ್ಚಿಲ್ಲ. ಸಂಸ್ಕೃತ ಪದಗಳಲ್ಲಿ ಕಟ್ಟುಪಾಡು ಹೆಚ್ಚಿದೆ. ಅಂತಹ ಪದಗಳ ಬದಲು ಹೊಂದುವ ಕನ್ನಡ ಪದಗಳನ್ನೇ ಬಳಸಿದರೆ ಬರಹದಲ್ಲಿ ಆಗುವ ಲಿಪಿಗುರುತಿನ 'ತಪ್ಪು'ಗಳು ಇಲ್ಲವಾಗುತ್ತವೆಯಲವ್ಲೇ? ಈ ನೆಲೆಯ ಮತ್ತಷ್ಟು ಮಾತುಗಳನ್ನು ಮುಂದೆ ಬರೆಯುತ್ತೇನೆ.

**ವಾಸಿ**

ಕೆಲವು ದಿನಗಳ ಹಿಂದೆ ಟಿವಿ ಚಾನೆಲ್ ಒಂದರಲ್ಲಿ ಕೇಳಿದ/ಕಂಡ ವಾಕ್ಯ ಹೀಗಿತ್ತು: **ತಕ್ಕ ಚಿಕಿತ್ಸೆ ದೊರೆತು ಅವರು ವಾಸಿಯಾಗಿದ್ದಾರೆ**. ಈ ವಾಕ್ಯ ಕೇಳಿದಾಗ/ ಓದಿದಾಗ ಅದರಲ್ಲಿ ಏನೋ ಸರಿಯಿಲ್ಲ ಎಂದು ತೋರುತ್ತದೆ. ಏನದು ಎನ್ನುವುದನ್ನು ನೊಡೋಣ. **ವಾಸಿ** ಎಂಬ ಪದವನ್ನು ಬಳಸಿರುವ ಇನ್ನೊಂದು ವಾಕ್ಯವನ್ನು ನೋಡಿ; **ಚಿಕಿತ್ಸೆಯಿಂದ ಅವರಿಗೆ ರೋಗ ವಾಸಿಯಾಗಿದೆ**. ಈ ಎರಡನೆಯ ವಾಕ್ಯ ಕನ್ನಡದ ಕಟ್ಟುಗಳಿಗೆ ತಕ್ಕಹಾಗಿದೆ. **ವಾಸಿ** ಪದಕ್ಕೆ ಇರುವ ತಿರುಳನ್ನು ಆಮೇಲೆ ನೊಡೋಣ. ಆದರೆ ಅದನ್ನು ವಾಕ್ಯದಲ್ಲಿ ಬಳಸುವಾಗ ಒಂದು ಕಟ್ಟು ಇದೆ. **ವಾಸಿಯಾಗು** ಎಂಬ ಕೆಲಸ ಪದವನ್ನು ವಾಕ್ಯದ ನಿಯೋಗಿ ಇಲ್ಲವೇ ಮಾಡುಗರಿಗೆ ಹೊಂದುವಂತೆ ಬಳಸಲಾಗುವುದಿಲ್ಲ. ಅಂದರೆ ವಾಕ್ಯದಲ್ಲಿ ಯಾರಿಗೆ ರೋಗ ಬಂದಿರುತ್ತದೆಯೋ ಇಲ್ಲವೆ ಗಾಯವಾಗಿರುತ್ತದೆಯೋ ಅವರು ವಾಸಿಯಾದರು ಎಂದು ಹೇಳಲಾಗುವುದಿಲ್ಲ. ರೋಗ ವಾಸಿಯಾಯಿತು ಇಲ್ಲವೇ ಗಾಯ ವಾಸಿಯಾಯಿತು ಎಂದು ಮಾತ್ರ ಹೇಳಬೇಕು. ಟಿವಿ ಚಾನೆಲ್‌ನವರು ಸರಿಯಲ್ಲದ ವಾಕ್ಯವನ್ನು ಬರೆದದ್ದು ಏಕೆ? ಅದಕ್ಕೆ ಕನ್ನಡದಲ್ಲಿ ಇರುವ ಇನ್ನೊಂದು ವಾಸಿ ಎಂಬ ಪದವೇ ಕಾರಣ. ವಾಸ ಮಾಡುವವರು ಎಂಬ ತಿರುಳಿನಲ್ಲಿ ವಾಸಿ ಎಂಬ ಪದವಿದೆಯಷ್ಟೆ ನಗರವಾಸಿ, ದೇಶವಾಸಿ ಎಂಬ ಪದರಚನೆಗಳಲ್ಲಿ ಈ ವಾಸಿ ಪದವಿದೆ. ವಾಸಿ ಎಂಬ ಈ ಪದವನ್ನು ವಾಕ್ಯದಲ್ಲಿ ಬಳಸಿದಾಗ ಅದು

ಮಾಡುಗರನ್ನು ಕುರಿತು ಬಳಕೆಯಾಗಬಹುದು. ಉದಾಹರಣೆಗೆ ಮುಂದಿನ ವಾಕ್ಯ ನೋಡಿ. **ಅವರು ಕೈಲಾಸವಾಸಿಯಾದರು.** ಎರಡೂ ವಾಸಿಗಳು ಬೇರೆಬೇರೆ ಎಂದು ತಿಳಿಯದೇ ಹೋಗಿ ಈ ಬಳಕೆಯ ಗೊಂದಲ ಉಂಟಾದಂತೆ ತೋರುತ್ತದೆ.

ಮೊದಲ ವಾಕ್ಯದಲ್ಲಿ ಬಳಕೆಯಾದ ವಾಸಿ ಪದಕ್ಕೆ ಹಲವಾರು ತಿರುಳುಗಳಿವೆ. ಕನ್ನಡ–ಕನ್ನಡ ನಿಘಂಟು ಹದಿನಾಲ್ಕು ತಿರುಳುಗಳನ್ನು ಪಟ್ಟಿ ಮಾಡುತ್ತದೆ. ಆದರೆ ಈಗ **ಮೇಲು, ಸುಧಾರಿಸು** ಎಂಬ ತಿರುಳಿನ ಬಳಕೆಯೇ ಹೆಚ್ಚಿದೆ. ಈ ತಿರುಳು ಕೂಡ ಈಚೆಗೆ ಈ ಪದಕ್ಕೆ ಒದಗಿ ಬಂದಿದೆ. ಹಳೆಯ ಬಳಕೆಗಳಲ್ಲಿ ಈ ತಿರುಳು ಕಾಣುವುದಿಲ್ಲ. ಹೋಲಿಕೆ ಮಾಡುವಾಗ ಈ ಪದವನ್ನು ಬಳಸುವುದುಂಟು. **ಅವರಿವರ ಮಾತು ಕೇಳುವುದಕ್ಕಿಂತ ಸುಮ್ಮನೆ ಇರುವುದೇ ವಾಸಿ** ಎನ್ನುವ ವಾಕ್ಯದಲ್ಲಿ ವಾಸಿಗೆ ಈ ತಿರುಳಿದೆ. **ಆಗು, ಮಾಡು** ( ವಾಸಿಯಾಗು, ವಾಸಿ ಮಾಡು)ಎಂಬ ನೆರವಿನ ಪದಗಳೊಂದಿಗೆ ವಾಸಿಯನ್ನು ಕೆಲಸಪದವನ್ನಾಗಿಯೂ ಬಳಸುತ್ತೇವೆ. ಇಲ್ಲಿಯೂ ಮೇಲಾಗು, ಉತ್ತಮಗೊಳ್ಳು ಎಂಬ ತಿರುಳೇ ಇರುತ್ತದೆ.

**ಚೊರಿ ಎಂಬುದು ಎಲ್ಲಿಂದ ಬಂತು**

ಭರತ್ ಕುಮಾರ್ (ಬೆಂಗಳೂರು) ಅವರ ಕೇಳ್ವಿಯೊಂದಿದೆ. ತೆಂಕು ನಾಡಿನಲ್ಲಿ (ಮೈಸೂರು,ಮಂಡ್ಯ, =ನಂಜನಗೂಡು ಮುಂತಾದ ಕಡೆ) **ಆಚೊರಿ (=ಆಕಡೆ), ಈಚೊರಿ (=ಈ ಕಡೆ) ಮುಂಚೊರಿ (=ಮುಂದುಗಡೆ), ಹಿಂಚೊರಿ (=ಹಿಂದುಗಡೆ)** ಮುಂತಾದ ಪದಗಳನ್ನು ಬಳಸುತ್ತಾರಲ್ಲ. ಅಲ್ಲಿರುವ ಚೊರಿ ಎಂಬುದು ಎಲ್ಲಿಂದ ಬಂತು ಎನ್ನುವುದು ಅವರ ಕೇಳ್ವಿ. **ಚೊರಿ** ಎನ್ನುವುದು ಕೆಲವರ ಬಾಯಲ್ಲಿ **ಚೋರಿ** ಎಂದಾಗುವುದುಂಟು. ಮಂಡ್ಯ ಮದ್ದೂರು ಕಡೆಯಲ್ಲಿ ಅದು ಕೇವಲ **ಚರಿ** ಎಂದಷ್ಟೇ ಕೇಳುತ್ತದೆ. ಕನ್ನಡದ ಬೇರೆ ಒಳನುಡಿಗಳಲ್ಲಿ ಈ ಬಳಕೆಯನ್ನು ನಾನು ಕೇಳಿಲ್ಲ. ದ್ರಾವಿಡ ನುಡಿಗಳಲ್ಲಿ ಅದರಲ್ಲೂ ತೆಂಕು ದ್ರಾವಿಡ ನುಡಿಗಳಲ್ಲಿ **ಚಾರ್** ಎಂಬ ಪದಬೇರು ಇದೆ. ಇದು ಕೆಲಸ ಪದವಾಗಿ ಮತ್ತು ಕೆಲವೊಮ್ಮೆ ಹೆಸರು ಪದವಾಗಿ ಕೆಲಸ ಮಾಡಬಲ್ಲುದು. ತಮಿಳಿನಲ್ಲಿ **ಬದಿ, ಪಕ್ಕ** ಎಂಬ ತಿರುಳಿನಲ್ಲಿ ಈ ಪದ ಬಳಕೆಯಲ್ಲಿದೆಯೆಂದು ತಿಳಿದು ಬರುತ್ತದೆ. ಕನ್ನಡದಲ್ಲಿ ಈ ಪದ ಬೇರೆ ತಿರುಳು ಪಡೆದು **ಸಾರು** (=ಹತ್ತಿರ ಬರು) ಎಂದು ಬಳಕೆಯಾಗುತ್ತಿದೆ. ಉದಾಹರಣೆಗೆ: **ನಾವಿಕರು ನಿಧಾನವಾಗಿ ದ್ವೀಪದ ಬಳಿ ಸಾರಿದರು.** ಸಾರ್ ಎಂಬುದು ಕನ್ನಡದಲ್ಲಿ ಹೆಸರುಪದವಾಗಿಯೂ ಬಳಕೆಯಾಗಬಹುದು. **ಸರಿ, ಸರಿಸು, ಜರಿ, ಜರುಗು** ಇವೆಲ್ಲವೂ ಈ ಪದದಿಂದ ಹುಟ್ಟಿಕೊಂಡಿವೆ. ಇದರಿಂದಲೂ ಈ ಪದ ತೆಂಕು ದ್ರಾವಿಡ ನುಡಿಗಳ ಚಾರ್ ಪದಬೇರಿಗೆ ಸೇರಿದ್ದೆಂದು ತಿಳಿಯಬಹುದು. ದ್ರಾವಿಡ ನುಡಿಗಳ **ಚಾರ್** ಎಂಬುದೇ ತೆಂಕಣ ಸೀಮೆಯ ಕನ್ನಡದ ಒಳನುಡಿಗಳಲ್ಲಿ **ಚಾರಿ, ಚೊರಿ, ಚೋರಿ** ಎಂದು ಬಳಕೆಯಾಗುತ್ತಿದೆ ಎಂದು ತೋರುತ್ತದೆ.

**ಈ ವಾಕ್ಯ ಸರಿಯೇ?**

ಅನುರಾಧ ವಿ (ಚಿತ್ರದುರ್ಗ) ಇವರು ಪತ್ರಿಕೆಯೊಂದರಲ್ಲಿ ಕಂಡ ವಾಕ್ಯವನ್ನು ಬರೆದು ಅದು ಸರಿ ಇದೆಯೇ ಎಂದು ಕೇಳಿದ್ದಾರೆ. ವಾಕ್ಯ ಹೀಗಿದೆ: **'ಯಾರಿಗೆ ಗೊತ್ತು?**

**ಮುಂಬರುವ ದಿನಗಳೇ ಹಿಂದೆಂದಿಗಿಂಲೂ ಅತ್ಯುತ್ತಮ ಎನಿಸತೊಡಬಹುದು'** ಇಲ್ಲಿ **ಎನಿಸತೊಡಗಬಹುದು** ಎಂದು ಇರಬೇಕು. ಬರೆದವರ ಇಲ್ಲವೇ ಅಚ್ಚು ಮಾಡಿದವರ ಕಣ್ತಪ್ಪಿನಿಂದ ಹೀಗಾಗಿದೆ. ಆದರೆ ಈ ವಾಕ್ಯದ ಮೊದಲಲ್ಲಿ ಒಂದು ದಿಟವಾದ ಕೇಳ್ವಿ ಇದೆಯೇ? ಇದು ಬದಲನ್ನು ಬಯಸುವ ಕೇಳ್ವಿಯಲ್ಲ. ಅಂದರೆ ಆ ಕೇಳ್ವಿಗೆ **ಯಾರಿಗೋ ಗೊತ್ತು** ಇಲ್ಲವೇ **ಯಾರಿಗೂ ಗೊತ್ತಿಲ್ಲ** ಎಂಬ ಬದಲನ್ನು ನಾವು ನೀಡುವುದಿಲ್ಲ. ಮಾತಿನ ವರಸೆಯಲ್ಲಿ ಹೀಗೆ ಬರೆಯುವುದು, ನುಡಿಯುವುದು ಬಳಕೆಗೆ ಬಂದಿದೆ. ಇವು ದಿಟವಾದ ಕೇಳ್ವಿಗಳಲ್ಲ. ಕನ್ನಡದಲ್ಲಿ ಹೀಗೆ ಕೇಳ್ವಿ ಪದಗಳನ್ನು ಬಳಸಿ ಕೇಳ್ವಿಗಳಲ್ಲದ ನುಡಿಗಳನ್ನು ಕಟ್ಟುವ ಬಗೆಯಿದೆ. **ಎಲ್ಲಿ ನೋಡಿದರೂ ಬಿಸಿಲೋ ಬಿಸಿಲು** ಎನ್ನುವ ವಾಕ್ಯದಲ್ಲಿ ಇರುವ **ಎಲ್ಲಿ** ಎಂಬುದು ಕೇಳ್ವಿ ಪದವಾದರೂ ಅದಿಲ್ಲಿ ಆ ನೆಲೆಯಲ್ಲಿ ಬಳಕೆಯಾಗಿಲ್ಲ. ಹಾಗಾಗಿ **ಎಲ್ಲಿ, ಹೇಗೆ, ಯಾವ, ಯಾರು, ಎಲ್ಲಿ, ಎಷ್ಟು,ಎಂತಹ** ಮುಂತಾದ ಪದಗಳಿಗೆ ಕನ್ನಡದಲ್ಲಿ ಕೇಳ್ವಿಗಳನ್ನು ಕಟ್ಟುವ ಕೆಲಸವಲ್ಲದೆ ಬೇರೆ ಕೆಲಸಗಳು ಇವೆ. ಶಾಲೆಯ ವ್ಯಾಕರಣಗಳನ್ನು ಬರೆಯುವವರು ಇದನ್ನು ಮಕ್ಕಳಿಗೆ ತಿಳಿಸಿಕೊಡಬೇಕು.

ಇದಲ್ಲದೆ **ಎನಿಸು** ಎಂಬ ಕೆಲಸಪದವನ್ನು ನೋಡೋಣ. **ಮನಸ್ಸಿಗೆ ತೋರು** ಎಂಬ ತಿರುಳಿನೊಡನೆ ಈ ಕೆಲಸಪದ ಬಳಕೆಯಾಗ ತೊಡಗಿರುವುದು ಈಚೆಗೆ. **ಎನ್** (=ಹೇಳು) ಎಂಬ ಕೆಲಸಪದ ಇದ್ದಿತಾದರೂ ಅದರಿಂದ **ಎನ್ನು, ಎನ್ನಿಸು, ಎನಿಸು** ಪದಗಳನ್ನು ಕಟ್ಟಿಕೊಂಡಿದ್ದು ಮತ್ತು **ತೋರು** ಎಂಬ ತಿರುಳನ್ನು ನೀಡಿದ್ದು ಹೊಸ ಬೆಳವಣಿಗೆ. ಇದರ ಜೊತೆಗೆ **ಅನಿಸು** ಎಂಬ ಇನ್ನೊಂದು ಕೆಲಸ ಪದವೂ ಇದೆ. **ಎನಿಸು** ಮತ್ತು **ಅನಿಸು** ಕೆಲಸ ಪದಗಳನ್ನು ಒಂದರ ಬದಲು ಇನ್ನೊಂದನ್ನು ಬಳಸುವುದುಂಟು. **ಅನಿಸು** ಪದವನ್ನು **ತೋರು** ಎಂಬ ತಿರುಳಿನೊಡನೆ ಈಚೆಗೆ ಬಳಸುತ್ತಿದ್ದಾರೆ. ಅನಿಸು ಕೆಲಸಪದಕ್ಕೆ **ಬೇರೆಯವರಿಂದ ಬೈಸಿಕೋ, ತೆಗಳಿಕೆಯಮಾತನ್ನು ಹೇಳಿಸು** ಎಂಬ ತಿರುಳೂ ಇದೆ. **'ನಿನ್ನ ಮಾತು ಕೇಳಿ ನಾನು ಅವರಿಂದ ಅನಿಸಿಕೊಂಡೆ'** ಎಂಬ ವಾಕ್ಯವನ್ನು ನೋಡಿ. ಇಲ್ಲಿ ಎನಿಸು ಎಂಬುದನ್ನು ಅನಿಸು ಪದಕ್ಕೆ ಬದಲಾಗಿ ಬಳಸಲು ಆಗುವುದಿಲ್ಲ.

ಅನ್-/ಎನ್- ಕೆಲಸ ಪದಗಳಿಗೆ ಇಸು ಸೇರಿದಾಗ **ಅನ್ನಿಸು/ಎನ್ನಿಸು** ಎಂದಾಗ ಬೇಕು. ಇದು ಕನ್ನಡ ದನಿರಚನೆಯ ಕಟ್ಟು. **ತಿನ್>ತಿನ್ನಿಸು,** (ತಿನಿಸು ಪದಕ್ಕೆ ಬೇರೆಯೇ ತಿರುಳು ಬರುತ್ತದೆ. ಅದು ಹೆಸರು ಪದವಾಗಿಬಿಡುತ್ತದೆ) **ಗೆಲ್>ಗೆಲ್ಲಿಸು, ಕೊಲ್>ಕೊಲ್ಲಿಸು** ಮುಂತಾದ ಪದಗಳನ್ನು ನೋಡಿ. ಆದರೂ ಅನಿಸು/ಎನಿಸು ಈಗ ಬಳಕೆಗೆ ಬಂದುದು ಹೇಗೆ? ಕೆಲವರು ಅನ್ನಿಸು/ಎನ್ನಿಸು ಪದಗಳನ್ನೇ ಬಳಸುವುದುಂಟು. ಇದು ಬೇರೊಂದು ಟಿಪ್ಪಣಿಯಲ್ಲಿ ಚರ್ಚಿಸಬೇಕಾದ ಮಾತು.

**ಕದ್ದಿಂಗಳು ಪದದಲ್ಲಿ ಕದಿ ಇದೆಯೇ?**

ರಘುನಾಥರಾವ್ ತಾಪ್ಸೆ( ದಾವಣಗೆರೆ) ಇವರು **ಕದ್ದಿಂಗಳು** ಪದದಲ್ಲಿ **ಕದಿ** ಇದೆಯೇ ಎಂದು ಕೇಳಿದ್ದಾರೆ. ಕದಿ ಎಂಬ ಕೆಲಸ ಪದಕ್ಕೆ ಕಳ್ಳತನ ಮಾಡು ಎಂಬ ತಿರುಳಿದೆ. ಇದು ಕನ್ನಡದಲ್ಲಿ ನೆಲೆಗೊಂಡದ್ದಕ್ಕೆ ಬೇರೆಯೇ ಕತೆ ಇದೆ. ಅದು ಹಾಗಿರಲಿ. ಕದ್ದಿಂಗಳು ಪದದಲ್ಲಿ ಕದಿ ಇಲ್ಲ. ಇದು ಹಿಂದೆ ಬಳಕೆಯಲ್ಲಿದ್ದ **ಕರ್ದಿಂಗಳ್** ಪದದ

ಇಂದಿನ ರೂಪ. ಕರ್ದಿಂಗಳ್ ಪದದಲ್ಲಿ **ಕರ್**(=ಕಪ್ಪು) ಮತ್ತು **ತಿಂಗಳ್** (=ಚಂದ್ರ) ಪದಗಳಿವೆ. ಅಮಾವಾಸ್ಯೆಯ ಕತ್ತಲನ್ನು ಹೀಗೆ **ಕರ್ದಿಂಗಳು**> **ಕದ್ದಿಂಗಳು** ಎಂದು ಬಣ್ಣಿಸುವುದುಂಟು. ಚಂದ್ರನಿಲ್ಲದ ಇರುಳು ಎಂಬುದಕ್ಕೆ ಕಪ್ಪಾದ ಚಂದ್ರನಿರುವ ಇರುಳು ಎನ್ನುವುದು  ವಾಡಿಕೆಯ ಮಾತು. ಎರಡನೆಯ ಪದದ ಮೊದಲಲ್ಲಿರುವ **ತ್** ದನಿ **ದ್** ಆಗಿದ್ದು ,ಮೊದಲನೆಯ ಪದದ ಕೊನೆಯಲ್ಲಿರುವ **ರ್** ಬಳಿಕ **ದ್** ಆಗಿದ್ದು ಕನ್ನಡದ ದನಿರಚನೆಯ ಕಟ್ಟುಗಳಿಗೆ ತಕ್ಕಂತೆ ಆಗಿರುವ ಬದಲಾವಣೆಗಳು. ಅದೇನೇ ಇರಲಿ ಹಾಡು ಹಗಲೇ ಊಟ ಮಾಡಲು ಆಗುವಾಗ ಕದಿಯಲು ಕದ್ದಿಂಗಳಿಗೆ ಕಾಯಬೇಕಿಲ್ಲವಲ್ಲ.

**ಲಿಂಬು** ಮತ್ತು **ಲೆಮನ್** ಪದಗಳಿಗೆ ನಂಟು ಇದೆಯೇ?

ಶಾಂತಲಾ ಎಂ. ( ರಾಯಚೂರು ) ಇವರು **ನಿಂಬೆ/ಲಿಂಬೆ** ಪದಗಳನ್ನು ಕೊಟ್ಟು ಈ ಪದಗಳಿಗೂ **ಲಿಂಬು** (=ಹಿಂದಿ) ಮತ್ತು **ಲೆಮನ್** (=ಇಂಗ್ಲಿಶ್) ಪದಗಳಿಗೂ ನಂಟು ಇದೆಯೇ ಎಂದು ಕೇಳಿದ್ದಾರೆ. ಮೊದಲನೆಯದಾಗಿ ನಿಂಬೆ/ಲಿಂಬೆ ಪದಗಳು ದ್ರಾವಿಡ ನುಡಿಗಳಿಗೆ ಸೇರಿದ ಪದಗಳಲ್ಲ ಎಂಬುದನ್ನು ಗುರುತಿಸಿಕೊಳ್ಳೋಣ. ಆದರೆ ಪದದ ಮೊದಲಲ್ಲಿ **ನ್** ಬದಲು **ಲ್** ಬರುವ ಬದಲಾವಣೆ ಕನ್ನಡದ್ದೇ ಎಂದು ಹೇಳಲು ಪುರಾವೆಗಳಿಲ್ಲ. ಆದರೆ ಲಿಂಗ/ನಿಂಗ ಪದಗಳಲ್ಲೂ ಇದೇ ಬಗೆ ಕಂಡು ಬರುತ್ತದೆ. ಇದು ಯಾವುದೋ ಒಂದೆರಡು ಪದಗಳಲ್ಲಿ ಕಂಡು ಬಂದಿರುವ ಏರುಪೇರುಗಳೇನೋ ಎಂದು ಸುಮ್ಮನಾಗಬಹುದು. ಆದರೆ ಕನ್ನಡ ಕೆಲವು ಒಳ ನುಡಿಗಳಲ್ಲಿ ಅದರಲ್ಲೂ ಬಳ್ಳಾರಿ, ರಾಯಚೂರು, ಗುಲ್ಬರ್ಗಾ ಕಡೆಯ ಒಳನುಡಿಗಳಲ್ಲಿ **ಇನ್** ಎಂಬ ಪದಭಾಗ **ಇಲ್** ಎಂದಾಗುವುದನ್ನು ನೋಡುತ್ತೇವೆ. ಅಂದರೆ ನ್>ಲ್ ಆಗುತ್ತಿದೆ.) ಊರ್ನಿಂದ>ಊರ್ಲಿಂದ, ಬಸ್ನಿಂದ>ಬಸ್ಲಿಂದ, ಜೇಬ್ನಿಂದ>ಜೇಬ್ಲಿಂದ ಹೀಗೆ. ಹಾಗಾಗಿ ಇದನ್ನು ಇನ್ನಷ್ಟು ಬಿಡಿಬಿಡಿಯಾಗಿ ನೋಡಬೇಕಿದೆ. ಇನ್ನು ತಿರುಳಿನ ಮಾತು. ಇದು ಕನ್ನಡದ ಪದ ಅಲ್ಲದಿರುವುದರಿಂದ ಸಂಸ್ಕೃತ ಮತ್ತು ಅದರ ನಂಟಿರುವ ನುಡಿಗಳಲ್ಲಿ ಇರುವ ತಿರುಳೇ ಕನ್ನಡದಲ್ಲೂ ಬಳಕೆಯಲ್ಲಿದೆ ಎಂದಷ್ಟೇ ಹೇಳಬಹುದು.

**ಕಾಗುಣಿತದ ತಪ್ಪುಗಳು**

ಕನ್ನಡ ಬರವಣಿಗೆಯಲ್ಲಿ  ಕಾಣಿಸುವ ತಪ್ಪುಗಳನ್ನು ನೋಡುತ್ತಿದ್ದೆವು. ಕಾಗುಣಿತದ ತಪ್ಪುಗಳಲ್ಲಿ ಎರಡನೆಯ ಬಗೆಯನ್ನು ಈಗ ನೋಡೋಣ. ತೆರೆದುಲಿ(=ಸ್ವರ)ಗಳನ್ನು ಬರೆಯುವಾಗ ಗಿಡ್ಡ ಮತ್ತು ಉದ್ದ ತೆರೆದುಲಿಗಳ ಗುರುತುಗಳನ್ನು ಸರಿಯಾಗಿ ಬರೆಯದಿರುವುದು ಇನ್ನೊಂದು ಬಗೆಯ ತಪ್ಪು. ಉದ್ದ ತೆರೆದುಲಿಗಳ ಗುರುತುಗಳ ಬದಲು ಗಿಡ್ಡ ತೆರೆದುಲಿಗಳ ಗುರುತುಗಳನ್ನು ಬರೆಯುವುದು. ಉದಾ. **ಇಗ(=ಈಗ), ತೊಟ (=ತೋಟ)** . ಹೀಗಲ್ಲದೆ ಗಿಡ್ಡ ತೆರೆದುಲಿಗಳ ಗುರುತುಗಳ ಬದಲು ಉದ್ದದ ಗುರುತುಗಳನ್ನು ಬರೆಯುವುದು. ಉದಾ. **ನೀಜ (=ನಿಜ), ಹೋದೆ (=ಹೊದೆ)** ಈ ಬಗೆಯ ತಪ್ಪುಗಳನ್ನು ಬರೆದಾಗ ಬರಿಯ ತಿರುಳಿರುವ ಪದಗಳೇ ಎದುರಾಗಬಹುದು. ಆಗ ಆ ವಾಕ್ಯಗಳ ತಿರುಳೇ ಬದಲಾಗಿಡುತ್ತದೆ.

ಇದಲ್ಲದೆ ಎರಡು ಮುಚ್ಚುಲಿ(=ವ್ಯಂಜನ)ಗಳು ಒಟ್ಟಾಗಿ ಬಂದಾಗ ಅವುಗಳ ಗುರುತುಗಳನ್ನು ಸರಿಯಾಗಿ ಬರೆಯದಿರುವುದು ಇನ್ನೊಂದು ಬಗೆಯ ತಪ್ಪು. ಒಂದೇ ಮುಚ್ಚುಲಿ ಎರಡು ಬಾರಿ ಬಂದಿದ್ದರೆ ಆಗ ಉಂಟಾಗುವ ತಪ್ಪುಗಳು ಒಂದು ಬಗೆಯವು. ಎರಡು ಮುಚ್ಚುಲಿಗಳು ಬೇರೆ ಬೇರೆ ಆಗಿದ್ದರೆ ಆಗ ಅವೆರಡರ ಗುರುತುಗಳನ್ನು ಸರಿಯಾಗಿ ಬರೆಯದಿರುವುದು ಇನ್ನೊಂದು ಬಗೆಯ ತಪ್ಪು ಉದಾ.ಗೆ **ಒಬ(=ಒಬ್ಬ), ಕೋಟರೆ(= ಕೊಟ್ಟರೆ), ಸೊಲುಪ(=ಸ್ವಲ್ಪ), ನಿತ್ತಿಯ (=ನಿತ್ಯ), ನಿರ್ಗಮನ (ನಿರ್ಗಮನ).**

ಇಂತಹ ತಪ್ಪುಗಳು ಉಂಟಾಗಲು ಎರಡು ಕಾರಣಗಳಿದ್ದಂತೆ ತೋರುತ್ತದೆ. 1. ನಾವು ಮಾತಾಡುವ ಬಗೆಯನ್ನೇ ಬರಹದಲ್ಲೂ ಮೂಡಿಸಲು ಹೋದಾಗ ಇಂತಹ ತಪ್ಪುಗಳು ಆಗುವುದುಂಟು. ಬರೆಯಲು ಕಲಿತವರು ಪದವೊಂದರ ನುಡಿಯುವ ಗುರುತು ಮತ್ತು ಬರೆಯುವ ಗುರತು ಇವೆರಡನ್ನೂ ಬೇರೆಬೇರೆಯಾಗಿಯೇ ನೆನಪಿಟ್ಟುಕೊಳ್ಳಬೇಕು. ಬರಹದ ಗುರುತು ಸರಿಯಾಗಿ ಗೊತ್ತಿಲ್ಲದಿದ್ದರೆ ಇಲ್ಲವೇ ಮರೆತು ಹೋಗಿದ್ದರೆ ತಟ್ಟನೆ ನುಡಿಯುವ ಗುರುತನ್ನೇ ಬರಹದಲ್ಲಿ ಮೂಡಿಸಲು ಮುಂದಾಗುತ್ತೇವೆ. ಸರಿಯಾಗಿ ಓದಲು ಕಲಿತವರು ಸರಿಯಾಗಿ ಬರೆಯಲು ಕಲಿಯುತ್ತಾರೆ ಎನ್ನುವುದು ಕಲಿಸುವವರಲ್ಲಿ ಬೇರು ಬಿಟ್ಟಿರುವ ನಂಬಿಕೆ. ಇದು ಇಡಿಯಾಗಿ ಒಪ್ಪತಕ್ಕ ಮಾತಲ್ಲ. ತಪ್ಪಾಗಿ ಬರೆಯವವರು ಸರಿಯಾಗಿ ಓದುತ್ತಿರುವುದನ್ನು ಕಂಡಿದ್ದೇವೆ. ಹಾಗಾಗಿ ಓದುವಿಕೆ ಮತ್ತು ಬರೆಯುವಿಕೆಗಳು ಒಂದನ್ನೊಂದು ನೆಮ್ಮಿಕೊಂಡಂತೆ ತೋರುವುದಿಲ್ಲ. ಹಾಗೆಂದು ಅವೆರಡರ ನಡುವೆ ಯಾವ ನಂಟೂ ಇಲ್ಲ ಎಂದೇನೂ ತಿಳಿಯಬಾರದು. ಆದರೆ ಇವೆರಡೂ ಬೇರೆಬೇರೆ ಬಗೆಯ ಕೆಲಸಗಳು ಎಂದು ತಿಳಿದರೆ ಸಾಕು.

ನುಡಿಯುವಿಕೆಯಲ್ಲಿ ಹಲವು ಬಗೆಗಳಿದ್ದಾಗ ಈ ಗೊಂದಲ ಇನ್ನಷ್ಟು ಹೆಚ್ಚಾಗುತ್ತದೆ. ಈಗ ಎಂಬ ಪದವನ್ನು ಹಲವರು ನುಡಿಯುವ ಬಗೆಯನ್ನು ಎಚ್ಚರದಿಂದ ಗಮನಿಸಿದರೆ ಅದನ್ನು **ಈಗ, ಈಗಾ, ಈಗ್ (ಮುಂದೆ ಯಾವುದಾದರೂ ಪದ ಬಂದಾಗ.** ಉದಾ.ಗೆ **ಈಗೇನ್ಮಾಡೋದು, ಈಗ್ಲಿಂದಾನೇ) ಮತ್ತು** ಇಗಾ ಎಂದು ಬಗೆಬಗೆಯಾಗಿ ನುಡಿಯುವುದನ್ನು ಗುರುತಿಸಬಹುದು. ಬರೆಯುವರಲ್ಲಿ ಬರಹದ ಗುರುತು ಸರಿಯಾಗಿ ಬೇರೂರಿಲ್ಲವಾದರೆ ಆಗ ಅವರು ಈ ನುಡಿಯುವ ಯಾವುದಾದರೊಂದು ಬಗೆಯನ್ನು ತಮ್ಮ ಬರವಣಿಗೆಯಲ್ಲಿ ಇರಿಸಿ ಬಿಡುತ್ತಾರೆ.

2. ಕನ್ನಡ ಬರೆಯುತ್ತಿರುವವರ ಮೊದಲ ನುಡಿ ಕನ್ನಡ ಅಲ್ಲದಿದ್ದರೆ ಅವರು ತಮ್ಮ ಮೊದಲ ನುಡಿಯನ್ನು ನುಡಿಯುವ ಬಗೆ ಅವರ ಕನ್ನಡ ಬರವಣಿಗೆಯಲ್ಲಿ ಕಾಣಿಸಿಕೊಳ್ಳುತ್ತದೆ. ತೆಲುಗು, ತಮಿಳು, ಉರ್ದು ನುಡಿಗಳನ್ನಾಡುವವರು ಕನ್ನಡ ಬರೆಯುವಾಗ ಬೇರೆಬೇರೆ ಬಗೆಯ ತಪ್ಪುಗಳನ್ನೇ ಮಾಡುತ್ತಾರೆ.ಇದಕ್ಕೆ ಅವರ ಮೊದಲ ನುಡಿಗಳ ನುಡಿಯುವ ಬಗೆ ಬೇರೆ ಬೇರೆ ಆಗಿರುವುದೇ ಕಾರಣ. ತಮಿಳು ನುಡಿಯವವರ ಕನ್ನಡ ಬರವಣಿಗೆಯಲ್ಲಿ **ತೋಟ್ಟ (=ತೋಟ), ಸಾವುಕ್ಕಾರ (=ಸಾಹುಕಾರ)** ಮುಂತಾದ ತಪ್ಪುಗಳು ಕಾಣಿಸಿಕೊಳ್ಳುತ್ತವೆ.

ಇವುಗಲ್ಲದೆ **ಲ/ಳ** ಮತ್ತು **ನ/ಣ** ದನಿಗಳ ಗುರುತುಗಳನ್ನು ಬಿಡಿಯಾಗಿ ಇಲ್ಲವೇ ಒತ್ತಕ್ಷರವಾಗಿ ಬರೆಯುವಾಗ ತಪ್ಪುಮಾಡುವುದು ಇನ್ನೊಂದು ಬಗೆ. ಇದು ನಾಡಿನ

ಎಲ್ಲೆಡೆ ಕಾಣದಿದ್ದರೂ ಕೆಲವು ಕಡೆಗಳಲ್ಲಿ ಹೆಚ್ಚು ಕಾಣಸಿಕೊಳ್ಳುತ್ತದೆ. **ಕನ್ನು(=ಕಣ್ಣು), ಹಾಳು (=ಹಾಲು), ಮಣೆ(=ಮನೆ), ಗೋಲು(=ಗೋಳು)** ಮುಂತಾದವು ಇಂತಹ ತಪ್ಪುಗಳು. ಹೀಗಾಗಲು ಕನ್ನಡದ ಕೆಲವು ಒಳನುಡಿಗಳಲ್ಲಿರುವ ದನಿಗಳಿಗೆ ಬರವಣಿಗೆಯ ಗುರುತುಗಳು ಇಲ್ಲದಿರುವುದೇ ಕಾರಣ. ಅದರಲ್ಲೂ ಣ/ನಗಳಲ್ಲದೆ ಅವುಗಳನ್ನು ನುಡಿಯುವ ಬಗೆಯನ್ನು ಹೋಲುವ ಮತ್ತೊಂದು ದನಿಯನ್ನು ಬಿಜಾಪುರ ಮತ್ತು ಬೆಳಗಾಂ ಜಿಲ್ಲೆಯ ಮೂಡಲ ಕಡೆ ಕೇಳುತ್ತೇವೆ. ಆ ದನಿ ಬರುವ ಪದಗಳನ್ನು ಬರೆಯುವಾಗ ಣ ಇಲ್ಲವೇ ನ ದನಿಯ ಗುರುತುಗಳನ್ನೇ ಬರೆಯಬೇಕಾಗುತ್ತದೆ. ಇದರಿಂದ ಕೆಲವು ಗೊಜಲುಗಳಾಗುತ್ತವೆ. ಈ ಮಾತು ಲ ಮತ್ತು ಳ ದನಿಗಳಲ್ಲದೇ ಅವುಗಳನ್ನು ಹೋಲುವ ಇನ್ನೊಂದು ದನಿ ತೆಲುಗು ಮಾತಾಡುವ ಕನ್ನಡಿಗರಲ್ಲಿ ಕೇಳಿಸುತ್ತದೆ. ಇವರು ಕನ್ನಡವನ್ನು ಬರೆಯುವಾಗ ಆ ಮೂರನೆಯ ಧ್ವನಿಯನ್ನು ಬರೆಯಲು ಲ?ಳ ಗಳ ಗುರುತುಗಳಲ್ಲಿ ಒಂದನ್ನು ಆಯ್ದುಕೊಳ್ಳಬೇಕಾಗುತ್ತದೆ. ಇದೂ ಕೂಡ ತಪ್ಪುಗಳಿಗೆ ಕಾರಣವಾಗುತ್ತದೆ.

ಹಲವು ಬರವಣಿಗೆಗಳಲ್ಲಿ ಕಾಣುವ ಕಾಗುಣಿತದ ತಪ್ಪುಗಳು ಯಾವುವು ಎಂದು ಗುರುತಿಸುವುದು ಮತ್ತು ಆ ತಪ್ಪುಗಳಿಗೆ ಸರಿಯಾದ ಕಾರಣಗಳನ್ನು ಕಂಡುಕೊಳ್ಳುವುದು ಮೊದಲು ಆಗಬೇಕಾದ ಕೆಲಸ. ಬಳಿಕ ಅದನ್ನು ಸರಪಡಿಸಲು ದಾರಿಗಳಿವೆಯೇ ಎಂದು ಹುಡುಕಬೇಕು. (ಇಲ್ಲಿ ತಪ್ಪು ಎಂದು ಕೊಟ್ಟಿರುವ ಮಾದರಿಗಳನ್ನು ಬೇರೆ ಬೇರೆ ಮಕ್ಕಳ ಬರವಣಿಗೆಯಿಂದ ಆಯ್ದುಕೊಂಡಿದ್ದೇನೆ.)

**ನಕಾರದ ಬದಲು ಣಕಾರ**

ಬೆಳಗಾವಿಯ ಓದುಗರಾದ ಈಶ್ವರಶಾಸ್ತ್ರಿ ಮೊಟೆನವರ ಅವರು ದಿನದಿನದ ಕನ್ನಡ ಬರವಣಿಗೆಯಲ್ಲಿ ತಾವು ಕಾಣುತ್ತಿರುವ 'ದೋಷ'ವೊಂದನ್ನು ಕುರಿತು ಬರೆದಿದ್ದಾರೆ. ಅವರ ಕಚೇರಿಯಲ್ಲಿ ಬೆರಳಚ್ಚುಗಾರರು ಟಿಪ್ಪಣಿಗಳಲ್ಲಿನ ಕೆಲವು ಪದಗಳನ್ನು ಟೈಪು ಮಾಡುವಾಗ ನಕಾರದ ಬದಲು ಣಕಾರವನ್ನು ಟೈಪು ಮಾಡುತ್ತಾರೇಕೆಂಬುದು ಅವರ ಸಮಸ್ಯೆ. ನಕಾರವಿರುವ ಪದಗಳನ್ನು ಟೈಪು ಮಾಡುವಾಗ ಣಕಾರವಿರುವಂತೆ ಗ್ರಹಿಸಿರುತ್ತಾರೆಂದು ಹೇಳಿದ್ದಾರೆ. ಬೆಳಗಾವಿಯ ಬೀದಿಯಲ್ಲಿ ಕಂಡು ಬಂದ ಬೋರ್ಡ್‌ನ ಬರಹವೊಂದನ್ನು ಉದಾಹರಣೆಯನ್ನಾಗಿ ನೀಡಿದ್ದಾರೆ. 'ಇಲ್ಲಿ ಕಬ್ಬಿಣ ಹಾಲು ಸಿಗುತ್ತದೆ' ಎಂಬುದೇ ಆ ಬರಹ. **ಕಬ್ಬಿನ** ಬದಲಿಗೆ **ಕಬ್ಬಿಣ** ಎಂದು ಬರೆದದ್ದೇಕೆ ಎಂಬುದು ಒಂದು ಪ್ರಶ್ನೆ. ಜನರು ಮಾತಾಡಿದಂತೆ ಬರೆಯಲು ಹೊರಟಾಗ ಈ ಬಗೆಯ ಬರಹ ದೋಷಗಳು ಉಂಟಾಗುತ್ತವೆಂದು ಅವರು ಊಹಿಸುತ್ತಾರೆ.

ಬಾಗಲಕೋಟೆಯಿಂದ ಮೊದಲಾಗಿ ಉತ್ತರಕ್ಕೆ ಹೋದಂತೆಲ್ಲ ಬೆಳಗಾವಿಯ ಕೆಲವು ತಾಲೂಕುಗಳೂ ಸೇರಿದಂತೆ ಇರುವ ಪ್ರದೇಶದಲ್ಲಿ ನಾವು ಕೇಳುವ ಕನ್ನಡವನ್ನು ಎಚ್ಚರಿಕೆಯಿಂದ ಗಮನಿಸಿದರೆ ಒಂದು ಅಂಶ ಗೊತ್ತಾಗುತ್ತದೆ. ಇಲ್ಲಿನ ಕನ್ನಡದಲ್ಲಿ ಉಚ್ಚಾರಗೊಳ್ಳುವ ನಕಾರ ಮತ್ತು ಣಕಾರಗಳನ್ನು ಹೊರಗಿನವರು ಕೇಳಿದಾಗ ಗೊಂದಲ ಉಂಟಾಗುತ್ತದೆ. ನಕಾರದ ಬದಲು ಣಕಾರವು ಕೇಳುವುದು ಹೆಚ್ಚು. ಣಕಾರದ ಬದಲು

ನಕಾರ ಕೇಳುವ ಸಂಭವ ಕಡಿಮೆ. (ಈ ಪರಿಸ್ಥಿತಿ ಕೋಲಾರ ಭಾಗದ ಕನ್ನಡ ತೆಲುಗು ದ್ವಿಭಾಷಿಕರ ಕನ್ನಡವನ್ನು ಕೇಳಿದಾಗ ಬೇರೆಯೇ ಆಗುತ್ತದೆ. ಇಲ್ಲಿ ಣಕಾರ ಉಚ್ಚಾರ ಕೇಳಬೇಕಾದ ಕಡೆಗಳಲ್ಲಿ ನಮಗೆ, ಅಂದರೆ ಆ ಪ್ರದೇಶಕ್ಕೆ ಸೇರದವರಿಗೆ ನಕಾರ ಕೇಳುತ್ತದೆ) ಹೀಗೇಕೆ ಆಗುತ್ತದೆ? ನಾವು ಮೊದಲು ಗಮನಿಸಿದ ಬಾಗಲಕೋಟೆಯಿಂದ ಉತ್ತರಕ್ಕೆ, ಕೃಷ್ಣಾ, ಘಟಪ್ರಭಾ ನದಿಗಳ ಆಸುಪಾಸಿನ ಕನ್ನಡದಲ್ಲಿ ನಕಾರ, ಣಕಾರಗಳಲ್ಲದೆ ಅವುಗಳಿಗೆ ಹತ್ತಿರವಾದ ಇನ್ನೊಂದು ಅನುನಾಸಿಕ ಧ್ವನಿ ಇರುವಂತಿದೆ. ಇದು ನಕಾರದ ಉಪಧ್ವನಿಯೂ ಆಗಿರಬಹುದು. ಈ ಹೊಸ ಧ್ವನಿಯು ಉಚ್ಚಾರಣೆಯಲ್ಲಿ ಣಕಾರದಂತೆ ಕೇಳುತ್ತದೆ. (ನಾಲಗೆಯ ತುದಿಯನ್ನು ಹಿಂದಕ್ಕೆ ಬಾಗಿಸಿ ಅಂಗಳಿಗೆ ಮುಟ್ಟಿಸಿ ಉಚ್ಚರಿಸುವ ಧ್ವನಿಯೊಂದು. ಅದೇ ನಾಲಿಗೆಯ ತುದಿಯನ್ನು ಮೇಲಿನ ಹಲ್ಲಿನ ಸಾಲಿನ ಬುಡಕ್ಕೆ ಒತ್ತಿ ಉಚ್ಚರಿಸುವ ಧ್ವನಿ ಇನ್ನೊಂದು. ಇವೆರಡೂ ನಮ್ಮ ಕಿವಿಗೆ ಣಕಾರದಂತೇ ಕೇಳುತ್ತವೆ) ಈ ಭಾಗದ ಜನರು ತಾವು ಉಚ್ಚರಿಸುತ್ತಿರುವ ನಕಾರದ ಉಪಧ್ವನಿಯನ್ನು ಬರಹದಲ್ಲಿ ತೋರಿಸಲು ಬೇರೆ ಚಿಹ್ನೆ ಇಲ್ಲದಿರವುದರಿಂದ ಅಲ್ಲಿ ಣಕಾರವನ್ನೇ ಬರೆಯುತ್ತಿರುವ ಸಾಧ್ಯತೆಗಳಿವೆ. ಈ ಬಗೆಗೆ ಇನ್ನಷ್ಟು ಅಧ್ಯಯನಗಳು ನಡೆಯಬೇಕಿದೆ.

ನಾವು ಉಚ್ಚರಿಸುತ್ತಿರುವ ಧ್ವನಿಗಳು ಬೇರೆಯವರಿಗೆ ಬೇರೆ ರೀತಿಯೇ ಕೇಳುತ್ತಿರಬಹುದು. ಅವರು ಆ ಧ್ವನಿಗಳನ್ನು ತಮಗೆ ಕೇಳಿದ ರೀತಿಯಲ್ಲೇ ಬರೆಯುತ್ತಿರುತ್ತಾರೆ. ಉದಾ.ಗೆ ಕನ್ನಡದ ಊರ ಹೆಸರುಗಳಲ್ಲಿ ಪದದ ನಡುವೆ ಬರುವ ಡಕಾರ ಆಂಗ್ಲರಿಗೆ ರಕಾರದಂತೆ ಕೇಳಿತು. ಹಾಗಾಗಿ ಅವರು ಮಡಿಕೇರಿ, ಧಾರವಾಡಗಳಲ್ಲಿರುವ ಡಕಾರಗಳನ್ನು ಇಂಗ್ಲಿಶ್ ರೂಪಗಳಲ್ಲಿ ರಕಾರವನ್ನಾಗಿ ದಾಖಲಿಸಿದರು. ಕೊಡಗು ,ಕನ್ನಡ ಜಿಲ್ಲೆಗಳ ಹೆಸರು ಕೂರ್ಗ್, ಕೆನರಾ ಆದುದೂ ಹೀಗೆಯೇ.

**ಅವರು**

ಒಮ್ಮೆ ಪದಸಂಪದದಲ್ಲಿ ಗೌರವಸೂಚಕವಾಗಿ ಹೆಸರುಗಳ ಮುಂದೆ **ಅವರು** ಪ್ರತ್ಯಯ ಸೇರಿಸುವ ಬಗೆಗೆ ಬರೆದಿದ್ದೆ. ಅದನ್ನು ಓದಿದ ಖ್ಯಾತ ಭಾಷಾಶಾಸ್ತ್ರಜ್ಞ ಡಾ.ಪಿ.ಎಸ್.ಸುಬ್ರಹ್ಮಣ್ಯಂ ಅವರು ಒಂದು ಸಲಹೆಯನ್ನು ನೀಡಿದ್ದಾರೆ. ಅಕಾರದಿಂದ ಕೊನೆಯಾಗುವ ಹೆಸರುಗಳು ಮತ್ತು ಸಂಬಂಧಸೂಚಕ ಪದಗಳಿಗೆ **ಅವರು** ಸೇರಿದಾಗ ಅಲ್ಲಿ ನವರು (ಉದಾ.ರಾಮಯ್ಯ> ರಾಮಯ್ಯನವರು) ಬರುತ್ತದೆ. ಇಲ್ಲಿ ಹೊಸದಾಗಿ ಸೇರಿದಂತೆ ಕಾಣುವ ನಕಾರ ದಿಟದಲ್ಲಿ ಹೊಸದಾಗಿ ಸೇರಿದ್ದಲ್ಲ; ಅದು ಮೂಲ ಪದದ ಭಾಗವಾಗಿಯೇ ಇರುವಂತಹುದು ಎಂದು ಡಾ.ಸುಬ್ರಹ್ಮಣ್ಯಂ ಹೇಳುತ್ತಾರೆ. ಅಪ್ಪ, ಅಮ್ಮ, ಅಣ್ಣ, ಅಯ್ಯ, ಅಕ್ಕ, ಅಜ್ಜ, ಮಾವ, ಮಗ, ಬಾವ ಮೊದಲಾದ ಸಂಬಂಧ ಹೇಳುವ ಪದಗಳ ಕೊನೆಗೆ ಮೊದಲೇ ನ್ ಇರುತ್ತದೆ; ಈ ಪದಗಳನ್ನು ಬಿಡಿಯಾಗಿ ಹೇಳುವಾಗ ಈ ನಕಾರವನ್ನು ಉಚ್ಚರಿಸದಿರುವ ನಿಯಮವೊಂದು ಕನ್ನಡದಲ್ಲಿದೆ. ಆದರೆ ಇತರ ಪ್ರತ್ಯಯಗಳು ಈ ಪದಗಳಿಗೆ ಸೇರುವಾಗ (ಉದಾ. ಉ, ಅ, ಅನ್ನು, ಅಲ್ಲಿ, ಇಂದ) ಈ ನಕಾರ ಕಾಣಿಸಿಕೊಳ್ಳುತ್ತದೆ. ಪ್ರೊ.ಸುಬ್ರಹ್ಮಣ್ಯಂ ಅವರ ಸೂಚನೆ ಸರಿಯಾಗಿದೆ.

**ಅಕಾರದಿಂದ ಕೊನೆಯಾಗುವ ಪದಗಳ ಕೊನೆಗೆ ನಕಾರ**

ಅಕಾರದಿಂದ ಕೊನೆಯಾಗುವ ಪದಗಳ ಕೊನೆಗೆ ನಕಾರ ಇರುವುದೋ ಇಲ್ಲವೋ ಎಂಬುದು ಕನ್ನಡ ಭಾಷೆಯ ರಚನೆ ಮತ್ತು ಬೆಳವಣಿಗೆಗೆ ಸಂಬಂಧಿಸಿದ ಪ್ರಶ್ನೆಯಾಗಿದೆ. ನಾಮಪದಗಳು ಜೀವವುಳ್ಳ ವ್ಯಕ್ತಿಗಳನ್ನು ಕುರಿತಿದ್ದರೆ ಅವುಗಳ ಮುಂದೆ ನಕಾರ ಒಳರಚನೆಯಲ್ಲಿ ಇರುವುದೆಂಬ ನಿಯಮವನ್ನು ಈಗ ನಾವು ರೂಪಿಸಿಕೊಳ್ಳಬಹುದು. ಆದರೆ 'ಜೀವವುಳ್ಳ' ಎಂಬುದನ್ನು ವಿವರಿಸುವುದು ಹೇಗೆ? ಬಸವಣ್ಣನವರ ವಚನವೊಂದರ ಸಾಲನ್ನು ನೋಡಿ. **'ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ,**

**ಅಂಬುಜಕೆ ಭಾನುವಿನ ಉದಯದ ಚಿಂತೆ..'** ಇಲ್ಲಿರುವ ಚಕೋರ ಮತ್ತು ಅಂಬುಜ ಇವೆರಡೂ ಅಕಾರದಿಂದ ಕೊನೆಯಾಗುವ ಪದಗಳು. ಆದರೆ ಈ ಪದಗಳಿಗೆ ಚತುರ್ಥೀ ವಿಭಕ್ತಿ ಪ್ರತ್ಯಯ ಸೇರುವಾಗ ಚಕೋರ ಪದದ ಕೊನೆಗೆ ನಕಾರ ಇರುವಂತಿದೆ(ಚಕೋರನ್+ಗೆ) ಆದರೆ ಅಂಬುಜ ಪದಕ್ಕೆ ಹಾಗಿಲ್ಲ. ಅಂದರೆ ಚಕೋರ ಜೀವವುಳ್ಳದ್ದು, ಅಂಬುಜ ಜೀವವಿಲ್ಲದ್ದು ಎಂಬ ವಿಂಗಡಣೆ ತೋರುತ್ತದೆ. ಆದರೆ ಇಂದಿನ ಕನ್ನಡದಲ್ಲಿ ಚಕೋರ ಮತ್ತು ಅಂಬುಜಗಳೆರಡಕ್ಕೂ ರಚನೆಯ ನಿಟ್ಟಿನಲ್ಲಿ ವ್ಯತ್ಯಾಸವಿಲ್ಲ. ಎರಡೂ ಜೀವವಿರದ ನಾಮಪದಗಳ ಗುಂಪಿಗೆ ಸೇರುತ್ತವೆ. ಅಥವಾ ಕವಿಗಳು ತಮಗಿರುವ ಬಿಡುಗಡೆಯ ಅವಕಾಶವನ್ನು ಹೀಗೆ ಬಳಸುತ್ತಾರೇನೋ. ಕೆ.ಎಸ್.ನರಸಿಂಹಸ್ವಾಮಿಯವರ ಕವಿತೆಯ ಈ ಸಾಲನ್ನು ಓದಿ:' **'ಸಾಗರನ ಹೃದಯದಲಿ** ರತ್ನಪರ್ವತ ಮಾಲೆ' (–ಗೆ ಕವಿತೆ, ಮೈಸೂರ ಮಲ್ಲಿಗೆ)

**ಮಕಾರಕ್ಕೆ ಈಕಾರವನ್ನು ಸೇರಿಸಿ ಬರೆದಾಗ ಕೊಡುವ ಕಾಗುಣಿತದ ಗುರುತು**

ನಿರಂಜನ. ರಾ.ನ(ಹಂಪಿ) ಕನ್ನಡ ಬರವಣಿಗೆಯಲ್ಲಿ ಇರುವ ಒಂದು ಗೊಂದಲವನ್ನು ಕುರಿತು ಕೇಳಿದ್ದಾರೆ. ಮಕಾರಕ್ಕೆ ಈಕಾರವನ್ನು ಸೇರಿಸಿ ಬರೆದಾಗ ಕೊಡುವ ಕಾಗುಣಿತದ ಗುರುತನ್ನು ಎರಡು ಬಗೆಯಲ್ಲಿ ಬರೆಯುವುದುಂಟು. ಒಂದು ಈಕಾರವನ್ನು ಸೂಚಿಸಲು ಒಂದೇ ಗುರುತನ್ನು ಬಳಸುವುದು. ಆದರೆ ಇದನ್ನು ಮಕಾರದ ಗುರುತಿಗೆ ಸೇರಿಸುವುದಿಲ್ಲ. ಬದಲಿಗೆ ವಕಾರದ ಗುರುತಿಗೆ ಸೇರಿಸುತ್ತೇವೆ. ನುಡಿಯುವಾಗ ಗೊಂದಲವಿಲ್ಲ. ಇನ್ನೊಂದು ಬಗೆಯ ಬರೆಹದಲ್ಲಿ ಮಕಾರಕ್ಕೆ ಇಕಾರದ ಗುರುತನ್ನು ಸೇರಿಸಿ ಬಳಿಕ ದೀರ್ಘ ಸ್ವರದ ಗುರುತಾದ 'ೀ'ಯನ್ನು ಸೇರಿಸುತ್ತೇವೆ.(ಮೀ) ಇದರಲ್ಲಿ ಮಕಾರದ ಗುರುತಿಗೆ ಇಕಾರವನ್ನು ಮತ್ತು ದೀರ್ಘವನ್ನು ಸೇರಿಸಿರುವುದು ಗೊತ್ತಾಗುವಂತಿರುತ್ತದೆ. ಹಾಗಾಗಿ ಎರಡನೆಯ ಬಗೆ ಹೆಚ್ಚು ಸರಿಯಾದುದು. ಈಗಿನ ಕಂಪ್ಯೂಟರ್ ಕಾರ್ಯವಾಹಿಗಳು ಈ ಮಾದರಿಯನ್ನೇ ಅನುಸರಿಸುತ್ತಿವೆ. ಹೆಚ್ಚು ಜನರಿಗೆ ಇದರಲ್ಲೇನು ಗೊಂದಲವಿದೆ ಎಂದು ಅನಿಸಬಹುದು. ಬರೆಯುವವರಿಗೆ ಮತ್ತು ಓದುವವರಿಗೆ ಈ ಎರಡೂ ಬಗೆಗಳಿಗೆ ಹೊಂದಿಕೊಳ್ಳುವುದು ತೊಂದರೆಯಲ್ಲ. ಆದರೆ ಯಂತ್ರಗಳು ಕನ್ನಡವನ್ನು 'ಓದಿ' ವಿಶ್ಲೇಷಿಸಬೇಕಾದಾಗ ಒಂದೊಂದು ಅಕ್ಷರದ ಗುರುತೂ ಬೇರೆಬೇರೆಯಾಗಿ ಇರುವುದು ಅಗತ್ಯ. ಇಲ್ಲದಿದ್ದಲ್ಲಿ ತೊಂದರೆಗಳು ಎದುರಾಗುತ್ತವೆ. ಆದ್ದರಿಂದ 'ಮೀ' ಎಂಬುದಕ್ಕೆ ಹೊಂದಿಕೊಳ್ಳುವುದೇ ಸರಿಯಾದುದು.

**ಶಾಲೆಯಲ್ಲಿ ಹೇಳಿಕೊಡುವ ಸೊಲ್ಲರಿಮೆಯ ತೊಡಕು**

ಶಾಲೆಗಳಲ್ಲಿ ಕನ್ನಡ ಕಲಿಸಿಕೊಡುವವರು ಸೊಲ್ಲರಿಮೆಯ(=ವ್ಯಾಕರಣದ) ಕಟ್ಟುಗಳನ್ನು ಹೇಳಿಕೊಡುತ್ತಾರೆ. ಹೀಗೆ ಹೇಳಿಕೊಡುವಾಗ ಏನು ಬದಲಾವಣೆ ನಡೆಯುತ್ತಿದೆ ಎಂಬುದನ್ನು ತಿಳಿಸುತ್ತಾರೆಯೇ ಹೊರತು ಏಕೆ ಆ ಬದಲಾವಣೆ ಹಾಗೇ ಆಗಬೇಕು ಎನ್ನುವುದನ್ನು ತಿಳಿಸುವುದಿಲ್ಲ. ಉದಾಹರಣೆಗೆ **ಕಾಲು** ಪದಕ್ಕೆ **ಅನ್ನು** ಮತ್ತು **ಅ** ಎಂಬ ಎರಡು ಪ್ರತ್ಯಯಗಳನ್ನು ಸೇರಿಸುತ್ತೇವೆ ಎಂದುಕೊಳ್ಳಿ. ಆಗ **ಕಾಲನ್ನು** ಮತ್ತು **ಕಾಲಿನ** ಎಂಬ ಪದಗಳಾಗುತ್ತವೆ. ಹೀಗೆ ಹೇಳಿದರೆ ಅಲ್ಲಿ ಏನು ಬದಲಾವಣೆ ಆಗಿದೆ ಎಂದು ಹೇಳಿದಂತಾಯ್ತು. ಆದರೆ **ಕಾಲು** ಪದದ ಕೊನೆಯಲ್ಲಿರುವ ಉಕಾರ ಏಕೆ ಕಳೆದು ಹೋಯಿತು ಮತ್ತು ಎರಡೂ ಪ್ರತ್ಯಯಗಳಲ್ಲಿ **ಅ** ದನಿಯೇ ಮೊದಲು ಇದ್ದರೂ ಒಂದೆಡೆ(ಕಾಲನ್ನು) ಅದು ನೇರವಾಗಿ ಕಾಲ್‌ಗೆ ಸೇರಿದ್ದರೆ ಇನ್ನೊಂದೆಡೆ(ಕಾಲಿನ) ಇನ್ ಎಂಬ ಹೆಚ್ಚುವರಿ ಬಳಿಕ ಸೇರಿದ್ದೇಕೆ ಎಂಬ ಕೇಳ್ವಿಗಳನ್ನು ನಾವು ಎದುರಿಸುವುದೇ ಇಲ್ಲ. ಅಂದರೆ ಏಕೆ ಎಂಬುದು ನಮ್ಮ ಕಾಳಜಿಯಲ್ಲ. ಹಾಗಿದ್ದರೆ ಸೊಲ್ಲರಿಮೆಗಳು ಇಂತಹ ಕೇಳ್ವಿಗಳನ್ನು ಎದುರಿಸಲೇಬಾರದೇ?

ಇನ್ನೂ ಒಂದು ಉದಾಹರಣೆಯನ್ನು ನೋಡೋಣ. ಇಂಗ್ಲಿಶ್ ಮತ್ತಿತರ ನುಡಿಗಳಿಂದ ಪಡೆದುಕೊಂಡ ಪದಗಳ ಕೊನೆಯಲ್ಲಿ ತಡೆಯುಲಿ (=ವ್ಯಂಜನ) ಇದ್ದರೆ ಆ ಪದಗಳ ಕೊನೆಗೆ ಸುಮ್ಮನೆ ಉಕಾರ ಸೇರಿಸಿಬಿಟ್ಟರೆ ಅದು ಕನ್ನಡದ ಪದವಾಗಿ ಬಿಡುತ್ತದೆ ಎಂದು ಹೇಳುವುದನ್ನು ಕೇಳಿದ್ದೇವೆ. (ಕನ್ನಡದ ಎಲ್ಲ ಒಳನುಡಿಗಳೂ ಹೀಗೆ ಉಕಾರವನ್ನು ಕೊನೆಯ ತಡೆಯುಲಿಗೆ ಸೇರಿಸುವುದಿಲ್ಲ. ಆ ಮಾತು ಈಗ ಬೇಡ) ಬಸ್ಸು, ಪೆನ್ನು, ಕಾರು, ರೈಲು, ಡ್ರೆಸ್ಸು, ಕ್ರಾಸು ಇವೇ ಮೊದಲಾದ ಪದಗಳನ್ನು ಉದಾಹರಣೆಗಳನ್ನಾಗಿ ಕೊಡುವುದುಂಟು. ಆದರೆ ಇಂಗ್ಲಿಶ್ ಪದಗಳಿಗೆ ಕೊನೆಯಲ್ಲಿ ಸುಮ್ಮನೆ ಉಕಾರವನ್ನು ಸೇರಿಸಲಾಗಿದೆಯೋ ಇಲ್ಲವೇ ಬೇರೆ ಏನಾದರೂ ಬದಲಾವಣೆ ಆಗಿದೆಯೋ ಎನ್ನುವುದನ್ನು ನೋಡಲು ಹೋಗುವುದಿಲ್ಲ. ಕೆಲವು ಪದಗಳ ಕೊನೆಯಲ್ಲಿ ಸುಮ್ಮನೆ ಉಕಾರ ಸೇರಿಸಿದ್ದೇವೆ (=**ಕಾರು, ರೈಲು, ಕ್ರಾಸು**) ಮತ್ತೆ ಕೆಲವು ಪದಗಳ ಕೊನೆಯ ತಡೆಯುಲಿಯನ್ನು ಮತ್ತೊಮ್ಮೆ ಬಳಸಿ ಬಳಿಕ ಉಕಾರವನ್ನು ಸೇರಿಸಿದ್ದೇವೆ (=**ಬಸ್ಸು, ಪೆನ್ನು, ಡ್ರೆಸ್ಸು**) ಈ ಬದಲಾವಣೆ ಏಕೆ ಎಂಬ ಕೇಳ್ವಿಯನ್ನು ನಾವು ಎದುರಿಸಬೇಕು. ಶಾಲೆಯಲ್ಲಿ ಮಕ್ಕಳಿಗೆ ಕಲುಹಿಸುವ ಸೊಲ್ಲರಿಮೆ ಇದನ್ನು ತಿಳಿಸಿಹೇಳಬೇಕು.

ಕೊಂಚ ಹಿಂದಕ್ಕೆ ಸರಿದು ನೋಡಿದರೆ ಹಳಗನ್ನಡದ ತಡೆಯುಲಿಗಳಿಂದ ಕೊನೆಯಾಗುವ ಪದಗಳ ಕೊನೆಗೆ ಉಕಾರ ಸೇರಿಸಿ ಹೊಸಗನ್ನಡದಲ್ಲಿ ಬಳಸುತ್ತಿದ್ದೇವೆ. ನಡುಗನ್ನಡದಲ್ಲೂ ಹೀಗೆ ಮಾಡಿದ್ದುಂಟು. ಹೀಗೆ ಉಕಾರವನ್ನು ಸೇರಿಸಿಕೊಳ್ಳುವಾಗ ಮೇಲೆ ಇಂಗ್ಲಿಶ್ ಪದಗಳನ್ನು ಕನ್ನಡಕ್ಕೆ ಹೊಂದಿಸಿಕೊಳ್ಳುವಾಗ ಪಾಲಿಸಿದ ಕಟ್ಟುಗಳನ್ನೇ ಬಳಸುವುದನ್ನು ಕಾಣುತ್ತೇವೆ. ಉದಾಹರಣೆಗೆ **ಕಣ್** ಮತ್ತು **ಕಾಲ್** ಎಂಬ ಹಳಗನ್ನಡದ ಪದಗಳನ್ನು **ಕಣ್ಣು** ಮತ್ತು **ಕಾಲು** ಎಂದು ಬದಲಿಸಕೊಂಡಿದ್ದೇವೆ. ಸುಮ್ಮನೆ ಉಕಾರವನ್ನು ಸೇರಿಸುವುದರಿಂದ ಈ ಪದಗಳು ಬರುವುದಿಲ್ಲ. ಆಗ **ಕಣು** ಮತ್ತು **ಕಾಲು** ಎಂದಾಗಬೇಕಿತ್ತಲ್ಲವೇ? ಅಂದರೆ ಇಂಗ್ಲಿಶ್ ಪದಗಳನ್ನು ಕನ್ನಡಕ್ಕೆ ಹೊಂದಿಸಿಕೊಳ್ಳುವಾಗ

ಕನ್ನಡ ಬೇರೆಯೇ ಕಟ್ಟುಗಳನ್ನು ಬಳಸಿಕೊಂಡಿಲ್ಲ; ತಡೆಯುಲಿಯಿಂದ ಕೊನೆಯಾಗುವ ಯಾವುದೇ ಪದವನ್ನು ಹೊಸಗನ್ನಡದಲ್ಲಿ ಹೊಂದಿಸಿಕೊಳ್ಳುವಾಗ ಒಂದೇ ಕಟ್ಟನ್ನು ಪಾಲಿಸಿದೆ ಎಂದಾಯ್ತು.

ಆ ಕಟ್ಟು ಯಾವುದು? ಪದದ ಮೊದಲ ತೆರೆದುಲಿ ಗಿಡ್ಡವೋ (**ಕಣ್, ಕಲ್, ಬಿಲ್, ತಳ್** ಮಾದರಿಯವು) ಇಲ್ಲವೋ ಉದ್ದವೋ (**ಕಾಳ್, ಕೀಳ್, ಬೀಳ್, ತೋಳ್, ತೇಲ್** ಮಾದರಿಯವು) ಎಂಬುದನ್ನು ನೋಡಿಕೊಂಡು ಮುಂದೆ ಸುಮ್ಮನೆ ಉಕಾರ ಸೇರಿಸಬೇಕೋ ಇಲ್ಲವೇ ಕೊನೆಯ ತಡೆಯುಲಿಯನ್ನು ಮತ್ತೊಮ್ಮೆ ಬಳಸಿ ಬಳಿಕ ಉಕಾರ ಸೇರಿಸಬೇಕೋ ಎನ್ನುವುದು ಗೊತ್ತುಮಾಡಿಕೊಳ್ಳುತ್ತೇವೆ. ಇದನ್ನು ಕನ್ನಡ ಉಲಿಕಂತೆ (ಸಿಲೆಬಲ್)ಯ ಕಟ್ಟು ಎಂದು ಕರೆಯೋಣ. ಇದೇ ಕಟ್ಟನ್ನು ಇಂಗ್ಲಿಶ್ ಪದಗಳಿಗೂ ನಾವು ಬಳಸಿದ್ದೇವೆ.

ಈ ಉಲಿಕಂತೆಯ ಕಟ್ಟಿಗೆ ಇನ್ನೂ ಒಂದು ಸೇರ್ಪಡೆ ಇದೆ. ಒಂದೊಮ್ಮೆ ಪದದ ಮೊದಲ ತೆರೆದುಲಿ ಗಿಡ್ಡವೇ ಆಗಿದ್ದು, ಆ ಪದದ ಕೊನೆಯಲ್ಲಿ ಬೇರೆಬೇರೆ ತಡೆಯುಲಿಗಳು ಒಟ್ಟಿಗೆ ಬರುತ್ತಿದ್ದರೆ ಆಗ ಕೊನೆಗೆ ಸುಮ್ಮನೆ ಉಕಾರ ಸೇರಿಸಿದರೆ ಸಾಕು. **ಸಿಲ್ಕ್, ಟರ್ನ್, ಟೆಸ್ಟ್** ಮುಂತಾದ ಪದಗಳನ್ನು ನೋಡಿ. ಇಲ್ಲಿ ಪದದ ಮೊದಲ ತೆರೆದುಲಿ ಗಿಡ್ಡವೇ ಆಗಿದೆ. ಆದರೆ ಆ ತೆರೆದುಲಿ ಮುಂದೆ ಎರಡು ಬೇರೆ ಬೇರೆ ತಡೆಯುಲಿಗಳು ಬಂದಿವೆ. ಹೀಗಿರುವಾಗ ಉಲಿಕಂತೆಯ ಕಟ್ಟಿನಲ್ಲಿ ಮೊದಲು ಹೇಳಿದಂತೆ ಕೊನೆಯ ತಡೆಯುಲಿಯನ್ನು ಮತ್ತೆ ಬಳಸಲು ಹೋಗುವುದಿಲ್ಲ. ಇರುವ ಪದಕ್ಕೆ ಸುಮ್ಮನೆ ಉಕಾರವನ್ನು ಸೇರಿಸಿ ಬಿಡುತ್ತೇವೆ. ಪದದ ಮೊದಲ ತೆರೆದುಲಿ ಉದ್ದವಾಗಿದ್ದರೆ ಏನು ಮಾಡುತ್ತಿದ್ದೆವೋ ಅದನ್ನೇ ಇಲ್ಲಿಯೂ ಮಾಡುತ್ತೇವೆ.

ಇಲ್ಲಿ ಇನ್ನೊಂದು ಕಟ್ಟು ಕಾಣಿಸಕೊಂಡಂತಾಯ್ತು. ಅಂದರೆ 1.ಪದದ ಮೊದಲ ತೆರೆದುಲಿ ಉದ್ದವಾಗಿರುವ ಪದಗಳನ್ನು ಮತ್ತು 2. ಪದದ ಮೊದಲ ತೆರೆದುಲಿ ಗಿಡ್ಡವಾಗಿದ್ದೂ ಬಳಿಕ ಎರಡು ಬೇರೆ ಬೇರೆ ತಡೆಯುಲಿಗಳನ್ನು ಹೊಂದಿರುವ ಪದಗಳನ್ನು ಒಂದೇ ಬಗೆಯಲ್ಲಿ ಕನ್ನಡ ಉಲಿಕಂತೆಯ ಕಟ್ಟು ಪರಿಗಣಿಸುತ್ತದೆ. ಕನ್ನಡ ಛಂದಸ್ಸನ್ನು ಬಲ್ಲವರಿಗೆ ಉದ್ದ ತೆರೆದುಲಿಗೆ (ತಾಗು) ಮತ್ತು ಗಿಡ್ಡ ತೆರೆದುಲಿಯ ಮುಂದೆ ಎರಡು ತಡೆಯುಲಿಗಳು ಒಟ್ಟಿಗೆ ಬರುತ್ತಿದ್ದರೆ ಅದಕ್ಕೆ (ತಗ್ಗು) ಎರಡು ಮಾತ್ರೆಗಳ ಕಾಲವನ್ನು ಏಕೆ ನೀಡುತ್ತೇವೆ ಎನ್ನುವುದು ಗೊತ್ತಾಗುತ್ತದೆ. ಇದೆಲ್ಲವೂ ನಮ್ಮ ಮಕ್ಕಳ ಕಲಿಕೆಯಲ್ಲಿ ಸೇರಬೇಕಲ್ಲವೇ?

**ಪಠ್ಯ ಮತ್ತು ಪಾಠ್ಯ**

ಮಹಾಂತೇಶ ಮಲ್ಲನಗೌಡರ (ಕೊಪ್ಪಳ) ಇವರು **ಪಠ್ಯ** ಮತ್ತು **ಪಾಠ್ಯ** ಪದಗಳ ನಡುವೆ ಇರುವ ವ್ಯತ್ಯಾಸವೇನೆಂದು ಕೇಳಿದ್ದಾರೆ. ಓದಲು ನಿಗದಿಯಾದ ಎಂಬ ತಿರುಳನ್ನು ನೀಡುವ ಪದವೆಂದರೆ 'ಪಾಠ್ಯ'.ಈ ಪದರೂಪವನ್ನು ಸಂಸ್ಕೃತ ಪದಕೋಶಗಳು ನೀಡುತ್ತವೆ. ಆದರೆ ಕನ್ನಡದಲ್ಲಿ ಇದೇ ತಿರುಳನ್ನು ಪಡೆಯಲು 'ಪಠ್ಯ' ಎಂಬ ಪದವನ್ನು ಬಳಸುತ್ತಿದ್ದೇವೆ. ಸಂಸ್ಕೃತ ನುಡಿಯ ಕಟ್ಟುಗಳ ನೆಲೆಯಲ್ಲಿ ಇದು ಒಪ್ಪಿಗೆ ಪಡೆಯುವುದಿಲ್ಲ.

ಆದರೂ ಲಾಗಾಯ್ತಿನಿಂದ ಇದೇ ರೂಪ ಕನ್ನಡದಲ್ಲಿ ನೆಲೆ ನಿಂತುಬಿಟ್ಟಿದೆ. ಇದು ಸರಿಯಲ್ಲ ಎಂದು ಹೇಳಿ ಎಲ್ಲರೂ 'ಪಾಠ್ಯ'ವನ್ನು ಬಳಸುವಂತೆ ಮಾಡುವುದು ಆಗುವ ಮಾತೇನಲ್ಲ. ಹೀಗೆ ಸಂಸ್ಕೃತನುಡಿಯ ಕಟ್ಟುಗಳಿಗೆ ಸಲ್ಲದ ಹಲವು ಪದರೂಪಗಳನ್ನು ಕನ್ನಡ ತನ್ನ ಬಳಕೆಯಲ್ಲಿ ಉಳಿಸಿಕೊಂಡಿದೆ. ಉದಾ.ಗೆ **ಮೌಲ್ಯ** ಎಂಬ ಪದ. ಅಮೂಲ್ಯ ಎಂಬ ನಿಷೇಧ ರೂಪದ ಪದವನ್ನು ನೋಡಿದರೆ ಮೂಲಪದ ಮೂಲ್ಯ ಎಂದಿರಬೇಕೆಂದು ಗೊತ್ತಾಗುತ್ತದೆ. ಆದರೆ ನಾವೆಲ್ಲರೂ ಮೌಲ್ಯ ರೂಪವನ್ನೇ ಬಳಸುತ್ತಿದ್ದೇವೆ. ಇಂತಹ ಹಲವು ಉದಾಹರಣೆಗಳನ್ನು ನೀಡಬಹುದು. ಒಟ್ಟಾರೆ ಹೇಳುವುದಾದರೆ ಸಂಸ್ಕೃತ ಪದಗಳನ್ನು ಕನ್ನಡದಲ್ಲಿ ಬಳಸಿದ ಮಾತ್ರದಿಂದಲೇ ಪದರೂಪ ಮತ್ತು ತಿರುಳುಗಳು ಖಚಿತವಾಗಿರುತ್ತವೆ ಎಂದು ತಿಳಿಯುವಂತಿಲ್ಲ.

**ನಿಲ್ಲು ಪದದ ತಿರುಳು**

ಜಾಹಿರಾತೊಂದರಲ್ಲಿ ಕೇಳಿದ ವಾಕ್ಯ ಹೀಗಿದೆ. **'ನಾನು ನಿಲ್ಲುವುದನ್ನು ಕಲಿತೇ ಇಲ್ಲ.'** ಈ ವಾಕ್ಯವು ಬಳಕೆಯಾಗಿರುವ ಸಂದರ್ಭವನ್ನು ಗಮನಿಸಿದರೆ ಅಲ್ಲಿ 'ನಿಲ್ಲು' ಎಂಬ ಪದವನ್ನು ಏಕೆ ಬಳಸಿದ್ದಾರೆ ಎಂಬುದು ಗೊತ್ತಾಗುತ್ತದೆ. ಆದರೆ ವಾಕ್ಯವನ್ನು ಬಿಡಿಯಾಗಿ ಓದಿದಾಗ ನಮಗೆ ತಿಳಿಯವುದೇ ಬೇರೆ. ಈ ಮಾತನ್ನು ಹೇಳಿದ ವ್ಯಕ್ತಿ ಯಾವಾಗಲೂ ಕುಳಿತೋ ಮಲಗಿಯೋ ಇರುತ್ತಾರೆ ಎಂದು ತಿಳಿಯುವಂತಾಗುತ್ತದೆ. ಈ ಗೊಂದಲ ಉಂಟಾಗಲು **ನಿಲ್ಲು** ಎಂಬ ಪದವನ್ನು ಇಂಗ್ಲಿಶಿನ **ಸ್ಟಾಪ್** ಎಂಬುದಕ್ಕೆ ಬದಲಾಗಿ ಬಳಸಿರುವುದೇ ಕಾರಣ. ಆ ನುಡಿಯಲ್ಲಿ ಸ್ಟಾಪ್ ಮತ್ತು ಸ್ಟ್ಯಾಂಡ್ ಪದಗಳನ್ನು ಕ್ರಿಯಾಪದಗಳನ್ನಾಗಿ ಬಳಸುವಾಗ ಬೇರೆ ಬೇರೆ ತಿರುಳುಗಳನ್ನು ಪಡೆದುಕೊಳ್ಳಲಾಗುತ್ತದೆ. ಕನ್ನಡದಲ್ಲಿ ಬಳಕೆಯ ಸಂದರ್ಭಕ್ಕೆ ತಕ್ಕಂತೆ ಸ್ಟಾಪ್ ಪದಕ್ಕೆ ನಿಲ್ಲಿಸು ಮತ್ತು ಸ್ಟ್ಯಾಂಡ್ ಪದಕ್ಕೆ ನಿಲ್ಲು ಎಂಬ ಪದಗಳನ್ನು ಬಳಸುತ್ತೇವೆ. ಆದರೆ ಮೇಲೆ ಹೇಳಿದ ವಾಕ್ಯ ಈ ವ್ಯತ್ಯಾಸವನ್ನು ಗಮನಿಸದೇ ಇರುವುದು ಗೊತ್ತಾಗುವಂತಿದೆ. ಮೂಲ ವಾಕ್ಯ 'ಯಾವಾಗಲೂ ಚಲಿಸುತ್ತಿರು' ಎಂಬ ತಿರುಳನ್ನು ಹೇಳಬೇಕಿದೆ. ಆ ವಾಕ್ಯ ನಿಷೇಧರೂಪವನ್ನು ಹೊಂದಿರುವುದರಿಂದ ಕನ್ನಡದಲ್ಲೂ ಹಾಗೇ ಹೇಳಲು ಹೊರಟು ಮತ್ತಷ್ಟು ಗೋಜಲುಗಳಾಗಿವೆ. ಕನ್ನಡದಲ್ಲೇ ಬಳಕೆಯಲ್ಲಿದ್ದು ಈಗ ಮರೆಯಾಗುತ್ತಿರುವ ತಳುಹು ಮತ್ತು ತರುಬು ಎಂಬ ಕ್ರಿಯಾಪದಗಳನ್ನು ಮರಳಿ ಬಳಕೆಗೆ ತರುವುದರಿಂದ ಈ ಗೋಜಲುಗಳನ್ನು ಕೊಂಚ ಕಡಿಮೆ ಮಾಡಬಹುದೆಂದು ತೋರುತ್ತದೆ.

**ಸರಿಯಾದ ಪದರೂಪದ ಬಳಕೆ**

ಪತ್ರಿಕೆಯೊಂದರಲ್ಲಿ ಈಚೆಗೆ ಓದಿದ ವಾಕ್ಯ ಹೀಗಿತ್ತು: **'ಸಚಿನ್ ಬತ್ತಳಿಕೆಯಲ್ಲಿ ಇಂತಹ ಹಲವು ಪ್ರಶಸ್ತಿಗಳು ಇವೆ.'** ಈ ವಾಕ್ಯವನ್ನು ಬರೆದವರು ಸಚಿನ್ ಅವರಿಗೆ ಹತ್ತಾರು ಪ್ರಶಸ್ತಿಗಳು ಈಗಾಗಲೇ ದೊರಕಿವೆ ಎಂಬ ಸಂಗತಿಯನ್ನು ಹೇಳುವ ಜೊತೆಗೆ ತಾವು ಹೇಳುವ ಮಾತನ್ನು ಚಂದಗೊಳಿಸಬೇಕೆಂಬ ಇರಾದೆಯನ್ನೂ ಹೊಂದಿದ್ದಾರೆ. ಇದೇನೂ ತಪ್ಪಲ್ಲ. ಆದರೆ ಮಾತನ್ನು ಚಂದಗೊಳಿಸುವ ಭರದಲ್ಲಿ ತಪ್ಪು ತಿರುಳಿನ ವಾಕ್ಯಗಳನ್ನು ಬರೆದರೆ ತೊಂದರೆ ಅಷ್ಟೆ. ಬತ್ತಳಿಕೆ ಎಂಬದು ಬೇರೆಯವರ ಮೇಲೆ

ಎಸೆಯಲು ಇರುವ ಬಾಣಗಳನ್ನು ಕೂಡಿಡುವ ಜಾಗ ತಾನೆ. ಪ್ರಶಸ್ತಿಗಳನ್ನು ಯಾರ ಮೇಲೆ ಎಸೆಯಬೇಕಿದೆ.? ಹಾಗಾಗಿ ಪ್ರಶಸ್ತಿಗಳನ್ನು ಕೂಡಿಡುವ ತಾಣವನ್ನು ಬತ್ತಳಿಕೆ ಎಂದು ಕರೆಯಲಾಗುವುದಿಲ್ಲ. ಓದಿದಾಗ ಇಂತಹ ವಾಕ್ಯಗಳು ಚಂದ ಎನಿಸಿದರೂ ತಿರುಳಿನಲ್ಲಿ ಟೊಳ್ಳಾಗಿರುತ್ತವೆ. ಪತ್ರಿಕೆಗಳಲ್ಲಿ ಟಿವಿಗಳಲ್ಲಿ ದಿನವೂ ಇಂತಹ ರಚನೆಗಳನ್ನು ಓದಬೇಕಾಗಿ / ಕೇಳಬೇಕಾಗಿ ಬಂದಿದೆ.

ಇಂತಹುದೇ ಇನ್ನೊಂದು ವಾಕ್ಯ ಹೀಗಿತ್ತು: **'ಕಸ ಗುಡಿಸುವವರ ಅಮಾನವೀಯ ಬದುಕು'** ಇದು ವರದಿಯೊಂದರ ತಲೆಬರಹ. ಕಸ ಗುಡಿಸುವವರು ಮನುಷ್ಯರಿಗೆ ದೊರಕಬೇಕಾದ ಸವಲತ್ತುಗಳಿಲ್ಲದೆ ಬದುಕುತ್ತಿದ್ದಾರೆ ಎಂದು ಹೇಳುವುದು ಈ ವಾಕ್ಯದ ಗುರಿ. ಆದರೆ ಅಲ್ಲಿ ಬಳಸಲಾದ 'ಅಮಾನವೀಯ' ಪದದ ತಿರುಳು ಬೇರೆ ಏನನ್ನೋ ಹೇಳುತ್ತದೆ. ಮನುಷ್ಯರಿಗೆ ತಕ್ಕಂತ ನಡವಳಿಕೆ ಇಲ್ಲದಿರುವುದನ್ನು ಹೇಳುವಾಗ ಈ ಪದವನ್ನು ಬಳಸುವುದುಂಟು. ಮೇಲೆ ಹೇಳಿದ ವಾಕ್ಯದಲ್ಲಿ ಕಸ ಗುಡಿಸುವವರು ಬದುಕುತ್ತಿರುವ ಬಗೆಗೆ ಅವರು ಹೊಣೆಗಾರರಲ್ಲ. ಅಮಾನವೀಯವಾಗಿ ಇರಬೇಕೆಂಬುದು ಅವರ ಗುರಿಯಲ್ಲ. ಹಾಗಾಗಿ ಈ ಪದದ ಬಳಕೆ ಸರಿಯೆಂದು ತೋರುವುದಿಲ್ಲ.

**ತರಬೇತಿ ಮತ್ತು ತರಪೇತಿ**

ಮಹೇಶ್. ಎಲ್ (ದಾವಣಗೆರೆ) ಇವರು **ತರಬೇತಿ** ಮತ್ತು **ತರಪೇತಿ** ಇವೆರಡರಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಅರಾಬಿಕ್ ನುಡಿಯ **ತರ್ಬಿಯತ್** ಎಂಬುದು ಕನ್ನಡಕ್ಕೆ ಬಂದು ಸೇರಿದಾಗ ಅದನ್ನು ನುಡಿಯುವ ಮತ್ತು ಬರೆಯುವ ಬಗೆಯಲ್ಲಿ ಬದಲಾವಣೆಗಳಾಗಿವೆ. ತಿರುಳಿನಲ್ಲಿ ಏನೂ ಬದಲಾವಣೆಯೂ ಆಗಿಲ್ಲ. ಮೊದಲಿದ್ದ ತಿದ್ದುವಿಕೆ, ಪಳಗಿಸುವಿಕೆ ಎಂಬ ತಿರುಳೇ ಕನ್ನಡ ನುಡಿಯಲ್ಲೂ ಉಳಿದಿದೆ. ಆದರೆ ಬರೆಯುವಾಗ ಮತ್ತು ನುಡಿಯುವಾಗ **ತರಬೇತು, ತರಪೇತು, ತರಬೇತಿ, ತರಪೇತಿ, ತರ್ಬಿಯತ್ತು, ತರಬಿಯತ್ತು** ಮುಂತಾಗಿ ಬರೆಯುತ್ತಿರುವುದುಂಟು. ಹದಿನೆಂಟನೆಯ ಶತಮಾನದ ಹಳೆಯ ದಾಖಲೆಯಲ್ಲಿ ತರ್ಬಿಯತ್ತು ಎಂದು ಬರೆಯಲಾಗಿದೆ. ಯಾಕೆ ಈ ಪದದ ನಡುವೆ ಇರುವ ಬಕಾರವನ್ನು ಪಕಾರವನ್ನಾಗಿ 'ಮಾಡಿಕೊಂಡರು ಎಂದು ಹೇಳುವುದಕ್ಕೆ ಆಗದು. ಈಗ ತರಬೇತು ಎಂದು ಬರೆದು ಹಾಗೆಯೇ ನುಡಿಯುವುದು ಹೆಚ್ಚು ಸರಿ. ತರಬೇತು ಪದದ ಕೊನೆಯಲ್ಲಿರುವ ಉಕಾರವನ್ನು ನುಡಿಯುವಾಗ ಬಿಡಬಹುದಾದ್ದರಿಂದ ಕೆಲವೊಮ್ಮೆ ತರಬೇತ್ ಎಂಬ ಪದವನ್ನು ತರಬೇತಿ ಎಂದು ನುಡಿಯುವುದು ವಾಡಿಕೆಯಲ್ಲಿ ಬಂದಿದೆ. ಆದರೆ ಬಕಾರಕ್ಕೆ ಬದಲು ಪಕಾರ ಬರಲು ಕಾರಣಗಳಿದ್ದಂತಿಲ್ಲ.

ಮ್/ನ್

ಮುರಲೀಧರ ಕುಲಕರ್ಣಿ (ಬೀದರ್) ಇವರು ತಮಿಳಿನ ಊರ ಹೆಸರುಗಳು. ಜನರ ಹೆಸರುಗಳು ಮ್/ನ್ ದನಿಗಳಿಂದ ಕೊನೆಯಾಗುತ್ತದೆಯಲ್ಲ ಏಕೆ ಎಂದು ಕೇಳಿದ್ದಾರೆ. ತಮಿಳಿನಲ್ಲಿ ಅಕಾರದಿಂದ ಕೊನೆಯಾಗುವ ಊರ ಹೆಸರುಗಳ ಮತ್ತು ಗಂಡಸರ ಹೆಸರುಗಳ ಕೊನೆಗೆ ಮಾತ್ರ ಮ್/ನ್ ಗಳು ಸೇರುತ್ತವೆ ಅಷ್ಟೆ. ಎಲ್ಲ

ಹೆಸರುಗಳಿಗೂ ಹೀಗಾಗುವುದಿಲ್ಲ. ಚೆನ್ನೈ, ಮಧುರೈ, ತಿರುಪೂರು, ತಿರುಚಿ ಎಂಬ ಊರ ಹೆಸರುಗಳಲ್ಲಿ ಕರುಣಾನಿಧಿ, ಅಣ್ಣಾಮಲೈ ಎಂಬ ಗಂಡಸರ ಹೆಸರುಗಳ ಕೊನೆಯಲ್ಲಿ ಈ ದನಿಗಳಿರುವುದಿಲ್ಲ. ಅಕಾರದಿಂದ ಕೊನೆಯಾಗುವ ಯಾರ ಹೆಸರುಗಳ ಕೊನೆಗೆ ಮ್ ಮತ್ತು ಗಂಡಸರ ಹೆಸರುಗಳ ಕೊನೆಗೆ ನ್ ಸೇರಲು ಕಾರಣಗಳಿವೆ. ಈ ದನಿಗಳು ಆಯಾ ಪದದ ಲಿಂಗವನ್ನು ಸೂಚಿಸುವ ಗುರುತುಗಳಾಗಿವೆ. ಮ್ ಎಂಬುದು ನಪುಂಸಕ( ಈ ಪದ ಸರಿಯಲ್ಲ) ಲಿಂಗವನ್ನು ಮತ್ತು ನ್ ಎಂಬುದು ಪುಲ್ಲಿಂಗವನ್ನು ಹೇಳುತ್ತವೆ. ಕನ್ನಡದಲ್ಲೂ ಒಮ್ಮೆ ಇದೇ ಮಾದರಿ ಇದ್ದಿತು. ಗಂಡಸರ ಹೆಸರುಗಳು ಅಕಾರದಿಂದ ಕೊನೆಯಾಗುತ್ತಿದ್ದರೆ ಆ ಹೆಸರುಗಳ ಕೊನೆಗೆ ನ್ ಸೇರುತ್ತಿತ್ತು. ಉದಾ.ಗೆ ಪಂಪನ್, ಉದಯಾದಿತ್ಯನ್, ನೃಪತುಂಗನ್ ಹೀಗೆ. ಈ ಪದಗಳಿಗೆ ಇನ್ನೊಂದು ಸ್ವರದಿಂದ ಮೊದಲಾಗುವ ಪದದೊಡನೆ ಸಂಧಿಯಾದಾಗ ಕೊನೆಯ ನ್ ಕಾಣಿಸಿಕೊಳ್ಳುತ್ತಿತ್ತು. ಈಗಲೂ ನಾವು ಪಂಪನನ್ನು, ನೃಪತುಂಗನಿಗೆ, ಶ್ರೀವಿಜಯನ ಎಂದು ಬರೆಯಲು/ ನುಡಿಯಲು ಇದೇ ಕಾರಣ.

## ಒಳನುಡಿಗಳನ್ನು ಬಳಸುವ ಬಗೆ

ಓದುಗರೊಬ್ಬರು ಕನ್ನಡದ ಬೇರೆ ಬೇರೆ ಒಳನುಡಿಗಳನ್ನು ಬಳಸುವ ಬಗೆಗೆ ಒಂದು ಕೇಳ್ವಿಯನ್ನು ಮುಂದಿಟ್ಟಿದ್ದಾರೆ. ಅವರ ತಕರಾರು ಹೀಗಿದೆ: ಚಲನಚಿತ್ರಗಳಲ್ಲಿ ಟಿವಿ ಸೀರಿಯಲ್‌ಗಳಲ್ಲಿ ಬೇರೆ ಬೇರೆ ಒಳನುಡಿಗಳನ್ನು ಬಳಸುವಾಗ ಆ ಒಳನುಡಿಗಳಲ್ಲಿ ಮಾತುಗಳನ್ನು ಬರೆಯುವವರಾಗಲೀ, ಅ ಒಳನುಡಿಗಳನ್ನು ಆಡುವ ನಟ, ನಟಿಯರು ಮಾತಾಡುವ ಬಗೆಯಾಗಲಿ ಆಯಾ ಒಳನುಡಿಗಳನ್ನು ಗೇಲಿ ಮಾಡುವಂತಿರುತ್ತದೆ. ಈ ತಕರಾರನ್ನು ಒಪ್ಪಬೇಕಾಗಿದೆ. ಹಲವು ಒಳನುಡಿಗಳಿರುವ ಕನ್ನಡದಲ್ಲಿ ಒಬ್ಬೊಬ್ಬರಿಗೂ ತಮ್ಮ ಒಳನುಡಿಯನ್ನು ಆಡುವುದು ಗೊತ್ತಿರುತ್ತದೆ. ಇನ್ನೂ ಹಲವು ಒಳನುಡಿಗಳನ್ನು ಕೇಳಿ ಅರಿತುಕೊಳ್ಳುವುದು ಗೊತ್ತಿರುತ್ತದೆ. ಆದರೆ ಯಾವುದೇ ಒಳನುಡಿಯನ್ನಾದರೂ ಆಡಬಲ್ಲ ಚಳಕ ತಿಳಿದಿರುವುದಿಲ್ಲ. ನಾನು ಬೀದರ್ ಒಳನುಡಿಯನ್ನು ಕೇಳಿ ಅರಿಯ ಬಲ್ಲನೆಂದ ಮಾತ್ರಕ್ಕೆ ಆ ಒಳನುಡಿಯಲ್ಲಿ ಮಾತಾಡಲು ನನಗೆ ಬರುತ್ತದೆ ಎಂದಾಗುವುದಿಲ್ಲ. ಹೀಗಾಗಿ ನನಗೆ ಮಾತಾಡಲು ಬರದ ಒಳನುಡಿಯಲ್ಲಿ ಮಾತುಗಳನ್ನು ಬರೆದರೆ ಇಲ್ಲವೇ ಮಾತಾಡಿದರೆ ಅದು ಕೇಳಿಸಿಕೊಳ್ಳುವವರಲ್ಲಿ ನಗೆಗೆ ಕಾರಣವಾಗಬಹುದು. ಸಿನಿಮಾಗಳು, ಟಿವಿ ಸಿರಿಯಲ್‌ಗಳು ಹೀಗೆ ನಗೆಯುಕ್ಕಿಸಲೆಂದೇ ಒಳನುಡಿಗಳನ್ನು ಬಳಸಿಕೊಳ್ಳುತ್ತವೆ.ಇದೂ ಕೂಡ ಎಚ್ಚರಿಕೆಯಿಂದ ಗಮನಿಸಿದರೆ ಗೊತ್ತಾಗುತ್ತದೆ.

ಹೀಗಲ್ಲದೆ ಪಾತ್ರಗಳು, ಸನ್ನಿವೇಶಗಳು ದಿಟ ಎಂಬುದು ನೋಡುವವರಿಗೆ ತಿಳಿಯ ಬೇಕು ಎಂಬ ಗುರಿಯನ್ನಿಟ್ಟುಕೊಂಡು ಬೇರೆ ಬೇರೆ ಒಳನುಡಿಗಳನ್ನು ಬಳಸುವವರೂ ಇದ್ದಾರೆ. ಆಯಾ ಒಳನುಡಿಗಳ ಚಹರೆಗಳನ್ನು ಸರಿಯಗಿ ತಿಳಿಯದೆ ಕೇವಲ ಕೆಲವು ಮೇಲುಮೇಲಿನ ಗುರುತುಗಳನ್ನು ಮಾತ್ರ ಅಳವಡಿಸಿಕೊಳ್ಳಲು ಹೊರಡುವ ಇಂತಹ ಕಡೆಗಳಲ್ಲಿ ಸೋಲು ಕಟ್ಟಿಟ್ಟದ್ದೆ. ಇದಕ್ಕೆ ಹತ್ತಾರು ಉದಾಹರಣೆಗಳನ್ನು ನೀಡಬಹುದು. ಉರ್ದುಭಾಷಿಕರ ನುಡಿ, ಮಾರ್ವಾಡಿಗಳ ನುಡಿ, ಮಂಗಳೂರಿನವರ ನುಡಿ, ಮಂಡ್ಯದ ರೈತರ ನುಡಿ, ತಮಿಳು-ಕನ್ನಡ ನುಡಿ ಮುಂತಾದವುಗಳನ್ನು ಅನುಕರಿಸಲು ಹೊರಟು

ಸೋತಿರುವ ಪ್ರಸಂಗಳು ಹಲವಾರಿವೆ. ಒಳನುಡಿಗಳನ್ನು ಆಡುವವರೂ ಕೂಡ ದಿನ ಕಳೆದಂತೆ ತಮ್ಮ ಒಳನುಡಿಗಳ ಜೊತೆಗೆ ಎಲ್ಲರಿಗೂ ತಿಳಿಯುವ ಕನ್ನಡದಲ್ಲಿ ಮಾತನಾಡಲು ಮುಂದಾಗುತ್ತಿರುವ ಇಂದಿನ ದಿನಗಳಲ್ಲಿ ಆ ಒಳನುಡಿಗಳನ್ನು ಹೀಗೆ ತಪ್ಪುತಪ್ಪಾಗಿ ಬಳಸಿಕೊಳ್ಳುವುದು ಸರಿಯಲ್ಲ. ಆ ಒಳನುಡಿಗಳನ್ನು ಆಡುವವರಿಗೆ ಇಂತಹ ತಪ್ಪು ಬಳಕೆಗಳು ಕೋಪ ತರಿಸಿದರೆ ಅದನ್ನು ಸರಿಯಾದ ಚೌಕಟ್ಟಿನಲ್ಲಿ ನೋಡಬೇಕಾಗುತ್ತದೆ.

## ಪ್ರತಿಯೊಂದು ಮಗುವಿನ ಹಕ್ಕು/ಪ್ರತಿಯೊಬ್ಬ ಮಗುವಿನ ಹಕ್ಕು

ಗೆಳೆಯರೊಬ್ಬರು **ಪ್ರತಿಯೊಂದು ಮಗುವಿನ ಹಕ್ಕು/ಪ್ರತಿಯೊಬ್ಬ ಮಗುವಿನ ಹಕ್ಕು** ಇವುಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಹೆಸರುಪದಗಳ ಹಿಂದೆ ಎಣಿಕೆ ಪದಗಳು ಬರುವಾಗ ಕನ್ನಡ ನುಡಿಯಲ್ಲಿ ಯಾವ ಕಟ್ಟನ್ನು ಪಾಲಿಸಬೇಕು? ಒಂದರಿಂದ ಐದರವರೆಗಿನ ಎಣಿಕೆ ಪದಗಳು ಮಾತ್ರ ಮುಂದೆ ಬರುವ ಹೆಸರುಪದ ಯಾವ ಲಿಂಗಕ್ಕೆ ಸೇರಿದ್ದು ಎಂಬುದನ್ನು ನೋಡಿಕೊಂಡು ಬದಲಾಗುತ್ತವೆ. ನೋಡಿ: ಒಬ್ಬ ಹೆಂಗಸು, ಒಂದು ಮರ; ಇಬ್ಬರು ಹುಡುಗರು, ಎರಡು ಕೋತಿಗಳು; ಮೂರು ಮನೆಗಳು, ಮೂವರು ರೈತರು; ನಾಲ್ಕು ಬಸ್ಸುಗಳು, ನಾಲ್ವರು ಸೈನಿಕರು; ಐದು ಕತ್ತಿಗಳು, ಐವರು ಪಯಣಿಗರು. ಬಳಿಕ ಬರುವ ಎಣಿಕೆ ಪದಗಳಿಗೆ ಈ ಬಗೆಯ ಬದಲಾವಣೆ ಕಾಣುವುದಿಲ್ಲ. (ಕೆಲವರು **ಆರ್ವರು** ಎಂಬ ಪದವನ್ನು ಬಳಸುವುದು ಕಂಡು ಬಂದರೂ ಅಂತಹ ಬಳಕೆಗಳು ಹೆಚ್ಚಿಲ್ಲ) ಈ ಕಟ್ಟನ್ನು ನೋಡಿದರೆ **ಪ್ರತಿಯೊಂದು ಮಗುವಿನ ಹಕ್ಕು** ಎಂಬ ರಚನೆಯೇ ಸರಿ. ಆದರೆ ಕನ್ನಡದಲ್ಲಿ ಒಂದು ಬದಲಾವಣೆ ನಡೆಯುತ್ತಿರುವಂತೆ ತೋರುತ್ತಿದೆ. ಮೊದಲ ಐದು ಎಣಿಕೆ ಪದಗಳು ಹೊಂದಿರುವ ಎರಡು ಬಗೆಯ ಬಳಕೆಗಳ ಜಾಗದಲ್ಲಿ ಒಂದನ್ನು ಮಾತ್ರ ಉಳಿಸಿಕೊಳ್ಳಲು ಮುಂದಾಗಿರುವುದೇ ಈ ಬದಲಾವಣೆ. ಈಗೀಗ **ಎರಡು ಮಕ್ಕಳು ಮತ್ತು ಇಬ್ಬರು ಮಕ್ಕಳು** ಎಂಬ ರಚನೆಗಳೆರಡೂ ಕಾಣತೊಡಗಿವೆ. ಒಬ್ಬರು, ಇಬ್ಬರು, ಮೂವರು, ನಾಲ್ವರು ಮತ್ತು ಐವರು ಎಂಬ ರೂಪಗಳ ಬದಲು ಒಂದು, ಎರಡು, ಮೂರು, ನಾಲ್ಕು ಮತ್ತು ಐದು ರೂಪಗಳು ಬಳಕೆಯಾಗತೊಡಗಿವೆ. **ಬಾಂಬ್ ಸ್ಫೋಟದಲ್ಲಿ ಐದು ಸಾವು** (ಐವರ ಸಾವು ಇಲ್ಲವೇ ಐದು ಜನರ ಎಂಬ ರಚನೆಗಳ ಬದಲು) ಮಾದರಿಯ ರಚನೆಗಳನ್ನು ನಾವೀಗ ಒಪ್ಪಿಕೊಳ್ಳುತ್ತಿದ್ದೇವೆ. ಈ ಬದಲಾವಣೆಯಾಗಲು ಕನ್ನಡನುಡಿಯ ಮೇಲೆ ಇಂಗ್ಲಿಶ್‌ನುಡಿಯ ರಚನೆಗಳ ಒತ್ತಡ ಹೆಚ್ಚಾಗುತ್ತಿರುವುದೇ ಕಾರಣವಾಗಿದೆ.

## ಮಧ್ಯರಾತ್ರಿ/ತಡರಾತ್ರಿ

ಶಾಂತಲಾ. ಎಸ್.ಎಂ (ರಾಯಚೂರು) ಇವರು **ಮಧ್ಯರಾತ್ರಿ** ಎಂಬ ರಚನೆಯ ಬದಲು ಈಚೆಗೆ **ತಡರಾತ್ರಿ** ಎಂಬ ಪದವನ್ನು ಬಳಸುತ್ತಿರುವುದು ಸರಿಯೇ ಎಂದು ಕೇಳಿದ್ದಾರೆ. ಕನ್ನಡದಲ್ಲಿ ಬಳಕೆಯಲ್ಲಿರುವ **ಸರಿರಾತ್ರಿ, ನಡುರಾತ್ರಿ ,ಸವರಾತ್ರಿ ಸವಹೊತ್ತು** ಎಂಬ ಪದಗಳ ಬದಲು ಈ ಹೊಸಪದ ಏಕೆ ಎನ್ನುವುದೂ ಇವರ ಇನ್ನೊಂದು ಕೇಳ್ವಿ (**ಸವ** ಎಂಬದು **ಸಮ** ಎಂಬುದರ ಇನ್ನೊಂದು ರೂಪ. ಅಂದರೆ ಸವರಾತ್ರಿ ಎಂದರೆ ಸಮರಾತ್ರಿ) **ತಡರಾತ್ರಿ** ಎನ್ನುವುದು ಇಂಗ್ಲಿಶಿನ **ಲೇಟ್‌ನೈಟ್** ಎಂಬ ರಚನೆಯ

ಬದಲಿಗೆ ಕನ್ನಡದಲ್ಲಿ ಬಳಕೆಯಾಗುತ್ತಿರುವ ರಚನೆಯಾಗಿದೆ. ಇದು ನಡುರಾತ್ರಿಗೆ ಸರಿ ಹೊಂದುವ ಪದವೇನಲ್ಲ. ರಾತ್ರಿಯಲ್ಲಿ ತುಂಬ ತಡವಾದಾಗ ಬೆಳಗಿನ ಎರಡು ಮೂರು ಗಂಟೆಯವರೆಗೂ ತಡರಾತ್ರಿ ಎನ್ನುವುದು ವಾಡಿಕೆ. ಇದು ಪತ್ರಿಕೆಯವರು ಹೊತ್ತನ್ನು ಗುರುತಿಸುವ ಬಗೆ. ದಿನಪತ್ರಿಕೆಯ ಕೊನೆಯ ಅಚ್ಚನ್ನು ಅಣಿಗೊಳಿಸುವಾಗ ಕೊನೆಕೊನೆಗೆ ಬಂದ ಸುದ್ದಿಯನ್ನು ಗುರುತಿಸಲು ಈ ಪದವನ್ನು ಬಳಸುವುದುಂಟು. ತಡರಾತ್ರಿ ಎಂಬ ಮಾದರಿಯಲ್ಲಿ **ತಡಹಗಲು** ಎಂದು ಬಳಸಬಹುದೇ ಎಂದೂ ಇವರು ಕೇಳಿದ್ದಾರೆ. ಇದು ಸರಿಹೊಂದದು. ಈಚೆಗೆ ಕನ್ನಡದಲ್ಲಿ ಹೊತ್ತನ್ನು ಗುರುತಿಸಲು **ಮುಂಜಾವು/ ಮುಂಜಾನೆ, ಏರುಹಗಲು, ನಡುಹಗಲು, ಇಳಿಹಗಲು, ಸಂಜೆ/ಮುಸ್ಸಂಜೆ, ಇರುಳು, ನಟ್ಟಿರುಳು** ಎಂಬ ಪದಗಳನ್ನು ಬಳಸುವುದು ವಾಡಿಕೆಯಲ್ಲಿದೆ.

**ಪರವಾಗಿಲ್ಲ/ಪರವಾಯಿಲ್ಲ**

ನಟರಾಜು.ವಿ (ಕೊಳ್ಳೇಗಾಲ) ಇವರು **ಪರವಾಗಿಲ್ಲ** ಎಂದು ವಾಡಿಕೆಯ ನುಡಿಯಲ್ಲಿ ಹೇಳುವುದು ಸರಿಯಾದುದೇ ಎಂದು ಕೇಳಿದ್ದಾರೆ. ಕನ್ನಡದ ಕೆಲವು ಒಳನುಡಿಗಳಲ್ಲಿ **ಪರವಾಗಿಲ್ಲ/ಪರವಾಯಿಲ್ಲ** ಎಂಬ ರಚನೆಯ ಬದಲು **ಅಡ್ಡಿಯಿಲ್ಲ** ಎಂದು ಹೇಳುವುದುಂಟು. **ಪರವಾಗಿಲ್ಲ** ಎಂಬ ರಚನೆಯನ್ನೂ ಕೆಲವೊಮ್ಮೆ **ಏನೂ ತೊಂದರೆಯಿಲ್ಲ** ಎಂಬ ತಿರುಳಿನೊಡನೆ ಬಳಸುತ್ತೇವೆಯಾದರೂ **ಸುಮಾರಾಗಿದೆ; ಚೆನ್ನಾಗಿದೆ** ಎನ್ನುವ ತಿರುಳಿನೊಡನೆಯೂ ಬಳಸುವುದುಂಟು. **ಅವರಿರುವುದು ಬಾಡಿಗೆ ಮನೆಯಾದರೂ ಮನೆ ಪರವಾಗಿಲ್ಲ** ಎನ್ನುವಾಗ ಎರಡನೆಯ ತಿರುಳು ಇದೆಯಲ್ಲವೇ? ಕೆಲವರು ಪರವಾಗಿಲ್ಲ ಎನ್ನುವ ಬದಲು **ಪರ್ವಾಯಿಲ್ಲ** ಎನ್ನುವುದೂ ಇದೆ. **ಪರವೆ, ಪರಿವೆ, ಪರವಾ, ಪರ್ವಾ** ಮುಂತಾದ ಪದಗಳೆಲ್ಲ ಒಂದೇ ಬೇರಿನಿಂದ ಬಂದಿವೆ. ಇವು ಪರ್ಷೋರ್ಅರಾಬಿಕ್ ನಂಟನ್ನು ಹೊಂದಿರುವ ಪದಗಳೆಂದು ಗುರುತಿಸಲಾಗಿದೆ. ಈ ಕೇಳ್ವಿಯನ್ನು ಕೇಳಿದವರು ಈ ರಚನೆಯಲ್ಲಿ **ಪರ** ಎಂಬ ಪದವಿದೆ ಎಂದು ತಿಳಿದಿರುವಂತಿದೆ. ಹಾಗಾಗಿ ಪರವಾಗಿಲ್ಲ ಎಂದರೆ **ವಿರೋಧವಾಗಿದೆ** ಎನ್ನುವ ತಿರುಳಿದೆ ಎಂದು ತಿಳಿದಂತಿದೆ. ಆದರೆ ಇದು ಸಂಸ್ಕೃತದ **ಪರ** ಪದದಿಂದ ಹುಟ್ಟಿದ ರಚನೆಯಲ್ಲ. ಈ ಬಗೆಯ ರಚನೆಯೂ ಕನ್ನಡದ ಬಳಕೆಯಲ್ಲಿ ಕಾಣಿಸುವುದುಂಟು. **ಮತದಾರರ ಒಲವು ಶ್ರೀಯುತರ ಪರವಾಗಿಲ್ಲ** ಎಂದಾಗ ಪರವಾಗಿಲ್ಲ ಎನ್ನುವುದಕ್ಕೆ **ಎದುರಾಗಿದೆ** ಎನ್ನುವ ತಿರುಳೇ ಇದೆ. ಆದರೆ ಇದು ಬೇರೆಯೇ ರಚನೆ. ಇದನ್ನು ಪರವಾಯಿಲ್ಲ, ಪರ್ವಾಯಿಲ್ಲ ಎಂದು ಬದಲಿಸಿ ಬಳಸಲು ಆಗುವುದಿಲ್ಲ.

**ಸಂಸ್ಕೃತ ಪದಗಳನ್ನು ಬಳಕೆಯಿಂದ ಬಿಡಬೇಕೇಕೆ?**

ಪತ್ರಿಕೆಯ ಓದುಗರೊಬ್ಬರು ತಮ್ಮ ಹೆಸರು ಹೇಳದೆ ಬರೆದ ಕಾಗದದಲ್ಲಿ, ಈ ಅಂಕಣದಲ್ಲಿ 'ಸಂಸ್ಕೃತ ಪದಗಳನ್ನು ಬಳಕೆಯಿಂದ ಬಿಡಬೇಕೆಂಬ ಪ್ರಚಾರವನ್ನು ಮಾಡುತ್ತಿರುವುದು ಸರಿಯಲ್ಲ' ಎಂದು ತಿಳಿಸಿದ್ದಾರೆ. ಒಂದು ಪದ ಕನ್ನಡದ್ದೋ ಅಲ್ಲವೋ ಎಂದು ತಿಳಿದು ಬಳಸುವುದು ಎಲ್ಲರಿಗೂ ಬೇಕಾಗಿರುವ ಸಂಗತಿಯಲ್ಲ. ನೂರಾರು ಪದಗಳನ್ನು ಅವುಗಳು ಮೊದಲಿಗೆ ಯಾವ ನುಡಿಗೆ ಸೇರಿದ್ದವು ಎಂಬುದನ್ನು

ತಿಳಿಯದೇ ಬಳಸುತ್ತಲೇ ಇರುತ್ತೇವೆ. ಆದರೆ ಕೆಲವು ಪದಗಳಿಗೆ ಬಳಕೆಯಲ್ಲಿ ಹೆಚ್ಚಿನ ಮನ್ನಣೆಯನ್ನು ನೀಡುವುದು ಮತ್ತು ಅವುಗಳ ಕಾಗುಣಿತದಲ್ಲಿ ಒಂದು ಚೂರು ಬದಲಾವಣೆಯಾದರೂ ಅದು ಕೆಟ್ಟ ಕನ್ನಡವೆಂದು ಕೂಗುವುದನ್ನು ಕಂಡಾಗ ಪದಗಳ ಜಾಡನ್ನು ತಿಳಿಯಬೇಕಾಗುತ್ತದೆ. ಈ ಹೆಚ್ಚಿನ ಮನ್ನಣೆಯನ್ನು ಪಡೆದ ಪದಗಳು ಸಂಸ್ಕೃತದಿಂದಲೇ ಬಂದಿವೆ. ಉದಾ.ಗೆ 'ಆಹಾರವನ್ನು ಸ್ವೀಕರಿಸಿದರು' ಮತ್ತು 'ಊಟ ಮಾಡಿದರು' ಎಂಬ ವಾಕ್ಯಗಳ ತಿರುಳುಗಳು ಒಂದೇ ಆಗಿದ್ದರೂ ಮೊದಲ ವಾಕ್ಯಕ್ಕೆ ಹೆಚ್ಚಿನ ಮನ್ನಣೆ ದೊರಕುವುದು ಸಾಮಾಜಿಕವಾದ ನಮ್ಮ ನಂಬಿಕೆಗಳಿಂದಲೇ ಹೊರತು ಬೇರೆ ಯಾವುದರಿಂದಲೂ ಅಲ್ಲ. ಕನ್ನಡ ಪದಗಳನ್ನು ನುಡಿಯುವಾಗ ಆಗುವ ಬದಲಾವಣೆಗಳನ್ನು ಸಹಿಸಿಕೊಳ್ಳುವವರು, ಸಂಸ್ಕೃತ ಪದಗಳನ್ನು ನುಡಿಯುವಾಗ ಆಗುವ ಬದಲಾವಣೆಗಳನ್ನು ಸಹಿಸುವುದಿಲ್ಲ. ಉದಾ.ಗೆ ಮಹಾಪ್ರಾಣಗಳನ್ನು ಅಲ್ಪಪ್ರಾಣಗಳನ್ನಾಗಿ ನುಡಿದರೆ ಅದು ಅಶುದ್ಧ ಬಳಕೆ ಎನ್ನುವರಷ್ಟೆ. ಅಂದರೆ ಜನರ-ನುಡಿಯುವವರ ನಡುವೆ ಮೇಲುಕೀಳು ಎಂಬ ಲೆಕ್ಕ ಹಿಡಿಯಲು ಸಂಸ್ಕೃತ ಪದಗಳನ್ನು ಒಂದು ಅಸ್ತ್ರವನ್ನಾಗಿ ಬಳಸುವಂತಿದೆ. ಹಾಗಾಗಿ ಈ ಅಂಕಣದಲ್ಲಿ ಆಗಾಗ ಪದಗಳ ಬೇರನ್ನು ಹುಡಕಿ ಹೇಳುವ ಕೆಲಸವನ್ನು ಮಾಡಬೇಕಾಗಿದೆ. ಇದು ಕನ್ನಡ ನುಡಿಯನ್ನು ಬಳಸುವವರು ಈಗ ತಿಳಿದಿರಬೇಕಾದ ಸಂಗತಿ ಎಂದು ನನಗೆ ಮನವರಿಕೆಯಾಗಿದೆ.

**ಸಿನಿಕ**

ರಮೇಶ ಎಚ್. ಮೇರವಾಡೆ (ರಾಯಚೂರು) ಇವರು **'ಸಿನಿಕ'** ಪದ ಕನ್ನಡದ್ದೇ ಎಂದು ಕೇಳಿದ್ದಾರೆ. ಅಲ್ಲ. ಇದು ಫ್ರೆಂಚ್ ನುಡಿಯ ಪದವಾಗಿದ್ದು ಇಂಗ್ಲಿಶ್ ಮೂಲಕ ಕನ್ನಡಕ್ಕೆ ಬಂದಿದೆ. ಸಿನಿಕ್, ಸಿನಿಕಲ್(ಗುಣಪದ), ಸಿನಿಸಿಸಂ ಮುಂತಾದ ಪದಗಳು ಹೀಗೆಯೇ ಕನ್ನಡದಲ್ಲಿ ಈಗ ಬಳಕೆಯಲ್ಲಿವೆ. ಎಲ್ಲರ ನಡವಳಿಕೆಯ ಹಿಂದೆಯೂ ಅವರವರ ಸ್ವಾರ್ಥವೇ ಕೆಲಸ ಮಾಡುತ್ತಿರುತ್ತದೆಂದೂ ಹಾಗಿಲ್ಲವೆಂದು ಹೇಳುವವರನ್ನು ನಂಬಬಾರದೆಂದು ಹೇಳುವವರೇ ಸಿನಿಕರು. ಕ್ರಿಪೂ 5ನೆಯ ಶತಮಾನದ ಹೊತ್ತಿಗೆ ಇದ್ದ ತತ್ತ್ವಶಾಸ್ತ್ರಜ್ಞರ ಒಂದು ಪಂಗಡಕ್ಕೆ ಸಿನಿಕರೆಂದು ಕರೆಯಲಾಗುತ್ತಿತ್ತಾದರೂ ಅದಕ್ಕೂ ಈಗ ಬಳಕೆಯಲ್ಲಿರುವ ತಿರುಳಿಗೂ ನೇರವಾದ ಸಂಬಂಧವಿಲ್ಲ. ಕಳೆದ ಶತಮಾನದ ನಡುಭಾಗದಿಂದ ಇಂಗ್ಲಿಶಿನ ಸಿನಿಕ್ ಪದವನ್ನು ಸಿನಿಕ (ಗಂಡಸರನ್ನು ಮಾತ್ರ ಸೂಚಿಸುವುದೇ? ಏಕೆಂದರೆ ಸಿನಿಕಿ, ಸಿನಿಕೆ ಪದಗಳು ಕನ್ನಡದಲ್ಲಿ ಇದ್ದಂತಿಲ್ಲ) ಎಂದು ಬದಲಿಸಿಕೊಂಡು ಕನ್ನಡದಲ್ಲಿ ಬಳಸಲಾಗುತ್ತಿದೆ.

**ಹೆಸರುಗಳು-ಗುರುತುಗಳು**

ಹೆಸರುಗಳು ನಮಗಿರುವ ಗುರುತುಗಳು. ಇವು ಏನೆಲ್ಲ ಗೊಂದಲಗಳನ್ನು ಉಂಟುಮಾಡಬಹುದು ಎಂಬುದನ್ನು ಕುರಿತಂತೆ ಒಂದು ಸಂಗತಿಯನ್ನು ನಟರಾಜ್ .ವಿ (ಕೊಳ್ಳೇಗಾಲ) ಇವರು ಬರೆದು ತಿಳಿಸಿದ್ದಾರೆ. ಪಾಸ್‌ಪೋರ್ಟ್ ಮುಂತಾದ ಹಲವಾರು ದಾಖಲೆಗಳನ್ನು ಪಡೆಯಬೇಕಾದಾಗ ಸಲ್ಲಿಸುವ ಅರ್ಜಿಗಳಲ್ಲಿ ನಮ್ಮ ಹೆಸರನ್ನು ಬರೆಯಬೇಕಾದ ಜಾಗದಲ್ಲಿ ಹೇಗೆ ದಾಖಲೆ ಮಾಡುವುದು ಎಂಬ ಗೊಂದಲ

ಉಂಟಾಗುತ್ತದೆ. ಅದರಲ್ಲಿ ಮೊದಲ ಹೆಸರು (ಫಸ್ಟ್ ನೇಮ್) ಕೊನೆಯ ಹೆಸರು (ಲಾಸ್ಟ್ ನೇಮ್) ಮತ್ತು ನಡುಕಲ ಹೆಸರು (ಮಿಡಲ್ ನೇಮ್) ಇವುಗಳಲ್ಲಿ ಯಾವ ಜಾಗದಲ್ಲಿ ಯಾವ ಹೆಸರು ಬರೆಯಬೇಕು? ಅದರಲ್ಲೂ ಕರ್ನಾಟಕದಲ್ಲಿ ತುಂಗಭದ್ರೆಯ ತೆಂಕಣಕ್ಕೆ, ಕಾವೇರಿಯ ಬಡಗಲಿನವರಿಗೆ ಒಂದೇ ಹೆಸರು ಇರುತ್ತದೆ. ಅಡ್ಡ ಹೆಸರು, ವಂಶನಾಮ, ಮನೆ ಹೆಸರು ಮುಂತಾದವು ಇರುವುದಿಲ್ಲ. ಅವರಿಗೆ ಇಟ್ಟ ಹೆಸರೇ ಮೊದಲ ಹೆಸರು. ಉಳಿದವೆಲ್ಲ ಇನಿಶಿಯಲ್ಸ್. ಇದರಲ್ಲಿ ಊರ ಹೆಸರು, ತಂದೆಯ ಹೆಸರು ಸೂಚಿತವಾಗುತ್ತಿರಬಹುದು. ಅಂತಾರಾಷ್ಟ್ರೀಯ ದಾಖಲೆಗಳ ಮಾದರಿಯನ್ನು ಬದಲಿಸಲು ನಮಗೆ ಆಗುವುದಿಲ್ಲ. ಹಾಗಾಗಿ ಇಟ್ಟ ಹೆಸರನ್ನು ಮೊದಲ ಹೆಸರೆಂದು ,ತಂದೆಯ ಹೆಸರನ್ನು ನಡುಕಲ ಹೆಸರೆಂದು, ಊರ ಹೆಸರನ್ನು ಕೊನೆಯ ಹೆಸರೆಂದು ಹೇಳಿಕೊಳ್ಳುವುದೇ ಉಳಿದಿರುವ ದಾರಿ. ಇದೆಲ್ಲ ನಾವು ಹೇಳುವಷ್ಟು ನೇರವಲ್ಲ. ಹೀಗೆ ದಾಖಲೆಯಾದ ಹೆಸರುಗಳು ಮುಂದೆ ಬೇರೆ ನಾಡುಗಳ ಜನರ ಬಾಯಲ್ಲಿ ಏನೆಲ್ಲ ತಿರುವುಗಳನ್ನು ಪಡೆದುಕೊಳ್ಳುತ್ತವೆ ಎಂಬುದನ್ನು ಹೇಳಲು ಹೊರಟರೆ ಅದೇ ಒಂದು ದೊಡ್ಡ ಕತೆಯಾಗುತ್ತದೆ.

**ತಪ್ಪುಗಳನ್ನು ಬೆಂಬಲಿಸುವುದಕ್ಕಲ್ಲ**

ನುಡಿಯುವಾಗ ಮತ್ತು ಬರೆಯುವಾಗ ಆಗುವ ತಪ್ಪುಗಳನ್ನು ಬೆಂಬಲಿಸಲಾಗುತ್ತಿದೆ ಎಂದು ಕೆಲವರು ತಿಳಿದಂತಿದೆ. ಹಾಗೆ ಬರೆದು ಹೇಳುತ್ತಿದ್ದಾರೆ. ಆದರೆ ಹೀಗೆ ತಿಳಿಯುವುದು ಸರಿಯಲ್ಲ; ಹೀಗೆ ತಿಳಿಯುವಂತೆ ಇಲ್ಲಿನ ಬರಹ ಇದ್ದರೆ ಅದೂ ಸರಿಯಲ್ಲ. ನುಡಿಯಲ್ಲಿ ತಪ್ಪುಗಳನ್ನು ಗುರುತಿಸುವುದು ಒಂದು ಹೆಜ್ಜೆ. ಇಲ್ಲಿಂದ ದಾರಿ ಕವಲಾಗುತ್ತದೆ. ಆ ತಪ್ಪುಗಳನ್ನು ಹೇಗೆ ನುಡಿದರೆ ಇಲ್ಲವೇ ಬರೆದರೆ ಸರಿಯಾಗುತ್ತದೆ ಎಂಬುದನ್ನು ತಿಳಿಸಿಕೊಡುವುದು ಒಂದು ಹಾದಿ. ಇನ್ನೊಂದು ದಾರಿ ತಪ್ಪುಗಳು ಉಂಟಾಗಲು ಕಾರಣಗಳೇನು ಎಂಬುದನ್ನು ಹುಡುಕುವ ಕಡೆಗೆ ಸಾಗುತ್ತದೆ. ಎರಡನೆಯ ಹಾದಿಯಲ್ಲೂ ಎಚ್ಚರದಿಂದ ಇರಬೇಕಾಗುತ್ತದೆ. ತಪ್ಪುಗಳು ಉಂಟಾಗುವುದಕ್ಕೆ ನುಡಿಯುವವರು ಇಲ್ಲವೇ ಬರೆಯುವವರು ಸರಿಯಗಿ ನುಡಿಯನ್ನು ಕಲಿಯದಿರುವುದೇ ಕಾರಣವೆಂದು ಹೇಳಿ ಗೂಬೆ ಕೂರಿಸುವುದು ಒಂದು ಬಗೆ. ಆದರೆ ಇದು ಯಾವಾಗಲೂ ಸರಿಯಲ್ಲದಿರಬಹುದು. ಏಕೆಂದರೆ ತಪ್ಪುಗಳಾಗಲು ಬೇರೆ ಏನೋ ಹೊರಗಿನ ಕಾರಣಗಳು ಇರುತ್ತವೆ ಎನ್ನುವುದನ್ನು ಮರೆಯುತ್ತೇವೆ. ನಮ್ಮ ಕಲಿಕೆಯ ಚೌಕಟ್ಟಿನಲ್ಲಿ ತಪ್ಪುಗಳಿಗೆ ಕಲಿಯುವವರನ್ನು ಹೊಣೆಮಾಡಿ ಅವರಿಗೆ ಬರೆಹಾಕುವುದೇ ಸರಿಯೆಂದು ತಿಳಿಯಲಾಗಿದೆ. ಈ ಅಂಕಣದ ಬರಹಗಳಲ್ಲಿ ತಪ್ಪಿಗೆ ಕಾರಣಗಳನ್ನು ಮತ್ತು ಆ ಕಾರಣಗಳು ಹಲವು ಬಾರಿ ಸಮಾಜದ ಕಟ್ಟೋಣದಲ್ಲಿ ಇರುತ್ತವೆ ಎನ್ನುವುದನ್ನು ತಿಳಿಯುವ ಗುರಿ ಇರುತ್ತದೆ.

ನುಡಿಯಲ್ಲಿ ಒಂದು ಕಟ್ಟು ಇದೆ ಎಂದುಕೊಳ್ಳಿ. ಆ ಕಟ್ಟು ಏನು ಎಂದು ಬಣ್ಣಿಸಿದರೆ ಮುಗಿಯಿತೇ? ಆ ಕಟ್ಟು ಏಕಿದೆ ಎನ್ನುವುದನ್ನೂ ಕಂಡುಕೊಳ್ಳಬೇಕಾಗುತ್ತದೆ. ಆ ಕಟ್ಟನ್ನು ಯಾರಾದರೂ ಪಾಲಿಸದಿದ್ದರೆ ಇಲ್ಲವೇ ಆ ಕಟ್ಟು ನುಡಿಯ ಬೇರೆ ಒಳನುಡಿಗಳಲ್ಲಿ ಬಳಕೆಯಾಗದಿದ್ದರೆ ಆಗ ಏನು ಮಾಡುತ್ತೇವೆ? ಸುಮ್ಮನೆ ತಪ್ಪು ಎಂದು ಹೇಳಿ ನುಡಿಯುವವರನ್ನು ಇಲ್ಲವೇ ಬರೆಯುವವರನ್ನು ಹೊಣೆ ಮಾಡುತ್ತೇವೆ.

ಈಗ ಒಂದು ಉದಾಹರಣೆಯನ್ನು ನೋಡೋಣ. ಶಾಲೆಯ ವ್ಯಾಕರಣಗಳನ್ನು ನೋಡಿದವರಿಗೆ ಉಕಾರದಿಂದ ಕೊನೆಯಾಗುವ ಹೆಸರುಪದಗಳಿಗೆ ತೃತೀಯಾ ಷಷ್ಠೀ ಮತ್ತು ಸಪ್ತಮೀ ವಿಭಕ್ತಿ ಪ್ರತ್ಯಯಗಳು ಸೇರುವಾಗ ಇನ್ ಆಗಮವಾಗುತ್ತದೆ ಎಂಬ ಕಟ್ಟನ್ನು ಹೇಳಿರುವುದು ಗೊತ್ತಿರುತ್ತದೆ. ಊರು ಎಂಬುದು ಹಾಗಾಗಿ ಊರಿನಿಂದ, ಊರಿನ ಮತ್ತು ಊರಿನಲ್ಲಿ ಎಂದಾಗುತ್ತದೆಂದು ತಿಳಿಯುತ್ತೇವೆ. ಆದರೆ ಈ ವ್ಯಾಕರಣಗಳು ಇನ್ ಎಂಬುದೇ ಏಕೆ ಆಗಮವಾಗಬೇಕು ಎಂದು ತಿಳಿಸುವುದಿಲ್ಲ. ಹಾಗೆ ತಿಳಿಸದೇ ಇದ್ದಾಗ ಕನ್ನಡದ ಒಂದು ಒಳನುಡಿಯನ್ನಾಡುವವರು ಊರ್‍ಲಿಂದ( =ಊರಿನಿಂದ), ಊರಾಗ(=ಊರಿನಲ್ಲಿ) ಎಂದೆಲ್ಲ ನುಡಿದರೆ ಅದು ತಪ್ಪೆಂದು ತೋರುತ್ತದೆ. ಅಲ್ಲದೆ ಮಗು ಎಂಬ ಹೆಸರು ಪದಕ್ಕೆ ಷಷ್ಠೀ ವಿಭಕ್ತಿ ಪ್ರತ್ಯಯ ಸೇರಿದಾಗ ಅದು ಮಗಿನ ಎಂದಾಗದೇ ಮಗುವಿನ ಎಂದೇಕೆ ಆಗುತ್ತದೆ? (ಹಾಗೆ ನೋಡಿದರೆ ಕನ್ನಡದ ಕೆಲವು ಒಳನುಡಿಗಳಲ್ಲಿ ಮಗೀನ್ ಬಟ್ಟೆ ಎಂದು ಹೇಳುವರೇ ಹೊರತು ಮಗುವಿನ ಬಟ್ಟೆ ಎನ್ನುವುದಿಲ್ಲ) ಅಂದರೆ ಇನ್ ಎಂಬುದು ಸೇರ್ಪಡೆಯಾಗುವುದು ಏಕೆಂದು ಹೇಳಬೇಕು. ಇಲ್ಲದಿದ್ದರೆ ಕೆಲವು ಗೋಜಲುಗಳು ಹಾಗೇ ಉಳಿದುಬಿಡುತ್ತವೆ. ಇಲ್ಲವೇ ಇನ್ ಎಂಬುದು ಉಕಾರಾಂತವಲ್ಲದ ಹೆಸರುಪದಗಳಿಗೂ ಸೇರಿದರೆ ಆಗ ಕಟ್ಟನ್ನು ಬದಲಿಸಬೇಕಾಗುವುದು. ಆಚಿನ ಮನೆ, ನಾಳಿನ ಪ್ರಜೆಗಳು, ಹೆಚ್ಚಿನ ವಿವರಗಳು ಮುಂತಾದ ಬಳಕೆಗಳನ್ನು ನಾವು ಏನು ಮಾಡಬೇಕು?

**ಮೃತದೇಹದ ರವಾನೆ**

**ದಹನ ಸ್ಥಳಕ್ಕೆ ಮೃತದೇಹದ ರವಾನೆ** ಎಂಬ ಸುದ್ದಿ ತುಣುಕುಗಳು ಈಚೆಗೆ ಟಿವಿ ಪರದೆಗಳ ಮೇಲೆ ಕಾಣಿಸಿಕೊಂಡವು. **ರವಾನೆ** ಪದದ ಬಳಕೆ ಸರಿಯೇ ಎಂಬುದನ್ನು ನೊಡೋಣ. ಇದು ಪರ್ಶಿಯನ್ ನುಡಿಯಿಂದ ಬಂದಿರುವ ಪದ. ಕನ್ನಡದಲ್ಲಿ ಕಳುಹಿಸುವುದು ಎಂಬ ತಿರುಳುಳ್ಳ ಹೆಸರುಪದವಾಗಿ ಬಳಕೆಯಾಗುತ್ತದೆ. ರವಾನೆ, ರವಾನಿಸು, ರವಾನೆದಾರ, ರವಾನೆಗೊಳ್ಳು ಮುಂತಾಗಿ ಬಳಕೆಯಲ್ಲಿದೆ. ಸಾಗಿಸುವ ಸಾಮಗ್ರಿಯೊಡನೆ ಯಾರೂ ಇಲ್ಲದಿರುವಾಗ ರವಾನೆ ಎಂಬ ಪದವನ್ನು ಬಳಸುತ್ತೇವೆ. ಕಳುಹಿಸುವರು ಮತ್ತು ಪಡೆಯುವವರು ಬೇರೆಬೇರೆಯಾಗಿದ್ದು ನಡುವಣ ಸಾಗಣೆಯನ್ನು ರವಾನೆ ಪದ ಹೇಳುತ್ತದೆ. ಈ ತಿರುಳು ಮೇಲೆ ಹೇಳಿದ ವಾಕ್ಯದಲ್ಲಿ ಹೊಂದುವುದಿಲ್ಲ. ಅಲ್ಲವೇ? ಇನ್ನು ಮೃತದೇಹ ಎಂಬ ಪದವನ್ನು ನೋಡಿ. ಪತ್ರಿಕೆಗಳು ಈ ಪದವನ್ನು ತುಂಬ ಬಳಸುತ್ತವೆ. **ಅವಶೇಷಗಳ ಅಡಿಯಲ್ಲಿ ನಾಲ್ಕು ಮೃತದೇಹಗಳ ಪತ್ತೆ** ಎಂಬ ಸುದ್ದಿ ವಾಕ್ಯಗಳನ್ನು ಓದಿರುತ್ತೇವೆ. ಮೃತ ಎಂಬುದು ಇಲ್ಲಿ ಸತ್ತ, ಜೀವವಿಲ್ಲದ ಎಂಬ ತಿರುಳು ಹೊಂದಿರುವ ಗುಣಪದ. ಶವ ಇಲ್ಲವೇ ಹೆಣ ಎಂಬ ಒಂದೇ ಪದ ಹೇಳುವ ತಿರುಳನ್ನು ಮೃತದೇಹ ಪದದ ಮೂಲಕ ಹೇಳುವ ಗುರಿ ಇದ್ದಂತಿದೆ. ಆದರೆ ಇಲ್ಲಿ ಮೃತ ಎಂಬ ಗುಣಪದವ ಬಳಕೆಯೇ ಬೇಕಿಲ್ಲ. ದೇಹ ಎಂದಷ್ಟೇ ಸಾಕಲ್ಲವೇ? ಕನ್ನಡ ಪದಗಳ ಬದಲು ಸಂಸ್ಕೃತ ಪದಗಳನ್ನು ಬಳಸಿದರೆ ಸಂದರ್ಭದ ಗಹನತೆಯನ್ನು , ಗೌರವವನ್ನು ಹೆಚ್ಚಿಸಿದಂತೆ ಎಂಬ ನಂಬುಗೆ ನಮ್ಮಲ್ಲಿ ಆಳವಾಗಿ ಬೇರೂರಿದೆ. ಹಾಗಾಗಿ ಕನ್ನಡ ಪದಗಳನ್ನು ಬಳಸಬೇಕಾದ ಕಡೆಗಳಲ್ಲೂ ಬೇರೆನುಡಿಯ ಪದಗಳನ್ನು ಬಳಸಲು ಮುಂದಾಗುತ್ತೇವೆ.

## ಭಯದ ನೆರಳಲ್ಲಿ ಬದುಕು

**ಭಯದ ನೆರಳಲ್ಲಿ ಬದುಕು** ಎಂಬ ರಚನೆಯನ್ನು ನೋಡಿ. ಇದರ ತಿರುಳನ್ನು ಕೇಳಿದರೆ ಯಾರೋ ಭಯದಿಂದ ಬದುಕುತ್ತಿದ್ದಾರೆ ಎನ್ನುವುದನ್ನು ಈ ರಚನೆ ಹೇಳುತ್ತಿದೆ ಎನ್ನುತ್ತೇವೆ. ಒಂದು ಸಂಗತಿಯನ್ನು ಹೇಳುವಾಗ ಯಾವುದೋ ಒಂದು ಹೋಲಿಕೆಯನ್ನು, ನುಡಿಗಟ್ಟನ್ನು ಬಳಸುವುದು ವಾಡಿಕೆ. ಅದರಲ್ಲಿ ಹೊಸದೇನೂ ಇಲ್ಲ. **ಚಳಿಯಿಂದ ಕೈಕಾಲು ಮರಗಟ್ಟಿ ಹೋದ**ವೆಂದು ಹೇಳುತ್ತೇವೆ. ಮರಗಟ್ಟು ಎಂಬುದು ದಿಟವಾಗಿಯೂ ಮರವಾಗುವುದನ್ನು ಹೇಳುವುದಿಲ್ಲ. ಮೇಲೆ ಹೇಳಿದ ರಚನೆಯಲ್ಲಿ ಭಯದ ನೆರಳು ಎಂಬ ಮಾತಿದೆ. ಇದು ಕನ್ನಡದ ವಾಡಿಕೆಯ ನುಡಿಗಟ್ಟಲ್ಲ. ನೆರಳು ಪದವನ್ನು ಆಸರೆ ನೀಡುವ, ಒತ್ತಾಸೆಯಾಗುವ ತಿರುಳಿನಲ್ಲಿ ಬಳಸುವುದುಂಟು. ಭಯದ ನೆರಳು ಮತ್ತು ನೆರಳಿನ ಭಯ ಇವೆರಡೂ ಒಂದೇ ಅಲ್ಲ. ಎರಡನೆಯ ಮಾತಿನಲ್ಲಿ ನೆರಳು ಕತ್ತಲು, ತಾನು ಹಿಂದೆ ಮಾಡಿದ ತಪ್ಪುಕೆಲಸ ಎಂಬೆಲ್ಲ ತಿರುಳುಗಳನ್ನು ಹೊಂದುತ್ತದೆ. **ತನ್ನ ನೆರಳಿಗೆ ಅಂಜಿ ಬಾಳಬೇಕು** ಎಂದಾಗ ತಪ್ಪು ಸರಿ ಯಾವುದು ಎಂದು ತಿಳಿಸಿಕೊಡುವ ಹಾಗೂ ತನ್ನೊಳಗೇ ಇರುವ ತಿಳಿವನ್ನು ನೆರಳು ಎಂದು ಹೇಳಲಾಗಿದೆ. ಆದರೆ ಭಯದ ನೆರಳು ಎನ್ನುವುದಾಗ ಈ ಎಲ್ಲ ತಿರುಳುಗಳಿಲ್ಲ. ಹಾಗೆ ನೋಡಿದರೆ ಇಂಗ್ಲಿಶಿನ ಶ್ಯಾಡೋ ಆಫ್ ಫಿಯರ್ ಎಂಬ ನುಡಿ ರಚನೆಯನ್ನು ಕನ್ನಡಕ್ಕೆ ತರಲು ಹೊರಟಾಗ ಈ ನುಡಿ ಹುಟ್ಟಿಕೊಂಡಿದೆ. ಹಾಗೆ ನೋಡಿದರೆ ಈಚೆಗೆ ಕನ್ನಡದಲ್ಲಿ ಹೀಗೆ ಇಂಗ್ಲಿಶಿನಿಂದ ನುಡಿಗಟ್ಟುಗಳನ್ನು ಅನುವಾದಿಸಿಕೊಳ್ಳುವ ಬಗೆ ಹೆಚ್ಚುತ್ತಿದೆ. ಅವುಗಳಲ್ಲಿ ಎಷ್ಟೋ ಇಂಗ್ಲಿಶಿನಿಂದ ಬಂದವು ಎಂಬುದನ್ನು ತಿಳಿಯಲೂ ಈಗ ಆಗುತ್ತಿಲ್ಲ. **ತಪ್ಪು ಸಂದೇಶ ರವಾನಿಸು** ಎಂಬ ಇನ್ನೊಂದು ಇಂತಹುದೇ ರಚನೆಯನ್ನು ಈ ನಿಟ್ಟಿನಲ್ಲಿ ನೋಡಿ.

## ವೈಭವೀಕರಣ

ಮಿತ್ರರೊಬ್ಬರ ಬರಹದ ತಲೆಬರಹ ಹೀಗಿತ್ತು.**'ಜನವಿರೋಧಿ ರಾಜಪ್ರಭುತ್ವದ ವೈಭವೀಕರಣ'** ಈ ರಚನೆಯಲ್ಲಿ ಮೂರೂ ಸಂಸ್ಕೃತದ ಪದಗಳು. ಮೊದಲ ಎರಡು ಪದಗಳು ಗುಣಪದಗಳು. ಕೊನೆಯ ಪದವನ್ನು ಹೆಸರುಪದವೆಂದು ತಿಳಿಯೋಣ. ಇಲ್ಲಿ ಯಾವುದರ ವೈಭವೀಕರಣ ನಡೆಯುತ್ತಿದೆ? **ರಾಜಪ್ರಭುತ್ವದ ವೈಭವೀಕರಣವೇ** ಇಲ್ಲವೇ **ಜನವಿರೋಧಿ ರಾಜಪ್ರಭುತ್ವದ** ವೈಭವೀಕರಣವೇ. ಜನವಿರೋಧಿ ಎಂಬ ಗುಣ ಪದ ವೈಭವೀಕರಣಕ್ಕೆ ಸೇರುವುದೋ ಇಲ್ಲವೇ ಅದನ್ನು ಜನವಿರೋಧಿ ರಾಜಪ್ರಭುತ್ವ ಎಂದು ಓದಬೇಕೇ? ಅಂದರೆ ಎರಡು ಗುಣಪದಗಳನ್ನು ಒಟ್ಟಿಗೆ ಬಳಸಿದಾಗ ಮೊದಲನೆಯ ಗುಣಪದ ಕೂಡಲೇ ಬರುವ ಪದಕ್ಕೆ ಗುಣಪದವೋ ಇಲ್ಲವೇ ಕೊನೆಯಲ್ಲಿ ಬರುವ ಹೆಸರು ಪದಕ್ಕೆ ಗುಣಪದವೋ? ಈ ಗೋಜಲು ಸುಳುವಾಗಿ ತಿಳಿಯಬೇಕೆಂದರೆ ಇಂತಹುದೆ ಒಂದು ರಚನೆಯನ್ನು ನೋಡೋಣ. **ಹಳೆಯ ಮನೆಯ ಬಾಗಿಲು** ಎಂಬ ರಚನೆಯಲ್ಲಿ ಹಳೆಯದಾಗಿರುವುದು **ಮನೆಯೋ** ಇಲ್ಲವೆ **ಮನೆಯ ಬಾಗಿಲೋ**? (ಹಳೆಯ ಮನೆಗೆ ಹಳೆಯ ಬಾಗಿಲೇ ಇರಬೇಕಿಲ್ಲವಲ್ಲ!) ಕನ್ನಡದಲ್ಲಿ ಹೀಗೆ ಎರಡು ಗುಣಪದಗಳನ್ನು ಒಟ್ಟಾಗಿ ಬಳಸಿದಾಗ ಕೆಲವೊಮ್ಮೆ ಗೋಜಲುಗಳು ಉಂಟಾಗುತ್ತವೆ. ಇದನ್ನು ತಪ್ಪಿಸಲು ದಾರಿಗಳಿವೆ. ಆಗ ವಾಕ್ಯಗಳನ್ನು ಕಟ್ಟುವ ಬಗೆಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕು.

ವೈಭವೀಕರಣಗೊಳ್ಳುತ್ತಿರುವ ಜನವಿರೋಧಿ ರಾಜಪ್ರಭುತ್ವ ಇಲ್ಲವೇ ರಾಜಪ್ರಭುತ್ವದ ಜನವಿರೋಧಿ ವೈಭವೀಕರಣ ಎಂದು ಬರೆದರೆ ಆಗ ಗೋಜಲು ಕಡಿಮೆಯಾಗಬಹುದಲ್ಲವೇ?

### ಕಣ್ಮರೆಯಾದ ಮೊದಲ ಮಹಿಳಾ ರಾಯಭಾರಿ

ಈಚೆಗೆ ಪತ್ರಿಕೆಯಲ್ಲಿ ವರದಿಯೊಂದಕ್ಕೆ ನೀಡಿದ ತಲೆಬರಹ ಹೀಗಿತ್ತು: 'ಕಣ್ಮರೆಯಾದ ಮೊದಲ ಮಹಿಳಾ ರಾಯಭಾರಿ' ಇದೊಂದು ಪದಕಂತೆ; ವಾಕ್ಯವಲ್ಲ. ಇದನ್ನು ಬಳಸಿಕೊಂಡು ವಾಕ್ಯವನ್ನು ಕಟ್ಟಬಹುದು. ಕನ್ನಡದಲ್ಲಿ ಹೀಗೆ ಪದಕಂತೆಗಳನ್ನು ತಲೆಬರಹವನ್ನಾಗಿ ಬಳಸುವ ಬಗೆಯನ್ನು ಕನ್ನಡ ಸುದ್ದಿ ಪತ್ರಿಕೆಗಳು ಲಾಗಾಯ್ತಿನಿಂದಲೂ ಬಳಸಿಕೊಂಡಿವೆ. ರಾಯಭಾರಿ ಎಂಬ ಹೆಸರುಪದಕ್ಕೆ ಮೊದಲಿಗೆ ಮೂರು ಗುಣಪದಗಳು (ಕಣ್ಮರೆಯಾ, ಮೊದಲ ಮತ್ತು ಮಹಿಳಾ) ಬಂದಿರುವುದರಿಂದ ಅವುಗಳ ತಿರುಳನ್ನು ಹೇಗೆ ಹೊಂದಿಸಿಕೊಳ್ಳಬೇಕೆಂಬ ಗೊಂದಲವೊಂದು ಉಂಟಾಗುತ್ತದೆ. ಅದಿರಲಿ. ಏಕೆಂದರೆ ಸುದ್ದಿ ಯಾರನ್ನು ಕುರಿತದ್ದು ಎಂಬುದು ಪತ್ರಿಕೆಯ ಓದುಗರಿಗೆ ಗೊತ್ತಾಗಿರುವುದರಿಂದ ಈ ಗೊಂದಲ ಇಲ್ಲವಾಗುತ್ತದೆ. ಆದರೆ ಇಲ್ಲಿ ಬಳಕೆಯಾದ 'ಕಣ್ಮರೆ' ಪದ ಕುರಿತು ಒಂದೆರಡು ಮಾತು ಹೇಳಬೇಕಾಗಿದೆ. ಹೆಚ್ಚಾಗಿ ಈ ಪದವನ್ನು ಕಾಣದಂತಾಗು ಎಂಬ ತಿರುಳಿನೊಡನೆ ಬಳಸುತ್ತೇವೆ. ಸಾಯುವುದೂ ಕೂಡ ಕಾಣದಂತಾಗುವುದು ಎಂಬ ಮಾತು ದಿಟವಾದರೂ ಕಣ್ಮರೆ ಪದವನ್ನು ಮತ್ತೆ ಕಾಣಿಸಿಕೊಳ್ಳಬಹುದಾದ ಎಂಬ ಸೂಚನೆಯೊಡನೆ ಬಳಸುತ್ತೇವೆ. 'ಪ್ರವಾಹ: ಐವರು ಕಣ್ಮರೆ' ಎಂದಾಗ ಕಾಣದಂತಾಗಿರುವ ಐವರು ಮರಳಿ ಕಾಣಬಹುದೆಂದು ತಿಳಿಯುತ್ತೇವೆ. ಸಾವಿನ ಮಾತನ್ನು ಹೇಳುವಾಗ ಕಣ್ಮರೆ ಎಂದು ಹೇಳಲು ಅಡ್ಡಿಯಿಲ್ಲವಾದರು ಕನ್ನಡದಲ್ಲಿ ಈ ಬಗೆಯ ಬಳಕೆ ಕಡಿಮೆ.

### ಹಳ್ಳಿ, ಊರು, ಪುರ

ಎಂ.ನಿಂಗಪ್ಪ ಭೈರನತ್ತ (ಕೊಳ್ಳೇಗಾಲ) ಇವರು ಹಳ್ಳಿ, ಊರು, ಪುರ ಈ ಪದಗಳ ನಿಷ್ಪತ್ತಿಯನ್ನು ಕೇಳಿ ಅವುಗಳಲ್ಲಿ ಯಾವುದು ಹಳೆಯದು ಎಂದು ಕೇಳಿದ್ದಾರೆ. ಹಳ್ಳಿ, ಊರು ಇವು ದ್ರಾವಿಡ ನುಡಿಗೆ ಸೇರಿವೆ. ಪುರ ಸಂಸ್ಕೃತದಿಂದ ಬಂದು ಸೇರಿದ ಪದ. ಹಳ್ಳಿ ಪದವು ಪಳ್ಳಿ ಎಂದು ತಮಿಳಿನಲ್ಲಿ( ತಿರುಚಿನಾಪಳ್ಳಿ), ಪಲ್ಲಿ(ಪೋಚಂಪಲ್ಲಿ) ಎಂದು ತೆಲುಗಿನಲ್ಲಿ ಕಾಣಿಸಿಕೊಳ್ಳುತ್ತದೆ. ಕನ್ನಡಲ್ಲಿಯೂ ಇದು ಪಳ್ಳಿ ಎಂದಿತ್ತು. (ಇದರ ಪಳೆಯುಳಿಕೆಗಳು ಮಾಂಬಳ್ಳಿ, ವಾರಂಬಳ್ಳಿ ಮುಂತಾದ ಕನ್ನಡ ನಾಡಿನ ನೆಲೆಗಳ ಹೆಸರುಗಳಲ್ಲಿ ಇವೆ. ಈ ಪದಗಳಲ್ಲಿರುವ ಬಳ್ಳಿ ಎಂಬುದು ಮೊದಲಿದ್ದ ಪಳ್ಳಿ ಪದವೇ ಆಗಿದೆ) ಊರು ಎಂಬುದು ಊರ್(ಕಾಲೂರು, ನೆಲೆಯೂರು, ಕೈಯೂರು) ಎಂಬ ಕೆಲಸಪದವನ್ನು ಬಳಸಿ ಕಟ್ಟಿದ ಹೆಸರುಪದ. ದ್ರಾವಿಡ ನುಡಿಗಳಲ್ಲೆಲ್ಲಾ ಹೆಚ್ಚಾಗಿ ಇದೇ ರೂಪದಲ್ಲಿ ಕಾಣಸಿಗುತ್ತದೆ. ತಿರುಳು ಅಲ್ಲಲ್ಲಿ ಬದಲಾಗಬಹುದು. ಅಲೆಮಾರಿಗಳಾಗಿದ್ದವರು, ಕುರಿಗಾಹಿಗಳೋ ದನಗಾಹಿಗಳೋ ಆಗಿದ್ದವರು ಒಂದೆಡೆ ನೆಲೆಸಲು ಮೊದಲು ಮಾಡಿದಾಗ ಪಳ್ಳಿಗಳು, ಊರುಗಳು ತಲೆ ಎತ್ತಿದವು ( ಹಟ್ಟಿ, ಹುಂಡಿ ಮುಂತಾದವೂ ಹೀಗೆಯೇ ಹುಟ್ಟಿಕೊಂಡಿವೆ) ಜನರು ಮತ್ತು ಅವರ ಸಾಕು ಪ್ರಾಣಿಗಳು ಅಲ್ಲದೆ ಅವರು ಹಸನುಮಾಡಿ ಬೆಳೆ ತೆಗೆಯುತ್ತಿದ್ದ ಹೊಲಗದ್ದೆಗಳು

ಒಟ್ಟೊಟ್ಟಾಗಿ ಇರುವ ಜಾಗಗಳಿವು. ಪುರಗಳು ಆಮೇಲೆ ಹುಟ್ಟಿಕೊಂಡವು. ವ್ಯಾಪಾರ ವಹಿವಾಟುಗಳು, ಸಂತೆಗಳು ನಡೆಯುತ್ತಿದ್ದ ಜಾಗಗಳವು. ಹಳ್ಳಿ ಮತ್ತು ಊರುಗಳಲ್ಲಿ ಯಾವುದು ಹಳೆಯದು ಎಂದು ಹೇಳುವುದು ಕಷ್ಟ. ಒಂದೊಂದು ಕಡೆ ಒಂದೊಂದು ಬಗೆಯಲ್ಲಿ ಈ ನೆಲೆಗಳು ತಲೆ ಎತ್ತಿವೆ. ಇದೆಲ್ಲವನ್ನು ಸ್ಥಳನಾಮಗಳನ್ನು ತಿಳಿಯುವವರು ಗಮನಿಸಿ ವಿವರಿಸಬಲ್ಲರು.

## ಕೃಷಿಕರಿಂದ ಕೃಷಿಕರಿಗಾಗಿ, ಕೃಷಿಕರಿಗೋಸ್ಕರ

ಎಂ.ಆರ್.ಮಹೇಶ್ವರಮೂರ್ತಿ (ಮಗ್ಗೆ) ಇವರು ಹೆಸರು ಹಲಗೆಯೊಂದರಲ್ಲಿ ಓದಿದ ವಾಕ್ಯವನ್ನು ಬರೆದು ತಿಳಿಸಿದ್ದಾರೆ. ' ಕೃಷಿಕರಿಂದ ಕೃಷಿಕರಿಗಾಗಿ, ಕೃಷಿಕರಿಗೋಸ್ಕರ ಇರುವುದು ಕೃಷಿ ಮಾರುಕಟ್ಟೆ' ಈ ವಾಕ್ಯದಲ್ಲಿ ಕೃಷಿಕರಿಗಾಗಿ ಮತ್ತು ಕೃಷಿಕರಿಗೋಸ್ಕರ ಎಂದು ಬೇರೆ ಬೇರೆ ಹೇಳಿರುವುದೇಕೆ. ಎರಡೂ ಒಂದೆ ತಿರುಳನ್ನು ಹೇಳುವುದಿಲ್ಲವೇ ಎನ್ನುವುದು ಇವರ ಪ್ರಶ್ನೆ. ಮೊದಲಿಗೆ ಇಂತಹ ಹೇಳಿಕೆಗಳು ಹುಟ್ಟಿಕೊಳ್ಳಲು ಕಾರಣವಾದ ಇಂಗ್ಲಿಶಿನ ಹೆಸರಾದ ವಾಕ್ಯವೊಂದನ್ನು ನೆನಪು ಮಾಡಿಕೊಳ್ಳೋಣ. ಇದು ಅಮೆರಿಕಾದ ಅಧ್ಯಕ್ಷ ಅಬ್ರಾಹಮ್ ಲಿಂಕನ್ ಹೇಳಿದ ಮಾತೊಂದನ್ನು ನೆಲೆಯಾಗಿರಿಸಿಕೊಂಡಿದೆ. 'ಡೆಮಾಕ್ರಸಿ ಇಸ್ ದ ಗವರ್ನಮೆಂಟ್ ಆಫ್ ದ ಪೀಪಲ್, ಬೈ ದ ಪೀಪಲ್, ಫಾರ್ ದ ಪೀಪಲ್' ಎಂಬ ವಾಕ್ಯವನ್ನು ನೂರಾರು ಕಡೆಗಳಲ್ಲಿ ಹೊಂದಿಸಿಕೊಂಡು ಬಳಸಲಾಗಿದೆ. ಮೇಲೆ ಹೇಳಿದ ವಾಕ್ಯ ಕೂಡ ಇದೇ ಮಾದರಿಯಲ್ಲಿದೆ. ಮೂಲ ವಾಕ್ಯದಲ್ಲಿರುವ ಇಂಗ್ಲಿಶಿನ ಪ್ರಿಪೊದಿಶನ್ (ಆಫ್, ಬೈ ಮತ್ತು ಫಾರ್)ಗಳನ್ನು ಕನ್ನಡದಲ್ಲಿ ಹೊಂದಿಸಿ ಹೇಳಲು ಹೊರಟಾಗ ಇಂತಹ ಗೊಂದಲಗಳು ಉಂಟಾಗಿಯೇ ತೀರುತ್ತವೆ. ಏಕೆಂದರೆ ಆ ನುಡಿಯ ಪದಗಳು ಬಳಕೆಯ ಪರಿಸರದಲ್ಲಿ ಹೊಂದಿರುವ ತಿರುಳನ್ನು ಹಿಡಿದಿಡಲು ಕನ್ನಡದ ಪದಗಳನ್ನು ಹುಡುಕಲು ಹೊರಟರೆ ಸರಿಯಾಗುವುದಿಲ್ಲ. ಮೇಲೆ ಹೇಳಿದ ಮಾದರಿಯ ಗೊಂದಲದ ವಾಕ್ಯಗಳು ಹುಟ್ಟಿಕೊಳ್ಳುತ್ತವೆ. 'ಪ್ರಜೆಗಳಿಂದ (ಬೈ ದ ಪೀಪಲ್) ಪ್ರಜೆಗಳಿಗಾಗಿ (ಫಾರ್ ದ ಪೀಪಲ್) ಕಟ್ಟಿದ ಪ್ರಜೆಗಳ (ಆಫ್ ದ ಪೀಪಲ್) ಸರಕಾರವೇ ಪ್ರಜಾಪ್ರಭುತ್ವ' ಎಂದು ಹೇಳಬಹುದಾದರೆ ಆಗ ಆ ವಾಕ್ಯದಲ್ಲಿ ಪ್ರಜೆ ಪದದ ಬದಲು ಕೃಷಿಕರು ಎಂದು ಬದಲಿಸಿಕೊಳ್ಳಬಹುದಾಗಿದೆ.

## ಪದಗಳ ಆಯ್ಕೆಯಲ್ಲಿ ತಪ್ಪುಗಳು

ಹೆಚ್ಚಿನವರ ಕನ್ನಡ ಬರವಣಿಗೆಯಲ್ಲಿ ಕಂಡುಬರುವ ತಪ್ಪುಗಳ ಎರಡನೆಯ ಬಗೆಯನ್ನು ಈ ಟಿಪ್ಪಣಿಯಲ್ಲಿ ನೋಡೋಣ. ಸರಿಯಾದ ಪದಗಳನ್ನು ಆಯ್ದುಕೊಳ್ಳುವಾಗ ಆಗುವ ತಪ್ಪುಗಳನ್ನು ಇಲ್ಲಿ ಗಮನಿಸಬಹುದು. ಬರವಣಿಗೆಯಲ್ಲಿ ಹೇಳಬೇಕಾದದ್ದು ಏನು ಎಂಬುದು ಸರಿಯಾಗಿ ಗೊತ್ತಿಲ್ಲದಿರುವುದು ಒಂದು ತೊಂದರೆಯಾದರೆ ಸರಿಯಾಗಿ ಗೊತ್ತಿದ್ದರೂ ಹೇಳಲು ತಕ್ಕ ಪದಗಳನ್ನು ಆಯ್ದುಕೊಳ್ಳದಿರುವುದು ಇನ್ನೊಂದು ತಪ್ಪು. ಇವೆರಡೂ ಬೇರೆಬೇರೆಯೇ ಇಲ್ಲವೇ ಒಂದೇ ಬಗೆಯ ತಪ್ಪುಗಳೇ ಎಂಬುದನ್ನು ಈಗ ಚರ್ಚಿಸುವುದು ಬೇಡ. ಆದರೆ ಮಾತಾಡುವಾಗ ಮತ್ತು ಬರೆಯುವಾಗ ಸರಿಯಾದ ಪದಗಳು ನೆನಪಿಗೆ ಬಾರದಿರುವುದು, ನೆನಪಿಗೆ ಬಂದು ನಾವು ಬಳಸುವ ಪದಗಳು

ಸರಿಯಾಗಿ ಹೊಂದಿಕೊಳ್ಳದಿರುವುದು ನಡೆದೇ ಇರುತ್ತದೆ. ಮಾತಿನಲ್ಲಿ ಹೀಗೆ ಆದಾಗ ಅದನ್ನು ತಿದ್ದಿಕೊಂಡು ಮಾತಾಡುತ್ತೇವೆ. ಆಗ ಸರಿಯಾದ ಪದವನ್ನು ಬಳಸುವುದಕ್ಕೆ ಆಗದಿದ್ದರೂ ನಾವು ಹೇಳಬೇಕಾಗಿರುವುದೇನು ಎಂಬುದನ್ನು ಬೇರೆಯ ಪದಗಳಲ್ಲಿ ಹೇಳಿ ಮುಂದುವರೆಯುತ್ತೇವೆ. ಬರವಣಿಗೆಯಲ್ಲಿ ಯಾವಾಗಲೂ ಹೀಗೆ ಮಾಡಲಾಗುವುದಿಲ್ಲ. ಹಾಗಾಗಿ ಈ ತಪ್ಪುಗಳು ಉಳಿದುಕೊಂಡುಬಿಡುತ್ತವೆ.

ಈಚೆಗೆ ಜಾಹಿರಾತಿನಲ್ಲಿ ಓದಿದ/ಕೇಳಿದ ವಾಕ್ಯವೊಂದನ್ನು ನೋಡಿ: ‘ **ನಿಮ್ಮ ಕೂದಲು ಮುರಿದು ಹೋಗುವುದೆಂಬ ಭಯವೇ?**’ ಇಲ್ಲಿ ಬಳಸಲಾದ **ಮುರಿ** ಎಂಬ ಕೆಲಸಪದ ಕನ್ನಡದ್ದೇ ಆಗಿದ್ದರೂ ಅದನ್ನು ಇಲ್ಲಿ ಬಳಸಲು ಬರುವುದಿಲ್ಲ. ಗಟ್ಟಿಯಾಗಿರುವುದನ್ನು, ಬಳುಕದಿರುವುದನ್ನು ಮುರಿಯಬಹುದು; ಆದರೆ ಕೂದಲು ಮುರಿಯುವುದಿಲ್ಲ; ತುಂಡಾಗುತ್ತದೆ ಇಲ್ಲವೇ ಕಿತ್ತು ಹೋಗುತ್ತದೆ. ಹಾಗಾಗಿ **ಮುರಿ ,ಹರಿ, ತುಂಡಾಗು, ಕೀಳು** ಇವೇ ಮೊದಲಾದ ಕೆಲಸ ಪದಗಳನ್ನು ಸರಿಯಾಗಿ ಬಳಸಬೇಕಾಗುತ್ತದೆ. (ಜಾಹಿರಾತಿನಲ್ಲಿ ಮುರಿ ಎಂದು ಬಳಸಿರುವುದಕ್ಕೆ ಆ ವಾಕ್ಯ ಬರೆದವರು ಇಂಗ್ಲಿಶಿನ **ಬ್ರೇಕ್** ಎಂಬ ಕೆಲಸ ಪದವನ್ನು ಇರುವಂತೆಯೇ ಇರಿಸಲು ಹೊರಟದ್ದೇ ಕಾರಣ) ಕನ್ನಡದ ಒಳನುಡಿಗಳು ಇದಕ್ಕೆ ಬೇರೆ ಬೇರೆ ಬಗೆಯಲ್ಲಿ ಕಟ್ಟುಗಳನ್ನು ಕಂಡುಕೊಂಡಿವೆ. ಬಳ್ಳಾರಿಯ ಕಡೆ **‘ಹೂ ಹರಕೊಂಡು (=ಹರಿದುಕೊಂಡು) ಬಂದೆ’** ಎಂಬ ಮಾತು ಕೇಳುತ್ತೇವೆ. ತೆಂಕಣ ನಾಡಿನವರಿಗೆ ಹೂ ಬಿಡಿಸಲು ಗೊತ್ತು, ಇಲ್ಲವೇ ಹೂ ಕೀಳಲು ಗೊತ್ತು ಆದರೆ ಅವರು **ಹೂ ಹರಿ** ಎಂದು ಹೇಳುವುದಿಲ್ಲ. ಅಂದರೆ ಪದಗಳನ್ನು ಬಳಸುವಾಗ ಒಳನುಡಿಗಳ ಬಳಕೆಯ ಕಟ್ಟುಗಳನ್ನೂ ಕೂಡ ಗಮನಿಸಬೇಕಾಗುತ್ತದೆ.

ಬರವಣಿಗೆಯಲ್ಲಿ ಹೆಸರುಪದಗಳನ್ನು ಬಳಸುವಾಗ ತಪ್ಪುಗಳು ಆಗುವುದು ಕಡಿಮೆ. ಇಲ್ಲವೇ ಅಂತಹ ತಪ್ಪುಗಳು ಬಳಸುವ ಹೊತ್ತಿನಲ್ಲಿ ಸರಿಯಾದ ತಿಳುವಳಿಕೆ ಇಲ್ಲದಿರುವುದರಿಂದ ಉಂಟಾಗಬಹುದು. **ಮಾವಿನಗಿಡದಲ್ಲಿ ಹಣ್ಣು ಬಿಟ್ಟವೆ / ಮಾವಿನ ಮರದಲ್ಲಿ ಹಣ್ಣು ಬಿಟ್ಟವೆ.** ಈ ವಾಕ್ಯಗಳಲ್ಲಿ ಸರಿ ತಪ್ಪುಗಳನ್ನು ಹೇಳಬಹುದೇ? ಆದರೆ **ಬಾಳೆಯ ಮರ** ಎಂದು ಹೇಳುವುದಿಲ್ಲ. **ಬಾಳೆಯ ಗಿಡ** ಎನ್ನುವುದೇ ಸರಿಯಾದುದು. ಇಲ್ಲೆಲ್ಲಾ ಸರಿಯಾದ ಬಳಕೆಯು ನುಡಿಯ ಒಡನಾಟದಿಂದ ಗಟ್ಟಿಗೊಳ್ಳುತ್ತದೆ. ಕೆಲಸ ಪದ ಮತ್ತು ಗುಣಪದಗಳ ಬಳಕೆಯಲ್ಲಿ ಹೆಚ್ಚು ತಪ್ಪುಗಳು ಆಗುತ್ತವೆ.

ಕೆಲಸಪದ ಮತ್ತು ಗುಣಪದಗಳನ್ನು ಬಳಸುವಾಗ ನುಡಿಯ ಸರಿನಡೆಯನ್ನು ಅರಿತಿಲ್ಲವಾದರೆ ಬರೆಯುವವರು ತಪ್ಪುಗಳನ್ನು ಮಾಡುತ್ತಲೇ ಇರುತ್ತಾರೆ. ಅದರಲ್ಲೂ ಕನ್ನಡದಲ್ಲಿ ಕನ್ನಡದ ಗುಣಪದಗಳ ಜೊತೆಗೆ ಬೇರೆ ನುಡಿಗಳಿಂದ ಬಂದ ಗುಣಪದಗಳೂ ಸೇರಿಕೊಂಡಿರುವುದರಿಂದ ಗೊಂದಲಗಳು ಇನ್ನೂ ಹೆಚ್ಚಾಗಿವೆ. ಒಂದು ಗುಣಪದ ಜೋಡಿಯ ಬಳಕೆಯನ್ನು ನೋಡೋಣ. **ಒಳ್ಳೆಯ** ಮತ್ತು **ಉತ್ತಮ** ಎಂಬ ಎರಡು ಪದಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಉತ್ತಮ ಸಂಸ್ಕೃತದಿಂದ ಬಂದದ್ದು. **1) ಒಳ್ಳೆಯ ಹುಡುಗ / ಉತ್ತಮ ಹುಡುಗ , 2) ಒಳ್ಳೆಯ ಮಳೆಯಾಗಿದೆ/ ಉತ್ತಮ ಮಳೆಯಾಗಿದೆ / ಮಳೆ ಉತ್ತಮವಾಗಿದೆ, 3) ಉತ್ತಮ ಶ್ರೇಣಿಯಲ್ಲಿ , ಪಾಸಾಗಿದ್ದಾಳೆ / ಒಳ್ಳೆಯ ಶ್ರೇಣಿಯಲ್ಲಿ**

ಪಾಸಾಗಿದ್ದಾಳೆ. ಈ ಮೂರೂ ಉದಾಹರಣೆಗಳನ್ನು ನೋಡಿದರೆ 1ರಲ್ಲಿ ಉತ್ತಮ ಪದದ ಬಳಕೆ ಹೊಂದಿಕೆಯಾಗದೆಂದು 2ರಲ್ಲಿ ಎರಡೂ ಪದಗಳ ಬದಲಿ ಬಳಕೆ ಸರಿಯೆಂದೂ 3ರಲ್ಲಿ ಬಳಕೆಯ ಕಟ್ಟುಗಳಲ್ಲಿ ತಪ್ಪಿಲ್ಲವಾದರೂ ಎರಡೂ ಬಳಕೆಗಳ ತಿರುಳಿನಲ್ಲಿ ಅಷ್ಟಿಷ್ಟು ಬದಲಾವಣೆ ಇದೆಯೆಂದು ಗೊತ್ತಾಗುತ್ತದೆ. ಅಲ್ಲದೆ ಉತ್ತಮ ಎಂಬುದನ್ನು ಕನ್ನಡದಲ್ಲಿ ಹೆಸರು ಪದವನ್ನಾಗಿಯೂ ಬಳಸಬಹುದು. **ಉತ್ತಮರು** ಎಂಬ ಹೆಸರು ಪದವನ್ನು ನೋಡಿ. **ಒಳ್ಳೆಯ** ಎಂಬ ಪದವನ್ನೂ ಹೆಸರು ಪದವನ್ನಾಗಿ ಮಾಡಬೇಕಾದರೆ ಬೇರೆ ಇನ್ನೇನನ್ನೋ ಸೇರಿಸಬೇಕಾಗುತ್ತದೆ.

ಇದೆಲ್ಲ ವಿವರಗಳಿಂದ ತಿಳಿಯುವುದಿಷ್ಟೆ. ಬರವಣಿಗೆಯಲ್ಲಿ ಸರಿಯಾದ ಪದಗಳನ್ನು ಆಯ್ದು ಬಳಸದಿರುವುದರಿಂದ ಉಂಟಾಗುವ ತಪ್ಪುಗಳಿಗೆ ಕಾರಣಗಳು ಹಲವಾರಿವೆ. **ಪದಗಳ ತಿರುಳಿನ ಹರಹನ್ನು, ಮತ್ತು ಆ ಪದಗಳ ಬಳಕೆ ಬೇರೆ ಪದಗಳ ಬಳಕೆಯೊಡನೆ ಹೊಂದಿರುವ ನಂಟುಗಳನ್ನು ಸರಿಯಾಗಿ ಅರಿತಿಲ್ಲದಿರುವುದು** ಇಂತಹ ತಪ್ಪುಗಳಿಗೆ ಕಾರಣವಾಗುತ್ತದೆ.

### ಅಲವತ್ತು

ಲಕ್ಕಣ್ಣ ಬಿ. (ಬೆಂಗಳೂರು) ಇವರು **ಅಲವತ್ತು** ಪದದ ತಿರುಳನ್ನು ಕುರಿತು ಕೇಳಿದ್ದಾರೆ. ಈಗ ಈ ಕೆಲಸಪದವನ್ನು ಹೆಚ್ಚು ಜನ ಕನ್ನಡಿಗರು ಬಳಸುತ್ತಿದ್ದಂತೆ ತೋರುತ್ತಿಲ್ಲ. ಬರವಣಿಗೆಯಲ್ಲೂ ಇದರ ಬಳಕೆ ಕಡಿಮೆ. ಅಲವತ್ತುಕೊಳ್ಳು ಎಂದಾಗ ಅದಕ್ಕೆ ಸಂಕಟಪಡು, ನೋವುಣ್ಣು ಎಂಬ ತಿರುಳುಗಳು ಇರುತ್ತವೆ. ಉದಾ.ಗೆ **ಮಕ್ಕಳಿಗಾಗಿ ಅವಳು ತುಂಬ ಅಲವತ್ತುಕೊಳ್ಳುತ್ತಾಳೆ** ಇದು ಹಿಂದಿನಿಂದಲೂ ಬಳಕೆಯಲ್ಲಿದ್ದ **ಅಲವರು** (ಇಲ್ಲಿನ ರಕಾರ ಶಕಟರೇಫೆ) ಎಂಬ ಬೇರು ಪದದಿಂದ ಬಂದಿದೆ. ಇದೂ ಕೂಡ **ಅಲ** ಎಂಬ ಬೇರು ಪದದಿಂದ ಬಂದ ಹಾಗಿದೆ. **ಅಲ** ಎಂಬ ಕೆಲಸಪದಕ್ಕೆ ಹಲವು ದ್ರಾವಿಡ ನುಡಿಗಳಲ್ಲಿ ನೋವುಣ್ಣು, ಸಂಕಟಪಡು, ಕಷ್ಟಪಡು ಎಂಬ ತಿರುಳುಗಳಿವೆ. ಕನ್ನಡ–ಕನ್ನಡ ನಿಘಂಟು ಈ ಬೇರು ಪದವನ್ನು ದಾಖಲಿಸಿಲ್ಲ. ಅಂದರೆ ಕನ್ನಡದಲ್ಲಿ ಅದಕ್ಕೆ ಬಳಕೆ ಇದ್ದ ಹಾಗಿಲ್ಲ. **ಅಲವರು** ಪದರೂಪದಲ್ಲೂ **ಅಲ** ಎಂಬುದೇ ಬೇರು ಪದವಾಗಿದೆ ಎಂದು ತಿಳಿಯಲು ಅಡ್ಡಿ ಇದ್ದಂತಿಲ್ಲ. ಹಲವು ಕೆಲಸಪದಗಳು ಬಳಕೆಯಿಂದ ಜಾರಿಹೋದ ಹಾಗೆ ಇದೂ ಕೂಡ ಮರೆಗೆ ಸರಿದಿದೆ.

### ಮೊರ್‍ಯಾಲಿಟಿ ಮತ್ತು ಎಥಿಕ್

ವಿಜಯಲಕ್ಷ್ಮಿ ಎನ್.ಕೆ (ಭದ್ರಾವತಿ) ಇವರು **ಮೊರ್‍ಯಾಲಿಟಿ** ಮತ್ತು **ಎಥಿಕ್ಸ್** ಎಂಬ ಪದಗಳ ನಡುವೆ ಇರುವ ತಿರುಳುವ್ಯತ್ಯಾಸ ಮತ್ತು ಕನ್ನಡದಲ್ಲಿ ಅವುಗಳಿಗೆ ತಕ್ಕ ಪದಗಳು ಯಾವುವು ಎಂಬ ಬಗೆಗೆ ಕೇಳಿದ್ದಾರೆ. ಇವೆರಡೂ ಪದಗಳು ಮಾನವರ ನಡವಳಿಕೆಯ ಕಟ್ಟುಗಳನ್ನು ಕುರಿತ ಪದಗಳಾಗಿವೆ. ಯಾವ ಬಗೆಯ ಕಟ್ಟು ಯಾವ ಹೊತ್ತಿನಲ್ಲಿ ಬಳಕೆಯಾಗುತ್ತದೆ ಎನ್ನುವುದನ್ನು ನೋಡಿಕೊಂಡು ಇವುಗಳಲ್ಲಿ ಯಾವ ಪದವನ್ನು ಬಳಸಬೇಕೆಂದು ತಿಳಿದುಕೊಳ್ಳಬೇಕಾಗಿದೆ. ಒಂದೆರಡು ಉದಾಹರಣೆಗಳನ್ನು ನೋಡಿ. ಕೊಲ್ಲುವುದು ತಪ್ಪು ದಿಟ. ಆದರೆ ಯುದ್ಧದಲ್ಲಿ ಸೈನಿಕರು ಗುಂಡಿಟ್ಟು

ಕೊಲ್ಲುತ್ತಾರೆ. ಬೇರೆಯವರಿಗೆ ದೈಹಿಕವಾಗಿ ಹಿಂಸೆ ನೀಡುವುದು ತಪ್ಪು; ಆದರೆ ಡಾಕ್ಟರುಗಳು ನೋಯಿಸದೆ ಚಿಕಿತ್ಸೆ ಕೊಡಲಾರರು. ತಪ್ಪು ಮಾಡಿದವರನ್ನು ಬೆನ್ನಲ್ಲಿ ಹಾಕಿಕೊಳ್ಳುವುದು ತಪ್ಪು ;ಆದರೆ ವಕೀಲರು ತಮ್ಮ ಕಕ್ಷಿದಾರರು ತಪ್ಪು ಮಾಡಿದವರೆಂದು ಗೊತ್ತಿದ್ದರೂ ಅವರನ್ನು ತಮ್ಮ ಬೆನ್ನಿಗೆ ಹಾಕಿಕೊಂಡಿರುತ್ತಾರೆ. ಈ ಮೂರೂ ಕಡೆಗಳಲ್ಲಿ ಮೊದಲು ಹೇಳಿದ್ದು ಮೊರ್‍ಯಾಲಿಟಿಯ ಕಟ್ಟುಗಳು. ಎರಡನೆಯದು ಆಯಾ ಕೆಲಸಗಳಲ್ಲಿ ತೊಡಗಿರುವವರು ತಮ್ಮ ಕೆಲಸದ ಕಟ್ಟುಗಳನ್ನು ಪಾಲಿಸುತ್ತಿದ್ದಾರೆ. ಅದು ಅವರ ಎಥಿಕ್ಸ್. ಅಂದರೆ ಈ ಎರಡೂ ಬಗೆಯ ಕಟ್ಟುಗಳು ಯಾವಾಗಲೂ ಒಂದಕ್ಕೊಂದು ಕೈ ಜೋಡಿಸಿರಬೇಕಿಲ್ಲ. ಒಂದು ಇನ್ನೊಂದಕ್ಕೆ ಎದುರಾಗಿ ನಿಲ್ಲಲೂ ಬಹುದು. ಹಾಗಾಗಿ ಮೊರ್‍ಯಾಲಿಟಿ ಎಂಬುದಕ್ಕೆ ಈಗ ಬಳಸುತ್ತಿರುವ ನೀತಿ ಎಂಬ ಪದ ಸರಿಯಾಗಿದ್ದರೆ ಎಥಿಕ್ಸ್ ಎಂಬುದಕ್ಕೆ ನಿಯಮ ಎಂಬ ಪದವನ್ನು ಬಳಸಬಹುದು. ಇಲ್ಲವೇ ವೃತ್ತಿಧರ್ಮ ಎಂಬ ಪದವೂ ಸರಿಯಾದೀತು. ನೀತಿಯನ್ನು ಮೀರುವುದು (**ಇಮ್ಮಾರಲ್**) ತಪ್ಪೆನಿಸಬಹುದು; ಆದರೆ ವೃತ್ತಿಧರ್ಮವನ್ನು ಮೀರುವುದು(**ಅನ್ ಎಥಿಕಲ್**) ಯಾವಾಗಲೂ ಶಿಕ್ಷಾರ್ಹ ಅಪರಾಧ ಎನಿಸದೆಯೇ ಹೋಗಬಹುದು. ಹೆಚ್ಚಿನ ಚರ್ಚೆ ಈ ಅಂಕಣದ ಚೌಕಟ್ಟನ್ನು ಮೀರುತ್ತದೆ. ಅದೇ ಅನ್ ಎಥಿಕಲ್ ಆದೀತು.

**ಭೋವಿ**

ಆರ್. ಗಂಗಾಧರ್ ಜೋಯಿಸ್ (ಶಿವಮೊಗ್ಗ) ಇವರು '**ಭೋವಿ**'ಪದದ ಮೂಲ ಮತ್ತು ತಿರುಳನ್ನು ಕುರಿತು ಕೇಳಿದ್ದಾರೆ. ಕನ್ನಡದಲ್ಲಿ ಈ ಪದ **ಬೋವಿ, ಬೋವ, ಬೋಯಿ, ಬೋಯ** ಹೀಗೆ ಹಲವು ರೂಪಗಳಲ್ಲಿ ಬಳಕೆಯಿದೆ. ತಮಿಳು, ತೆಲುಗು, ಮಲಯಾಳಂ ಮತ್ತು ತುಳು ನುಡಿಗಳಲ್ಲೂ ಇದೇ ಪದ ಬಳಕೆಯಲ್ಲಿದೆ. ಮಧ್ಯದ್ರಾವಿಡದ ಪರ್ಜಿನುಡಿಯಲ್ಲೂ ಬಳಕೆಯಾಗುವುದು. ಇದನ್ನು ಕಂಡು ಇದು ದ್ರಾವಿಡ ಮೂಲ ಪದವಿರಬೇಕೆಂದು ಬರೋ ಮತ್ತು ಎಮಿನೋ ಅವರು ಇದನ್ನು ದ್ರಾವಿಡ ಜ್ಞಾತಿಪದಕೋಶದಲ್ಲಿ ಸೇರಿಸಿದ್ದರು. ಎರಡನೆಯ ತಿದ್ದಿದ ಆವೃತ್ತಿಯಲ್ಲಿ ಕೈಬಿಟ್ಟಿದ್ದಾರೆ. ಇದು ಪ್ರಾಕೃತನುಡಿಯಿಂದ ಕನ್ನಡ ಮತ್ತಿತರ ನುಡಿಗಳಿಗೆ ಬಂದು ಸೇರಿದ ಪದವಾಗಿದೆ. ಭೋವಿ ಪದದ ಮಹಾಪ್ರಾಣಕ್ಕೂ ಇದೇ ಕಾರಣ. ಈ ಪದದ ತಿರುಳೂ ಕೂಡ ಇದೇ ಎಂದು ಹೇಳುವಂತಿಲ್ಲ. ಇದು ಗೊತ್ತಾದ ಕೆಲಸ ಮಾಡುವ ಜನರನ್ನು ಕುರಿತು ಹೇಳುವ ಪದವಾಗಿದೆ. ಈ ಕೆಲಸ ಪಲ್ಲಕ್ಕಿ ಹೊರುವುದು, ದೋಣಿ ನಡೆಸುವುದು, ರಥ ನಡೆಸುವವರು (ಕುಮಾರವ್ಯಾಸ ಕೃಷ್ಣನನ್ನು ಬಂಡಿಯ ಬೋವನೆಂದು ಕರೆದಿದ್ದಾನಷ್ಟೆ) ಬಲೆಹಾಕಿ ಮೀನು ಹಿಡಿಯುವುದು ಮುಂತಾದ ಕೆಲಸಗಳನ್ನೆಲ್ಲ ಹೇಳುವಂತಿದೆ. ತೆಲುಗಿನಲ್ಲಿ ಬೇಟೆಯಾಡುವವರು ಕಾಡುವಾಸಿಗಳು ಎಂಬ ತಿರುಳು ಇದೆಯೆಂದು ತಿಳಿಯುತ್ತದೆ. ಇವಲ್ಲದರ ಬೇರುಗಳನ್ನು ಹುಡುಕುವುದು ಮಾನವಶಾಸ್ತ್ರಜ್ಞರ ಕೆಲಸವಾಗಿದೆ.

**ಮಾನ್ಯರೇ/ಮಾನ್ಯರೆ**

ಬಿಲ್ಲೇಶ್ವರ ಲಕ್ಕೀರಮಣ (ಹುಂಚ, ಶಿವಮೊಗ್ಗ ಜಿ.) ಇವರು ಕೇಳುವ ಪ್ರಶ್ನೆ ಹೀಗಿದೆ. 'ಮಾನ್ಯರೇ ಎಂದು ಬರೆಯ ಬೇಕೋ ಇಲ್ಲವೇ ಮಾನ್ಯರೆ ಎಂದೋ?

ಯಾರನ್ನಾದರೂ ಉದ್ದೇಶಿಸಿ ಮಾತನಾಡುವಾಗ ಇಲ್ಲವೇ ಯಾರನ್ನಾದರೂ ಕರೆಯುವಾಗ ಅವರ ಹೆಸರು ಇಲ್ಲವೇ ರೂಢನಾಮದ ಕೊನೆಯ ಸ್ವರವನ್ನು ಬದಲಾಯಿಸುತ್ತೇವೆ. ಹೆಸರು ಇಲ್ಲವೇ ರೂಢನಾಮದ ಕೊನೆಯ ಸ್ವರ ಅ,ಇ,ಎ,ಉ ಆಗಿದ್ದರೆ ಆ ಸ್ವರಗಳನ್ನು ಉದ್ದಮಾಡುವುದು ಒಂದು ಬಗೆ. ಆಗ ರಂಗ>ರಂಗಾ, ಕಮಲ>ಕಮಲಾ, ಚೆನ್ನಿ>ಚೆನ್ನೀ, ಮಣಿ>ಮಣೀ, ರಾಮು>ರಾಮೂ ಬಗೆಯ ಬದಲಾವಣೆಗಳಾಗುತ್ತವೆ. ಎಕಾರದಿಂದ ಕೊನೆಯಾಗುವ ಹೆಸರುಗಳು ಮತ್ತು ರೂಢನಾಮಗಳು ಕಡಿಮೆ. ಆಗಲೂ ಎಕಾರವನ್ನು ಏ ಎಂದು ಬದಲಿಸುತ್ತೇವೆ. ಉದಾ.ಸೀತೆ>ಸೀತೇ. ಹೀಗಿಲ್ಲದೆ ಹೆಸರಿನ ಕೊನೆಗೆ ಉಕಾರವಿದ್ದರೆ ಮತ್ತು ಆ ಉಕಾರ ಪದದ ಮೂಲಭಾಗವೇ ಆಗಿದ್ದರೆ ಆಗ ಉಕಾರದ ಬದಲು ಏ ಎಂಬ ಸ್ವರವನ್ನು ಸೇರಿಸುತ್ತೇವೆ. ಗುರು>ಗುರೂ,ಮಗು>ಮಗೂ ಇಂತಹ ಪದಗಳಲ್ಲಿ ಕೆಲವೊಮ್ಮೆ ವಕಾರವನ್ನು ಆದೇಶವನ್ನಾಗಿ ಮಾಡಿಕೊಳ್ಳುವುದೂ ಉಂಟು. ಆಗ ಗುರುವೇ, ಮಗುವೇ ಎಂಬ ಬಳಕೆಯ ರೂಪಗಳು ಕಾಣಿಸಿಕೊಳ್ಳುತ್ತವೆ. ಬಹುವಚನ ಪ್ರತ್ಯಯದ ಉಕಾರವನ್ನು ಹೊಂದಿರುವ ಹೆಸರು, ರೂಢನಾಮಗಳಿಗೆ ಉಕಾರ ಬಿಟ್ಟು ಏಕಾರವನ್ನು ಸೇರಿಸುತ್ತೇವೆ. ಹೀಗಾಗಿ ಮಾನ್ಯರು ಎಂಬ ರೂಪ ಮಾನ್ಯರೇ ಎಂದು ಬದಲಾಗುತ್ತದೆ. ಗುರುಗಳೇ, ಜನರೇ ಇಂತಹವು ಬೇರೆ ಉದಾಹರಣೆಗಳು. ಆದ್ದರಿಂದ ಮಾನ್ಯರೆ ಎಂಬ ರೂಪ ಬರವಣಿಗೆ ಇಲ್ಲವೇ ಮಾತಿನಲ್ಲಿ ಸರಿಯಾದುದಲ್ಲ.

**ಅನುಸರಿಸು ಮತ್ತು ಅನುಕರಿಸು**

ಸೌಮ್ಯ ಬಿ.ಪಿ. (ಬುಕ್ಕಾಂಬುಧಿ) ಇವರು 'ಅನುಸರಿಸು ಮತ್ತು ಅನುಕರಿಸು ಎಂಬ ಪದಗಳ ನಡುವೆ ಇರುವ ವ್ಯತ್ಯಾಸವೇನೆಂದು ' ಕೇಳಿದ್ದಾರೆ. ಇವೆರಡೂ ಸಂಸ್ಕೃತ ಪದಗಳಿಂದ ನಾವು ಕಟ್ಟಿಕೊಂಡಿರುವ ಕ್ರಿಯಾಪದಗಳು. ಇರುವುದನ್ನು ಇರುವಂತೆ ನಕಲು ಮಾಡುವುದನ್ನು ಅನುಕರಿಸುವುದು ಎನ್ನುತ್ತೇವೆ. ಇಲ್ಲಿ ಅನುಕರಿಸುವವರ ಸ್ವಂತವೆಂಬುದು ಏನೂ ಇರುವುದಿಲ್ಲ. ಬೇರೆಯವರ ನಡೆಯನ್ನು ,ಬಗೆಯನ್ನು ಹಿಂಬಾಲಿಸುವುದನ್ನು ಅನುಸರಿಸುವುದು ಎನ್ನುತ್ತೇವೆ. ಕನ್ನಡದಲ್ಲಿ ಅನುಸರಿಸು ಎಂಬುದನ್ನು 'ಹೊಂದಿಕೊಂಡು ಹೋಗುವುದು 'ಎನ್ನುವ ತಿರುಳಿನಲ್ಲಿಯೂ ಬಳಸುತ್ತೇವೆ. 'ಹೇಗೋ ಅನುಸರಿಸಿಕೊಂಡು ಹೋಗಬೇಕಪ್ಪ' ಎಂದು ಬುದ್ಧಿವಾದ ಹೇಳುವುದನ್ನು ಕೇಳಿದ್ದೇವೆ. ಅಲ್ಲಿ ಹೊಂದಿಕೊಂಡು ಹೋಗುವುದು ಎಂಬ ತಿರುಳಿದೆ. ಏನೇ ಇರಲಿ. ಎಷ್ಟೋ ಕಡೆಗಳಲ್ಲಿ ಅನುಕರಣೆ ಮತ್ತು ಅನುಸರಣೆಗಳನ್ನು ಬೇರೆಮಾಡಿ ನೋಡುವುದು ಆಗದ ಕೆಲಸ.

**ಚಾಚುವುದು ಎಂದರೇನು?**

ಶಂಕರ ಈ. ಹೆಬ್ಬಾಳ (ಮುದ್ದೇಬಿಹಾಳ, ವಿಜಾಪುರ ಜಿ.) ಇವರು 'ನೆರವಿನ ಹಸ್ತವನ್ನು ಚಾಚುವುದು' ಎಂಬ ಮಾತಿನ ಬಗೆಗೆ ಪ್ರಶ್ನೆ ಕೇಳಿದ್ದಾರೆ. ನೆರವು ಬೇಕಾದವರಿಗೆ ಬೇಕಾದ್ದನ್ನು ಕೊಡುವುದು ಬಿಟ್ಟು ನಾವೇ ಹಸ್ತವನ್ನು ಚಾಚುವುದು ಸರಿಯೇ ಎಂದು ಕೇಳುತ್ತಾರೆ. ಇದು ಬಳಕೆಯಲ್ಲಿ ಪದಗಳಿಗೆ ಬರುವ ರೂಢಿಯ ಮತ್ತು ಆ ಹೊತ್ತಿನ ತಿರುಳುಗಳ ನಡುವೆ ಇರುವ ವ್ಯತ್ಯಾಸವನ್ನು ಸರಿಯಾಗಿ ತಿಳಿದುಕೊಳ್ಳದಿದ್ದರೆ ಆಗುವ

ಗೊಂದಲ. ದಿಟ. ಕೈಚಾಚು ಎಂಬ ಮಾತನ್ನು ಬೇಡುವ ಸಂದರ್ಭದಲ್ಲಿ ಮಾತ್ರ ಬಳಸುತ್ತೇವೆ. 'ನಾನು ಯಾರ ಮುಂದೆಯೂ ಕೈ ಚಾಚುವವಳಲ್ಲ' ಎನ್ನುವ ವಾಕ್ಯವನ್ನು ಉದಾಹರಣೆಗಾಗಿ ಗಮನಿಸಿ. ಆದರೆ ನೆರವನ್ನು ನೀಡಲು ಕೈಸೀಡುವುದನ್ನು ಕೂಡ ನೋಡಿದ್ದೇವಲ್ಲವೇ? ಆದ್ದರಿಂದ ನೆರವಿನ ಹಸ್ತವನ್ನು ಚಾಚುವವರು ತೊಂದರೆಯಲ್ಲಿರುವವರನ್ನು ಆ ತೊಂದರೆಯಿಂದ ಹೊರತರಲೆಂದು ಕೈ ಚಾಚಿರುತ್ತಾರೆ ಎಂದು ತಿಳಿಯಬೇಕು.

**ಸ, ಶ, ಷ**

ನಟರಾಜು ವಿ. (ಕೊಳ್ಳೆಗಾಲ) ಇವರು 'ದ್ರಾವಿಡ ಭಾಷೆಗಳಲ್ಲಿ ಸ, ಶ ಮತ್ತು ಷ ಗಳೇ ಇಲ್ಲ ಎನ್ನುವರು; ಸಕಾರ ಮೂಲವ್ಯಂಜನವಲ್ಲವೇ'ಎಂದು ಕೇಳುತ್ತಾರೆ. ಶ ಮತ್ತು ಷ ಗಳ ಮಾತನ್ನು ಈಗ ಬದಿಗಿಡೋಣ. ಸಕಾರವೆಂಬ ಧ್ವನಿ ಎಲ್ಲ ಭಾಷೆಗಳಲ್ಲೂ ಇರಬೇಕು ಎನ್ನುವುದು ಪ್ರಶ್ನೆ ಕೇಳುತ್ತಿರುವವರ ತಿಳುವಳಿಕೆ. ಸರಿ. ಭಾಷೆಯಲ್ಲಿ ಸಕಾರ ಇದ್ದರೂ ಅದು ಅದೇ ಭಾಷೆಯ ಇನ್ನೊಂದು ಧ್ವನಿಯ ಜೊತೆ ತನ್ನ ಪ್ರಸಾರವನ್ನು ಹಂಚಿಕೊಂಡಿರಬಹುದು. ಹಾಗಾಗಿ ಅಂತಹ ಭಾಷೆಗಳಲ್ಲಿ ಸಕಾರ ಒಂದು ಉಪಧ್ವನಿ ಎನಿಸಿಕೊಂಡುಬಿಡುತ್ತದೆ. ಅಲ್ಲದೆ **ದ್ರಾವಿಡ ಭಾಷೆಗಳಲ್ಲಿ ಸಕಾರ ಒಂದು ಮುಖ್ಯ ಧ್ವನಿ ಆಗಿರಲಿಲ್ಲ** ಎಂಬ ಹೇಳಿಕೆ ಹೆಚ್ಚುಸರಿ. ಏಕೆಂದರೆ ಈಗಿನ ದ್ರಾವಿಡ ಭಾಷೆಗಳಲ್ಲಿ ಕೆಲವು ತಮ್ಮ ಹಳೆಯ ರೂಪಗಳಲ್ಲಿ ಸಕಾರವನ್ನು ಮುಖ್ಯ ಧ್ವನಿಯನ್ನಾಗಿ ಹೊಂದಿರಲಿಲ್ಲ. ಹಳೆಯ ತಮಿಳು ಕೂಡ ಅಂತಹ ಭಾಷೆ. ಆದರೆ ಈಗ ಬಹುಪಾಲು ಎಲ್ಲ ದ್ರಾವಿಡ ಭಾಷೆಗಳಲ್ಲೂ ಸಕಾರ ಒಂದು ಮುಖ್ಯ ಧ್ವನಿಯಾಗಿದೆ. ಹಿಂದೆ ಕೆಲವು ದ್ರಾವಿಡ ಭಾಷೆಗಳಲ್ಲಿ ಸಕಾರವಿದ್ದರೂ ಅದು ಚಕಾರದೊಡನೆ ತನ್ನ ಪ್ರಸಾರವನ್ನು ಹಂಚಿಕೊಂಡಿತ್ತು. ಈಗಲೂ ಸಂಗಂ ಎನ್ನಬೇಕೋ ಇಲ್ಲವೇ ಚಂಗಂ(ಬರಹದಲ್ಲಿ ಚಂಕಂ) ಎನ್ನಬೇಕೋ ಎನ್ನುವ ಗೊಂದಲ ಇದ್ದೇ ಇದೆ.

**ಕನ್ನಡ ಸೊಲ್ಲರಿಮೆಯ ಕಟ್ಟುಗಳ ತಿಳುವಳಿಕೆ**

ಕನ್ನಡವನ್ನು ಮೊದಲ ನುಡಿಯನ್ನಾಗಿ ಅರಿತ ಮಕ್ಕಳು ಶಾಲೆಗೆ ಬರುವ ಹೊತ್ತಿಗೆ ಕನ್ನಡ ಸೊಲ್ಲರಿಮೆಯ ಕಟ್ಟುಗಳನ್ನು ತಿಳಿದಿರುತ್ತಾರೆ; ಆದರೆ ಹಾಗೆ ತಾವು ತಿಳಿದಿರುವ ಕಟ್ಟುಗಳು ಯಾವುವು ಎಂಬುದು ಅವರಿಗೆ ಗೊತ್ತಿರುವುದಿಲ್ಲ; ಕನ್ನಡ ನುಡಿಯುವಾಗ ಆ ಕಟ್ಟುಗಳನ್ನು ಬಳಸುವುದು ಹೇಗೆಂಬುದೂ ಅವರಿಗೆ ಗೊತ್ತಿರುತ್ತದೆ. ಈ ಹೇಳಿಕೆಗಳನ್ನು ಒಪ್ಪುವುದಾದರೆ ಆಗ ಕೆಲವು ಕೇಳ್ವಿಗಳು ಎದುರಾಗುತ್ತವೆ. ಅವುಗಳನ್ನು ಒಂದೊಂದಾಗಿ ಈಗ ನೋಡೋಣ. 4. ನುಡಿಯ ಕಟ್ಟುಗಳನ್ನು ಬಲ್ಲವರು ಅದನ್ನು ಬಳಸಲು ಹಿಂಜರಿಯುವುದೇಕೆ?

1. **ಕನ್ನಡ ನುಡಿಯ ಕಟ್ಟುಗಳನ್ನು ಬಿಡಿಯಾಗಿ ಮಕ್ಕಳಿಗೆ ಕಲಿಸಿಕೊಡಬೇಕೆ?** ಈಗ ನಾವು ಶಾಲೆಗಳಲ್ಲಿ ಕನ್ನಡನುಡಿಯ ಕಟ್ಟುಗಳನ್ನು ಕಲಿಸುತ್ತಿರುವ ಬಗೆಯಲ್ಲಿ ತಪ್ಪಿದೆ. ಇದು ಎರಡನೆಯ ನುಡಿಯಾಗಿ ಕನ್ನಡವನ್ನು ಕಲಿಯುವ ದೊಡ್ಡ ಮಕ್ಕಳಿಗೆ (ಸುಮಾರು ಹತ್ತು ಹದಿನೈದು ವರುಷ ದಾಟಿದವರು) ಮತ್ತು ಬೇರೊಂದು

ನುಡಿಯನ್ನು ನಿಡುಗಾಲದಿಂದ ಬಳಸುತ್ತ ಈಗ ಹೊಸದಾಗಿ ಕನ್ನಡವನ್ನು ಕಲಿಯಬೇಕೆನ್ನುವವರಿಗೆ ಕನ್ನಡ ಕಲಿಸುವಾಗ ಬಳಸಬೇಕಾದ ಬಗೆ. ಈ ತಿಳುವಳಿಕೆ ಕನ್ನಡದ ಮಕ್ಕಳಿಗೆ ನುಡಿ ಬಳಕೆಯ ಹಲವು ದಾರಿಗಳನ್ನು ತೋರಿಸಿಕೊಡಲಾರದು.

2. **ಸೊಲ್ಲರಿಮೆಯ ಕಟ್ಟುಗಳನ್ನು ಬಿಡಿಯಾಗಿ ಕಲಿಸಿಕೊಡಬೇಕಿಲ್ಲ ಎನ್ನುವುದಾದರೆ ಶಾಲೆಗಳಲ್ಲಿ ಕನ್ನಡವನ್ನು ಕಲಿಸುವುದು ಎಂದರೇನು?** ಶಾಲೆಗಳಲ್ಲಿ ಕನ್ನಡ ನುಡಿಯವ, ಆಲಿಸುವ, ಓದುವ ಮತ್ತು ಬರೆಯುವ ಚಳಕಗಳನ್ನು ಕಲಿಸುತ್ತೇವೆ. ಮೊದಲ ಎರಡು ಚಳಕಗಳು ಮಕ್ಕಳಿಗೆ ಗೊತ್ತಿರುತ್ತವೆ. ಆದರೆ ಆ ಚಳಕಗಳನ್ನು ಬೇರೆ ಬೇರೆ ನೆಲೆಯಲ್ಲಿ ಹೆಚ್ಚು ಗಟ್ಟಿಗೊಳಿಸಬೇಕಾಗುತ್ತದೆ. ಉದಾಹರಣೆಗೆ ಮಕ್ಕಳಿಗೆ ಕನ್ನಡವನ್ನು ಕೇಳಿಸಿಕೊಳ್ಳುವ ಚಳಕ ಗೊತ್ತಿದ್ದರೂ ಅದನ್ನು ಎಷ್ಟು ಬಳಸಲು ಗೊತ್ತಿರುತ್ತದೆ? ಒಂದೆರಡು ವಾಕ್ಯಗಳನ್ನು ಕೇಳಿಸಿಕೊಂಡು ಅದೇನೆಂದು ತಿಳಿದುಕೊಳ್ಳುವುದನ್ನು ಮಕ್ಕಳು ಅರಿತಿರುತ್ತಾರೆ. ಆದರೆ ಶಾಲೆಯಲ್ಲಿ ಒಂದಾದ ಮೇಲೊಂದರಂತೆ ಹತ್ತಾರು ವಾಕ್ಯಗಳನ್ನು ಕೇಳಿಸಿಕೊಳ್ಳುವುದನ್ನು ಮತ್ತು ಹಾಗೆ ಕೇಳಿಸಿಕೊಂಡು ಅರಿತುಕೊಳ್ಳುವುದನ್ನು ಕಲಿಯ ಬೇಕಾಗುತ್ತದೆ. ಇದು ಹೊಸ ಚಳಕವಲ್ಲ. ಗೊತ್ತಿರುವ ಚಳಕದ ಬಲವನ್ನು ಹೆಚ್ಚಿಸುವುದು. ಹಾಗೆಯೇ ನುಡಿಯುವ ಚಳಕವನ್ನು ಬಳಸಲು ತಿಳಿದಿದ್ದರೂ ಅಲ್ಲಿಯೂ ಒಂದೆರಡು ಪದಗಳಲ್ಲಿ, ತುಂಡು ವಾಕ್ಯಗಳಲ್ಲಿ ಮಾತಾಡುವುದನ್ನು ಮಕ್ಕಳು ಕಲಿತಿರುತ್ತಾರೆ. ಶಾಲೆಗಳಲ್ಲಿ ಈ ಚಳಕವನ್ನು ಗಟ್ಟಿಗೊಳಿಸಿ ಇಡೀ ವಾಕ್ಯಗಳನ್ನು ಬಳಸುವ, ವಾಕ್ಯಗಳನ್ನು ಕೂಡಿಸಿಕೊಳ್ಳುವ ಬಗೆಯನ್ನು ಕಲಿಸಬೇಕಾಗುತ್ತದೆ.

ಓದುವ ಮತ್ತು ಬರೆಯುವ ಚಳಕಗಳಂತು ಹೊಸವೇ ಸರಿ. ಕಣ್ಣು, ಕೈ ಬೆರಳುಗಳು, ಕಿವಿ ಮುಂತಾದವನ್ನು ಈ ಚಳಕದ ಬೆಳವಣಿಗೆಯಲ್ಲಿ ತಕ್ಕಂತೆ ಹೊಂದಿಸುವ ಕೆಲಸವನ್ನು ಮಾಡಬೇಕಾಗುತ್ತದೆ. ಅಲ್ಲದೆ ಈಗ ನಮಗೆ ತಿಳಿದಿರುವಂತೆ ಮಾನವರ ಮೆದುಳುಗಳು ಸಾವಿರಾರು ವರುಷಗಳಿಂದ ಈ ಚಳಕವನ್ನು ಬಳಸಲು ತರಬೇತನ್ನು ಪಡೆದುಬಂದಿಲ್ಲ. ಏನಿದ್ದರೂ ಅದು ಎಲ್ಲೋ ಕೆಲವರು ಪಡೆದುಕೊಳ್ಳುತ್ತಿದ್ದ ಚಳಕವಾಗಿತ್ತು. ಈಗ ನಾವು ಅದನ್ನು ಎಲ್ಲರಿಗೂ ಕಲಿಸಬೇಕೆಂದು ಮುಂದಾಗಿರುವುದರಿಂದ ತಕ್ಕಷ್ಟು ತಾಳ್ಮೆ ಇರಬೇಕು. ಅಲ್ಲದೆ ಕಲಿಸುವ ಬಗೆಗಳನ್ನು ಹರಿತಗೊಳಿಸಿಕೊಳ್ಳಬೇಕಾಗುತ್ತದೆ.

3. **ಒಂದೊಮ್ಮೆ ಕನ್ನಡ ಮೊದಲನುಡಿಯಾಗಿರುವ ಮಕ್ಕಳೆಲ್ಲರಿಗೂ ನುಡಿಯ ಕಟ್ಟುಗಳು ಗೊತ್ತಿವೆ ಎನ್ನುವುದಾದರೆ ಅವರು ತಪ್ಪುಗಳನ್ನು ಮಾಡುವುದೇಕೆ?** ಮಕ್ಕಳು ಯಾವ ಬಗೆಯ ತಪ್ಪುಗಳನ್ನು ಮಾಡುತ್ತಾರೆ ಎನ್ನುವುದನ್ನು ನಾವಿನ್ನೂ ಸರಿಯಾಗಿ ತಿಳಿಯಲು ಮುಂದಾಗಿಲ್ಲ. ಬರೆಯುವಾಗ ತಪ್ಪು ಮಾಡುತ್ತಾರೆ ಎಂದುಕೊಳ್ಳಿ. ಶಾಲೆಯಲ್ಲಿ ಕಲಿಸುವವರು ತರಗತಿಗಳಲ್ಲಿ ಉಕ್ತಲೇಖನ ಎಂಬೊಂದು ಕೆಲಸವನ್ನು ಮಾಡಿಸುತ್ತಾರಷ್ಟೆ. ಹಾಗೆ ಕೇಳಿದ್ದನ್ನು ಬರೆಯುವಾಗ ಮಕ್ಕಳು ತಪ್ಪು ಮಾಡಿದ್ದರೆ ಅದಕ್ಕೆ ಅವರು ಈಗಾಗಲೇ ಪಡೆದುಕೊಂಡಿರುವ ಕನ್ನಡದ ಕಟ್ಟುಗಳ ತಿಳಿವಿನಲ್ಲಿ ಇರುವ ಕೊರತೆಗಳು ಕಾರಣವಲ್ಲ. ಈ ತಪ್ಪುಗಳ ಹಿಂದೆ ಹೇಳಿದ್ದನ್ನು

ಕೇಳಿಸಿಕೊಳ್ಳುವಾಗ ಆಗುವ ತೊಂದರೆ, ಕೇಳಿಸಿಕೊಂಡರೂ ಆ ಪದದ ಲಿಪಿಗುರುತನ್ನು ಕಣ್ಣಿನ ಮೂಲಕ ಅರಿತದ್ದು ನೆನಪಿಗೆ ಬಾರದಿರುವುದು ಹೀಗೆ ಹಲವಾರು ಕಾರಣಗಳು ಇರುತ್ತವೆ.

ಓದುವಾಗ ಮತ್ತು ಬರೆಯುವಾಗ ನುಡಿ ಬಳಕೆಯ ಕಟ್ಟುಗಳಲ್ಲಿ ತಪ್ಪುಗಳಾಗುತ್ತಿವೆ ಎಂದುಕೊಳ್ಳೋಣ. ಆಗ ಆಳಿಸುವ ಮತ್ತು ನುಡಿಯುವ ಚಳಕಗಳ ನೆಲೆಯ ನುಡಿಯನ್ನು, ಓದುವ ಮತ್ತು ಬರೆಯುವ ನೆಲೆಗೆ ರವಾನಿಸಿಕೊಳ್ಳುವ ದಾರಿಗಳನ್ನು ಮಕ್ಕಳು ಸರಿಯಾಗಿ ಕಲಿತಿಲ್ಲವೆಂದು ತಿಳಿಯಬೇಕು. ಅಂದರೆ ಮಕ್ಕಳು ನುಡಿಯನ್ನು ಕೇಳಿ ಅರಿಯಲು ಅರಿತದ್ದನ್ನು ಸರಿಯಾಗಿ ಹೇಳಲು ತಿಳಿದಿದ್ದರೂ ಅದನ್ನೇ ಓದಿನಿಂದ ಅರಿತುಕೊಳ್ಳಲು ಮತ್ತು ಹಾಗೆ ಅರಿತದ್ದನ್ನು ಬರೆದು ತೋರಿಸಲು ಸೋಲುತ್ತಿದ್ದರೆ ಆಗ ಅದನ್ನು ತಿದ್ದಲು ಬೇರೆಯೇ ದಾರಿಗಳಿವೆ. ಆದರೆ ನಮ್ಮ ಶಾಲೆಯ ಕಲಿಕೆಯಲ್ಲಿ ಇವೆಲ್ಲವೂ ಮುಂಚೂಣಿಗೆ ಬರುವುದೇ ಇಲ್ಲ. ಮಕ್ಕಳಲ್ಲಿ ತಪ್ಪುಗಳು ಯಾವುವು ಎಂಬುದನ್ನು ಗುರುತಿಸಲು ತುದಿಗಾಲಿನಲ್ಲಿ ನಿಲ್ಲುವ ನಾವು ಆ ತಪ್ಪುಗಳಿಗೆ ಕಾರಣಗಳನ್ನು ಹುಡುಕಲು ಹಿಂದೇಟು ಹೊಡೆಯುತ್ತೇವೆ. ಆ ತಪ್ಪುಗಳಿಗೆ ಮಕ್ಕಳನ್ನೇ ಹೊಣೆ ಮಾಡಿ ಕೈತೊಳೆದುಕೊಳ್ಳುತ್ತೇವೆ.

4. **ನುಡಿಯ ಕಟ್ಟುಗಳನ್ನು ಬಲ್ಲವರು ಅದನ್ನು ಬಳಸಲು ಹಿಂಜರಿಯುವುದೇಕೆ?** ಹೀಗೆ ಹಿಂದೇಟು ಹಾಕಲು ಆ ಮಕ್ಕಳಲ್ಲಿ ಇರುವ ನುಡಿ ಚಳಕಗಳ ಕೊರತೆಗಳಿಗಿಂತ ಅವರು ಸಮಾಜದ ಯಾವ ಹಿನ್ನೆಲೆಗೆ ಸೇರಿದವರು, ಅವರು ಕಲಿಯುತ್ತಿರುವ ಶಾಲೆಯ ಪರಿಸರ, ನುಡಿ ಬಳಕೆ ಒತ್ತಾಯಿಸುವುದ ಹಿಂದಿರುವ ಒತ್ತಡ ಇವೇ ಮುಂತಾದವು ಕಾರಣಗಳಾಗಿರುತ್ತವೆ. ಇದೂ ಕೂಡ ನುಡಿ ಕಲಿಕೆಯೊಡನೆ ನಂಟನ್ನು ಹೊಂದಿಲ್ಲ. ಒಟ್ಟಾರೆ ಕಲಿಕೆಯ ಹಿಂದಿರುವ ಚೌಕಟ್ಟುಗಳು ಇಲ್ಲಿ ನುಡಿಬಳಕೆಗೆ ತಕ್ಕ ಬೆಂಬಲವನ್ನು ನೀಡುತ್ತವೆಯೋ ಇಲ್ಲವೋ ಎನ್ನುವುದನ್ನು ನೋಡಬೇಕಾಗುತ್ತದೆ. ಈ ಯಾವ ಗೊಂದಲಗಳೂ ಮಕ್ಕಳಿಗೆ ಸರಿಯಾದ ಸೊಲ್ಲರಿಮೆಯನ್ನು ಕಲಿಸುವುದರಿಂದ ಮಾತ್ರ ಮಾಯವಾಗುವುದಿಲ್ಲ.

**ಹೆಂಗೂಸು, ಗಂಗೂಸು**

ಹೆಬ್ಬೂರಿನ ತಲಕಾಡು ವೆಂಕಟೇಶ್ ಅವರು **ಹೆಂಗಸು(<ಹೆಂಗುಸು)** ಪದವಿರುವಂತೆ **ಗಂಗುಸು(<ಗಂಗೂಸು)** ಎಂಬಂತಹ ಪದವಿರುವ ಸಾಧ್ಯತೆಯ ಬಗೆಗೆ ಕೇಳಿದ್ದಾರೆ. ಹೆಂಗುಸು ಪದ ಪೆಣ್ ಮತ್ತು ಕೂಸು ಎಂಬ ಪದಗಳ ಒಗ್ಗೂಡುವಿಕೆಯಿಂದ ಮೈ ತಳೆದಿದೆ. ಹೀಗಿದ್ದಲ್ಲಿ ಗಂಡು ಮತ್ತು ಕೂಸು ಪದಗಳ ಒಗ್ಗೂಡುವಿಕೆಯಿಂದ ಇನ್ನೊಂದು ಪದ ಏಕೆ ಮೈತಳೆಯಲಿಲ್ಲ ಎಂಬ ಪ್ರಶ್ನೆ ಸರಿ. ಆದರೆ ಭಾಷೆಯ ಪದರಚನೆಯ ನಿಯಮಗಳ ಪ್ರವೃತ್ತಿ ನಾವು ತಿಳಿದಂತೆ ಒಂದೇ ಬಗೆಯಲ್ಲಿರುವುದಿಲ್ಲ.

ಪದಗಳಿಗೆ ಒಂದು ರಚನೆ ಇರುತ್ತದೆ. ನಾವು ಆ ರಚನೆಯ ನಿಯಮಗಳೇನು ಎಂದು ತಿಳಿದಿರುವುದಿಲ್ಲವಾದರೂ ನಮ್ಮ ನುಡಿಬಳಕೆಗಳಲ್ಲಿ ಆ ನಿಯಮಗಳನ್ನು ಮೀರುವುದಿಲ್ಲ. ದಿನದಿನದ ನೂರಾರು ಪದಗಳಿಗೆ ಒಂದು ರಚನೆ ಇರುವುದು ನಮ್ಮ

ಅರಿವಿಗೆ ಬರದಿರಲು ಹಲವು ಕಾರಣಗಳಿವೆ. ಕೆಲವು ಉದಾಹರಣೆಗಳನ್ನು ಈಗ ನೋಡೋಣ. **ಹೇಳಿಕೆ, ಕೋರಿಕೆ, ತೋರಿಕೆ, ಬೇಡಿಕೆ** ಇವೇ ಮುಂತಾದ ಪದಗಳಿಗೆ ಇರುವ ರಚನೆ ನಮ್ಮ ತಿಳುವಳಿಕೆಗೆ ಬರುವುದಿಲ್ಲ. ಈ ಎಲ್ಲ ನಾಮಪದಗಳಲ್ಲೂ ಒಂದು ಕ್ರಿಯಾಪದವಿದ್ದು (ಹೇಳು, ಕೋರು, ತೋರು, ಬೇಡು) ಅದಕ್ಕೆ ಯಾವುದೋ ಒಂದು ಪ್ರತ್ಯಯ ಸೇರುತ್ತಿದೆ. ನಾವು ಈ ಪ್ರತ್ಯಯವನ್ನು ಕ್ರಿಯಾಪದಕ್ಕೆ ಸೇರಿಸಿ ಹೊಸಪದಗಳನ್ನು ಈಗ ರಚಿಸುತ್ತಿಲ್ಲ. ಇದರಿಂದಾಗಿಯೇ ಅಲ್ಲಿನ ನಿಯಮ ನಮಗೆ ಗೊತ್ತಾಗುವುದಿಲ್ಲ. ಈ ಪದಗಳನ್ನು ಒಡೆಯುವುದು ಸಾಧ್ಯವಿಲ್ಲವೆಂದು ನಾವು ತಿಳಿಯುತ್ತೇವೆ. ಈ ಮೇಲಿನ ಪದಗಳ ಮಾದರಿಯಲ್ಲಿಯೇ ಇರುವಂತೆ ತೋರುವ **ಹೇಳುವಿಕೆ, ಕೋರುವಿಕೆ, ತೋರುವಿಕೆ, ಬೇಡುವಿಕೆ** ಮುಂತಾದ ನಾಮಪದಗಳನ್ನು ಗಮನಿಸಿ. ಇಲ್ಲಿಯೂ ಅವೇ ಕ್ರಿಯಾಪದಗಳಿಗೆ ಬೇರೊಂದು ಪ್ರತ್ಯಯವನ್ನು ಸೇರಿಸಿ ಈ ಪದಗಳನ್ನು ರಚಿಸಿದ್ದೇವೆ. ಈ ಪದರಚನೆಯ ನಿಯಮ ನಮಗೆ ತಿಳಿದಿರುತ್ತದೆಂದು ವಾದಿಸಲು ಸಾಧ್ಯ. ಏಕೆಂದರೆ ಈಗಲೂ ಈ ನಿಯಮವನ್ನು ಬಳಸಿ ಮತ್ತಷ್ಟು ಪದಗಳನ್ನು ಕನ್ನಡಿಗರು ರಚಿಸುತ್ತಿದ್ದಾರೆ. **ಕೊಡುವಿಕೆ, ನಿಲ್ಲುವಿಕೆ, ಓದುವಿಕೆ, ನಗುವಿಕೆ, ತಿನ್ನುವಿಕೆ,** ಕುಡಿಯುವಿಕೆ, **ಬರೆಯುವಿಕೆ** ಇವೇ ಮುಂತಾದ ಪದಗಳು ಕನ್ನಡದಲ್ಲಿ ಸಾಧ್ಯ. ಹೀಗಾಗಿ ಈ ಪದನಿಯಮ ಕನ್ನಡದಲ್ಲಿ ಈಗಲೂ ಚಾಲ್ತಿಯಲ್ಲಿದೆ ಎಂದು ಹೇಳುವುದು ಸರಿಯಾದ ವಿವರಣೆ.

ಈ ವಿವರಣೆಯನ್ನು ಒಪ್ಪಲು ಇನ್ನೂ ಒಂದು ಕಾರಣವಿದೆ. ನಾವು ಯಾವ ನಿಯಮವನ್ನು ಈಗ ಬಳಸುತ್ತಿಲ್ಲವೋ ಆ ನಿಯಮದಿಂದ ರಚನೆಗೊಂಡ ಪದಗಳಿಗೆ ಅರ್ಥ ಹೆಚ್ಚು ವಿಸ್ತಾರವಾಗಿರುತ್ತದೆ. ಅಂದರೆ ತೀರಾ ಖಚಿತವಾಗಿ ಬೆರಳಿಟ್ಟು ತೋರುವ ಅರ್ಥವೊಂದನ್ನು ಸೂಚಿಸುವುದು ಆಗದು. ಆದರೆ ಯಾವ ನಿಯಮವನ್ನು ನಾವು ಈಗಲೂ ಬಳಸಿ ಹೊಸಪದವನ್ನು ರಚಿಸುತ್ತಿರುತ್ತೇವೋ ಆ ಪದಗಳ ಅರ್ಥ ಹೆಚ್ಚು ಖಚಿತವಾಗಿರುತ್ತದೆ. ಇಲ್ಲವೇ ಈ ವ್ಯತ್ಯಾಸವನ್ನು ಬೇರೆ ರೀತಿಯಲ್ಲೂ ಹೇಳಬಹುದು. ಮೊದಲ ಗುಂಪಿನ ಪದಗಳ ರಚನೆಗೆ ಕಾರಣವಾದ ಕ್ರಿಯಾಪದಗಳಿಗೂ ಅವುಗಳಿಂದ ರಚನೆಗೊಂಡ ನಾಮಪದಗಳಿಗೂ ನೇರವಾದ ಸಂಬಂಧವನ್ನು ಕಲ್ಪಿಸಲು ಬರುವುದಿಲ್ಲ. ಆದರೆ ಎರಡನೆಯ ಗುಂಪಿನ ಪದಗಳಲ್ಲಿ ಹಾಗಲ್ಲ. ಅವುಗಳಲ್ಲಿ ಕ್ರಿಯಾಪದಗಳ ಅರ್ಥಕ್ಕೂ ಅವುಗಳಿಂದ ರಚಿತವಾದ ನಾಮಪದಗಳಿಗೂ ಅರ್ಥದ ನೆಲೆಯಲ್ಲೂ ನೇರವಾದ ಸಂಬಂಧವಿರುತ್ತದೆ.

ಪದರಚನೆಯ ನಿಯಮಗಳು ಹೀಗೆ ಈಗಲೂ ಭಾಷಿಕರ ತಿಳುವಳಿಕೆಯ ಭಾಗವಾಗಿದ್ದರೂ ಅವುಗಳನ್ನು ಬಳಸಬೇಕಾದ ಬಗೆಯಲ್ಲಿ ಬದಲಾವಣೆಯನ್ನು ಮಾಡಿಕೊಳ್ಳುತ್ತಿರುತ್ತಾರೆ. ಮೇಲೆ ಹೇಳಿದ ನಿಯಮವನ್ನು ಹಾಗೆ ಬಳಸಿ ತಯಾರಿಸಿದ **ಮಾಸ್ತರಿಕೆ, ಡಾಕ್ಟರಿಕೆ, ಲಾಯರಿಕೆ** ಮುಂತಾದ ರೂಪಗಳನ್ನು ನೋಡಿ. ಈ ಪದಗಳ ಮೊದಲಲ್ಲಿ ಇರುವುದು ಅನ್ಯ ಭಾಷೆಯಿಂದ ಬಂದ ನಾಮಪದಗಳು; ಕ್ರಿಯಾಪದಗಳಲ್ಲ. ಆದರೂ ಮತ್ತೊಂದು ನಾಮಪದವನ್ನು **–ಇಕೆ** ಪ್ರತ್ಯಯವನ್ನು ಬಳಸಿ ರಚಿಸಲಾಗಿದೆ. ಇಂತಹ ಪದಗಳು ಹೆಚ್ಚಿಲ್ಲ ಎನ್ನುವುದೂ ಗಮನಿಸಬೇಕಾದ ಸಂಗತಿ.

**ಯಾವ ಪದ ಬಳಸಬೇಕು**

ಹಲವು ಓದುಗರು ಪದಗಳ ಪಟ್ಟಿಯೊಂದನ್ನು ನೀಡಿ ಇವುಗಳಿಗೆ ಕನ್ನಡದಲ್ಲಿ ಯಾವ ಪದ ಬಳಸಬೇಕು ಎಂದು ಕೇಳುತ್ತಾರೆ. ಕನ್ನಡ ಪದಗಳನ್ನು ಹುಡುಕಿ ಬಳಸಬೇಕು ಎನ್ನುವ ಅವರ ಕಾಳಜಿಯನ್ನು ಒಪ್ಪಬಹುದು. ಆದರೆ ಎಲ್ಲ ಕಡೆಯೂ ಇದು ಹೊಂದುವುದಿಲ್ಲ ಎನ್ನುವುದನ್ನು ನೆನಪಿನಲ್ಲಿಡಬೇಕು. ಉದಾಹರಣೆಗೆ **ಸಿಮ್** ಕಾರ್ಡಿಗೆ ಕನ್ನಡದ ಪದ ಹುಡುಕಬೇಕೇ? ಸಿಮ್ ಎನ್ನುವುದೇ ಇಂಗ್ಲಿಶಿನಲ್ಲಿ ಮೂರು ಪದಗಳ ಮೊದಲ ಅಕ್ಷರಗಳನ್ನು ಸೇರಿಸಿ (**ಸಬ್ ಸ್ಕ್ರೈಬರ್ ಐಡೆಂಟಿಟಿ ಮಾಡ್ಯುಲ್** ) ಕಟ್ಟಿದ ಪದ. ಅದನ್ನು ಕನ್ನಡದಲ್ಲಿ ಹೇಳಬೇಕೆಂದರೆ ಮೊದಲ ಇಡೀ ಮೂರು ಪದಗಳನ್ನು ಕನ್ನಡದಲ್ಲಿ ಹೇಳಿ ಬಳಿಕ ಅಲ್ಲಿ ಬರುವ ಪದಗಳ ಮೊದಲ ಅಕ್ಷರಗಳನ್ನು ಕೂಡಿಸಿ ಹೇಳುವ ಕೆಲಸ ಮಾಡಬೇಕಾಗುತ್ತದೆ. ಜನರ ಬಳಕೆಗೆ ಇದು ಬೇಕಿಲ್ಲ. ಸಿಮ್ ಎಂದೇ ಬಳಸುವುದು ಸರಿ. ಹಾಗೆಯೇ **ಐಸ್ ಕ್ರೀಮ್** ಎನ್ನುವುದಕ್ಕೆ ಕನ್ನಡದಲ್ಲಿ ಏನು ಹೇಳಬೇಕು ಎನ್ನುವುದು ಇನ್ನೊಬ್ಬರ ಪ್ರಶ್ನೆ. ಮಂಜುಕೆನೆ ಎಂತಲೋ ಇನ್ನೇನೋ ಪದವನ್ನು ಕಟ್ಟಿ ಕೈತೊಳೆದುಕೊಂಡಿರುವುದುಂಟು. ಆದರೆ ಇದು ಬೇಕಿಲ್ಲ. ಮಕ್ಕಳಿಗೆ ಐಸ್ ಕ್ರೀಮ್‌ನಷ್ಟು ಮಂಜುಕೆನೆ ಇಷ್ಟವಾಗಲಾರದು.

ಆದರೂ ನಮ್ಮ ನುಡಿಯಲ್ಲಿ ಹೊಸಪದಗಳನ್ನು ಕಟ್ಟಿ ಇಂಗ್ಲಿಶ್ ಪದಗಳ ಬದಲಿಗೆ ಬಳಸುವುದನ್ನು ನೋಡುತ್ತೇವೆ. ಹಾಗೆ ಮಾಡುವಾಗ ಹೆಚ್ಚಾಗಿ ಸಂಸ್ಕೃತದಿಂದ ಬಂದ ಪದವನ್ನು ಬಳಸಿ ಕೈ ತೊಳೆದುಕೊಳ್ಳುವುದೇ ಹೆಚ್ಚು. ಏರೋಪ್ಲೇನ್‌ಗೆ ವಿಮಾನ ಎನ್ನುತ್ತೇವೆ (ಹಿಂದಿಯವರು ಹವಾಯಿ ಜಹಾಜ್-ಗಾಳಿ ಹಡಗು- ಎಂದರು) ಕಂಪ್ಯೂಟರ್‌ಗೆ ಗಣಕಯಂತ್ರ ಎನ್ನುತ್ತೇವೆ. ಹೀಗೆ ಸಂಸ್ಕೃತ ಪದಗಳ ರಾಶಿಯಿಂದ ಹೆಕ್ಕಿ ಕನ್ನಡದ ಪದಗಳನ್ನು ಕಟ್ಟಿದ ಸಂತಸವನ್ನು ಹೊಂದುತ್ತಿದ್ದೇವೆ. ಇದು ಸರಿಯೋ ತಪ್ಪೋ ಎನ್ನುವುದಕ್ಕಿಂತ ಯಾವ ಹಾದಿಯನ್ನು ಹಿಡಿದಿದ್ದೇವೆ ಎನ್ನುವುದನ್ನು ಗುರುತಿಸಿಕೊಳ್ಳಲು ಈ ಮಾತು ಹೇಳಬೇಕಾಯ್ತು.

ಈ ಹಾದಿ ನಮ್ಮನ್ನು ಯಾವ ಇಕ್ಕಟ್ಟಿಗೆ ಒಯ್ಯಬಹುದು ಎಂಬುದಕ್ಕೆ ಒಂದು ಉದಾಹರಣೆಯನ್ನು ನೋಡೋಣ. ಸಬ್ ಎಂಬ ಪದಭಾಗ ಮೊದಲಲ್ಲಿ ಇರುವ ಇಂಗ್ಲಿಶ್ ಪದಗಳನ್ನು ಕನ್ನಡದಲ್ಲಿ ಹೇಳುವಾಗ ಉಪ- ಎಂಬ ಪದಭಾಗವನ್ನು ಬಳಸಿಕೊಳ್ಳುವುದು ಬಳಕೆ ಬಂತು. ಆಗ ಉಪನೋಂದಣಾಧಿಕಾರಿ (ಸಬ್ ರಿಜಿಸ್ಟ್ರಾರ್) ಪದ ಬಳಕೆಯಾಯಿತು. ಆದರೆ ಎಲ್ಲ ಕಡೆಯೂ ಇದು ಆಗಲಿಲ್ಲ. ಸಬ್ ಮೇರೀನ್. ಸಬ್ ವೇ. ಸಬ್ ಸ್ಕ್ರಿಪ್ಟ್ ಮುಂತಾದ ಪದಗಳಲ್ಲಿ ಉಪ ಪದಭಾಗ ಬಳಕೆ ಸರಿಯಾಗದು. ಅಲ್ಲೆಲ್ಲ ಕೆಳ, ಅಧೀನ ಮುಂತಾದ ಪದಗಳನ್ನು ಬಳಸಬೇಕಾಯಿತು. ಇಂತಹುದೇ ಗೊಂದಲ ಪ್ರಿ- ಮತ್ತು ಪೋಸ್ಟ್- ಎಂಬ ಪದಭಾಗಗಳನ್ನು ಹೊಂದಿದ ಇಂಗ್ಲಿಶ್ ಪದಗಳನ್ನು ಕನ್ನಡದಲ್ಲಿ ಹೇಳುವಾಗ ಕಂಡು ಬರುತ್ತದೆ. ಪ್ರೀ ವಾರ್. ಪೋಸ್ಟ್ ಮಾಡರ್ನ್. ಮುಂತಾದ ಪದಗಳನ್ನು ಕನ್ನಡದಲ್ಲಿ ಹೇಳಲು ಹೊರಟಾಗ ಪೂರ್ವ. ಉತ್ತರ ಎಂಬ ಪದಗಳನ್ನು ಬಳಸುವುದನ್ನು ನೊಡುತ್ತೇವೆ. ಇವು ಯಾವಾಗಲೂ ಸರಿಯಾದ ತಿಳಿವನ್ನು ನಿಡುತ್ತವೆ ಎಂದು ಹೇಳಬರುವುದಿಲ್ಲ.

ಇದಲ್ಲದೆ ಕೆಲವು ಇಂಗ್ಲಿಶ್ ಪದಗಳು ಆ ಪದಗಳನ್ನು ಕಟ್ಟಿದ ನಾಡಿನವರ ನೋಟವನ್ನು ತಮ್ಮೊಳಗೆ ಹುದುಗಿಸಿಕೊಂಡಿರುತ್ತವೆ. ಮಿಡಲ್ ಈಸ್ಟ್, ಫಾರ್ ಈಸ್ಟ್ ಪದಗಳನ್ನು ನೊಡಿ. ಅಮೆರಿಕದವರು ಕೆಲವು ನಡುಗಳನ್ನು ಈ ಪದಗಳಿಂದ ಗುರುತಿಸಿದರು. ಹಾಗೆ ಗುರುತಿಸುವಾಗ ಆ ದೇಶಗಳು ಅವರಿಂದ ಯಾವ ದಿಕ್ಕಿನಲ್ಲಿ ಎಷ್ಟು ದೂರದಲ್ಲಿವೆ ಎಂಬುದನ್ನು ಹೇಳಲು ಮಿಡಲ್, ಫಾರ್ ಪದಗಳನ್ನು ಬಳಸಿದರು. ನಮ್ಮ ನಾಡಿನಲ್ಲಿ ನಾವು ಅದೇ ದೇಶಗಳನ್ನು ಮಧ್ಯಪ್ರಾಚ್ಯ ಮತ್ತು ದೂರ ಪ್ರಾಚ್ಯ ದೇಶಗಳು ಎಂದು ಕರೆಯುವುದು ಸರಿಯೇ? ಅಮೆರಿಕದವರ ಮಧ್ಯ ಪ್ರಾಚ್ಯ ದೇಶಗಳು ನಮಗೆ ಬಡಗು ದಿಕ್ಕಿನಲ್ಲಿವೆ. ಹಾಗೆಯೇ ಅಮೆರಿಕದ ದೂರ ಪ್ರಾಚ್ಯ ದೇಶಗಳು ಮೂಡಣ ದಿಕ್ಕಿನಲ್ಲಿ ನಮಗೆ ಹತ್ತಿರದಲ್ಲಿವೆ. ಅವು ದೂರದಲ್ಲಿವೆ ಎಂಬದು ಹೇಳಬಹುದೇ?

ಹಾಗಿದ್ದರೆ ಯಾವ ಬಗೆಯ ಪದಗಳಿಗೆ ಕನ್ನಡದ ಪದಗಳನ್ನು ಹುಡುಕಬೇಕು ಮತ್ತು ಯಾವ ಬಗೆಯ ಪದಗಳನ್ನು ಹಾಗೆಯೇ ಬಳಸಬೇಕು ಎಂದು ಯಾರಾದರೂ ಕೇಳಬಹುದು. ಈ ಕೇಳ್ವಿಗೆ ಬದಲನ್ನು ಹೇಳಲು ಸುಳುವಾದ ದಾರಿಗಳಿಲ್ಲ. ಕಣ್ಣಿಗೆ ಕಾಣುವ, ಕೈಯಿಂದ ಮುಟ್ಟಬಹುದಾದ್ದನ್ನು ಹೇಳುವ ಪದಗಳನ್ನು ಹಾಗೆಯೇ ಉಳಿಸಿಕೊಳ್ಳೋಣ. ಆಗ ರೈಲು, ಪೆನ್ನು, ಗ್ಲಾಸು, ಬಸ್ಸು ಮುಂತಾದವು ಹಾಗೆಯೇ ಉಳಿದುಕೊಳ್ಳುತ್ತವೆ. ಹಾಗೆಯೇ ಇಂಗ್ಲಿಶಿನಲ್ಲಿಯೇ ಅವು ಬೇರೆ ನುಡಿಗಳಿಂದ ಬಂದು ನೆಲೆಗೊಂಡ ಪದಗಳಾಗಿದ್ದರೆ ಅವುಗಳನ್ನೂ ಕನ್ನಡದಲ್ಲಿ ಹೇಳಲು ಮುಂದಾಗುವುದು ಬೇಕಿಲ್ಲ. ಇಂಗ್ಲಿಶಿನ ಪದವೇ ಕಿರಿದುಗೊಳಿಸಿದ ಗುರುತಿನ ಪದವಾಗಿದ್ದರೆ ಆಗಲೂ ಅದನ್ನು ಹಾಗೆಯೇ ಕನ್ನಡದಲ್ಲೂ ಬಳಸುವುದು ಸರಿ. ಮೇಲೆ ಹೇಳಿದ ಸಿಮ್ ಮಾದರಿಯ ಪದಗಳು ಹಾಗೆಯೇ ಉಳಿಯುತ್ತವೆ. ಯಾವ ಬಗೆಯ ಪದಗಳಿಗೆ ಕನ್ನಡದ ಪದಗಳನ್ನು ಕಟ್ಟಬೇಕು ಮತ್ತು ಆಗ ಯಾವ ಎಚ್ಚರವನ್ನು ಹೊಂದಿರಬೇಕು ಎನ್ನುವುದನ್ನು ಇನ್ನೊಂದು ಟಿಪ್ಪಣಿಯಲ್ಲಿ ನೋಡೋಣ.

**ಬಗ್ಗೆ ಮತ್ತು ಕುರಿತು**

ಕನ್ನಡ ಬರವಣಿಗೆಯಲ್ಲಿಈಚೆಗೆ ಹೆಚ್ಚಾಗಿ ಬಳಕೆಯಾಗುತ್ತಿರುವ ಎರಡು ಪದಗಳೆಂದರೆ **ಬಗ್ಗೆ ಮತ್ತು ಕುರಿತು**. ಬಗ್ಗೆ ಎಂಬುದನ್ನು **ಬಗೆಗೆ, ಬಗ್ಯೆ, ಬಗ್ಗ್ಯೆ** ಎಂದೂ ಬರೆಯುವುದುಂಟು. ಈ ಎರಡು ಪದಗಳು ಮಾತಿನಲ್ಲೂ ಬಳಕೆಯಾಗುತ್ತವೆಯಾದರೂ ಬರವಣಿಗೆಯಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಇವೆರಡೂ ಹಿಂದಿನಿಂದಲೂ ಕನ್ನಡದಲ್ಲಿ ಇದ್ದ ಪದಗಳೇ ಆಗಿವೆ. **ಬಗೆ** ಎಂಬುದು ಹೆಸರು ಪದವಾಗಿರುವಂತೆ ಮತ್ತು ಕೆಲಸ ಪದವಾಗಿಯೂ ಬಳಕೆಯಾಗಬಲ್ಲುದು. **ಗೆ** ಎಂಬುದು ಸೇರಿರುವುದರಿಂದ ಬಗ್ಗೆ ಎಂಬುದು ಹೆಸರು ಪದದ ನೆಲೆಯಲ್ಲಿದೆ ಎಂದು ತಿಳಿಯುವುದು ಸರಿಯಾಗುತ್ತದೆ. (ಕೆಲವರು ಬಗೆಗಿನ/ ಬಗ್ಗಿನ ಎಂಬ ಪದರೂಪಗಳನ್ನೂ ಬಳಸುವುದಂಟು. ಉದಾ.ಗೆ ನಿಮ್ಮ ಬಗೆಗಿನ ವಿಚಾರಣೆಯನ್ನು ನಾಳೆ ನಡೆಸಲಾಗುತ್ತದೆ). **ಕುರಿತು** ಹಳೆಯ ಬಳಕೆಯಲ್ಲಿ ಕಾಣಸಿಗುವ ಪದ. ಕವಿರಾಜಮಾರ್ಗದಲ್ಲಿ ಬರುವ ' ಆ ನಾಡವರ್ಗಳ್ ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್' ಎಂಬ ಮಾತಿನಲ್ಲೇ ಇದು ಕಂಡಿದೆ. **ಕುರಿ** ಎಂಬುದು ಕೆಲಸ ಪದವಾಗಿ ಈಗ ಕಡಿಮೆ ಬಳಕೆಯಲ್ಲಿರುವ ಪದ.

(ಕನ್ನಡ ಮಾತಾಡುವ ಕೆಲವು ಕಡೆ ಮನಸ್ಸಿನಲ್ಲಿ ಏನನ್ನಾದರೂ ನೆನೆದಿರು ಎಂದು ಹೇಳುವಾಗ **ಕುರಿತುಕೋ** ಎನ್ನುವುದುಂಟು.) ಇದರ ಹೆಸರು ಪದ ರೂಪವೇ ಈಗ **ಗುರಿ** ಎಂದಾಗಿ ಕೊಂಚ ಬೇರೆ ತಿರುಳಿನೊಡನೆ ಬಳಕೆಯಲ್ಲಿದೆ. ಆದರೆ **ಕುರಿತು** ಎಂಬ ಪದಕ್ಕೆ ಹಿಂದೆ ಇದ್ದ ತಿರುಳು ಮತ್ತು ಬಳಕೆಗಳು ಈಗ ಬದಲಾಗಿವೆ.

ಈಗ ಈ ಎರಡೂ ಪದಗಳು ಹೇಗೆ ಬಳಕೆಯಾಗುತ್ತಿವೆ ನೋಡೋಣ. ಹೆಚ್ಚೂ ಕಡಿಮೆ ಒಂದರ ಬದಲು ಇನ್ನೊಂದು ಬಳಕೆಯಾಗಬಹುದೇನೋ ಎಂಬಂತೆ ಇವುಗಳ ಬಳಕೆ ಇದೆ. ಮುಂದಿನ ವಾಕ್ಯಗಳನ್ನು ಓದಿ: **ಪರಿಸರ ಹಾನಿಯ ಬಗ್ಗೆ ನೀವು ಮಾಡಿನ ಭಾಷಣ ತುಂಬಾ ಚೆನ್ನಾಗಿತ್ತು**. ಈ ವಾಕ್ಯದಲ್ಲಿ **ಬಗ್ಗೆ** ಪದದ ಬದಲಿಗೆ ಕುರಿತು ಎಂದೂ ಬಳಸಬಹುದು. ಕೆಲವರು ಕುರಿತು ಪದವನ್ನು ಬಳಸುವಾಗ ಅದರ ಹಿಂದೆ ಬರುವ ಹೆಸರು ಪದಕ್ಕೆ ಎರಡನೆಯ ವಿಭಕ್ತಿ ಪ್ರತ್ಯಯವನ್ನು ಸೇರಿಸುತ್ತಾರೆ. ಆಗ ಈ ವಾಕ್ಯ **ಪರಿಸರ ಹಾನಿಯನ್ನು ಕುರಿತು ನೀವು ಮಾಡಿದ ಭಾಷಣ ತುಂಬಾ ಚೆನ್ನಾಗಿತ್ತು** ಎಂದಾಗುತ್ತದೆ. ಆದರೆ ಕರಾವಳಿ ಮತ್ತು ಕನ್ನಡ ಸೀಮೆಯ ಬಡಗು ಕಡೆ ಹೀಗೆ ಬದಲಾಯಿಸದೆ ಬಗ್ಗೆ ಪದವನ್ನು ಬಳಸಿದ ಕಡೆ ಕುರಿತು ಪದವನ್ನು ಬಳಸುತ್ತಾರೆ. ಹಾಗಾಗಿ **ಸೋಲಿನ ಕುರಿತ ಚರ್ಚೆ ಇನ್ನೂ ಮುಗಿದಿಲ್ಲ** ಎಂಬ ಮಾದರಿಯ ವಾಕ್ಯಗಳು ಅಲ್ಲಿ ಕಾಣುತ್ತವೆ.

ಕನ್ನಡ ಬರವಣಿಗೆಯಲ್ಲಿ ಈ ಪದಗಳ ಬಳಕೆ ಬೇಕೇ ಬೇಡವೇ ಎಂಬುದನ್ನು ಈ ನೋಡೋಣ. ವಾಕ್ಯರಚನೆಯ ಗೋಜಲಿಗೆ ಈ ಪದಗಳು ಕಾರಣವಾಗುತ್ತಿವೆ ಎನ್ನುವುದು ನನ್ನ ನಿಲುವು. ಇವುಗಳನ್ನು ಬಳಕೆಯ ಬರವಣಿಗೆಯಲ್ಲಿ ದೂರವಿಡುವುದು ಸರಿಯಾದೀತು. ಈ ಪದಗಳನ್ನು ಬಳಸದೆಯೂ ಹೇಳಬೇಕಾದನ್ನು ಹೇಳಲು ಆಗುತ್ತದೆ. ಕೆಲವು ಉದಾಹರಣೆಗಳನ್ನು ನೋಡೋಣ; **ಆ ಪುಸ್ತಕದ ಬಗ್ಗೆ/ಕುರಿತು ನೀವು ಬರೆದ ವಿಮರ್ಶೆಯನ್ನು ಓದಿದ್ದೇನೆ**. ಈ ವಾಕ್ಯವನ್ನು **'ನೀವು ಬರೆದ ಆ ಪುಸ್ತಕದ ವಿಮರ್ಶೆಯನ್ನು ನಾನು ಓದಿದ್ದೇನೆ'** ಎಂದು ಬರೆಯಬಹುದಲ್ಲವೇ? ಬಸವಣ್ಣನವರ ಒಂದು ವಚನದ ಸಾಲನ್ನು ನೋಡಿ: **ಪರರ ಚಿಂತೆ ನಮಗೇಕೆ ಅಯ್ಯಾ**? ಇದನ್ನು **ಪರರಬಗ್ಗೆ/ಕುರಿತು ಚಿಂತೆ ನಮಗೇಕೆ ಅಯ್ಯಾ**? ಎಂದು ಬರೆಯಬೇಕೇಕೆ? ಕೆಲವು ವಾಕ್ಯಗಳನ್ನು ಈ ಪದಗಳಿಲ್ಲದೆ ಬರೆಯುವದು ಆಗುವುದೇ ಇಲ್ಲವೆಂದು ತೋರಲೂಬಹುದು. ಉದಾ.ಗೆ. **'ಬಡವರ ಬಗ್ಗೆ/ಕುರಿತು ಚಿಂತಿಸುವವರು ಯಾರು**?' ಹೀಗೆನಿಸಲು ನಾವು ಆಯ್ದುಕೊಂಡ ವಾಕ್ಯದ ಮಾದರಿಯೇ ಕಾರಣವಾಗಿದೆ. ಬದಲಿಗೆ **'ಬಡವರ ಚಿಂತೆ ಯಾರಿಗಿದೆ?'** ಇಲ್ಲವೇ **ಬಡವರ ಚಿಂತೆ ಮಾಡುವವರು ಯಾರು**? ಎಂದರೆ ಸಾಲದೆ? ಇಂತಹ ಹತ್ತಾರು ಉದಾಹರಣೆಗಳನ್ನು ನೀಡಿ ಈ ಎರಡೂ ಪದಗಳ ಬಳಕೆಯನ್ನು ಬಿಡಬಹುದೆಂದು ತೋರಿಸಬಹುದು.

ಈ ಪದಗಳನ್ನೇಕೆ ದೂರವಿಡಬೇಕೆಂಬ ಕೇಳ್ವಿ ಎದುರಾಗುತ್ತದೆ. ಮೊದಲಿಗೆ ಹೇಳಿದಂತೆ ಈ ಪದಗಳು ನಾವು ಬರೆಯುವ ವಾಕ್ಯಗಳ ಮಾದರಿಯನ್ನು ತೀರಾ ಇಕ್ಕಟ್ಟಿಗೆ ಸಿಲುಕಿಸುತ್ತವೆ. ಒಂದೇ ಮಾದರಿಯ ವಾಕ್ಯವನ್ನು ಬರೆಯುವಂತೆ ಒತ್ತಾಯಿಸುತ್ತವೆ. ಎಲ್ಲಕ್ಕಿಂತ ಹೆಚ್ಚಾಗಿ ಇಂಗ್ಲಿಶಿನ ಕೆಲವು ಪ್ರಿಪೊದಿಶನ್ನು**(ಆನ್, ಅಬೌಟ್ ಮುಂತಾದವು)** ಗಳ ಮಾದರಿಯನ್ನು ಕನ್ನಡಕ್ಕೆ ರವಾನಿಸಲು ಒತ್ತಾಯಿಸುತ್ತವೆ. ಈ ಒತ್ತಾಯದಿಂದ

ಹೊರಬರಲು ನಾವು ಕನ್ನಡ ವಾಕ್ಯಗಳ ಚೌಕಟ್ಟಿನಲ್ಲಿ ಬರೆಯುವುದನ್ನು ಮೊದಲು ಮಾಡುವುದು ಒಳ್ಳೆಯದು. ಹಾಗಾಗಿ ಈ ಪದಗಳನ್ನು ಆದಷ್ಟು ದೂರವಿರಿಸುವುದು ಲೇಸೆಂದು ತೋರುತ್ತಿದೆ. ಈ ಪದಗಳ ಬಳಕೆಗೆ ಒಗ್ಗಿಕೊಂಡವರಿಗೆ ಇವುಗಳನ್ನು ಬಿಟ್ಟು ಬರೆಯುವುದು ಆಗದ ಮಾತೆಂದು ಮೊದಮೊದಲು ಅನ್ನಿಸುತ್ತದೆ. ಆದರೆ ಬಿಟ್ಟು ಬರೆಯತೊಡಗಿದಾಗ ಬೇರೆಬೇರೆ ಕನ್ನಡ ವಾಕ್ಯಗಳ ಮಾದರಿಗಳು ನಮಗೆ ತೆರೆದುಕೊಳ್ಳುವುದನ್ನು ನೋಡುತ್ತೇವೆ.

**ಮಾತಾಡುವ ಕನ್ನಡದ ಉಚ್ಚಾರಣೆಯಲ್ಲಿ ಅಸಹಜತೆ**

ರಂಗಕರ್ಮಿ ಗೆಳೆಯರೊಬ್ಬರು ಟಿವಿ ಚಾನೆಲ್‌ಗಳಲ್ಲಿ ಕನ್ನಡವನ್ನು ಮಾತಾಡುತ್ತಿರುವ ರೀತಿಯು ಆತಂಕಕಾರಿಯಾಗಿದೆ ಎಂದು ಹೇಳುತ್ತಿದ್ದರು. ಅವರ ತಗಾದೆ ಎರಡು ರೀತಿಯಲ್ಲಿದೆ. ಒಂದು: ಟಿವಿ ಜನರು ಮಾತಾಡುವ ಕನ್ನಡದ ಉಚ್ಚಾರಣೆಯಲ್ಲಿ ಅಸಹಜತೆ ಇದೆ. ಎರಡು: ಈ ಅಸಹಜ ರೀತಿಯ ನುಡಿಯುವಿಕೆಯನ್ನೆ ಚಿಕ್ಕವರು ಮಾದರಿಯನ್ನಾಗಿ ಮಾಡಿಕೊಂಡು ಅದನ್ನೆ ತಾವು ಕನ್ನಡ ಮಾತನಾಡುವಾಗಲು ಅನುಸರಿಸುತ್ತಿದ್ದಾರೆ. ಎರಡನೆಯ ಆತಂಕ ಎಷ್ಟು ಸರಿಯೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ಕನ್ನಡ ಟಿವಿ ಜನರು ಕನ್ನಡವನ್ನು ನುಡಿಯುವ ಬಗೆಯಲ್ಲಿ ನಮಗೆ ಪರಿಚಿತವಲ್ಲದ ಕೆಲವು ಲಕ್ಷಣಗಳು ಕೇಳಿಸುತ್ತಿವೆ ಎನ್ನುವುದು ನಿಜ. ಉದಾಹರಣೆಗೆ ಅವರ ಮಾತಿನ ಕನ್ನಡದ ಲಯಗಾರಿಕೆ ನಮ್ಮ ಕಿವಿಗಳಿಗೆ ಹೊಂದಿಕೊಂಡಿರುವ ಲಯಗಾರಿಕೆಗಿಂತ ಬೇರೆಯಾಗಿದೆ; ಅವರು ಕೆಲವು ಧ್ವನಿಗಳನ್ನು ಈವರೆಗೆ ನಮ್ಮ ಕಿವಿ ಕೇಳಿಸಿಕೊಳ್ಳದಿರುವ ಬಗೆಯಲ್ಲಿ ನುಡಿಯುತ್ತಿದ್ದಾರೆ. ಮುಂದೆ ಹೇಳುವ ಕೆಲವು ಸಂದರ್ಭಗಳನ್ನು ಗಮನಿಸಿ. ವಾಕ್ಯದ ಕೊನೆಗೆ ಬರುವ ಕ್ರಿಯಾಪದ ಎಕಾರದಿಂದ ಕೊನೆಯಾಗುತ್ತದೆ ಎಂದುಕೊಳ್ಳಿ( ಬರುತ್ತಾರೆ, ಆಗಮಿಸಲಿದ್ದಾರೆ, ನಿಲ್ಲುತ್ತದೆ ಮುಂತಾಗಿ) ಈ ಕೊನೆಯ ಎಕಾರವನ್ನು ಈಗ ಹಲವು ಟಿವಿ ಜನರು ಅದರಲ್ಲೂ ಹೆಣ್ಣುಮಕ್ಕಳು ನುಡಿಯುತ್ತಿರುವ ರೀತಿ ನನ್ನ ಗೆಳೆಯರಿಗೆ ಅಸಹಜವಾಗಿ ತೋರುತ್ತಿದೆ. ಹೌದು. ಈಗ ಆ ಎಕಾರವನ್ನು ಹೆಚ್ಚು ಬಾಯಿತೆರೆದು ನುಡಿಯುತ್ತಿದ್ದಾರೆ. (ಇಂಗ್ಲಿಶಿನ ಟ್ಯಾಗ್, ಬ್ಯಾಟ್, ನ್ಯಾಕ್ ಮುಂತಾದ ಪದಗಳಲ್ಲಿ ಇರುವ ಸ್ವರದ ಚಹರೆಗಳು ಇವರ ನುಡಿಯುವಿಕೆಯಲ್ಲಿ ಕೇಳಿಸುತ್ತವೆ.) ಇದಲ್ಲದೆ ಟವರ್ಗದ ಧ್ವನಿಗಳನ್ನು (ಟ, ಠ, ಡ, ಢ, ಣ) ನುಡಿಯುವ ಬಗೆಯಲ್ಲೂ ಬದಲಾವಣೆಗಳಾಗುತ್ತಿವೆ. ನನ್ನ ಗೆಳೆಯರು ಅದನ್ನು 'ತೇಲಿಸಿ ನುಡಿಯುವ' ಬಗೆ ಎಂದರು. ದಿಟದಲ್ಲಿ ಆಗುತ್ತಿರುವ ಬದಲಾವಣೆಯನ್ನು ಹೀಗೆ ವಿವರಿಸೋಣ. ಕನ್ನಡದಲ್ಲಿ ಟವರ್ಗದ ಧ್ವನಿಗಳನ್ನು ನುಡಿಯಬೇಕಾದಾಗ ನಾಲಿಗೆಯ ತುದಿಯನ್ನು ಹಿಂದಕ್ಕೆ ಬಾಗಿಸಿ ಅಂಗಳಿನ ಮೇಲ್ಭಾಗಕ್ಕೆ ತಗುಲುವಂತೆ ಮಾಡಬೇಕು. ಆದರೆ ಈಗ ಚಿಕ್ಕವರು ಆ ಧ್ವನಿಗಳನ್ನು ನುಡಿಯುವ ಬಗೆಯನ್ನು ಬದಲಿಸಿಕೊಂಡಿದ್ದಾರೆ. ನಾಲಿಗೆಯ ತುದಿಯನ್ನು ಮೇಲಿನ ಹಲ್ಲಿನ ಸಾಲಿನ ಬುಡಕ್ಕೆ ಉಜ್ಜುವಂತೆ ಮಾಡುವ ಮೂಲಕ ಟವರ್ಗದ ಧ್ವನಿಗಳನ್ನು ನುಡಿಯುತ್ತಿದ್ದಾರೆ. ಕೇಳುವವರಿಗೆ ಇದು ಹೊಸಬಗೆ ಎಂದು ಅನ್ನಿಸುತ್ತದೆ. ಅದರಲ್ಲೂ ಕಲಿತವರ ಬಗೆಯನ್ನು ತೋರಿಸಲು ಈ ಬಗೆಯ ನುಡಿಯುವಿಕೆ ಹೆಚ್ಚಾಗುತ್ತಿದೆ. ಅದರಲ್ಲೂ ಟವರ್ಗದ ಧ್ವನಿಗಳು ತಾವೇ ಜೋಡಿಯಾಗಿ ಬಂದಿರುವ ಪದಗಳ (ಬಟ್ಟೆ,

ಕಡ್ಡಾಯ, ಹಣ್ಣು ಮುಂತಾದವು) ನುಡಿಯುವಿಕೆಯಲ್ಲಿ ಈ 'ತೇಲು ಉಚ್ಚಾರಣೆ' ಇನ್ನೂ ಹೆಚ್ಚು 'ಸ್ಪಷ್ಟ'ವಾಗಿ ಕೇಳುತ್ತದೆ.

ಧ್ವನಿಗಳನ್ನು ಚಿಕ್ಕವರು ನುಡಿಯುವ ಬಗೆಯಲ್ಲಿ ಬದಲಾವಣೆಗಳು ಕೇಳಿಸ ತೊಡಗಿದರೆ ಅದನ್ನು ನಾವು ಎಚ್ಚರಿಕೆಯಿಂದ ಗಮನಿಸಬೇಕು. ಈ ಬದಲಾವಣೆ ಸಮಾಜದ ಯಾವ ವಲಯಗಳಲ್ಲಿ ಯಾವ ವಯೋಮಾನದವರಲ್ಲಿ ಮತ್ತು ಮಾತಿನ ಯಾವ ಯಾವ ಸಂದರ್ಭಗಳಲ್ಲಿ ಕೇಳಿಸುತ್ತಿದೆ ಎನ್ನುವುದನ್ನು ನೋಡಬೇಕು. ಈ ಮಾಹಿತಿಗಳು ನುಡಿಯುವಿಕೆಯಲ್ಲಿ ಆಗುತ್ತಿರುವ ಬದಲಾವಣೆಗಳ ಹಿಂದಿರುವ ಸಾಮಾಜಿಕ ಒತ್ತಡಗಳನ್ನು ಗುರುತಿಸಲು ನೆರವಾಗುತ್ತವೆ. ಈ ಬದಲಾವಣೆಗಳು ಕೆಲವೊಮ್ಮೆ ಉಡುಗೆಯ ಹೊಸತನಗಳಂತೆ ಬಂದಂತೆಯೇ ಮರೆಯಾಗಿ ಹೋಗಬಹುದು. ಆದರೆ ಕೆಲವು ಬದಲಾವಣೆಗಳು ಹರಡಿಕೊಂಡು ಸಮಾಜದ ಬಹುಭಾಗವನ್ನು ಆವರಿಸಿ ಕೊನೆಗೆ ಭಾಷೆಯಲ್ಲಿ ಒಂದು ಮುಖ್ಯ ಧ್ವನಿ ಬದಲಾವಣೆಗೂ ಕಾರಣವಾಗಲೂಬಹುದು.

ಈಗ ನಾವು ಗಮನಿಸಿದ ನುಡಿಯುವಿಕೆಯ ಬದಲಾವಣೆಗಳು ಹೆಚ್ಚಾಗಿ ಅಪರಿಚಿತರ ನಡುವಣ ಮಾತುಕತೆಗಳಲ್ಲಿ ಕಾಣಿಸತೊಡಗಿವೆ. ಅಂದರೆ ಮಾತಾಡುವ ಮತ್ತು ಕೇಳಿಸಿಕೊಳ್ಳುತ್ತಿರುವವರು ಆ ಸಂದರ್ಭದಲ್ಲಿ ಮಾತ್ರ ಪರಿಚಿತರೆಂಬಂತೆ ವ್ಯವಹರಿಸಬೇಕಾಗಿ ಬರುತ್ತದೆ. ಅಂದರೆ ಹೊಸದೊಂದು ಸಾಮಾಜಿಕ ಚಹರೆಯನ್ನು ಆ ಹೊತ್ತಿಗೆ ರೂಪಿಸಿಕೊಳ್ಳಬೇಕಾಗುತ್ತದೆ. ಇಂತಹ ಸಾಂದರ್ಭಿಕ ಅಗತ್ಯಗಳಲ್ಲಿ ತಮ್ಮ ಚಹರೆಯನ್ನು ಕಾಯ್ದುಕೊಳ್ಳಲು ಮಾತಾಡುವವರು ಹೀಗೆ ನುಡಿಯುವಿಕೆಯಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾರೆ. ಹೊರಗೆ ನಿಂತು ಕೇಳುವವರಿಗೆ ಅದು ಅಸಹಜ ಎನಿಸಿದರೂ ಆ ಸಂದರ್ಭದಲ್ಲಿ ಭಾಗಿಯಾಗುತ್ತಿರುವವರು ಅದರ ಒತ್ತಡಗಳನ್ನು ನಿಭಾಯಿಸಲು ಇರುವ ಹಲವು ತಂತ್ರಗಳಲ್ಲಿ ಇದೂ ಒಂದು ಎನ್ನುವುದನ್ನು ಗಮನಸಬೇಕು. ಇದು ಎಲ್ಲ ಭಾಷಾ ಸಮುದಾಯಗಳಲ್ಲೂ ನಡೆಯುತ್ತಿರುವ ವ್ಯವಹಾರವಾಗಿದೆ. ಎರಡು ದಶಕಗಳ ಹಿಂದೆ ನ್ಯೂ ಯಾರ್ಕ್ (ಅಂದರೆ ಮ್ಯಾನ್‌ಹಟನ್) ನಗರದ ಹದಿವಯಸ್ಸಿನ ಕಲಿತ ಹೆಣ್ಣು ಮಕ್ಕಳಲ್ಲಿ ಇಂತಹುದೇ ಒಂದು ನುಡಿಯುವಿಕೆಯ ಬದಲಾವಣೆಗೆ ಕಾರಣರಾದರು. ಅವರು 'ಗುಡ್' ಎಂಬ ಪದದಲ್ಲಿರುವ ಸ್ವರವನ್ನು ನುಡಿಯುವಾಗ ಅದು 'ಗ್ವಿಡ್'(ಖಚಿತವಾಗಿ ಹೀಗಲ್ಲ) ಎಂದು ಕೇಳುವಂತೆ ನುಡಿಯತೊಡಗಿದರು. ಭಾಷಾ ಶಾಸ್ತ್ರ ಬಲ್ಲವರು ಈ ಬದಲಾವಣೆಯನ್ನು ಅಧ್ಯಯನ ಮಾಡಿದ್ದಾರೆ. ಈ ಬದಲಾವಣೆ ಎಷ್ಟು ವ್ಯಾಪಕವಾಗಿತ್ತೆಂದರೆ ಸ್ವಲ್ಪ ಕಾಲದಲ್ಲೆ 'ತಾವು ಇನ್ನೂ ಚಿಕ್ಕವರೆಂದು ತೋರಿಸಿಕೊಳ್ಳ ಬಯಸುವ ದೊಡ್ಡವರು' ಕೂಡ ಇದೇ ಬಗೆಯ ನುಡಿಯುವಿಕೆಯನ್ನು ಅನುಸರಿಸ ತೊಡಗಿದರು.

### ಮಾತು ಮತ್ತು ಬರವಣಿಗೆಗಳಲ್ಲಿ ವ್ಯತ್ಯಾಸ

ಮಾತು ಮತ್ತು ಬರವಣಿಗೆಗಳಲ್ಲಿ ಬಳಕೆಯಾಗುವ ಭಾಷೆಯ ನಡುವೆ ಹಲವು ವ್ಯತ್ಯಾಸಗಳಿವೆ. ಅವುಗಳಲ್ಲಿ ಒಂದನ್ನು ಈಗ ಗಮನಿಸೋಣ. ಇವೆರಡರಲ್ಲಿ ನಾವು ಆಯ್ಕೆ ಮಾಡಿಕೊಳ್ಳುವ ಪದಗಳು ಬೇರೆಬೇರೆ ಆಗಿರುತ್ತವೆ. ಅಂದರೆ ಬರವಣಿಗೆಯಲ್ಲಿ ಚಲಾವಣೆಗೆ

ಬರುವ ಎಷ್ಟೋ ಪದಗಳು ಮಾತಿನಲ್ಲಿ ಬಳಕೆಯಾಗುವುದಿಲ್ಲ. ಈ ವ್ಯತ್ಯಾಸವನ್ನು ತಿಳಿದುಕೊಳ್ಳದಿದ್ದರೆ ಕೆಲವು ತೊಂದರೆಗಳಿವೆ. ಕೆಲವೊಮ್ಮೆ ನಾವು ಬರೆದದ್ದನ್ನು ಇನ್ನೊಬ್ಬರು 'ಮಾತಾಡುತ್ತಾರೆ'. ನಾಟಕ, ಸಿನಿಮಾಗಳಲ್ಲಿ ಟಿವಿ ಚಾನೆಲ್‌ಗಳ ಕಾರ್ಯಕ್ರಮಗಳಿಗೆ ಹೀಗೆ ಬರೆದ ಮಾತನ್ನು ಮಾತಾಡುವ ಪ್ರಸಂಗಗಳಿರುತ್ತವೆ. ಇದಲ್ಲದೆ ಮತ್ತೆ ಕೆಲವೊಮ್ಮೆ ಬರೆದದ್ದನ್ನು ಬೇರೆಯವರಿಗೆ 'ಓದಿ ಹೇಳುವ' ಪ್ರಸಂಗಗಳೂ ಇರುತ್ತವೆ. ಸುದ್ದಿಗಳನ್ನು ಓದುವವರು ಹೀಗೆ ಬರೆದದ್ದನ್ನು ಓದಿ ಹೇಳುತ್ತಿರುತ್ತಾರೆ. ಈ ಎಲ್ಲ ಪ್ರಸಂಗಗಳಲ್ಲೂ ಇತರರು ಕೇಳುತ್ತಿರುತ್ತಾರೆ. ಆಂದರೆ ಅವರ ಪಾಲಿಗೆ ಅದು ಮಾತು. ಹಾಗಾಗಿ ಮೂಲದಲ್ಲಿ ಬರೆದದ್ದಾರೂ ಕೊನೆಗೂ ಅದು ಮಾತಿನ ಚಹರೆಗಳನ್ನು ಪಡೆದುಕೊಳ್ಳಬೇಕಾಗುತ್ತದೆ. ಬರೆಯುವಾಗಲೇ ಆ ಬರೆಹದಲ್ಲಿ ಮಾತಿನ ಲಕ್ಷಣಗಳನ್ನು ಸೇರಿಸಬೇಕಾಗುತ್ತದೆ. ಈ ಮಾರ್ಪಾಟು ತರಲು ಬೇರೆಬೇರೆ ಬಗೆಗಳಿವೆಯಾದರೂ ಸರಿಯಾದ ಪದಗಳನ್ನು ಆಯ್ದುಕೊಳ್ಳುವುದು ಅವುಗಳಲ್ಲಿ ಒಂದು ಬಗೆ. ಕನ್ನಡ ಬರವಣಿಗೆಯಲ್ಲಿ ಮಾತ್ರ ಬಳಸುವ ಪದಗಳನ್ನು ಇಂತಹ ಬರವಣಿಗೆಗಳಲ್ಲಿ ಬಳಸಿದರೆ ಆಗ ಅದನ್ನು ಕೇಳಿಸಿಕೊಳ್ಳುವವರಿಗೆ ಅದು ಹಿತಕರವಾಗಿರುವುದಿಲ್ಲ. ಉದಾಹರಣೆಗೆ ಕನ್ನಡ ಬರವಣಿಗೆಯಲ್ಲಿ ಕಂಡುಬರುವಷ್ಟು ಸಂಸ್ಕೃತ ಪದಗಳ ಬಳಕೆ ಅನೌಪಚಾರಿಕ ಮಾತುಕತೆಗಳಲ್ಲಿ ಕಂಡುಬರುವುದಿಲ್ಲ. ಓದಿಹೇಳಲೆಂದು ಇಲ್ಲವೇ ಮಾತಾಡಲೆಂದು ಸಿದ್ಧಗೊಂಡ ಕನ್ನಡ ಬರವಣಿಗೆಯಲ್ಲಿ ಈ ಅಂಶವನ್ನು ಗಮನಿಸದೇ ಹೋದರೆ ಆಗ ಆ ಬರವಣಿಗೆ ಕೇಳುಗರಿಗೆ ಅಸಹಜವೆನಿಸುತ್ತದೆ; ಕೆಲವೊಮ್ಮೆ ತಿಳಿವಿಗೆ ಮೀರಿದ್ದೆಂದು ಅನ್ನಿಸಲೂಬಹುದು. ಈಚಿನ ದಿವಸಗಳಲ್ಲಿ ಹೀಗೆ ಓದಿಹೇಳಲೆಂದು ಇಲ್ಲವೇ ಮಾತಾಡಲೆಂದು ಬರೆದ ಕನ್ನಡದ ಬಳಕೆ ಹೆಚ್ಚಾಗುತ್ತಿದೆ ಅದರೆ ಅಂತಹ ಬರವಣಿಗೆಗಳಿಗೆ ಇರಬೇಕಾದ ಲಕ್ಷಣಗಳನ್ನು ಪಾಲಿಸುತ್ತಿಲ್ಲ.

ಇದೇ ಬಗೆಯ ಎಚ್ಚರಿಕೆ ನಾವು ಆಡುವ ಮಾತಿನ ಕನ್ನಡಕ್ಕೂ ಸಲ್ಲುತ್ತದೆ. ಕನ್ನಡ ಮಾತನಾಡುವಾಗ ಯೋಚಿಸುವುದು ಮತ್ತು ಮಾತನಾಡುವುದು ಈ ಎರಡೂ ಹಂತಗಳ ನಡುವೆ ಅಂತರ ಇರುವುದಿಲ್ಲ. ಹಾಗಾಗಿ ಮಾತಾಡುತ್ತಿರುವ ವೇಗಕ್ಕೆ ತಕ್ಕಂತೆ ಯೋಚನೆಯೂ ನಡೆಯದಿದ್ದಲ್ಲಿ ಮಾತಿನ ವೇಗವನ್ನು ಕಾಯ್ದುಕೊಳ್ಳಲು ನಿರರ್ಥಕವಾದ ವಾಕ್ಯಗಳನ್ನು ಬಳಸುತ್ತೇವೆ; ಆಡಿದ್ದನ್ನೆ ಮತ್ತೆಮತ್ತೆ ಆಡುತ್ತೇವೆ. ಮಾತಿನಲ್ಲಿರಬೇಕಾದ ಯೋಚನೆಯ ಕೊರತೆಯನ್ನು ತುಂಬಿಕೊಳ್ಳಲು ಟೊಳ್ಳು ಪದಗಳನ್ನು ಹೆಚ್ಚುಹೆಚ್ಚು ಬಳಸುತ್ತಿರುತ್ತೇವೆ. ನಮ್ಮ ಸುತ್ತಲೂ ಈ ಬಗೆಯ ಕನ್ನಡ 'ಮಾತುಗಾರಿಕೆ' ಈಗ ಹೆಚ್ಚಾಗುತ್ತಿದೆ. ಚುನಾವಣೆಯ ಸಂದರ್ಭವಂತೂ ಈ ಮೇಲಿನ ಮಾತಿಗೆ ನೂರಾರು ಉದಾಹರಣೆಗಳನ್ನು ಕೇಳಿಸಿಕೊಳ್ಳಲಿದ್ದೇವೆ.

**ಗುಂಪಿಗೆ ಸೇರದ ಪದಗಳನ್ನು ಗುರುತಿಸುವಲ್ಲಿನ ತೊಡಕು**

ಏಳನೆಯ ತರಗತಿಯಲ್ಲಿ ಓದುತ್ತಿರುವ ಲಕ್ಷ್ಮಿ ಜಿ. (ತುಮಕೂರು) ತನ್ನ ಪಠ್ಯಪುಸ್ತಕದಲ್ಲಿ **'ಗುಂಪಿಗೆ ಸೇರದ ಪದಗಳನ್ನು ಗುರುತಿಸಲು'** ಕೇಳುವ ಪ್ರಶ್ನೆಯಲ್ಲಿ ಇರುವ ಗೊಂದಲವನ್ನು ವಿವರಿಸಲು ಕೇಳಿದ್ದಾಳೆ. ಒಂದು ಪ್ರಶ್ನೆ ಹೀಗಿದೆ: **'ಮಹಿ, ಧರೆ, ಪೊಡವಿ, ಪೃಥ್ವಿ'** ಈ ಪ್ರಶ್ನೆಯನ್ನು ರೂಪಿಸಿದವರ ಪ್ರಕಾರ **ಪೊಡವಿ** ಎಂಬ ಪದವನ್ನು ಗುಂಪಿಗೆ ಸೇರದ ಪದವೆಂದು ಗುರುತಿಸಬೇಕು. ಈ ಎಲ್ಲ ಪದಗಳಿಗೂ ಒಂದೇ ಅರ್ಥವಿದ್ದರೂ **ಪೊಡವಿ**

ಕನ್ನಡದ ಪದ; ಉಳಿದವು ಸಂಸ್ಕೃತ ಪದಗಳು( ದಿಟವಾಗಿ **ಪೊಡವಿ** ಕೂಡ **ಪೃಥ್ವಿಯ** ತದ್ಭವ. ಅದು ಹಾಗಿರಲಿ) ಆದರೆ ಯಾರಾದರೂ **ಧರೆ** ಎಂಬ ಪದ ಈ ಗುಂಪಿಗೆ ಸೇರದ ಪದವೆಂದು ಗುರುತಿಸಿದರೆ ಅದನ್ನು ತಪ್ಪು ಎನ್ನಲು ಬರುವುದಿಲ್ಲ. ಏಕೆಂದರೆ ಉಳಿದ ಮೂರೂ ಪದಗಳು ಇಕಾರದಿಂದ ಕೊನೆಯಾದರೆ ಧರೆ ಎಕಾರದಿಂದ ಕೊನೆಯಾಗುತ್ತದೆ. ಈ ಬಗೆಯ ಪ್ರಶ್ನೆಗಳು ಭಾಷೆಯ ತಿಳಿವಿಗಿಂತ ಹೆಚ್ಚಾಗಿ ತಾರ್ಕಿಕವಾಗಿ ಯೋಚಿಸುವ ಸಾಮರ್ಥ್ಯವನ್ನು ಪರೀಕ್ಷಿಸುತ್ತವೆ. ಇದು ತಪ್ಪೇನಲ್ಲವಾದರೂ ಇಂತಹ ಪ್ರಶ್ನೆಗಳನ್ನು ರೂಪಿಸುವವರು ಮತ್ತು ಇವುಗಳನ್ನು ಬಿಡಿಸಲು ಕಲಿಸುವವರು ತುಂಬ ಎಚ್ಚರದಿಂದ ಇರಬೇಕಾಗುತ್ತದೆ.

**ವಿರುದ್ಧ ಪದ ಮತ್ತು ವಿರುದ್ಧಾರ್ಥಕ ಪದ**

ಭಾಷೆಯ ತಿಳಿವನ್ನು ಪರೀಕ್ಷಿಸಲು ಈಗ ಅನುಸರಿಸುತ್ತಿರುವ ವಿಧಾನಗಳು ಸಾಕಷ್ಟು ಗೊಂದಲದಿಂದ ಕೂಡಿವೆ. ಇದಕ್ಕೆ ಇನ್ನೊಂದು ಉದಾಹರಣೆಯನ್ನು ಈಗ ಗಮನಿಸಿ. ಪತ್ರಿಕೆಗಳಲ್ಲಿ ಸರ್ಕಾರ ಕಚೇರಿ ಸಹಾಯಕರ ಆಯ್ಕೆಗಾಗಿ ನಡೆಸುವ ಪರೀಕ್ಷೆಗೆ ತರಬೇತಿ ನೀಡುವ ಮಾಹಿತಿ ಪ್ರಕಟವಾಗುತ್ತವೆಯಷ್ಟೆ. ಕೆಲವು ದಿನಗಳಿಂದ ವಿರುದ್ಧ ಪದಗಳನ್ನು ಗುರುತು ಮಾಡುವ ಪ್ರಶ್ನೆಗಳನ್ನು ನೀಡಿ ಉತ್ತರವನ್ನು ಕೂಡ ಹೇಳುತ್ತಿದ್ದಾರೆ. ವಿರುದ್ಧ ಪದ ಮತ್ತು ವಿರುದ್ಧಾರ್ಥಗಳಿಗೆ ಇರುವ ವ್ಯತ್ಯಾಸವನ್ನು ಕೂಡ ಈ ತರಬೇತಿಯಲ್ಲಿ ಗಮನಿಸುತ್ತಿಲ್ಲ. **ಖಾತಿ** (=ಕೋಪ) ಎಂಬುದಕ್ಕೆ **ಶಾಂತವಾಗಿರುವುದು** ಎಂಬುದು ವಿರುದ್ಧಾರ್ಥ ವಿವರಣೆಯೇ ಹೊರತು ವಿರುದ್ಧ ಪದವಲ್ಲ. ಅಲ್ಲದೆ ಖಾತಿ ಎಂಬ ಪದವೇ ಬಳಕೆಯಲ್ಲಿಲ್ಲದ ಪದ. ಅದರ ಅರ್ಥವನ್ನು ತಿಳಿದಿರುವುದೇ ಕಷ್ಟ. ಹೀಗೆಯೇ **ಕಡಂಗು, ಗುತ್ತ, ಉಡುಕುಳಿ, ಇರ್ಪು, ಉಣ್ಮೆ, ಉಪಚಯ, ಉಪಗತ, ಉದ್ಧಳಿಕೆ, ಉದಗ್ರ ಈರಿಣ** ಮುಂತಾದ ಪದಗಳಿಗೂ ವಿರುದ್ಧ ಪದಗಳನ್ನು ನೀಡಲು ಈ ಹಿಂದಿನ ಪ್ರಶ್ನಪತ್ರಿಕೆಗಳಲ್ಲಿ ಕೇಳಲಾಗಿದೆಯಂತೆ. ಇನ್ನು ನಿರೀಕ್ಷಿಸುವ ಉತ್ತರಗಳೂ ಸೋಜಿಗ ತರುತ್ತವೆ. **ಇರ್** 'ಪದ'ಕ್ಕೆ **ಅಲೆಮಾರಿ, ಉಕ್ತ** ಪದಕ್ಕೆ **'ವಚನ ಭ್ರಷ್ಟತೆ'** ವಿರುದ್ಧ ಪದಗಳಂತೆ. **ಪೂರ್ವ** ಪದಕ್ಕೆ **ಪಶ್ಚಿಮ** ವಿರುದ್ಧಪದವೆಂದು ( ಬಹು ಆಯ್ಕೆಯ ಈ ಪ್ರಶ್ನೆಯಲ್ಲಿ **ಅಪೂರ್ವ** ಎಂಬ ಆಯ್ಕೆಯೂ ಇದೆ.) ಹೇಳಿ **ಧರ್ಮ** ಪದಕ್ಕೆ **ಅಧರ್ಮ** ವಿರುದ್ಧ ಪದವೆಂದು ಹೇಳಿದ್ದಾರೆ.ಹಾಗೆಯೇ **ಉಪಸ್ಥಿತಿಗೆ ಅನುಪಸ್ಥಿತಿ** ವಿರುದ್ಧ ಪದವೆನ್ನಲಾಗಿದೆ. ನಿಷೇಧ ಪದಗಳಿಗೂ ವಿರುದ್ಧಪದಗಳಿಗೂ ಕಲಿಯುವ ಮಕ್ಕಳಲ್ಲಿ ಗೊಂದಲವನ್ನು ಬಿತ್ತಲಾಗುತ್ತಿದೆ ಎನ್ನುವುದಕ್ಕೆ ಈ ಪ್ರಶ್ನೋತ್ತರಗಳು ಸಾಕ್ಷಿಯಾಗಿವೆ. ಇನ್ನಾದರೂ ನಮ್ಮ ಭಾಷಾ ತಿಳಿವಿನ ಪರೀಕ್ಷೆಗಳು ತಿದ್ದುಪಡಿಗಳಿಗೆ ಒಳಗಾಗಬೇಕಿದೆ.

**ನಾಯಕ/ನ್ಯಾಕ**

ಅಡೂರು ನೇರಳಕಜೆ ಕಿಟ್ಟಣ್ಣ (ಬೆಂಗಳೂರು) ಇವರು **ನಾಯಕ** ಎಂಬ ಪದವನ್ನು ಬರೆಯುವಾಗ ಕೆಲವರು ನಾ ಬರೆದು ಅದಕ್ಕೆ ಐತ್ವದ(ನ್ಯಾ) ಚಿಹ್ನೆಯನ್ನು ಸೇರಿಸುತ್ತಾರಲ್ಲ; ಇದು ಸರಿಯೇ ಎಂದಿದ್ದಾರೆ. ದಕ್ಷಿಣ ಕನ್ನಡದಲ್ಲಿ ಇದು ಬಳಕೆಯಲ್ಲಿದೆ. **ರೂಪಾಯ್, ಮೊಯ್ಲಿ** ಎಂಬ ಪದಗಳನ್ನು ಹೀಗೆ ಐತ್ವ ಬಳಸಿ ಬರೆಯುವುದುಂಟು. ಐ ಧ್ವನಿಯಲ್ಲಿ

ಅ ಮತ್ತು ಇ ಎಂಬ ಎರಡು ಸ್ವರಗಳು ಸೇರಿವೆ. ಇವೆರಡನ್ನೂ ಒಟ್ಟಾಗಿ ನುಡಿಯುವಾಗ ಅದು **ಅಯ್** ಎಂಬಂತೆ ಕೇಳಿಸುತ್ತದೆ. ಈ ಕಾರಣದಿಂದಾಗಿಯೇ **ನಾಯ್‌ಕ, ಮೊಯ್‌ಲಿ, ರೂಪಾಯ್** ಪದಗಳಲ್ಲಿರುವ ಅಯ್ ಧ್ವನಿಯನ್ನು ಐತ್ವದಿಂದ ತೋರಿಸುವುದುಂಟು. ಆದರೆ ಕನ್ನಡ ಬರವಣಿಗೆಯಲ್ಲಿ ಐ ಕಾರಕ್ಕೆ **ಎಯ್** ಎಂಬ ಬರಹದ ಚಿಹ್ನೆಯನ್ನು ಬಳಸುತ್ತಿದ್ದೇವೆ (ಹಾಗೆ ಉಚ್ಚರಿಸುವುದಿಲ್ಲ) ಮೈಸೂರು ಎಂದು ಬರೆಯುವಾಗ ಮಕಾರಕ್ಕೆ ಈ ಕಾರಣದಿಂದಲೇ ಎತ್ವದ ಗುರುತನ್ನೂ ಸೇರಿಸಿದ್ದೇವೆ. ನುಡಿಯುವುದು ಮಾತ್ರ **ಮೆಯ್ಯೂರು** ಎಂದಲ್ಲ; **ಮಯ್ಸೂರು** ಎಂದು ತಾನೇ? ಇದು ಕನ್ನಡ ಬರವಣಿಗೆ ಮತ್ತು ನುಡಿಯುವ ಬಗೆಯಲ್ಲಿ ಇರುವ ಒಂದು ಬಿರುಕು. ಐಕಾರವನ್ನು ಎಯ್ ಎಂದು ಉಚ್ಚರಿಸಿ ಹಾಗೆಯೇ ಬರೆಯುವುದು ಹಿಂದಿಯೇ ಮೊದಲಾದ ಭಾಷೆಗಳಲ್ಲಿ ರೂಢಿಯಲ್ಲಿದೆ. ಕನ್ನಡ ದೇವನಾಗರಿ ಲಿಪಿಯ ಮಾದರಿಯನ್ನು ಬರವಣಿಗೆಯಲ್ಲಿ ಅನುಸರಿಸುತ್ತಿರುವಂತೆ ತೋರುತ್ತದೆ. ಹಾಗಾಗಿ ನಾಯ್‌ಕ ಪದವನ್ನು ಐತ್ವ ಗುರುತಿನೊಡನೆ ಬರೆಯುವುದನ್ನು ತಪ್ಪು ಎನ್ನಲು ಬರುವುದಿಲ್ಲ. ಆದರೆ ಇಲ್ಲಿ ಇನ್ನೊಂದು ಸಮಸ್ಯೆ ಇದೆ. ಒಂದೇ ಪದವನ್ನು ಬೇರೆ ರೀತಿ ಬರೆಯುವ ರೂಢಿಯಿಂದಾಗಿ ಕೆಲವು ಸಾಮಾಜಿಕ ಸಮಸ್ಯೆಗಳು ಉಂಟಾಗಿವೆ. ಒಂದೇ ಜಾತಿಯ ಹೆಸರನ್ನು ಬೇರೆಬೇರೆ ಬಗೆಯಲ್ಲಿ ಬರೆದು ದಾಖಲಿಸಿದ್ದರಿಂದ ಅವೆಲ್ಲವೂ ಬೇರೆ ಬೇರೆ ಜಾತಿಗಳೇ 'ಆಗಿಬಿಟ್ಟವೆ'. ಇದರಿಂದ ಹಲವು ಗೊಂದಲಗಳು ಹುಟ್ಟಿಕೊಂಡಿವೆ. ಸರಕಾರಿ ದಾಖಲೆಗಳಲ್ಲಾದರೂ ಒಂದು ಪದವನ್ನು ಒಂದೆ ರೀತಿ ಬರೆಯುವುದನ್ನು ಜಾರಿಗೆ ಕೊಡುವುದು ಲೇಸು.

### ಪದಪ್ರಯೋಗಗಳಲ್ಲಿ ಸರಿಯಾದ ರೂಪಗಳು

ಓದುಗರಲ್ಲಿ ಕೆಲವರು ಕೇಳಿರುವ ಪ್ರಶ್ನೆಗಳು ಬರೆಹದಲ್ಲಿ ಬಳಕೆಯಾಗುತ್ತಿರುವ ಪದಪ್ರಯೋಗಗಳಲ್ಲಿ ಸರಿಯಾದ ರೂಪಗಳಿಗೆ ಸಂಬಂಧಿಸಿವೆ. ಮಧ್ಯಂತರ, ಮಧ್ಯಾಂತರ; ಕ್ರೋಢೀಕರಣ, ಕ್ರೋಡೀಕರಣ; ಶಾಖಾಹಾರ, ಶಾಕಾಹಾರ; ಸೃಜನಾತ್ಮಕ, ಸರ್ಜನಾತ್ಮಕ; ಷಷ್ಠ್ಯಬ್ದಿ, ಷಷ್ಠ್ಯಬ್ದ ಇವುಗಳಲ್ಲಿ 'ಸರಿಯಾದ' ರೂಪ ಯಾವುವು ಎಂದು ದಾವಣಗೆರೆಯ ಶ್ರೀಮಹೇಶ್ ಕೇಳಿದ್ದಾರೆ. ಇವುಗಳಲ್ಲಿ ಸರಿಯಾದ ರೂಪ ಯಾವುವೆಂಬುದೂ ಅವರಿಗೆ ಗೊತ್ತಿದೆ. ಆದರೆ ಎಲ್ಲ ಕಡೆಯೂ ಈ ಸರಿರೂಪಗಳನ್ನೇ ಬಳಸುತ್ತಿಲ್ಲ ಎನ್ನುವುದು ಅವರ ಆತಂಕ. ಈಚೆಗೆ ಹಲವು ಸ್ಪರ್ಧಾ ಪರೀಕ್ಷೆಗಳಲ್ಲಿ ಸರಿಯಾದ ರೂಪಗಳನ್ನು ಕುರಿತ ಪ್ರಶ್ನೆಗಳು ಇರುತ್ತವೆ. ಹಾಗಾಗಿ ಗೊಂದಲ ನಿವಾರಣೆಯ ಅಗತ್ಯ ಅವರಿಗೆ ಕಂಡುಬಂದಿದೆ. ಈ ಬಗೆಯ ಗೊಂದಲಗಳು ಹೆಚ್ಚಾಗಿ ಸಂಸ್ಕೃತ ಇಲ್ಲವೇ ಬೇರೆ ಭಾಷೆಗಳಿಂದ ಪಡೆದುಕೊಂಡ ಪದರೂಪಗಳಲ್ಲೇ ಕಂಡುಬರುತ್ತವೆ. ಇಂತಹ ಪದಗಳನ್ನು ಅದರಲ್ಲೂ ಸಂಸ್ಕೃತದಿಂದ ಪಡೆದುಕೊಂಡ ಪದಗಳನ್ನು ಸಂಸ್ಕೃತದಲ್ಲಿ ಹೇಗೆ ಬರೆಯಲಾಗುತ್ತದೋ ಹಾಗೇ ಬರೆಯಬೇಕೆಂಬ ಒತ್ತಾಯವನ್ನು ಹೇರಲಾಗುತ್ತದೆ. ಆ ಭಾಷೆಯ ಪದರಚನೆಯ ನಿಯಮಗಳಿಗೆ ಅನುಗುಣವಾಗಿ ಸರಿಯಾದ ರೂಪಗಳು ಯಾವುವು ಎಂದು ಹೇಳುವುದು ಒಂದು ನೆಲೆ. ಆದರೆ ಕನ್ನಡಿಗರು ಆ ಪದರೂಪಗಳನ್ನು ಮಾತಿನಲ್ಲಿ ಮತ್ತು ಬರಹದಲ್ಲಿ ಹೇಗೆ ಅಳವಡಿಸಿಕೊಂಡಿದ್ದಾರೆ ಎಂದು ಗುರುತಿಸುವುದು ಇನ್ನೊಂದು ನೆಲೆ. 'ಸರಿಯಲ್ಲದ' ರೂಪಗಳನ್ನು ಬರೆಯುತ್ತಿರುವವರು ಆ ಪದರೂಪದ ಕಾಗುಣಿತ ಗೊತ್ತಿಲ್ಲದೆ ಹಾಗೆ ಮಾಡುತ್ತಿಲ್ಲ. ಕನ್ನಡ ಬರವಣಿಗೆಯಲ್ಲಿ ಬಳಕೆಯಲ್ಲಿರುವ

ರೂಪವನ್ನೇ ಅವರು ಬಳಸುತ್ತಿರುತ್ತಾರೆ. ಹೀಗಾದಾಗ ಯಾವುದು 'ಸರಿಯಾದ' ರೂಪ ಎನ್ನುವುದು ಉತ್ತರವಿಲ್ಲದ ಪ್ರಶ್ನೆಯಾಗುತ್ತದೆ. ಇನ್ನೊಂದು ಭಾಷೆಯಿಂದ ಪಡೆದುಕೊಂಡ ಪದಗಳನ್ನು ನಾವು ಹೇಗೆ ನುಡಿಯುತ್ತೇವೆಯೋ ಹಾಗೆ ಬರೆಯುವುದು ಸರಿ ಎನ್ನುವ ಹಾದಿಯನ್ನು ಒಪ್ಪಿಕೊಂಡು ಅದನ್ನು ಕಲಿಕೆಯಲ್ಲಿ ನೆಲಗೊಳಿಸುವುದು ಸರಿಯಾದೀತು. ಅಲ್ಲಿಯವರೆಗೆ ಈ ಗೊಂದಲಗಳಿಗೆ ಪರಿಹಾರವಿಲ್ಲ. ಕೊನೆಯ ಪಕ್ಷ ಸ್ಪರ್ಧಾ ಪರೀಕ್ಷೆಗಳಲ್ಲಿ ಈ ಕುರಿತ ಪ್ರಶ್ನೆಗಳನ್ನು ಕೇಳುವುದನ್ನು ನಿಲ್ಲಿಸುವುದು ಸರಿ.

**ಬದುಕು / ಜೀವನ**

ಮೈಸೂರಿನ ಶ್ರೀ ಪಂಚಾಕ್ಷರಯ್ಯ ಅವರು 'ಬದುಕು' ಮತ್ತು 'ಜೀವನ' ಒಂದೇ ಅರ್ಥವುಳ್ಳ ಪದಗಳೇ ಎಂದು ಕೇಳುತ್ತಾರೆ. ಇವೆರಡೂ ಸಮಾನ ಅರ್ಥವುಳ್ಳ ಪದಗಳಲ್ಲ ಎಂದು ಅವರ ತಿಳುವಳಿಕೆ. ಅದು ಸರಿ. ಮೊದಲ ಪದ ಕನ್ನಡದ್ದು (ಬರ್ದುಂಕು> ಬದುಕು) ಇದು ನಾಮಪದ ಮತ್ತು ಕ್ರಿಯಾಪದವಾಗಿ ಬಳಕೆಯಾಗಬಲ್ಲುದು. ಈ ಪದಕ್ಕೆ ಕನ್ನಡದ ಕೆಲವು ಒಳನುಡಿಗಳಲ್ಲಿ 'ಕೆಲಸ' ಎಂಬ ಅರ್ಥವೂ ಇದೆ. ಎರಡನೆಯ ಪದ ಸಂಸ್ಕೃತದ್ದು. ಇದು ಕನ್ನಡದಲ್ಲಿ ಕ್ರಿಯಾಪದವಾಗಿ ಬಳಕೆಯಾಗಲಾರದು. ಅದಕ್ಕಾಗಿ ಜೀವಿಸು ಎಂಬ ರೂಪವನ್ನು ಬಳಸಬೇಕು. ಹೀಗೆ ಹೆಚ್ಚು ಕಡಿಮೆ ಒಂದೇ ಅರ್ಥವುಳ್ಳ ಕನ್ನಡ ಮತ್ತು ಸಂಸ್ಕೃತ ಪದಗಳು ಬಳಕೆಯಲ್ಲಿದ್ದಾಗ ಅವುಗಳಲ್ಲಿ ಕನ್ನಡ ಪದಕ್ಕೆ ಸಂಕುಚಿತ ಅರ್ಥವನ್ನು ಸಂಸ್ಕೃತ ಪದಕ್ಕೆ ಹೆಚ್ಚಿನ ಗೌರವವುಳ್ಳ ಅರ್ಥವನ್ನು ಕೊಡುವುದು ವಾಡಿಕೆಯಲ್ಲಿದೆ. ಕುಣಿತ–ನರ್ತನ; ನೋಟ–ದೃಶ್ಯ; ಕೊಡುಗೆ–ದಾನ ಮುಂತಾದ ಪದಗಳನ್ನು ಗಮನಿಸಿರಿ. ಸುಮ್ಮನೆ ಉಸಿರಾಡುತ್ತಿರುವುದಕ್ಕೆ 'ಬದುಕು'(ಎಕ್ಸಿಸ್ಟ್) ಎಂತಲೂ ಉದ್ದೇಶವುಳ್ಳ ನೆಲೆಯಲ್ಲಿ ಬದುಕುವುದಕ್ಕೆ 'ಜೀವನ'(ಲಿವ್) ಎಂತಲೂ ತಿಳಿಯುವುದು ವಾಡಿಕೆಯಲ್ಲಿದೆ. ಇದು ಅಷ್ಟು ಸರಿಯಾದುದಲ್ಲ. ಬಳಕೆಯಲ್ಲೂ ಇವೆರಡರಲ್ಲಿ ಯಾವಾಗಲೂ ಒಂದರ ಬದಲು ಇನ್ನೊಂದನ್ನು ಬಳಸುವುದು ಆಗದ ಮಾತು. ಕೂಡು (ಸಮಾಸ)ಪದಗಳಲ್ಲಂತೂ ಈ ಮಾತು ದಿಟ. –ಇಸು ಪ್ರತ್ಯಯ ಸೇರಿಸಿದ ರೂಪಗಳನ್ನು ನೋಡಿ. ಬದುಕಿಸು, ಜೀವನಿಸು(?). ಇವೆರಡರಲ್ಲಿ ಒಂದನ್ನು ಮಾತ್ರ ಬಳಸಲು ಸಾಧ್ಯ.

**ತಪ್ಪಿದಲ್ಲಿ / ತಪ್ಪಿದ್ದಲ್ಲಿ**

ಇನ್ನೊಂದು ಪ್ರಶ್ನೆ. ಕೋಲಾರದ ಚಿಂತಾಮಣಿ ಗಣಪತಿ ಭಟ್ಟ ಅವರಿಂದ ಬಂದಿದೆ. "ಕಾಮಗಾರಿ ಪೂರ್ಣಗೊಂಡರೂ ಸಮಾಪನಾ ವರದಿ ಬಂದಿರದ ಕಾರಣ 15 ದಿನಗಳೊಳಗೆ ಈ ಸಮಾಪನಾ ವರದಿಯನ್ನು ಸಲ್ಲಿಸುವುದು. ತಪ್ಪಿದಲ್ಲಿ/ತಪ್ಪಿದ್ದಲ್ಲಿ ಸೂಕ್ತಕ್ರಮ ಕೈಗೊಳ್ಳಲು ಶಿಫಾರಸು ಮಾಡಲಾಗುವುದು" ಈ ವಾಕ್ಯದಲ್ಲಿ ತಪ್ಪಿದಲ್ಲಿ ಮತ್ತು ತಪ್ಪಿದ್ದಲ್ಲಿ ಇವುಗಳಲ್ಲಿ ಯಾವುದು ಸರಿ ಎಂಬುದು ಅವರ ಪ್ರಶ್ನೆ. ಎರಡೂ ಸರಿ. ಆದರೆ ಆಗ ವಾಕ್ಯದ ಅರ್ಥದಲ್ಲಿ ಬದಲಾಗುತ್ತದೆ. 'ತಪ್ಪಿದಲ್ಲಿ' ಎಂದಾಗ 'ವರದಿಯನ್ನು ಸಲ್ಲಿಸುವ' ಕೆಲಸವನ್ನು ಮಾಡದಿದ್ದರೆ' ಎಂಬ ಅರ್ಥ ಮುಖ್ಯವಾಗುತ್ತದೆ. 'ತಪ್ಪಿದ್ದಲ್ಲಿ' ಎಂದಾಗ ಕಾಮಗಾರಿಯಲ್ಲಿ 'ಕೊರತೆ ಇದ್ದರೆ' ಎಂಬ ಅರ್ಥ ಬರುವುದು ಸಾಧ್ಯ. ಈ ವಾಕ್ಯ ಬಳಕೆಯಾದ ಸಂದರ್ಭವನ್ನು ನೋಡಿದರೆ 'ತಪ್ಪಿದಲ್ಲಿ' ಎಂಬ ಪದದ ಬಳಕೆ ಹೆಚ್ಚು ಸರಿ.

**ಕಾಗದ/ಕಾದಗ**

ಕಾಗದ (ಕಾಗ್ದ) ಎಂಬ ಪದವನ್ನು ಕೆಲವರು ಕಾದಗ (ಕಾದ್ಗ) ಎಂದೇಕೆ ಉಚ್ಚರಿಸುತ್ತಾರೆ ಎನ್ನುವುದು ಶಂಕರ ಈ.ಹೆಬ್ಬಾಳ(ಮುದ್ದೇಬಿಹಾಳ) ಇವರ ಪ್ರಶ್ನೆ. ನಾವು ಕೆಲವು ಪದಗಳನ್ನು ನುಡಿಯುವಾಗ ಹೀಗೆ ಆ ಪದದಲ್ಲಿರುವ ಧ್ವನಿಗಳು ತಮ್ಮ ಜಾಗವನ್ನು ಅದಲುಬದಲು ಮಾಡಿಕೊಳ್ಳುತ್ತವೆ. ಉತ್ಸವ ಎಂಬುದನ್ನು ಉಸ್ತವ ಎನ್ನುವುದು, ಉತ್ಸಾಹ ಎನ್ನುವುದನ್ನು ಉಸ್ತಾಹ ಎನ್ನುವುದು ಇಂತಹ ಕೆಲವು ಉದಾಹರಣೆಗಳು. ಎಲ್ಲೋ ಒಂದಿಬ್ಬರು ಹೀಗೆ ಮಾಡುತ್ತಾರೆಂದಲ್ಲ. ಹಲವರು ಹೀಗೆ ನುಡಿಯುವುದನ್ನು ಕೇಳುತ್ತೇವೆ. ಹೀಗೆ ನುಡಿಯುವವರನ್ನು ಕುರಿತು ಕೆಲವು ತೀರ್ಮಾನಗಳನ್ನೂ ಮಾಡಿಕೊಳ್ಳುತ್ತೇವೆ. ಇಂತಹವರು ಕಲಿತವರಾಗಿರುವುದಿಲ್ಲ ಎಂಬುದು ಒಂದು ತೀರ್ಮಾನ. ಕಲಿತವರೂ ಹೀಗೆ ನುಡಿಯುತ್ತಿದ್ದರೆ ಆಗ ಅವರ ಸಾಮಾಜಿಕ ಹಿನ್ನೆಲೆಯ ಬಗೆಗೆ ಯೋಚಿಸುತ್ತೇವೆ. ಆದರೆ ನುಡಿಯಲ್ಲಿ ಈ ಬಗೆಯ ಬದಲುಗಳಾಗಲು ಭಾಷೆಯ ರಚನೆಯಲ್ಲೇ ಕಾರಣಗಳಿರುತ್ತವೆ ಎನ್ನುವುದು ನಮಗೆ ಗೊತ್ತಿರುವುದಿಲ್ಲ. ಕಾಗದ ಎಂಬ ಪದವನ್ನೇ ನೋಡಿ. ಇದು ಕನ್ನಡದ ಮೂಲಪದವಲ್ಲ. ಪರ್ಶಿಯನ್-ಅರಾಬಿಕ್ ಮೂಲದ ಪದ. ಈಗ ಹಿಂದಿ-ಉರ್ದುಗಳಲ್ಲಿ ಕಾಗಜ್ ಎಂದು ಬಳಕೆಯಲ್ಲಿದೆ. (ಕನ್ನಡದಲ್ಲಿಯೂ ಕೆಲವರು ಕಾಗಜ, ಕಾಜಗ ಎಂದು ನುಡಿಯುವುದನ್ನು ಗಮನಿಸಬಹುದು) ಈ ಪದ ಕನ್ನಡದಲ್ಲಿ ಬಳಕೆಯಾಗತೊಡಗಿದಾಗ ಅದನ್ನು ಕಾಗದ ಎಂದು ಮಾಡಿಕೊಂಡೆವು. ಪದದ ಕೊನೆಯಲ್ಲಿದ್ದ ಜ್(ಇದು ನಾವು ಕನ್ನಡದಲ್ಲಿ ಹೇಳುವ ಜ್ ರೀತಿಗಿಂತ ಬೇರೆಯಾಗಿರುತ್ತದೆ.) ಕನ್ನಡದಲ್ಲಿ ದ ಎಂದು ಬದಲಾಯಿತು. ಇದೂ ಒಂದು ತದ್ಭವ. ಕನ್ನಡದಲ್ಲಿ ಇದನ್ನು ಕಾಗ್ದ ಎಂದು ನುಡಿಯ ತೊಡಗಿದಾಗ ಪದದ ನಡುವೆ ದ್ ಮತ್ತು ಗ್ ಎಂಬ ವ್ಯಂಜನಗಳು ಒಂದಾದ ಮೇಲೊಂದರಂತೆ ಬರುತ್ತವೆ. ಎರಡು ವ್ಯಂಜನಗಳು ಹೀಗೆ ಒಟ್ಟಾಗಿ ಬಂದಾಗ ಅವುಗಳಲ್ಲಿ ಯಾವುದು ಮೊದಲು ಬರಬೇಕು ಯಾವುದು ಬಳಿಕ ಬರಬೇಕು ಎಂಬ ಬಗೆಗೆ ಪ್ರತಿ ಭಾಷೆಗೂ ಅದರದ್ದೆ ಆದ ಆಯ್ಕೆ ಮತ್ತು ನಿಯಮಗಳು ಇರುತ್ತವೆ. ಇದನ್ನು ಆ ಭಾಷೆಯ ಧ್ವನಿತಂತ್ರವೆನ್ನುತ್ತಾರೆ. ಕನ್ನಡದ ಜಾಯಮಾನಕ್ಕೆ ಗ್ದ ಕ್ಕಿಂತ ದ್ಗ ಹೆಚ್ಚು ಸರಿಯಾಗಿ ಹೊಂದುವಂತೆ ತೋರುತ್ತದೆ. ಇದರಿಂದಾಗಿಯೇ ನಾವು ನೋಡಿದ ಉದಾಹರಣೆಯಲ್ಲಿ ಕಾಗ್ದ ಎನ್ನುವ ಬದಲು ಕಾದ್ಗ ಎಂದು ನುಡಿಯುತ್ತಿರುವಂತೆ ತೋರುತ್ತದೆ. ಇದೇ ಮಾತು ಉತ್ಸವ ಮತ್ತು ಉಸ್ತವಕ್ಕೂ ಸಲ್ಲುತ್ತದೆ. ಹೀಗಂದಾಗ ಕನ್ನಡಿಗರು ಗ್ದ ಎಂದಾಗಲೀ ತ್ಸ ಎಂದಾಗಲೀ ನುಡಿಯಲಾರರು ಎಂದಲ್ಲ. ಅದಕ್ಕಾಗಿ ಹೆಚ್ಚಿನ ಕಲಿಕೆ ಮತ್ತು ಯತ್ನಗಳು ಬೇಕಾಗುತ್ತವೆ.

**ಮಾವ, ಬಾವ, ಮಾಮ್ಸ್**

ಬಿ.ಕಾರ್ತಿಕ್ ಅವರು ತಂದೆಯ ಸೋದರಿಯ ಗಂಡನನ್ನು ಏನೆಂದು ಕರೆಯಬೇಕು ಎಂಬು ಕೇಳಿದ್ದಾರೆ. ಮಾವ, ಬಾವ, ಮಾಮ್ಸ್ ಇವುಗಳಲ್ಲಿ ಯಾವುದು ಸರಿ ಎಂಬುದು ಅವರ ಗೊಂದಲ. ಸಂಬಂಧ ಹೇಳುವ ಪದಗಳನ್ನು ಕನ್ನಡ ಮಾತಾಡುವ ಎಲ್ಲ ಪ್ರದೇಶಗಳಲ್ಲೂ ಒಂದೇ ಬಗೆಯಲ್ಲಿ ಬಳಸುವುದಿಲ್ಲ. ಕೆಲವೊಮ್ಮೆ ಇದು ಜಾತಿಗಳನ್ನು ಅವಲಂಬಿಸಿಯೂ ಬದಲಾಗುವುದುಂಟು.

ತುಂಗಭದ್ರೆಯ ಉತ್ತರ–ಪೂರ್ವ ಪ್ರದೇಶಗಳಲ್ಲಿ (ಬಳ್ಳಾರಿ ದಾಟಿದ ಮೇಲೆ) ಬಾವ ಎಂಬ ರೂಪವೇ ಕೇಳಸಿಗುವುದಿಲ್ಲ. ಅಲ್ಲಿ ಅಕ್ಕನ ಗಂಡ, ಹೆಂಡತಿಯ ತಂದೆ ಇಬ್ಬರೂ ಮಾವಂದಿರೇ. ಹಾಗೆಯೆ ಹೆಂಡತಿಯ ತಮ್ಮ(ಬೇರೆಡೆ ಬಾವ ಮೈದುನ ಎನಿಸಿಕೊಳ್ಳುವಾತ) ಮಗಳ ಗಂಡ ಇಬ್ಬರೂ ಅಳಿಯಂದಿರೇ. ಮತ್ತೆ ಕೆಲವು ಕಡೆ ತಾತ ತಂದೆಯ ತಂದೆಯಾದರೆ ತಾಯಿಯ ತಂದೆ ಅಜ್ಜ. ಸಂಬಂಧ ಹಿಡಿದು ಕರೆಯುವ ಪದಗಳಲ್ಲಿ ಕೂಡ ಇದೇ ಬಗೆಯ ಬದಲಾವಣೆಗಳಿವೆ. ಮಾಮ್ಸ್ ಎಂಬುದು ಇಂತಹ ಒಂದು ಪದ. ತಾಯಿಯನ್ನು ಅವ್ವ ಎಂದು ಕರೆಯುವುದು ಹೆಚ್ಚಾಗಿದ್ದರೆ ಕೆಲವು ಜಾತಿಗಳಲ್ಲಿ ಈ ಪದವೇ ಇಲ್ಲ. ಕೆಲವರಿಗೆ ಅವ್ವ ಎಂದರೆ ತಾಯಿಯ(ಇಲ್ಲವೇ ತಂದೆಯ) ತಾಯಿ. ತಂದೆಯನ್ನು ಅಣ್ಣ ಎಂದು ಕೆಲವು ಕುಟುಂಬಗಳಲ್ಲಿ ಕರೆಯುವುದುಂಟು.

ಸಂಬಂಧ ಹೇಳುವ ಪದಗಳನ್ನು ಮೊದಲು ಕುಟುಂಬದ ಒಳಗೆ ಬಳಸಲಾಗುತ್ತಿತ್ತು. ಈಗ ಮನೆಯ ಹೊರಗೂ ಇಂತಹ ಪದಗಳನ್ನು ಹೆಚ್ಚಾಗಿ ಬಳಸಬೇಕಾಗಿ ಬಂದಿದೆ. ಇದರಿಂದಾಗಿ ಕನ್ನಡದ ಪದಗಳ ಬದಲಾಗಿ ಇಂಗ್ಲಿಶಿನ ಪದಗಳನ್ನು ಬಳಸುವುದು ಹೆಚ್ಚಾಗುತ್ತಿದೆ. ಅಂಕಲ್, ಆಂಟಿ, ಕಸಿನ್ ಮುಂತಾದವು ಇಂತಹ ಪದಗಳು. ಇವುಗಳು ಸೂಚಿಸುವ ಸಂಬಂಧಗಳನ್ನು ಕನ್ನಡ ಬಳಕೆ ಮಾಡುವವರೇ ನಿರ್ಣಯಿಸಿಕೊಂಡಿದ್ದಾರೆ. ರಕ್ತ ಸಂಬಂಧವುಳ್ಳ ಯಾವುದೇ ಸಮವಯಸ್ಸಿನ ಬಂಧು ಕೂಡ ಹೀಗಾಗಿ ಕಸಿನ್ ಆಗಿಬಿಡುವುದುಂಟು.

**ಅತಿಥಿ ಮತ್ತು ಅಥಿತಿ**

ಬೆಂಗಳೂರಿನ ಆರ್. ಶ್ರೀಧರ್, ಬರೆಯುವಾಗ **ಅತಿಥಿ** ಮತ್ತು **ಅಥಿತಿ**ಗಳಲ್ಲಿ ಯಾವುದನ್ನು ಬರೆದರೆ ಸರಿ ಎಂದು ಕೇಳುತ್ತಾರೆ. ಅತಿಥಿ ಎಂಬುದೇ ಸರಿ. ಆದರೆ ಕನ್ನಡ ಬರೆಯಲು ಕಲಿಯುತ್ತಿರುವವರೆಲ್ಲ ಒಂದಲ್ಲ ಒಂದು ಬಾರಿ ಈ ಗೊಂದಲಕ್ಕೆ ಒಳಗಾಗುತ್ತಾರೆ. ಇದಕ್ಕೆ ಎರಡು ಕಾರಣಗಳಿವೆ. ಒಂದು: ಮಹಾಪ್ರಾಣಗಳಿರುವ ಈ ಬಗೆಯ ಪದಗಳು ಬೇರೆ ಭಾಷೆಯಿಂದ, ಅದರಲ್ಲೂ ಸಂಸ್ಕೃತದಿಂದ ಕನ್ನಡಕ್ಕೆ ಬಂದು ಸೇರಿಕೊಂಡಿರುತ್ತವೆ. ಹಾಗಾಗಿ ಇವು ಕನ್ನಡದ ಧ್ವನಿರಚನೆಯನ್ನು ಪಾಲಿಸುತ್ತಿರುವುದಿಲ್ಲ. ಎರಡು: ಈ ಬಗೆಯ ಪದಗಳ ಬರಹದ ರೂಪವನ್ನು ನಾವು ಅಲ್ಲಲ್ಲಿ ಕಂಡಿರಬಹುದೇ ಹೊರತು ಅವುಗಳ ನುಡಿರೂಪ ನಮ್ಮ ನೆನಪಿನಲ್ಲಿ ಬೇರೂರಿರುವುದಿಲ್ಲ. ಹಾಗಾಗಿ ಈ ಪದಗಳನ್ನು ಬರೆಯಬೇಕಾಗಿ ಬಂದಾಗಲೆಲ್ಲಾ ಸರಿಯಾದ ರೂಪ ಯಾವುದು ಎಂಬ ಗೋಜಲು ಉಂಟಾಗುತ್ತದೆ. ಪ್ರಭೇದ, ಸಂಬಂಧ, ಪ್ರಬಂಧ ಮುಂತಾದ ಪದಗಳನ್ನು ಬರೆಯುವಾಗಲೂ ಈ ಗೋಜಲು ಕಾಣುವುದು. ಹೆಚ್ಚು ಕನ್ನಡಿಗರು ಸಹಜ ವೇಗದಲ್ಲಿ ಮಾತಾಡುವಾಗ ಮಹಾಪ್ರಾಣಗಳನ್ನು ಅಲ್ಪಪ್ರಾಣಗಳನ್ನಾಗಿಯೇ ನುಡಿಯುತ್ತಾರೆ (ಮರಾಠಿ ಭಾಷೆಯನ್ನು ಮಾತಾಡುವ ಪ್ರದೇಶಕ್ಕೆ ಹತ್ತಿರವಿರುವ ಕನ್ನಡ ನಾಡಿನಲ್ಲಿ ಜನರು ಕೆಲವು ಮಹಾಪ್ರಾಣಗಳನ್ನು ಸಹಜವಾಗಿಯೇ ನುಡಿಯುತ್ತಾರೆ) ಎಚ್ಚರದಿಂದ ನುಡಿಯುವಾಗ ಮಾತ್ರ ಮಹಾಪ್ರಾಣಗಳನ್ನು ಅವು ಇರಬೇಕಾದಂತೆ ನುಡಿಯುತ್ತಾರೆ. ಅಂದರೆ ಬರಹ ರೂಪಗಳಲ್ಲಿ ನಾವು ಮಹಾಪ್ರಾಣಗಳನ್ನು ಎಚ್ಚರದಿಂದ ಬಳಸಬೇಕಾದ

ಒತ್ತಡಕ್ಕೆ ಒಳಗಾಗುತ್ತೇವೆ. ಅಲ್ಲದೆ ಮಾತಾಡುವಾಗ ಮಹಾಪ್ರಾಣಗಳಿಲ್ಲದಿರುವಾಗಲೂ ಅಲ್ಪಪ್ರಾಣಗಳನ್ನು ಮಹಾಪ್ರಾಣಗಳನ್ನಾಗಿ ನುಡಿಯುತ್ತಿರುವುದುಂಟು. **ಅಧಿಕಾರ** ಎಂಬುದನ್ನು **ಅಧಿಖಾರ** ಎಂದು ಹಲವರು ನುಡಿಯುವುದನ್ನು ನಾವು ಕೇಳಿದ್ದೇವೆ. ಮಾತು ಮತ್ತು ಬರಹಗಳ ನಡುವೆ ಉಂಟಾಗುತ್ತಿರುವ ಈ ಕೊರಕಲನ್ನು ಗಮನಿಸಿಯೇ ಡಾ.ಶಂಕರ ಭಟ್ ಅವರು ಕನ್ನಡ ಬರಹದಲ್ಲಿ ಮಹಾಪ್ರಾಣಗಳ ಬದಲು ಅಲ್ಪಪ್ರಾಣಗಳನ್ನೇ ಬರೆಯಬೇಕೆಂಬ ಸಲಹೆಯನ್ನು ಮುಂದಿಟ್ಟದ್ದಾರೆ. ತಮ್ಮ ಹೊಸ ಹೊತ್ತಗೆಯನ್ನು (ಕನ್ನಡ ನುಡಿ ನಡೆದು ಬಂದ ದಾರಿ) ಹೀಗೆಯೇ ಅಚ್ಚು ಮಾಡಿದ್ದಾರೆ. ಮೊದಮೊದಲು ಓದಲು ಮುಜುಗರವೆನಿಸಿದರೂ ಓದಿಗೆ ಹೊಂದಿಕೊಂಡಾಗ ತೊಂದರೆಯಾಗುವುದಿಲ್ಲ. ಅರ್ಥವಾಗುವುದಕ್ಕೆ ನಾವು ತಿಳಿದುಕೊಂಡಂತೆ ಯಾವ ಅಡ್ಡಿಯೂ ಆಗುವುದಿಲ್ಲ. ನಾವೆಲ್ಲ ಈ ಬಗೆಗೆ ಯೋಚಿಸಬೇಕಾಗಿದೆ.

**ಎನಿಸಿತು, ಅನಿಸಿತು**

ಬೆಂಗಳೂರಿನ ಬಿ. ಕುಮಾರ್ ಅವರು ಕೇಳಿರುವ ಪ್ರಶ್ನೆಯ ತಿರುಳು ಹೀಗಿದೆ. ವಾಕ್ಯಗಳನ್ನು ರಚಿಸುವಾಗ ನಾವು ಕೆಲವೊಮ್ಮೆ **ಎನಿಸಿತು** ಎಂಬ ಪದವನ್ನು ಬಳಸಿದರೆ ಮತ್ತೆ ಕೆಲವೊಮ್ಮೆ **ಅನಿಸಿತು** ಎಂಬ ರೂಪವನ್ನು ಬಳಸುವುತ್ತೇವೆ. ಹಾಗೆಯೇ ಕೆಲವು ಕಡೆ **ಎಂದರೆ** ರೂಪವನ್ನು ಬಳಸಿದರೆ ಮತ್ತೆ ಕೆಲವು ಕಡೆಗಳಲ್ಲಿ **ಅಂದರೆ** ರೂಪವನ್ನು ಬಳಸುವುದುಂಟು. ಇದೇಕೆ ಮತ್ತು ಇವುಗಳಲ್ಲಿ ಯಾವುದು ಸರಿ ಎನ್ನುವುದು ಅವರ ಸಮಸ್ಯೆ. ಇವೆಲ್ಲವೂ ಸರಿಯಾದ ರೂಪಗಳೇ ಆಗಿವೆ. ಆದರೆ ಇವುಗಳ ಬಳಕೆಯಲ್ಲಿ ಕೊಂಚ ವ್ಯತ್ಯಾಸವಿದೆ. **ಎನಿಸಿತು** ಮತ್ತು **ಎಂದರೆ** ರೂಪಗಳು ಹೆಚ್ಚಾಗಿ ಬರಹಗಳಲ್ಲಿ ಕಾಣಿಸಿಕೊಳ್ಳುತ್ತವೆ.( ಈ ಅಂಕಣವನ್ನೇ ಉದಾಹರಣೆಯಾಗಿ ಗಮನಿಸಿ) **ಅನಿಸಿತು** ಮತ್ತು **ಅಂದರೆ** ರೂಪಗಳು ಆಡುಮಾತಿನಲ್ಲಿ ಮತ್ತು ಆಡುಮಾತಿನ ವರಸೆಯಿರುವ ಬರವಣಿಗೆಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ.

ಹಾಗೆ ನೋಡಿದರೆ **ಎನ್** ಎಂಬ ಹಳೆಗನ್ನಡದ ಕ್ರಿಯಾರೂಪ ಹೊಸಗನ್ನಡದಲ್ಲಿ **ಎನ್ನು** ಎಂಬುದಾಗಿ ಬದಲಾಗಬೇಕು. ಆದರೆ ನಡುಗನ್ನಡದ ನಿಯಮವೊಂದು ನಮ್ಮ ಇಂದಿನ ಕನ್ನಡದಲ್ಲಿ ಹಾಗೆಯೇ ಬಳಕೆಯಲ್ಲಿದೆ. ಅದರಿಂದಾಗಿ **ಎನ್** ಎಂಬುದನ್ನು **ಎನು** ಎಂಬಂತೆಯೂ ಬಳಸುತ್ತೇವೆ. ಹಳಗನ್ನಡದಲ್ಲಿ ಎರಡು ವ್ಯಂಜನವುಳ್ಳ ಧಾತು ಇಲ್ಲವೇ ಪ್ರಕೃತಿಗಳ ಮೊದಲ ಸ್ವರ ಹ್ರಸ್ವವಾಗಿದ್ದರೆ ಅವು ನಡುಗನ್ನಡದಲ್ಲಿ ಬಳಕೆಯಾಗುವಾಗ ಎರಡನೆಯ ವ್ಯಂಜನದ ಕೊನೆಗೆ ಉಕಾರ ಬಂದು ಸೇರುತ್ತದೆ. **ಕೊಲ್** ಎಂಬ ರೂಪವನ್ನು ನೋಡಿ. ಇದು ನಡುಗನ್ನಡದಲ್ಲಿ **ಕೊಲು** ಎಂದು ಬದಲಾಗುತ್ತದೆ. ಆದರೆ ಹೊಸಗನ್ನಡದಲ್ಲಿ ಎರಡನೆಯ ವ್ಯಂಜನ ದ್ವಿತ್ವಗೊಂಡು (ಅದೇ ವ್ಯಂಜನ ಒತ್ತಕ್ಷರವಾದ) ಬಳಿಕ ಅದಕ್ಕೆ ಉಕಾರ ಸೇರಬೇಕೆಂಬುದು ನಿಯಮ. (ಎರಡನೆಯ ವ್ಯಂಜನ ರಕಾರವಾಗಿದ್ದರೆ ಈ ನಿಯಮ ಬಳಕೆಯಾಗುವುದಿಲ್ಲ. ನಡುಗನ್ನಡದ ಮಾದರಿಯೇ ಹೊಸಗನ್ನಡದಲ್ಲೂ ಬಳಕೆಯಾಗುತ್ತದೆ. **ಬರ್-, ಇರ್-** ರೂಪಗಳು ಕ್ರಮವಾಗಿ **ಬರು, ಇರು** ಎಂದಾಗುತ್ತವೆ.) ಹಾಗಾಗಿ **ಕೊಲ್** ರೂಪ **ಕೊಲ್ಲು** ಎಂದು ಬದಲಾಗುತ್ತದೆ. (ನಿಲ್/ನಿಲು/ನಿಲ್ಲು, ಕಣ್/ಕಣು/ಕಣ್ಣು, ಬಿಲ್/ಬಿಲು/ಬಿಲ್ಲು, ಗೆಲ್/ಗೆಲು/ಗೆಲ್ಲು

ರೂಪಗಳನ್ನು ಗಮನಿಸಬಹುದು.) **ಎನ್ನು** ಎಂಬ ರೂಪವನ್ನು **ಎನು** ಎಂಬ ನಡುಗನ್ನಡದ ರೂಪದೊಡನೆ ನಾವೀಗ ಬಳಸುತ್ತಿದ್ದೇವೆ. ಹಾಗಾಗಿ **ಎನ್ನಿಸು** ಮತ್ತು **ಎನಿಸು** ರೂಪಗಳೆರಡೂ ಕಾಣಸಿಗುತ್ತವೆ. ಎನುವರು, ಎನುವೆನು ರೂಪಗಳು ಹೆಚ್ಚಾಗಿ ಕವಿತೆಗಳಲ್ಲಿ ಬಳಕೆಯಾಗುತ್ತವೆಯೇ ಹೊರತು ಬೇರೆ ಬರಹಗಳಲ್ಲಿ ಅಲ್ಲ. ಎನು ರೂಪಕ್ಕೆ –ಉತ್ ಎಂಬ ಕಾಲಸೂಚಕ ಪ್ರತ್ಯಯವನ್ನು ಸೇರಿಸಿ ಬಳಸುವುದನ್ನು ನಾವು ಹೆಚ್ಚಾಗಿ ಕಾಣುವುದಿಲ್ಲ. ಅಲ್ಲೆಲ್ಲಾ ಎನ್ನು ರೂಪವೇ ಬಳಕೆಯಾಗುತ್ತದೆ.

**ಎನ್**- ಎಂಬುದರ ಮೊದಲ ಸ್ವರ ಅಕಾರವಾಗುವ ಮೂಲಕ **ಅನ್**-(>**ಅನ್ನು**) ರೂಪ ಬಳಕೆಗೆ ಬಂದಿದೆ. ಆದರೆ ಕನ್ನಡ ಮಾತಾಡುವ ಕೆಲವು ಪ್ರದೇಶಗಳಲ್ಲಿ ಅನ್ನು ಹೆಚ್ಚಾಗಿ ಬಳಕೆಯಾಗುತ್ತಿದೆ. ಅದರಲ್ಲೂ ಕೆಲವು ರೂಪ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ. ವಾಯುವ್ಯ ಕರ್ನಾಟಕದಲ್ಲಿ **ಎಂಬ** (=ಎನ್ನುವ/ಎಂಬುವ/ ಅನ್ನುವ) ರೂಪ **ಅಂಬೋ** ಆಗಿ ಬಳಕೆಯಲ್ಲಿದೆ. ಅಲ್ಲಿ ಎನ್ನು ಮತ್ತದರ ಸಾಧಿತ ರೂಪಗಳು ಬಳಕೆಯಲ್ಲಿ ಇಲ್ಲವೆನ್ನುವಷ್ಟು ಕಡಿಮೆ.

**ಎಂದು** ರೂಪವನ್ನು ಗಮನಿಸಿ. ಇದು ವಾಕ್ಯದಲ್ಲಿ ಏನನ್ನಾದರೂ ಉಲ್ಲೇಖಿಸುವಾಗ ಬಳಸುತ್ತೇವೆ. ಉದಾ.ಗೆ: 'ದೇಶ ಅಭಿವೃದ್ಧಿ ಪಥದಲ್ಲಿದೆ ಎಂದು ಸಚಿವರು ಹೇಳಿದರು.' ಮಾತಾಡುವಾಗ ಈ ವಾಕ್ಯದಲ್ಲಿ **ಎಂದು** ಬದಲಾಗಿ **ಅಂತ** ಎಂದು ಹೇಳುತ್ತೇವಷ್ಟೆ. ಈ **ಅಂತ** ಪದಕ್ಕೂ **ಅಂತಹ** ಪದದ ಕಿರಿರೂಪವಾಗಿ ಬಳಸುವ **ಅಂತ** ಪದಕ್ಕೂ (ಕಲ್ಲಿನಂತ ಮನಸ್ಸು) ವ್ಯತ್ಯಾಸವಿದೆ. ಅದು ಹಾಗಿರಲಿ. ಮೊದಲು ಹೇಳಿದ ಈ **ಅಂತ** ರೂಪ ತುಮಕೂರು ಉತ್ತರಕ್ಕೆ ಸಿರಾ, ಮಧುಗಿರಿ ಕಡೆಯಲ್ಲಿ **ಅಂಬ್ತ** ಎಂದಾಗಿ ಬಳಕೆಯಲ್ಲಿದೆ. ಈ ಎಲ್ಲ ವಿವರಗಳು ಕುತೂಹಲಕಾರಿಯಾಗಿವೆ. ಕನ್ನಡ ವ್ಯಾಕರಣದ ಒಂದು ಸಮಸ್ಯೆಯನ್ನು ಬಿಡಿಸಲು ಬೇಕಾದ ಮಾಹಿತಿ ಈ ವಿವರಗಳಲ್ಲಿವೆ. ಅಭೂತ ಕಾಲಸೂಚಕ ಪ್ರತ್ಯಯಗಳಾಗಿ ಈಗ **–ಉತ್**(>**ಉತ್ತ**) ಮತ್ತು **ಉವ್**(>**ಉವ**) ಎಲೂಪಗಳು ಈಗ ಬಳಕೆಯಾಗುತ್ತಿವೆ. ಹಳಗನ್ನಡದಲ್ಲಿ ಈ ಕೆಲಸವನ್ನು ಮಾಡುತ್ತಿದ್ದ –ಪ ಪ್ರತ್ಯಯ ಹೀಗೆ ಎರಡು ರೂಪಗಳಾಗಿ ಒಡೆದದ್ದನ್ನು ಎಂಬ ಮತ್ತು ಅಂತ ರೂಪಗಳು ತಮ್ಮೊಳಗೆ ಅಡಗಿಸಿಟ್ಟುಕೊಂಡಂತೆ ತೋರುತ್ತದೆ. ಏನೇ ಅಗಲಿ ನಾವು ಮಾತಾಡುವ ಕನ್ನಡದ ವಿವಿಧ ಬಗೆಗಳನ್ನು ಗಮನಿಸುವ ಮೂಲಕ ಕನ್ನಡ ನುಡಿಯ ಚರಿತ್ರೆಯನ್ನು ಗುರುತಿಸಿಕೊಳ್ಳಲು ಸಾಧ್ಯವೆನ್ನುವುದಕ್ಕೆ ಇದೊಂದು ಉದಾಹರಣೆಯಾಗಿದೆ.

**ಕಬಂಧಬಾಹು**

ಪರಮಣ್ಣ (ಮಡಿವಾಳರ ಕನ್ನಳ್ಳಿ) **ಕಬಂಧಬಾಹು** ಪದದ ಅರ್ಥವನ್ನು ಕೇಳಿದ್ದಾರೆ. ಎಲ್ಲವನ್ನೂ ಆಕ್ರಮಿಸಿಕೊಳ್ಳುವ ವ್ಯಕ್ತಿಯನ್ನು ಕುರಿತು ಹೇಳುವಾಗ ಆ ವ್ಯಕ್ತಿಯದ್ದು ಕಬಂಧಬಾಹು ಎನ್ನುವುದುಂಟು. ಅಲ್ಲದೆ ಹೀಗೆ ಆಕ್ರಮಣಕ್ಕೆ ಒಳಗಾಗುವವರಿಗೆ ತಮ್ಮನ್ನು ಯಾರೋ ಆಕ್ರಮಿಸುತ್ತಿದ್ದಾರೆ ಎನ್ನುವ ಅರಿವು ಕೂಡ ಇಲ್ಲದಿರುವಾಗಲೂ ಈ ಮಾತನ್ನು ಬಳಸುವುದುಂಟು. ರಾಮಾಯಣದಲ್ಲಿ ಬರುವ ರಾಕ್ಷಸನೊಬ್ಬನ ಹೆಸರು ಕಬಂಧ.( ಈ ಪದಕ್ಕೆ ಶಿರ ಇಲ್ಲದ ದೇಹ ಎನ್ನುವ ಅರ್ಥವೂ ಇದ್ದಂತಿದೆ) ಕಾಡಿನಲ್ಲಿದ್ದು

ಬಹು ದೂರದವರೆಗೆ ತನ್ನ ಬಾಹುಗಳನ್ನು ಚಾಚಿ ಕುಳಿತು ಅದರ ವ್ಯಾಪ್ತಿಯಲ್ಲಿ ಬರುವ ಜೀವಿಗಳನ್ನೆಲ್ಲ ಬಾಚಿ ತಿನ್ನುತ್ತಿದ್ದನೆಂಬ ಬಣ್ಣನೆ ಇದೆ. ಕತೆ ಏನೇ ಇರಲಿ. ಆತನ ಬಾಹುಗಳ ಚಟುವಟಿಕೆಯನ್ನು ಸೂಚಿಸುವಂತೆ ಕಬಂಧಬಾಹು ಎಂಬ ರೂಪ ಬಳಕೆಗೆ ಬಂದಿದೆ. ಇಲ್ಲಿರುವ ಕಬಂಧ ಮತ್ತು ಬಾಹು ಪದಗಳನ್ನು ಬಿಡಿಸಿ ಬರೆಯಬೇಕೋ ಇಲ್ಲವೇ ಒಟ್ಟಾಗಿ ಒಂದೇ ಪದವಾಗಿ ಬರೆಯಬೇಕೋ ಎಂಬ ಸಮಸ್ಯೆ ಕೆಲವರನ್ನು ಕಾಡುತ್ತದೆ. ಒಟ್ಟಾಗಿ ಬರೆಯುವುದು ಸರಿ. ಈ ರೂಪವನ್ನು ಬರೆಯುವಾಗ ಕೆಲವರು **ಕದಂಬಬಾಹು** ಎಂದು ಬರೆಯುವುದುಂಟು. ಇದು ಸರಿಯಾದ ರೂಪವಲ್ಲವೆನ್ನುವುದು ಮೇಲಿನ ವಿವರಣೆಯಿಂದ ಗೊತ್ತಾಗುವುದಷ್ಟೆ. ಒಂದು ರೂಪದ ಹಿಂದಿನ ಕತೆ ತಿಳಿಯದಿರುವುದರಿಂದ ಹೀಗೆ ಗೊಂದಲಗೊಳಿಸುವ ಇನ್ನೊಂದು ರೂಪ ಬಳಕೆಗೆ ಬರುವುದುಂಟು.

**ಸಾವಿರದನೆಯ** ಎನ್ನಬೇಕೋ? ಇಲ್ಲವೇ **ಸಾವಿರನೆಯ** ಎನ್ನಬೇಕೋ?

ಪತ್ರಕರ್ತ ಗೆಳೆಯರೊಬ್ಬರು ಸಮಸ್ಯೆಯೊಂದನ್ನು ಮುಂದಿಟ್ಟರು. ಎಣಿಸುವಾಗ ಒಂದನೆಯ, ಹತ್ತನೆಯ, ಐವತ್ತೇಳನೆಯ ಎಂದು ಹೇಳುವಂತೆ ಸಾವಿರಕ್ಕೆ ಸಂಬಂಧಿಸಿದಂತೆ ಏನು ಹೇಳಬೇಕು? **ಸಾವಿರದನೆಯ** ಎನ್ನಬೇಕೋ? ಇಲ್ಲವೇ **ಸಾವಿರನೆಯ** ಎನ್ನಬೇಕೋ? ಪತ್ರಿಕೆಗಳನ್ನು ಓದುಗರು ಗಮನಿಸಿದ್ದರೆ ಇವೆರಡೂ ರೂಪಗಳನ್ನೂ ಜಾಹೀರಾತಿನಲ್ಲಿ ಕನ್ನಡ ಪತ್ರಿಕೆಗಳು ಬಳಸಿದ್ದು ಗೊತ್ತಾಗಿರಬಹುದು. ಈ ಸಮಸ್ಯೆಗೆ ತಟ್ಟನೆ ಉತ್ತರ ಗೊತ್ತಾಗದಿದ್ದರೆ ಅದಕ್ಕೆ ಕಾರಣಗಳಿವೆ. ಒಂದರಿಂದ ಒಂಬೈನೂರ ತೊಭತ್ತೊಂಬತ್ತರವರೆಗೆ ಎಲ್ಲ ಸಂಖ್ಯೆಗಳೂ ಉಕಾರದಿಂದ ಕೊನೆಯಾಗುತ್ತವೆ. ಆದ್ದರಿಂದ ಒಂದು ನಿಯಮವನ್ನು ಅನ್ವಯಿಸುವುದು ಸರಳ. ಸಾವಿರ ಒಂದು ತದ್ಭವ ಪದ. ಸಂಸ್ಕೃತದ ಸಹಸ್ರ ಪದದಿಂದ ಕನ್ನಡ ಸಾಸಿರ, ಸಾಯಿರ, ಸಾವಿರ ಎಂಬ ಪದಗಳನ್ನು ರೂಪಿಸಿಕೊಂಡಿದೆ. ಕನ್ನಡದ ಉಳಿದ ಸಂಖ್ಯೆಗಳು ಉಕಾರದಿಂದ ಕೊನೆಯಾದರೆ ಸಾವಿರ ಎಂಬ ಪದ ಅಕಾರದಿಂದ ಕೊನೆಯಾಗುತ್ತದೆ. ಹಾಗಾಗಿ ಸಾವಿರ ಪದಕ್ಕೆ **–ಅನೆಯ** ಎಂಬ ಪ್ರತ್ಯಯ ಸೇರಿದಾಗ ಯಾವ ರೂಪ ಸಿಗುತ್ತದೆ ಎಂಬ ಗೊಂದಲ ಉಂಟಾಗುತ್ತದೆ. ಸಾವಿರದನೆಯ ಎಂಬುದೇ ಸರಿಯಾದ ರೂಪ. ಸಾವಿರ ಪದಕ್ಕೆ ಸ್ವರದಿಂದ ಮೊದಲಾಗುವ ಯಾವುದೇ ಪ್ರತ್ಯಯವನ್ನು ಸೇರಿಸಿದಾಗ ಏನಾಗುತ್ತದೆಂಬುದನ್ನು ಗಮನಿಸಿ. ಸಾವಿರದಲ್ಲಿ(+ಅಲ್ಲಿ),ಸಾವಿರದಿಂದ (+ಇಂದ) ಸಾವಿರದೊಂದು (+ಒಂದು), ಸಾವಿರದಷ್ಟು (+ಅಷ್ಟು). ಇಲ್ಲೆಲ್ಲ ದ್ ಎಂಬ ವ್ಯಂಜನ ಸೇರ್ಪಡೆಯಾಗುವುದನ್ನು ನೋಡುತ್ತೇವೆ. ಅಂದರೆ ಅಕಾರದಿಂದ ಕೊನೆಯಾಗುವ ಬೇರೆ ನಾಮಪದಗಳಂತೆಯೇ ಸಾವಿರ ಪದ ಕೂಡ ವರ್ತಿಸುತ್ತದೆ.

ಕೆಲವು ವಾರಗಳ ಹಿಂದೆ ಪತ್ರಿಕೆಯೊಂದು ಮೊಟರ್ ಬೈಕ್ ಕಂಪನಿಯ ಒಂದು ಮಿಲಿಯನ್ ಸಂಖ್ಯೆಯ ಬೈಕ್‌ಅನ್ನು ಉತ್ಪಾದಿಸಿದ್ದನ್ನು ವರದಿ ಮಾಡುವಾಗ ಮಿಲಿಯನೆಯ ಎಂಬ ಪದರೂಪವನ್ನು ಬಳಸಿತ್ತು. ಮಿಲಿಯನ್ ಎಂಬುದು ವ್ಯಂಜನಾಂತ ಪದವೇ ಆಗಿರುವುದರಿಂದ ಈ ರೂಪ ಸರಿಯಾಗಿಯೇ ಇದೆ. ಲಕ್ಷ, ಕೋಟಿಗಳಿಗೆ ಅನೆಯ ಸೇರಿಸಿದರೆ ಏನಾಗುವುದೆಂಬುದು ಹೊಸ ಸಮಸ್ಯೆಯಾಗಬಹುದು. ಇಂತದೇ ಸಮಸ್ಯೆ ಇನ್ನೊಂದಿದೆ. ನೂರಾರು, ಸಾವಿರಾರು ಎಂಬ ರೂಪಗಳ ಮಾದರಿಯಲ್ಲಿ ಲಕ್ಷ, ಮಿಲಿಯನ್,

ಕೋಟಿಗಳಿಗೆ ಏನು ಹೇಳುವುದು? ಲಕ್ಷಾಂತರ, ಕೋಟ್ಯಂತರ, ಮಿಲಿಯಾಂತರ ರೂಪಗಳನ್ನು ಬಳಸುವುದು ರೂಢಿಯಲ್ಲಿದೆ. ನೂರು, ಸಾವಿರ ಒಂದು ರೀತಿಯಲ್ಲಿದ್ದರೆ ಉಳಿದವು ಬೇರೆ ರೀತಿಯಲ್ಲಿವೆ. ಇದಕ್ಕೆ ಗೊತ್ತುಮಾಡಬಹುದಾದ ನಿಯಮವೇನೂ ಇದ್ದಂತಿಲ್ಲ. ಏಕೆಂದರೆ ಲಕ್ಷಗಟ್ಟಲೆ, ಸಾವಿರಗಟ್ಟಲೆ, ಕೋಟಿಗಟ್ಟಲೆ, ಮಿಲಿಯಗಟ್ಟಲೆ ಎಂಬ ರೂಪಗಳು ಬಳಕೆಯಲ್ಲಿವೆ. ನೂರುಗಟ್ಟಲೆ ರೂಪ ಅಲ್ಲಲ್ಲಿ ಬಳಕೆಯಾಗಿರಲೂಬಹುದು. ಇಲ್ಲೆಲ್ಲ ಎಲ್ಲ ಪದಗಳೂ ಒಂದೇ ಬಗೆಯಲ್ಲಿ ಇರುವಂತಿದೆ. ಸಂಖ್ಯೆಗಳಲ್ಲದೆ ಪರಿಮಾಣಗಳನ್ನು ಹೇಳುವ ರೂಪಗಳಲ್ಲೂ ಇದೇ ಬಗೆಯನ್ನು ನೋಡುತ್ತೇವೆ. ತೂಕ, ಉದ್ದ, ಅಗಲ, ಗಾತ್ರಗಳನ್ನು ಹೇಳುವ ಹಿಡಿ, ಮುಷ್ಟಿ, ಟನ್, ಕಿಲೋ, ಮೈಲಿ, ಮೀಟರ್ ಮುಂತಾದ ರೂಪಗಳನ್ನು ಉದಾಹರಣೆಯಾಗಿ ನೋಡಬಹುದು.

ಅಕಾರದಿಂದ ಮತ್ತು ವ್ಯಂಜನದಿಂದ ಕೊನೆಯಾಗುವ ನಾಮಪದಗಳಿಗೆ ಪ್ರತ್ಯಯಗಳನ್ನು ಸೇರಿಸುವಾಗ ಹಲವು ಗೊಂದಲಗಳು ಉಂಟಾಗುವುದನ್ನು ಗಮನಿಸಬಹುದು. ಇಂತಹ ರೂಪಗಳಲ್ಲಿ ಮೂಲಕನ್ನಡಕ್ಕೆ ಸೇರಿದ ಪದಗಳು ಕಡಿಮೆ. ಉಳಿದವು ಬೇರೆ ಭಾಷೆಯಿಂದ ಪಡೆದುಕೊಂಡಂತ ಪದಗಳು. ಅವುಗಳ ಸಂಖ್ಯೆ ಹೆಚ್ಚು. ಕನ್ನಡದ ಪದಗಳಲ್ಲೂ ಈಗ ಅಕಾರಾಂತವಾಗಿ ಕೆಲವು ಕಡೆ ಮಾತಿನಲ್ಲಿ ಬಳಕೆಯಾಗುವ ಪದಗಳು ಮೊದಲು ಉಕಾರಾಂತವಾಗಿದ್ದವು. ಗಿಡ, ಹಸು, ಮಗು, ಬೆಟ್ಟ, ಕರು ಮುಂತಾದವು ಈ ಬಗೆಯ ಪದಗಳು. ಉಳಿದ ಕೆಲವು ಈ ಬಗೆಯ ಪದಗಳು ವ್ಯಕ್ತಿಗಳ ಇಲ್ಲವೇ ಊರುಗಳ ಹೆಸರುಗಳಾಗಿರುತ್ತವೆ. ಹಾಸನ, ದುದ್ದ, ಕರಿಯ, ಲಕ್ಕ, ಬೆಳ್ಳ ಮುಂತಾದವು ಉದಾಹರಣೆಗಳು. ಇವುಗಳಿಗೆ ವಿಭಕ್ತಿ ಪ್ರತ್ಯಯವನ್ನು ಸೇರಿಸುವಾಗ ಲಿಂಗಸೂಚಕ ಪ್ರತ್ಯಯವೊಂದನ್ನು ಮೊದಲು ನಾಮಪದಕ್ಕೆ ಸೇರಿಸುವುದುಂಟು. ಪುಲ್ಲಿಂಗವಾದರೆ ನ್, ಸ್ತ್ರೀಲಿಂಗವಾದರೆ ಳ್ ಮತ್ತು ತಟಸ್ಥ ಲಿಂಗವಾದರೆ ದ್ ಎಂಬುವು ನಾಮಪದಗಳಿಗೆ ಮೊದಲು ಸೇರಿ ಬಳಿಕ ವಿಭಕ್ತಿ ಪ್ರತ್ಯಯಗಳು ಸೇರುತ್ತವೆ. ಆದರೆ ವ್ಯಂಜನಾಂತ ರೂಪಗಳಿಗೆ ಈ ನಿಯಮ ಹೊಂದುವುದಿಲ್ಲ. ನ್ ಎಂಬ ಪದಭಾಗವನ್ನು ಮೊದಲು ಸೇರಿಸಿ ಬಳಿಕ ಯಾವ ಪ್ರತ್ಯಯವನ್ನು ಸೇರಿಸಬೇಕೋ ಅದನ್ನು ಸೇರಿಸುವುದುಂಟು. ಉದಾ.ಲಂಡನ್‌ನಲ್ಲಿ, ಲಂಡನ್‌ನಿಂದ, ಬ್ಯಾಂಕಾಕ್‌ನಲ್ಲಿ, ಬ್ಯಾಕಾಂಕ್‌ನಿಂದ ಮುಂತಾದವು. ಇಲ್ಲೆಲ್ಲ ನ್ ವ್ಯಂಜನ ಹೆಚ್ಚಾಗಿ ಸೇರುತ್ತಿರುವುದು ಈಚೆಗೆ ಕನ್ನಡದಲ್ಲಿ ಆಗಿರುವ ಬದಲಾವಣೆ. ಇದರಲ್ಲೂ ಇನ್ನೊಂದು ಬಗೆಯಿದೆ. ಕನ್ನಡ ಬಳಕೆಯಲ್ಲಿರುವ ಕೆಲವು ಪ್ರದೇಶಗಳಲ್ಲಿ ಅದರಲ್ಲೂ ವಾಯುವ್ಯ ಕರ್ನಾಟಕ ಮತ್ತು ಕರಾವಳಿಯ ಕೆಲವು ಭಾಗಗಳಲ್ಲಿ ನ್ ಬಳಸುವುದಿಲ್ಲ; ಬದಲಿಗೆ ದ್ ವ್ಯಂಜನವನ್ನೇ ಸೇರಿಸುವುದುಂಟು. ಉದಾ.ಗೆ ಲಂಡನ್‌ದಲ್ಲಿ. ಲಂಡನ್‌ದಿಂದ ಹೀಗೆ. ಅಂದರೆ ಅಕಾರಾಂತ ಪದಗಳಿಗೆ ಹೊಂದುವ ನಿಯಮವನ್ನೇ ಇಲ್ಲಿಯೂ ಬಳಸುವಂತಿದೆ.

**ಯಾವತ್ತೂ, ಯಾವ ಹೊತ್ತೂ**

ಮುಂದಿನ ಎರಡು ವಾಕ್ಯಗಳನ್ನು ಓದಿರಿ. 1. **ತಮ್ಮ ಯಾವತ್ತೂ ಆಸ್ತಿಯನ್ನು ದಾನ ಮಾಡಿಬಿಟ್ಟರು**. 2. ನಿನ್ನನ್ನು ನಾನು **ಯಾವತ್ತೂ ಕ್ಷಮಿಸುವುದಿಲ್ಲ**. ಮೊದಲನೆಯ ವಾಕ್ಯವನ್ನು ಹೆಚ್ಚಾಗಿ ನಾಡಿನ ಕರಾವಳಿಯ ಬರಹಗಾರರಲ್ಲಿ ಕಾಣುತ್ತೇವೆ. ಈಚೆಗೆ ಇದು

ಕಡಿಮೆಯಾಗಿದೆಯಾದರೂ ಇಲ್ಲವೇ ಇಲ್ಲವೆಂದು ಹೇಳುವಂತಿಲ್ಲ. ಈ ಎರಡೂ ವಾಕ್ಯಗಳಲ್ಲಿ ಬಳಕೆಯಾಗಿರುವ **ಯಾವತ್ತೂ** ಪದ ಒಂದೇ ಅಲ್ಲ. ಮೊದಲನೆಯದು ಸಂಸ್ಕೃತದ **ಯಾವತ್** ಎಂಬ ಪದದಿಂದ ಬಂದದ್ದು. ಎರಡನೆಯದು ಕನ್ನಡದ **ಯಾವ ಹೊತ್ತೂ** ಎಂಬುದರ ಬಳಕೆಯ ರೂಪ. (ಆ ಹೊತ್ತು ,ಈ ಹೊತ್ತುಗಳು ಮಾತಿನಲ್ಲಿ ಆವತ್ತು/ಅವತ್ತು, ಈವತ್ತು/ಇವತ್ತು ಆಗುವುದನ್ನು ನೋಡಿದ್ದೇವೆ) **ಎಂದೆಂದೂ** ಎಂಬುದು ಇಲ್ಲಿ ಯಾವತ್ತೂ ಪದದ ತಿರುಳು. ಸಂಸ್ಕೃತದ ಯಾವತ್ ಎಂಬುದಕ್ಕೆ ಇರುವ ತಿರುಳುಗಳಲ್ಲಿ **ಇಡಿಯಾಗಿ, ಎಲ್ಲವೂ ಸೇರಿದ** ಎಂಬ ತಿರುಳು ಮೊದಲ ವಾಕ್ಯದಲ್ಲಿ ಬಳಕೆಯಾಗಿದೆ. ತಮ್ಮ ಎಲ್ಲ ಆಸ್ತಿಯನ್ನೂ ದಾನ ಮಾಡಿದರು ಎಂಬುದು ಈ ವಾಕ್ಯದ ತಿರುಳು. ಸಂಸ್ಕೃತದ ಯಾವತ್ ಪದ ಕನ್ನಡದಲ್ಲಿ ಬಿಡಿಯಾಗಿ ಇಲ್ಲವೇ ಬೇರೊಂದು ಪದದೊಡನೆ ಬಳಕೆಯಾಗುವುದು ಈಚೆಗೆ ಕಡಿಮೆಯಾಗಿದೆ. ಕನ್ನಡದ ಯಾವತ್ತು ಎಂಬುದು **ಎಂದಿನ, ಎಂದಿನಂತೆ** ಎಂಬ ತಿರುಳುಗಳೊಡನೆ ಕೆಲವು ಕನ್ನಡದ ಒಳನುಡಿಗಳಲ್ಲಿ ಬಳಕೆಯಾಗುವಂತೆ ತೋರುತ್ತದೆ. ಈ ವಾಕ್ಯವನ್ನು ನೊಡಿ. **ಯಾವತ್ತಿನಂತೆ ಅಂದೂ ಕೂಡ ಜನರು ತಮ್ಮ ಕೆಲಸಗಳಲ್ಲಿ ತೊಡಗಿದ್ದರು.**

**ಸಾಮಾನ್ಯ, ಸಾಧಾರಣ**

**ಸಾಮಾನ್ಯ, ಸಾಧಾರಣ (ಸರ್ವೇ ಸಾಮಾನ್ಯ)** ಎಂಬ ಪದಗಳು ಕನ್ನಡದಲ್ಲಿ ಬಳಕೆಯಾಗುವ ಬಗೆಯನ್ನು ನೋಡಿ. ಪತ್ರಿಕೆಗಳ ಬರವಣಿಗೆಯಲ್ಲಿ ಸಾಮಾನ್ಯ ಎಂಬ ಪದ ಇಂಗ್ಲಿಶ್ ನುಡಿಯ **ಕಾಮನ್ ಮತ್ತು ಜನರಲ್** ಪದಗಳ ಬದಲಾಗಿ ಬಳಕೆಯಾಗುತ್ತಿದೆ. ಜನರಲ್ ಎಂಬುದಕ್ಕೆ ಕೆಲವು ಸಂದರ್ಭದಲ್ಲಿ ಮಹಾ ಎಂಬ ಪದವನ್ನೂ ಸಾಟಿಯಾಗಿ ಬಳಸುವುದುಂಟು. **ಮಹಾಸಭೆ, ಮಹಾಚುನಾವಣೆ** ಎಂಬ ರಚನೆಗಳಲ್ಲಿ ಈ ಬಳಕೆ ಇದೆ. ಸಾಮಾನ್ಯ ಎಂಬುದು ಸಂಸ್ಕೃತದಲ್ಲಿ ಗುಣಪದ. ಕನ್ನಡದಲ್ಲಿ ಇದು ಗುಣಪದದಂತೆ ಬಳಕೆಯಾಗುವ ಜೊತೆಗೆ ಹೆಸರು ಪದವಾಗಿಯೂ ಬಳಕೆಯಾಗುತ್ತದೆ. ಶ್ರೀಸಾಮಾನ್ಯ ಎಂಬ ಹೊಸ ಪದರಚನೆಯನ್ನು ನೋಡಿ. **ನಾವು ಸಾಮಾನ್ಯರಲ್ಲ** ಎಂಬ ವಾಕ್ಯದಲ್ಲಿ ಹೆಸರು ಪದವಾಗಿ ಬಳಕೆಯಾಗಿದೆ. ಉಳಿದ ಕಡೆಗಳಲ್ಲಿ ಇದು ಹೆಸರು ಪದವೊಂದರ ಹಿಂದೆ ಗುಣಪದವಾಗಿಯೇ ಬಳಕೆಯಾಗುತ್ತದೆ. **ಸಾಮಾನ್ಯವಾಗಿ, ಸಾಮಾನ್ಯ ಸಂದರ್ಭಗಳಲ್ಲಿ, ಸಾಮಾನ್ಯ ವಿಷಯ** ಮುಂತಾದ ರಚನೆಗಳಲ್ಲಿ ಈ ಬಗೆಯ ಬಳಕೆ ಇದೆ. ಸಾಮಾನ್ಯ ಪದಕ್ಕೆ ಲೆಕ್ಕಕ್ಕೆ ತೆಗೆದುಕೊಳ್ಳಬೇಕಿಲ್ಲದ, ಸಣ್ಣ ಎಂಬ ತಿರುಳೂ ಇದೆ. ಪಂಪನಲ್ಲೇ ಈ ತಿರುಳಿನ ಬಳಕೆ ಇದೆ. 'ಸಾಮಾನ್ಯಮೇ ಬಗೆಯೆ ಭವತ್ಕೇಶಪಾಶ ಪ್ರಪಂಚಂ' ಎಂದು ದ್ರೌಪದಿಯ ಮುಡಿಯನ್ನು ಕುರಿತು ಹೇಳುತ್ತಾನೆ. ಅಸಾಮಾನ್ಯ ಎಂಬ ನಿಷೇಧರೂಪದಲ್ಲಿ ಸಾಟಿಯಿಲ್ಲದ, ಎಣೆಯಿಲ್ಲದ ಎಂಬುದೇ ಆ ಪದದ ತಿರುಳಾಗಿದೆ.

ಮೊದಲಲ್ಲಿ ಹೇಳಿದಂತೆ ಸಾಮಾನ್ಯ ಮತ್ತು ಸಾಧಾರಣ ಪದಗಳು ಒಂದರ ಕೆಲಸವನ್ನು ಇನ್ನೊಂದು ಮಾಡಬಲ್ಲುದೇ ಎಂಬುದನ್ನು ನೊಡೋಣ. ಸಾಧಾರಣ ಪದವನ್ನು ಈಗ ಹೆಚ್ಚಾಗಿ ಸರಾಸರಿ, ನಡುವಣ ಹಂತದ, ಹೆಚ್ಚೂ ಅಲ್ಲದ ಕಡಿಮೆಯೂ ಅಲ್ಲದ ಎಂಬ ತಿರುಳೊಡನೆ ಬಳಸುತ್ತಿದ್ದೇವೆ. **ಈ ವರ್ಷ ಸಾಧಾರಣ ಮಳೆಯಾಗಿದೆ**

ಎಂಬ ವಾಕ್ಯದಲ್ಲಿ ಸಾಮಾನ್ಯ ಪದವನ್ನು ಬಳಸಲಾಗುವುದಿಲ್ಲ. ಸಾಮಾನ್ಯ/ಸಾಧಾರಣ ಪದಗಳ ತಿರುಳಿನ ಹಂಚಿಕೆ ಮತ್ತು ಇಂಗ್ಲಿಶಿನ ಕಾಮನ್/ಜನರಲ್ ಪದಗಳ ತಿರುಳಿನ ಹಂಚಿಕೆಗಳು ಕನ್ನಡದಲ್ಲಿ ಡಿಕ್ಕಿ ಹೊಡೆಯುತ್ತಿರುವಂತೆ ತೋರುತ್ತದೆ. ಹಾಗಾಗಿ ಪತ್ರಿಕೆಗಳ ಕನ್ನಡದಲ್ಲಿ ಸಾಮಾನ್ಯ ಮತ್ತು ಸಾಧಾರಣ ಪದಗಳ ಬಳಕೆಯಲ್ಲಿ ಗೆರೆ ಎಳೆಯುವುದು ಆಗುತ್ತಿಲ್ಲ. **ಭಾರತ ಸಾಮಾನ್ಯ ಮೊತ್ತಕ್ಕೆ ಸರ್ವಪತನ ಕಂಡಿತು**. ಈ ವಾಕ್ಯದಲ್ಲಿ ಸಾಮಾನ್ಯ ಪದದ ಬದಲು ಸಾಧಾರಣ ಪದದ ಬಳಕೆ ಸರಿಯಾದೀತು. **ಇದೊಂದು ಸಾಧಾರಣ ಪ್ರಸಂಗವೆಂದು ಮಂತ್ರಿಗಳು ವರದಿಗಾರರಿಗೆ ಹೇಳಿದರು** ಎಂಬ ವಾಕ್ಯದಲ್ಲಿ ಸಾಧಾರಣ ಪದದ ಬದಲು ಸಾಮಾನ್ಯ ಪದ ಹೆಚ್ಚು ಸರಿಹೊಂದುತ್ತದೆಯಲ್ಲವೇ? ಈ ಎರಡು ಪದಗಳ ತಿರುಳಿನಲ್ಲಿ ಏನೇ ವ್ಯತ್ಯಾಸಗಳಿರಲಿ **ಅಸಾಮಾನ್ಯ** ಮತ್ತು **ಅಸಾಧಾರಣ** ಪದಗಳು ಮಾತ್ರ ಒಂದೇ ತಿರುಳಿನ ಪದಗಳಂತೆ ಬಳಕೆಯಾಗುತ್ತಿವೆ. ಗುಣಪದಗಳ ಬಳಕೆಯಲ್ಲಿ ಕನ್ನಡ ನುಡಿ ಈಗೀಗ ಸರಿಹಾದಿಯನ್ನು ತುಳಿಯುತ್ತಿಲ್ಲ ಎಂಬುದಕ್ಕೆ ಈ ಪದಗಳನ್ನು ಈಗ ನಾವು ಬಳಸುತ್ತಿರುವುದೇ ಒಂದು ಒಳ್ಳೆಯ ಉದಾಹರಣೆಯಾಗಿದೆ.

**ಹೊಸಪದಗಳನ್ನು ಕಟ್ಟುವ ಬಗೆ**

ಕನ್ನಡದಲ್ಲಿ ಹೊಸಪದಗಳನ್ನು ಕಟ್ಟುವ ಬಗೆ ಹೇಗೆ ನಡೆಯುತ್ತಿದೆ ಎನ್ನುವುದನ್ನು ನಾವಿನ್ನೂ ಎಚ್ಚರದಿಂದ ನೋಡಿಲ್ಲ. ಇದು ಎರಡು ನೆಲೆಗಳಲ್ಲಿ ಕಾಣಿಸಿಕೊಳ್ಳುತ್ತಿದೆ. ಒಂದು: **ಹಲವು ಜನರು ಒಂದೆಡೆ ಕುಳಿತು ಯೋಚಿಸಿ ತಕ್ಕ ಪದವನ್ನು ಕಟ್ಟಿಕೊಡುವುದು**. ಈ ಬಗೆಯು ಪದಕೋಶಗಳನ್ನು ಮಾಡುವವರಲ್ಲಿ ಅದರಲ್ಲೂ ಇಂಗ್ಲಿಶ್- ಕನ್ನಡ ಪದಕೋಶಗಳನ್ನು ಮಾಡುವವರಲ್ಲಿ ಹೆಚ್ಚಾಗಿ ಕಾಣಿಸುತ್ತದೆ. ಎರಡು: **ಅಂದಂದಿನ ತುರ್ತುಗಳಿಗೆ ತಕ್ಕಂತೆ ಹೊಸ ಪದವನ್ನು ಕಟ್ಟಿ ಬಳಸುವುದು**. ಇದರಲ್ಲಿಯೂ ಎರಡು ಬಗೆಗಳಿವೆ. ತಾವು ಕಟ್ಟುವ ಪದ ಮುಂದೆಯೂ ಬಳಕೆಗೆ ಬರಬೇಕೆಂಬ ಬಯಕೆಯಿಂದ ಕಟ್ಟಿದ ಪದಗಳು ಒಂದು ಬಗೆಯವು. ಇದಲ್ಲದೆ ಆ ಹೊತ್ತಿನ ತುರ್ತನ್ನು ಪೂರೈಸಿದರೆ ಸಾಕು; ಆಗ ಓದುವವರ ಮನಸ್ಸನ್ನು ಸೆಳೆದರೆ ಸಾಕು ಎಂಬ ಮೋಜಿನಿಂದ ಹುಟ್ಟುವ ಪದಗಳು ಎರಡನೆಯ ಬಗೆಯವು. ಇಂತಹ ಪದಗಳು ಇಂದು ಬಂದು ನಾಳೆ ಹೋಗುವ ಗುಂಪಿಗೆ ಸೇರುತ್ತವೆ.

ತುರ್ತಿನಲ್ಲಿ ಹೊಸಪದಗಳನ್ನು ಕಟ್ಟುವವರು ಮುಂದೆಯೂ ಅದು ಬಳಕೆಗೆ ಬರಬೇಕೆಂಬ ಬಯಕೆಯಿಂದ ಬರವಣಿಗೆಯಲ್ಲಿ ಬಳಕೆಯಾಗಲು ತಕ್ಕ ಪದಗಳನ್ನು ತಯಾರಿಸುತ್ತಾರೆ. ಮೊದಮೊದಲು ಇಂತಹ ಪದಗಳನ್ನು ಕಟ್ಟುವವರು ಪದದ ಜೊತೆಗೆ ಅದರ ತಿರುಳನ್ನು ಮತ್ತು ಅದು ಬಳಕೆಯಾಗುವ ಬಗೆಯನ್ನು ಚೆನ್ನಾಗಿ ಅರಿತಿರುತ್ತಿದ್ದರು. ಇಲ್ಲವೇ ಹಾಗೆ ಅರಿತುಕೊಳ್ಳಲು ಅವರಿಗೆ ಬಿಡುವು ಇರುತ್ತಿತ್ತು. ಆದರೆ ಇಂದು ಹೊಸ ಪದಗಳನ್ನು ಕಟ್ಟುವವರು ಪದಗಳ ತಿರುಳನ್ನು ಮತ್ತು ಅದು ಬಳಕೆಯಾಗುವ ಬಗೆಯನ್ನು ತಿಳಿದುಕೊಳ್ಳದೆಯೂ ಕನ್ನಡದ ಹೊಸ ಪದಗಳನ್ನು ಕಟ್ಟುತ್ತಿರುವುದು ಹೆಚ್ಚಾಗಿದೆ. ಹೊಸ ಪದ ಕಟ್ಟಲು ಬೇಕಾದ ಬಿಡುವು ಅವರಿಗೆ ದೊರಕದೇ ಇರುವುದೂ ಇದಕ್ಕೆ ಕಾರಣವಿದ್ದೀತು.

ಪದಗಳ ತಿರುಳನ್ನು ಗುರುತಿಸಿಕೊಳ್ಳದೆ ಹೊಸಪದಗಳನ್ನು ಕಟ್ಟುವಾಗ ತಪ್ಪು ತಿರುಳಿನ ಪದಗಳು ಹುಟ್ಟಿಕೊಳ್ಳುತ್ತವೆ. ಇಲ್ಲವೇ ಯಾವ ಪದವನ್ನು ಕನ್ನಡದಲ್ಲಿ ಹೇಳಬೇಕಾಗಿದೆಯೋ ಆ ಪದದ ರಚನೆಯೇ ಕನ್ನಡದ ರಚನೆಯನ್ನು ಕಟ್ಟಿಹಾಕುತ್ತದೆ. **ಫಾಸ್ಟ್‌ಫುಡ್ ಈಟಿಂಗ್** ಎನ್ನುವುದನ್ನು **ಆಹಾರವನ್ನು ಗಬಗಬನೆ ತಿನ್ನುವುದು** ಎಂದು ಹೇಳಿದ್ದನ್ನು ಮೊದಲ ಬಗೆಗೆ ಉದಾಹರಣೆಯನ್ನಾಗಿ ನೋಡಬಹುದು. ಎರಡನೆಯ ಬಗೆಗೆ ನೂರಾರು ಉದಾಹರಣೆಗಳಿವೆ. **ಅಜಾತ್ಯತೀತ, ಅನಾಡಂಬರ, ಅನಾಸ್ತಿಕ, ಅನಾತುರ, ಅಧೋರಚನೆ, ಅಪಕ್ಷಪಾತತೆ, ಕಾನೂನಾತೀತ, ಕಾರ್ಖಾನಿಕ, ಗೃಹಿಣ್ಯೇತರ, ಮುಂದಾವಶ್ಯಕತೆ, ಬಹುಕಾರ್ಯಸ್ತುತ** ಮುಂತಾದ ಪದಗಳನ್ನು ನೋಡಿ. ಇವೆಲ್ಲವೂ ಕನ್ನಡದ ಪತ್ರಿಕೆಗಳಲ್ಲಿ ಒಂದಿಲ್ಲೊಂದು ಕಡೆ ಬಳಕೆಯಾಗಿರುವ ಪದರಚನೆಗಳಾಗಿವೆ. ಇವೆಲ್ಲ ತುರ್ತು ರಚನೆಗಳೆಂಬುದು ಮೇಲುನೋಟಕ್ಕೆ ಗೊತ್ತಾಗುತ್ತದೆ. ಇವುಗಳ ರಚನೆ ಇಂಗ್ಲಿಶಿನ ಪದರಚನೆಗೆ ಕಟ್ಟು ಬಿದ್ದಿವೆ. **ಅಜಾತ್ಯತೀತ** ಎಂಬುದು **ನಾನ್ ಸೆಕ್ಯುಲರ್** ಎಂಬುದರ ಕನ್ನಡ ರೂಪ. ಇಂಗ್ಲಿಶಿನಲ್ಲಿರುವ ನಿಷೇಧ ರೂಪ **ನಾನ್-** ಎಂಬುದನ್ನು ಕನ್ನಡದಲ್ಲೂ ಉಳಿಸಿಕೊಳ್ಳಬೇಕೆಂಬ ತವಕದಿಂದ ಕನ್ನಡದಲ್ಲಿ ಈಗಾಗಲೇ ಬಳಕೆಯಲ್ಲಿರುವ ಜಾತ್ಯತೀತ ಪದದಲ್ಲಿರುವ ಅತೀತ ಎಂಬ ನಿಷೇಧ ರೂಪವನ್ನು ಮರೆತು ಅಜಾತ್ಯತೀತ ಪದವನ್ನು ಕಟ್ಟಲಾಗಿದೆ. **ನಾಸ್ತಿಕ** ಪದವೇ ನಿಷೇಧ ರೂಪ. ಅದರಿಂದ **ಅನಾಸ್ತಿಕ** ಎಂಬ ಇನ್ನೊಂದು ಪದವನ್ನು **ನಾನ್ ಬಿಲೀವರ್** ಗೆ ಹೊಂದಿಕೆಯಾಗುವಂತೆ ಕಟ್ಟಲಾಗಿದೆ. (ದಿಟವಾಗಿ ಈ ಪದವನ್ನು **ಅನ್+ಆಸ್ತಿಕ** ಎಂದು ಒಡೆಯಬೇಕೋ ಇಲ್ಲವೇ **ಅ+ನಾಸ್ತಿಕ** ಎಂದು ಒಡೆಯಬೇಕೋ ಎಂಬ ಗೊಂದಲ ಉಂಟಾಗುತ್ತದೆ. ಈ ಪದವನ್ನು ಬಳಸಿದವರು ಎರಡನೆಯ ಬಗೆಯನ್ನು ನಂಬಿದವರು)

ಇದಲ್ಲದೆ, ತಿರುಳನ್ನು ಅದರ ಬಳಕೆಯ ಬಗೆಯನ್ನು ಅರಿಯದೆ ಹೊಸ ಪದಗಳನ್ನು ಕಟ್ಟುವಾಗ ಇನ್ನೂ ಕೆಲವು ತೊಂದರೆಗಳಾಗುತ್ತವೆ. ಪದಗಳ ಹಿಂದೆ ಒಂದು ನಿಲುವು ಇರುತ್ತದೆ. ಆ ನಿಲುವು ಯಾವುದೆಂಬುದನ್ನು ಗೊತ್ತುಮಾಡಿಕೊಳ್ಳಬೇಕು. ಆ ನಿಲುವನ್ನು ನಾವು ಒಪ್ಪುತ್ತೇವೆಯೋ ಇಲ್ಲವೋ ಎಂಬುದು ಮೊದಲು ಗಟ್ಟಿಯಾಗಬೇಕು. ಆ ಬಳಿಕ ಹೊಸ ಪದ ಕಟ್ಟಬೇಕಾಗುತ್ತದೆ. ಹೀಗಾಗದೇ ಇದ್ದಾಗ ಸರಿಯಾದ ಪದವೊಂದನ್ನು ಕಟ್ಟಿದ್ದೇವೆ ಎಂದುಕೊಂಡರೂ ಅದರ ಹಿಂದಿನ ನಿಲುವು ಗೊತ್ತಿಲ್ಲದಂತೆ ನಮ್ಮನ್ನು ಕಟ್ಟಿ ಹಾಕಿಬಿಟ್ಟಿರುತ್ತದೆ. **ಅಸ್ಪೃಶ್ಯ** ಪದವನ್ನು ನೋಡೋಣ. ಹಿಂದೆ ಈ ಪದ (ಸಂಸ್ಕೃತದಿಂದ ಬಂದುದು) ಬಳಕೆಯಲ್ಲಿ ಇತ್ತಾದರೂ ಈಗ ಇಂಗ್ಲಿಶಿನ **ಅನ್‌ಟಚಬಲ್** ಎಂಬುದಕ್ಕೆ ಹೊಂದಿಕೆಯಾಗುವಂತೆ ಬಳಕೆಯಾಗುತ್ತಿದೆ. ಅದರಿಂದ ಅಸ್ಪೃಶ್ಯರು, ಅಸ್ಪೃಶ್ಯತೆ ಮುಂತಾದ ಪದಗಳನ್ನು ಕಟ್ಟಿಕೊಂಡಿದ್ದೇವೆ. ಅಸ್ಪೃಶ್ಯ ಪದಕ್ಕೆ **ಮುಟ್ಟಬಾರದ** ಮತ್ತು **ಮುಟ್ಟಲಾಗದ** ಎಂಬ ಎರಡು ತಿರುಳುಗಳಿವೆ. ಇವುಗಳಲ್ಲಿ ಮೊದಲನೆಯದನ್ನು ಈ ಪದದ ತಿರುಳೆಂದು ನಿಗದಿಪಡಿಸಲಾಗಿದೆ. ಇದು ಒಬ್ಬರು ಇನ್ನೊಬ್ಬರನ್ನು ಗುರುತಿಸುವ ಪದ. ಆದರೆ ಆ ಪದವನ್ನು ಬಳಸುವವರ ನಿಟ್ಟಿನಿಂದ ಪದದ ತಿರುಳು ನಿಗದಿಯಾಗಿದೆ. ಯಾರನ್ನು ಗುರುತಿಸಲು ಈ ಪದವನ್ನು ಬಳಸಲಾಗುತ್ತದೋ ಅವರನ್ನು ಗಣನೆಗೆ ತೆಗೆದುಕೊಳ್ಳದೆ ಈ ಪದದ ತಿರುಳನ್ನು ಗೊತ್ತುಮಾಡಿಕೊಳ್ಳಲಾಗಿದೆ. ಆದ್ದರಿಂದ ಈ ಪದ ಸುಮ್ಮನೆ **ಹೆಸರಿಸುವ** ಪದವಾಗಿ ಉಳಿದಿಲ್ಲ. ತನ್ನೊಳಗೆ ಒಂದು **ಬಣ್ಣನೆಯನ್ನೂ, ನಿಲುವನ್ನೂ**

ಹೊಂದಿದೆ. ಇಂಗ್ಲಿಶಿನ ಪದದ **ಅನ್**– ಎಂಬ ನಿಶೇಧ ರೂಪವನ್ನು ಉಳಿಸಕೊಳ್ಳಬೇಕೆಂಬ ನಿಟ್ಟಿನಿಂದ **ಅ**– ಎಂಬ ನಿಶೇಧ ರೂಪವನ್ನು ಬಳಸಿಕೊಳ್ಳುವುದರ ಜೊತೆಗೆ ಆ ಪದದ ನಿಲುವನ್ನೂ ಹಾಗೆಯೇ ಉಳಿಸಿಕೊಳ್ಳಲಾಗಿದೆ. ಇಂತಹ ಹೊಸ ಪದಗಳನ್ನು ಕಟ್ಟುವುದು ಎಷ್ಟು ಸರಿ ಎನ್ನುವುದನ್ನು ನಾವೀಗ ಚರ್ಚಿಸಬೇಕಾದ ಹೊತ್ತು ಬಂದಿದೆ.

**ವಾಕ್ಯಗಳ ತಪ್ಪು ರಚನೆ**

ಪತ್ರಿಕೆಯೊಂದರಲ್ಲಿ ಈಚೆಗೆ ಕಂಡುಬಂದ ಜಾಹಿರಾತಿನಲ್ಲಿ ಒಂದು ವಾಕ್ಯ ಹೀಗಿತ್ತು: **'ವರ್ಶಗಳು ಕಳೆದರೂ ಬಣ್ಣ ಹೋಗದೇ ಹೋಗುವುದಿಲ್ಲ'** ಈ ವಾಕ್ಯ ಸರಿಯಿಲ್ಲ. ಇದರಲ್ಲಿ ಇರುವ ತಪ್ಪು ಯಾವುದು ಎನ್ನುವುದನ್ನು ನೋಡೋಣ. ಕನ್ನಡದಲ್ಲಿ ಕೆಲಸ ಪದಗಳನ್ನು ಬಳಸುವಾಗ ಹೇಳಬೇಕಾದ್ದಕ್ಕೆ ಹೆಚ್ಚು ಒತ್ತುಕೊಟ್ಟು ಹೇಳಬೇಕಾಗಿದ್ದರೆ ಆಗ ಆ ಕೆಲಸಪದವನ್ನು ಮತ್ತೊಮ್ಮೆ ಬಳಸಿ ಹೊಸ ಪದವನ್ನು ಕಟ್ಟುವ ವಾಡಿಕೆ ಇದೆ. ಬಂದೇ ಬರುತ್ತದೆ, ಕೊಟ್ಟೇ ಕೊಡುತ್ತಾನೆ, ಹೇಳೇ (=ಹೇಳಿಯೇ) ಹೇಳುತ್ತಾನೆ, ಸುಟ್ಟೇ ಸುಡುತ್ತದೆ ಹೀಗೆ. ಹೀಗೆ ಮಾಡುವಾಗ ಎರಡು ಕಟ್ಟುಗಳನ್ನು ಬಳಸುತ್ತೇವೆ. ಒಂದು: ಕೆಲಸ ಪದದ ಭೂತಕೃದಂತ ರೂಪವನ್ನು ಮೊದಲಿಗೆ ಇರಿಸಿ ಅದಕ್ಕೆ ಒತ್ತು ಸೂಚಿಸುವ ಪ್ರತ್ಯಯವನ್ನು ಸೇರಿಸಿ ಬಳಿಕ ಮೂಲ ಕೆಲಸಪದವನ್ನು ಇರಿಸುತ್ತೇವೆ. **ಬಿಡು** ಎಂಬ ಕೆಲಸಪದದ ಭೂತಕೃದಂತ ರೂಪಕ್ಕೆ (=ಬಿಟ್ಟು) ಒತ್ತು ಸೂಚಿಸುವ ಏ ಪ್ರತ್ಯಯವನ್ನು ಸೇರಿಸಿದಾಗ ಸಿಗುವ **ಬಿಟ್ಟೇ** ಪದವನ್ನು ಬಿಡು ಎಂಬುದರ ಮುಂದೆ ಇರಿಸಿ **ಬಿಟ್ಟೇಬಿಡು** ಎಂಬ ಹೊಸ ರೂಪವನ್ನು ಕಟ್ಟುತ್ತೇವೆ. ಅದನ್ನು ಬಿಟ್ಟೇಬಿಡುತ್ತೇನೆ, ಬಿಟ್ಟೇಬಿಡುತ್ತದೆ ಮುಂತಾಗಿ ಇತರ ಕೆಲಸಪದಗಳಂತೆ ಬಳಸಬಹುದು. ಎರಡು: ಈ ಹೊಸ ಕೆಲಸಪದ ರೂಪವನ್ನು ನಿಶೇಧ ತಿರುಳನ್ನು ಸೂಚಿಸಲು ಬಳಸಲಾಗುವುದಿಲ್ಲ. ಬಂದೇಬರುವುದಿಲ್ಲ. ಸುಟ್ಟೇಸುಟ್ಟಿಲ್ಲ, ಕೊಟ್ಟೇಕೊಡುವುದಿಲ್ಲ ಮುಂತಾಗಿ ಬಳಸಲಾಗುವುದಿಲ್ಲ. ಅಲ್ಲಿ ಒತ್ತು ಕೊಟ್ಟು ಹೇಳಲು ಬೇರೆ ಪದಗಳನ್ನು ಕೆಲಸ ಪದಗಳ ಹಿಂದೆ ಬಳಸಬೇಕಾಗುತ್ತದೆ. ಮೇಲೆ ಹೇಳಿದ ಜಾಹಿರಾತಿನ ವಾಕ್ಯದಲ್ಲಿ ಈ ಎರಡೂ ಕಟ್ಟುಗಳನ್ನು ಪಾಲಿಸಿಲ್ಲ ಎನ್ನುವುದು ಗೊತ್ತಾಗುತ್ತದೆ. ಹಾಗಾಗಿ ಇದು ತಪ್ಪು ರಚನೆ.

**ಕ್ವಾ**

ಹಲವು ಓದುಗರು ಕನ್ನಡದ ಕೆಲವು ಒಳನುಡಿಗಳಲ್ಲಿ ಬಳಕೆಯಾಗುವ **ಕ್ವಾ** ಎಂಬ ಕೆಲಸಪದದ ಬೇರುಗಳೆಲ್ಲಿವೆ ಎಂದು ಕೇಳಿದ್ದಾರೆ. ಈ ಕೆಲಸಪದವನ್ನು ನುಡಿಯುವಾಗ **ಕ್ವೆ, ಕ್ವಾ, ಕೊ, ಕೋ** ಎಂದು ಕೇಳಿಸುತ್ತದೆ. ಹಿಂದಿನಿಂದಲೂ ಕನ್ನಡದಲ್ಲಿ **ನೀಡು** ಎಂಬ ತಿರುಳಿನ **ಕೊಡು** ಮತ್ತು **ಪಡೆಯು** ಎಂಬ ತಿರುಳಿನ **ಕೊಳ್** ಎಂಬ ಕೆಲಸಪದಗಳು ಬಳಕೆಯಲ್ಲಿವೆ. **ಕೊಳ್** ಎಂಬ ಕೆಲಸಪದಕ್ಕೆ ಹಲವಾರು ತಿರುಳುಗಳಿದ್ದರೂ ಪಡೆಯು ಎಂಬುದೇ ಬೇರುತಿರುಳು. ಈಗ ಬಳಕೆಯಲ್ಲಿರುವ ಕೊಳ್ಳು (= ಬೆಲೆ ತೆತ್ತು ಪಡೆದುಕೊಳ್ಳುವುದು) ಎಂಬುದೂ ಇದರಿಂದಲೇ ಹುಟ್ಟಿಕೊಂಡಿದೆ. ಇದಲ್ಲದೆ **ಕೊಳ್** ಎಂಬ ನೆರವಿನ ಕೆಲಸಪದವೂ ಇದೆ. ಹೇಳಿಕೊಳ್ಳು, ಬಡಿಸಿಕೊಳ್ಳು, ನೋಡಿಕೊಳ್ಳು ಮುಂತಾದ ಪದಗಳಲ್ಲಿ ಇದು ಕಾಣಿಸುತ್ತದೆ. ಇದರ ಕತೆ ಬೇರೆ. ಈಗದು ಬೇಡ.

ಹಿಂದಿನ ಕೊಳ್ ಎಂಬುದೇ ಈಗ ಕೆಲವು ಒಳನುಡಿಗಳಲ್ಲಿ ಕೇಳಿಸುವ **ಕ್ವಾ** ಎಂಬುದು ಕೊಳ್ ಪದದಿಂದ ಬಂದಿದೆ. ಮೊದಲಿದ್ದ ಪದದ ಳ್ ಕಳೆದು ಹೋಗಿದೆ. ಆಗ ಹುಟ್ಟಿಕೊಂಡದ್ದು ಕೋ. ಇದರ ಓಕಾರವು ನುಡಿಯುವ ಬಗೆಯಲ್ಲಿ ನಮಗೆ ಅದು ವಕಾರದಂತೆ ಕೇಳುತ್ತದೆ. ತೋಟ>ತ್ವಾಟ, ಕೋಣೆ>ಕ್ವಾಣೆ, ಕೋಪ>ಕ್ವಾಪ ಮುಂತಾದ ಪದಗಳನ್ನು ಹೀಗೆ ಆ ಒಳನುಡಿಗಳಲ್ಲಿ ಕೇಳಿಸಿಕೊಳ್ಳುತ್ತೇವೆ. **ಕ್ವಾ** ಎಂಬುದು **ತಕೋ, ತಕ, ತಕ್ಕ** ಎಂಬ ಪದಗಳ ಕಿರಿದು ರೂಪವಲ್ಲ. ತಕೋ/ತಕ/ತಕ್ಕ ಇವು ತೆಗೆದುಕೋ ಎಂಬ ಕೆಲಸ ಪದದ ಕಿರಿದು ರೂಪಗಳು. ಕ್ವಾ ಕೆಲಸ ಪದವನ್ನು ಬಳಸುವ ಒಳನುಡಿಗಳು ಈ ಕೆಲಸ ಪದಕ್ಕೆ ಕಾಲಸೂಚಕ ಪ್ರತ್ಯಯ ಇಲ್ಲವೇ ಆಖ್ಯಾತ ಪ್ರತ್ಯಯಗಳನ್ನು ಸೇರಿಸಿ ಬಳಸುವುದಿಲ್ಲ. ಅಂದರೆ ಈ ಕೆಲಸಪದಕ್ಕೆ ವಿಧ್ಯರ್ಥಕ ನೆಲೆಯಲ್ಲಿ ಅಲ್ಲದೆ ಬೇರೆ ಕೆಲಸಗಳು ಇದ್ದಂತಿಲ್ಲ.

### ಅಲಭ್ಯ ಸಾಧ್ಯತೆ', ಲಭ್ಯತೆ ಸಾಧ್ಯತೆ'

ಪತ್ರಿಕೆಗಳು, ಟಿವಿ ವಾಹಿನಿಗಳು ಬಳಸಿದ ಎರಡು ರಚನೆಗಳು ಹೀಗಿವೆ. ಮುಂದಿನ ಪಂದ್ಯಕ್ಕೆ **'ಸಚಿನ್ ಅಲಭ್ಯ ಸಾಧ್ಯತೆ'; ' ವೀರೂ ಲಭ್ಯತೆ ಸಾಧ್ಯತೆ'** ಎರಡೂ ತಪ್ಪು ರಚನೆಗಳು. **ಲಭ್ಯ** ಎಂಬ ಗುಣಪದವನ್ನು ಸಂಸ್ಕೃತ ನುಡಿಯಿಂದ ಪಡೆದುಕೊಂಡಿದ್ದೇವೆ. ಅದನ್ನು ಗುಣಪದವನ್ನಾಗಿ ಬಳಸುತ್ತೇವೆ. **ಲಭ್ಯತೆ** ಎಂಬ ಹೆಸರುಪದವನ್ನು ಕೂಡ ಕಟ್ಟಿ ಕೊಂಡಿದ್ದೇವೆ. ಇದೆಲ್ಲ ಸರಿ. ಆದರೆ ಅಲಭ್ಯ ಎನ್ನುವುದೇ ಕನ್ನಡದ ವಾಕ್ಯ ರಚನೆಯ ಕಟ್ಟುಗಳ ಮೇರೆಗೆ ವಾಕ್ಯದಲ್ಲಿ ಸರಿಯಾದ ತಿರುಳನ್ನು ನೀಡುವಾಗ ಅದನ್ನಷ್ಟೇ ಬಳಸಿದರೂ ಸಾಕು. ಪೇಟೆಗಳಲ್ಲಿ ಸೀಮೆಎಣ್ಣೆ ಅಲಭ್ಯ ಎಂದು ಹೇಳಬೇಕಾದಾಗ ಅಲಭ್ಯ ಸಾಧ್ಯತೆ ಎನ್ನುವುದೇಕೆ? ಸೀಮೆಎಣ್ಣೆ ಸಿಗದೆಯೂ ಹೋಗಬಹುದು ಎನ್ನುವುದು ವಾಕ್ಯ ಬರೆದವರ ಮನಸ್ಸಿನಲ್ಲಿದ್ದರೆ ಅದನ್ನು ಹಾಗೆಯೇ ಬರೆಯುವುದು ಸರಿಯಾದ ದಾರಿ. ಎರಡನೆಯ ವಾಕ್ಯ ಬರೆದವರೂ ಕೂಡ ಪಂದ್ಯಕ್ಕೆ ಆ ಆಟಗಾರ ಸೇರಲೂಬಹುದು ಎಂದು ಹೇಳುವುದಿದ್ದರೆ ಅದನ್ನು ಹೇಳಲು ಸಾಧ್ಯತೆ ಎಂಬ ಪದವನ್ನು ಬಳಸುವುದು ಸರಿಯಲ್ಲ. ಲಭ್ಯವಾಗಬಹುದು; ಲಭ್ಯವಾದಾರು ಎಂದೆಲ್ಲ ಬರೆಯಬಹುದೇ ಹೊರತು ಈಗಿರುವಂತೆ ಅಲ್ಲ. ಸಂಸ್ಕೃತ ಪದಗಳಿಗೆ ಜೋತು ಬೀಳುವುದರಿಂದ ಏನೆಲ್ಲ ಗೋಜಲುಗಳಲ್ಲಿ ಸಿಕ್ಕಿಕೊಳ್ಳುತ್ತೇವೆ ಎನ್ನುವುದು ಇದರಿಂದಲೂ ಗೊತ್ತಾಗುವಂತಿದೆ.

### ಮುಂಬೈನಲ್ಲಿ, ಮುಂಬೈಯಲ್ಲಿ

ಮಹೇಶ (ಸ್ಟಾಕ್ ಹೋಲ್ಮ್, ಸ್ವೀದನ್) ಇವರು ಕನ್ನಡ ಪತ್ರಿಕೆಗಳು **ಮುಂಬೈನಲ್ಲಿ**(ಮುಂಬೈಯಲ್ಲಿ ಎಂಬುದರ ಬದಲು) ಎಂದು ಬರೆಯುತ್ತಿರುವುದು ಸರಿಯೇ ಎನ್ನುವುದು ಇವರ ಕೇಳ್ವಿ. ಹೆಸರು ಪದಗಳಿಗೆ **ಅಲ್ಲಿ** ಎಂಬುದನ್ನು ಸೇರಿಸಿದಾಗ ಯಾವ ಉಲಿ ಬದಲಾವಣೆಗಳಾಗುತ್ತವೆ ಎಂಬುದನ್ನು ಶಾಲಾ ವ್ಯಾಕರಣಗಳು ತಿಳಿಸುತ್ತವೆ. ಹೆಸರುಪದಗಳ ಕೊನೆಯಲ್ಲಿ ಮುಂದಿನ ತೆರೆಯುಲಿಗಳಿದ್ದರೆ (ಇ, ಎ ಇಲ್ಲವೇ ಐ) ಆ ಉಲಿಗಳ ಬದಲು ಯಕಾರವು ಬರುವುದು. ಉದಾ.ಗೆ ಮನೆ>ಮನೆಯಲ್ಲಿ, ಕಿಟಕಿ>ಕಿಟಕಿಯಲ್ಲಿ, ಕೈಯಲ್ಲಿ. ಹೆಸರುಪದಗಳ ಕೊನೆಯಲ್ಲಿ ಹಿಂದಿನ ತೆರೆಯುಲಿ ಇದ್ದರೆ

(ಉ) ಆಗ ಅದರ ಬದಲು ಇನ್ ಬರುವುದು. ಉದಾ.ಗೆ ಕಾಲು>ಕಾಲಿನಲ್ಲಿ, ಊರು> ಊರಿನಲ್ಲಿ. ಹೆಸರುಪದ **ಅ ಇಲ್ಲವೇ ಆ** ಉಲಿಯಿಂದ ಕೊನೆಯಾಗಿದ್ದರೆ ಆಗ **ದ** ಎಂಬ ದನಿಯು ಹೊಸದಾಗಿ ಬಂದು ಸೇರುವುದು. ಉದಾ.ಗೆ ದೀಪ>ದೀಪದಲ್ಲಿ, ಬೆಟ್ಟ>ಬೆಟ್ಟದಲ್ಲಿ, ಸಿನಿಮಾ> ನಿನಿಮಾದಲ್ಲಿ. ಈ ಕಟ್ಟಿಗೆ ಹೊಂದಿಕೊಳ್ಳದ ಕೆಲವು ಪದಗಳೂ ಇವೆ. ಪದದ ಕೊನೆಯಲ್ಲಿ ಉ ಎಂಬ ಉಲಿ ಬಂದರೂ ಅದಕ್ಕೆ ಅಲ್ಲಿ ಸೇರಿದಾಗ ಉ ಎಂಬ ಉಲಿಯು ಹಾಗೇ ಉಳಿದುಕೊಳ್ಳುವುದುಂಟು. ಉದಾ.ಗೆ. ಮಗು>ಮಗುವಿನಲ್ಲಿ.( ಹೀಗಾಗಲು ಇಂತಹ ಪದಗಳ ಕೊನೆಯಲ್ಲಿ ಇರುವ ಉಕಾರವನ್ನು ನುಡಿಯುವಾಗ ಬಿಟ್ಟುಬಿಡುವುದಕ್ಕೆ ಆಗದಿರುವುದೇ ಕಾರಣ. ಕಾಳು, ಕಣ್ಣು, ಕೋಲು ಮುಂತಾದ ಪದಗಳ ಕೊನೆಯ ಉಕಾರವನ್ನು ನುಡಿಯುವಾಗ ಬಿಡಬಹುದು) ಈ ಕಟ್ಟುಗಳ ನಿಟ್ಟಿನಲ್ಲಿ ಹೇಳುವುದಾದರೆ **ಮುಂಬೈಯಲ್ಲಿ** ಎಂಬುದೇ ಸರಿ. ಮುಂಬೈನಲ್ಲಿ ಎನ್ನುವುದು ಸರಿಯಲ್ಲ.

ಇದೆಲ್ಲ ಸರಿ. ಆದರೆ ಇದರಿಂದ ಈ ದನಿ ಬದಲಾವಣೆಗಳು ಏಕೆ ಆಗುತ್ತವೆ ಎನ್ನುವುದನ್ನು ಕಂಡುಕೊಂಡಂತೆ ಆಗಲಿಲ್ಲ. ಈ ನಿಟ್ಟಿನಲ್ಲಿ ನೋಡಿದಾಗ ಮಾತ್ರ **ಮುಂಬೈನಲ್ಲಿ** ಎಂಬ ಪದ ಬಳಕೆ ಏಕೆ ಆಗುತ್ತಿದೆ ಎನ್ನುವುದನ್ನು ತಿಳಿದುಕೊಳ್ಳಬಹುದಾಗಿದೆ. **ಅಲ್ಲಿ** ಎಂಬುದು ಹೆಸರುಪದಗಳಿಗೆ ನೇರವಾಗಿ ಸೇರುತ್ತಿಲ್ಲ. ಮೊದಲು ಅ ಪದಗಳಿಗೆ ಬೇರೊಂದು ಪ್ರತ್ಯಯ ಸೇರಿದ ಬಳಿಕ ಅಲ್ಲಿ ಸೇರುತ್ತಿರುವಂತೆ ತೋರುತ್ತಿದೆ. ಮುಂಬೈನಲ್ಲಿ ಎಂಬ ಪದವನ್ನು ನೋಡೋಣ. **ಮುಂಬೈನ ಬೀದಿಬೀದಿಗಳಲ್ಲಿ ನೀರು ತುಂಬಿತ್ತು** ಎಂಬ ವಾಕ್ಯ ನಮಗೆ ಸರಿಯೆನಿಸುತ್ತದೆ. ಅಂದರೆ **ಮುಂಬೈನ** ಎಂಬ ಪದಬಳಕೆಯನ್ನು ನಾವು ಒಪ್ಪುತ್ತಿದ್ದೇವೆ ಎಂದಾಯ್ತು. ಅಲ್ಲಿರುವುದು ಷಷ್ಠಿ ವಿಭಕ್ತಿಯ ಪ್ರತ್ಯಯ ತಾನೆ. (**ಮುಂಬೈನ ಬೀದಿ, ಮುಂಬೈನ ಮಹಲು, ಮುಂಬೈನ ಜನರು** ಮುಂತಾದವು) ಈ **ಮುಂಬೈನ** ಎಂಬ ರೂಪಕ್ಕೆ **ಅಲ್ಲಿ** ಎಂಬುದು ಸೇರುತ್ತದೆ ಎನ್ನುವುದು ಸರಿಯದ ಮಾತು.

ಕನ್ನಡದಲ್ಲಿ ಹೀಗೆ ಹೆಸರುಪದಗಳಿಗೆ ಅಲ್ಲಿ ಎಂಬುದು ಸೇರುವ ಮೊದಲು **ಯ** (ತಲೆಯ, ಮನೆಯ, ಕಿಟಕಿಯ, ಸೂಜಿಯ), **ನ/ಇನ** (ಊರಿನ, ಕಾಡಿನ, ಕಣ್ಣಿನ, ಗೂಡಿನ) ಇಲ್ಲವೇ **ದ** (ದೀಪದ, ಗಿಡದ, ಬೆಟ್ಟದ) ಉಲಿಗಳು ಸೇರಿರುವುದು ವಾಡಿಕೆ. ಆಗ ನಾವು ಮೊದಲು ಹೇಳಿದಂತೆ ಶಾಲಾ ವ್ಯಾಕರಣದ ಕಟ್ಟುಗಳು ಹೇಳುವ ಉಲಿ ಬದಲಾವಣೆಗಳು ಏಕೆ ಆಗುತ್ತವೆ ಎನ್ನುವುದನ್ನು ಹೇಳಬಹುದು. ಆದರೆ **ಈಚೆಗೆ ಹೆಸರುಪದ ಯಾವ ಉಲಿಯಿಂದ ಕೊನೆಯಾದರೂ ಅದಕ್ಕೆ ಮೊದಲು ನ/ಇನ ಎಂಬುದು ಸೇರುತ್ತಿರುವಂತಿದೆ**. (ಯ ಮತ್ತು ದ ಗಳು ಹಿಂದಕ್ಕೆ ಸರಿದಿವೆ.) ಹಾಗಾಗಿಯೇ ಮುಂಬೈನಲ್ಲಿ, ನಲ್ಲಿನಲ್ಲಿ, ಕಿಟಕಿನಲ್ಲಿ, ಸಿನಿಮಾನಲ್ಲಿ, ಕತೆನಲ್ಲಿ ಎಂಬ ಪದಬಳಕೆಗಳು ಕೇಳಿಸಿಕೊಳ್ಳಲು ಸಿಗುತ್ತಿವೆ. ಈ ಬದಲಾವಣೆ (ಯ,ದ,ನ/ಇನ ಗಳ ಜಾಗದಲ್ಲಿ ಬರಿ ನ/ಇನ ಬಳಸುವುದು) ಕನ್ನಡದಲ್ಲಿ ಉಳಿದುಕೊಳ್ಳುವುದೋ ಇಲ್ಲವೋ ಹೇಳಲಾಗುವುದಿಲ್ಲ. ಆದರೆ ಅದು ಹೆಚ್ಚು ಹರಡುತ್ತಿರುವುದಂತೂ ನಿಜ.

ತೆಲುಗು ಕನ್ನಡಗಳೆರಡೂ ನುಡಿಗಳನ್ನು ಆಡುವ ಕಡೆಗಳಲ್ಲಿ ಈ ಬದಲಾವಣೆ ಕಾಣಿಸುವುದಿಲ್ಲ. ಅಲ್ಲಿ ಬೇರೊಂದು ಬಗೆಯ ರಚನೆಗಳು ಕೇಳಸಿಗುತ್ತವೆ. ಅಲ್ಲಿ ಕೇಳಸಿಗುವ **ನಲ್ಲಿಲಿಂದ, ಕೈಲಿಂದ, ಕಲ್ಲಿಲಿಂದ, ಬಸ್ಲಿಂದ** ಮುಂತಾದ ರಚನೆಗಳನ್ನು ಅರಿತುಕೊಳ್ಳುವುದಕ್ಕೆ

ಈಗಿನ ಶಾಲಾ ವ್ಯಾಕರಣದ ಕಟ್ಟುಗಳು ಸಾಲುವುದಿಲ್ಲ. ಮತ್ತೆ ಮುಂಬೈ ಪದಕ್ಕೆ ಹಿಂದಿರುಗೋಣ. **ಮುಂಬೈನಿಂದ ಬರುತ್ತಿರುವ ಟ್ರೈನು ಒಂದು ಗಂಟೆ ತಡವಾಗಲಿದೆ** ಎಂಬ ವಾಕ್ಯವನ್ನು ನೋಡಿ. ಇಲ್ಲಿರುವ **ಮುಂಬೈನಿಂದ** ಎಂಬ ರಚನೆ ಕೂಡ ಬಳಕೆಯಲ್ಲಿ ಒಪ್ಪಿಗೆ ಪಡೆದಿದೆ. ನಾವು **ಮುಂಬೈಯಿಂದ** ಎಂಬ ರಚನೆ ಸರಿಯೆಂದು ಹೇಳಿದರೂ **ಮುಂಬೈನಿಂದ** ಎಂಬುದು ಬಳಕೆಗೆ ಬರುತ್ತಿದೆ. ತೆಲುಗು-ಕನ್ನಡ ಎರಡೂ ನುಡಿಗಳನ್ನು ಬಳಸುವವರು ಹೆಸರುಪದಗಳ ಕೊನೆಗೆ ನ/ಇನಗಳನ್ನು ಸೇರಿಸುವ ಬದಲು **ಲ**/ಇಲ ಸೇರಿಸುತ್ತಿದ್ದಾರೆ. ಹಾಗಾಗಿಯೇ ಅವರ ಕನ್ನಡದಲ್ಲಿ **ಮುಂಬೈಲಿಂದ, ಊರ್ಲಿಂದ** ಮುಂತಾದ ಪದರೂಪಗಳ ಬಳಕೆಗಳನ್ನು ಕೇಳುತ್ತೇವೆ. ಇದೆಲ್ಲ ಮಾತಿನಿಂದ ಗೊತ್ತಾಗುವುದಿಷ್ಟೆ: ನಾವು ಕನ್ನಡದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕಾಗಿದೆ. ಅಲ್ಲದೆ ಕನ್ನಡದ ಒಳನುಡಿಗಳಲ್ಲಿ ಯಾವ ಬಗೆಯ ಪದಬಳಕೆಗಳು ಆಗುತ್ತಿವೆ ಎನ್ನುವುದನ್ನೂ ಕೂಡ ಇನ್ನಷ್ಟು ವಿವರವಾಗಿ ಅರಿತುಕೊಳ್ಳಬೇಕಾಗಿದೆ.

### ತಲ್ಲಣ, ಆತಂಕ ಮತ್ತು ಗಾಬರಿ

ವಿಶ್ವನಾಥ್ .ಎಚ್.ಎನ್ (ಶಿವಮೊಗ್ಗ) ಇವರು 'ತಲ್ಲಣ, ಆತಂಕ ಮತ್ತು ಗಾಬರಿ ಈ ಮೂರೂ ಪದಗಳು ಒಂದಕ್ಕೊಂದು ಪೂರಕವಾಗಿದ್ದರೂ ಇವುಗಳ ನಡುವೆ ಇರುವ' ವ್ಯತ್ಯಾಸವನ್ನು ತಿಳಿಯಬಯಸಿದ್ದಾರೆ. ಈ ಮೂರು ಪದಗಳಲ್ಲಿ **ತಲ್ಲಣ** ಮೂಲ ಕನ್ನಡಪದ. ಇದು ಹಳಗನ್ನಡದಲ್ಲಿ **ತಲ್ಲಳ** ( ಈ ಳಕಾರವೂ ಮೊದಲು ಱಳವಾಗಿತ್ತು) ಎಂಬ ರೂಪದಲ್ಲಿ ಬಳಕೆಯಾಗುತ್ತಿತ್ತು. **ಆತಂಕ** ಪದ ಸಂಸ್ಕೃತದಿಂದ ಬಂದಿದೆ. **ಗಾಬರಿ** ಪದ ಮರಾಠಿ-ಹಿಂದಿ ಮೂಲದಿಂದ ಬಂದಿದೆ. ಗಾಬರಿ ಪದಕ್ಕೆ ಬಹಳ ಹಳೆಯ ಬಳಕೆಯಿಲ್ಲ. ಮೂಲದಲ್ಲಿ ಮೊದಲ ವ್ಯಂಜನ ಮಹಾಪ್ರಾಣವಾಗಿದೆ. ಕನ್ನಡದಲ್ಲೂ ಕೆಲವು ಕಡೆ, ಕೆಲವರು ಇದನ್ನು ಘಾಬರಿ ಎಂದು ಬರೆಯುವುದಲ್ಲದೆ ಹಾಗೆ ನುಡಿಯುತ್ತಾರೆ ಕೂಡ. (ಘಬರಾಹಟ್, ಘಬರಾನಾ ಇವು ಹಿಂದಿಯಲ್ಲಿ ಬಳಕೆಯಲ್ಲಿರುವ ಪದರೂಪಗಳಲ್ಲಿ ಕೆಲವು) ತಲ್ಲಣ ಈಗ ಹೆಚ್ಚು ಬರಹಕ್ಕೆ ಮತ್ತು ಔಪಚಾರಿಕ ಮಾತಿಗೆ ಸೀಮಿತವಾಗಿದೆ. ಆತಂಕ ಕೂಡ ಬರಹಕ್ಕೆ ಮತ್ತು ಔಪಚಾರಿಕ ಮಾತಿಗೆ ಸೀಮಿತವಾಗಿದೆ. ಆದರೂ ಈ ಆತಂಕ ಪದಕ್ಕೆ ಅಡ್ಡಿ, ತಡೆ ಎಂಬ ಅರ್ಥವಿದೆಯಾಗಿ ಅನೌಪಚಾರಿಕ ಮಾತಿನಲ್ಲೂ ಇದು ಬಳಕೆಯಾಗುವುದುಂಟು. ಈ ಪದದಿಂದ ಪಡೆದುಕೊಂಡ ಆತಂಕಿತ ಎಂಬ ಗುಣಪದ ಮತ್ತು ಆತಂಕವಾದಿ(=ಉಗ್ರಗಾಮಿ) ಎಂಬ ನಾಮಪದಗಳೂ ಹೆಚ್ಚು ಬಳಕೆಯಾಗುತ್ತಿವೆ. ಈ ಮೂರೂ ಪದಗಳು '**ಮುಂದೆ ಏನಾಗುವುದೋ ಎಂಬುದು ಗೊತ್ತಾಗದೇ** ಇರುವ 'ಮನಸ್ಥಿತಿಯನ್ನು ಹೇಳಲು ಬಳಕೆಯಾಗುತ್ತಿವೆ.

### ದೀರ್ಘ ಸಂಸ್ಕೃತ ಪದಗಳ ತೊಡಕು

ದಿಲೀಪ್ ಹೊನ್ನವಳ್ಳಿ (ಮೈಸೂರು) ಇವರು ದೀರ್ಘ ಸಂಸ್ಕೃತ ಪದಗಳನ್ನು ಕನ್ನಡದಲ್ಲಿ ಬರೆಯುವಾಗ ನಡುವೆ ಅಂತರವನ್ನು ಹೇಗೆ ನಿರ್ಧರಿಸುವುದೆಂದು ಕೇಳಿದ್ದಾರೆ. ಸಂಸ್ಕೃತದ ದೀರ್ಘ ಸಮಾಸಪದಗಳನ್ನು ಆ ಭಾಷೆಯಲ್ಲಿ ಬರೆಯುವಾಗ ಇರದ

ಸಮಸ್ಯೆ ಕನ್ನಡದಲ್ಲಿ ಉಂಟಾಗುತ್ತದೆ. ಸಂಸ್ಕೃತದ ಪದ, ಪ್ರತ್ಯಯಗಳನ್ನು ಸೇರಿಸಿ ದೊಡ್ಡ ಪದಗಳನ್ನು ಕಟ್ಟಿಕೊಳ್ಳುವುದು ಕನ್ನಡದಲ್ಲಿ ಬಳಕೆಯಲ್ಲಿರುವ ಒಂದು ಪದರಚನೆಯ ಬಗೆ. ಹೀಗೆ ಜೋಡಿಸಿ ಕಟ್ಟಿಕೊಂಡ ಪದಗಳಲ್ಲಿ ಪ್ರತ್ಯಯಗಳಿದ್ದರೆ ಆ ಪ್ರತ್ಯಯಗಳನ್ನು ಮೂಲಪದದಿಂದ ಬೇರೆಮಾಡಿ ಬರೆಯುವುದು ಸರಿಯಾಗದು. ನಿಶ್ಶಸ್ತ್ರೀಕರಣ, ಪ್ರೇರಣಾರ್ಥಕ, ಅನಿರ್ಬಂಧಿತ ಮುಂತಾದ ಪದಗಳನ್ನು ಒಂದೇ ಪದವೆಂಬಂತೆ ಬರೆಯುವುದು ಸರಿ. ಹಾಗೆಯೇ ಹೀಗೆ ಕಟ್ಟಿದ ಪದಗಳ ನಡುವೆ ಸಂಧಿ ನಡೆದಿದ್ದರೆ ಆಗ ಕೂಡ ಅಲ್ಲಿ ಕೂಡಿಕೊಂಡ ಪದಗಳನ್ನು ಬೇರೆ ಬೇರೆ ಮಾಡಿ ಬರೆಯುವುದು ಸರಿಯಲ್ಲ. ಉದಾ.ಗೆ ಆದ್ಯತಾನುಸಾರ, ವಿದ್ಯುದಾಗಾರ, ಮೂಲೋತ್ಪಾಟನೆ ಮುಂತಾದವು. ಆದರೆ ನಾಮಪದಗಳು ನಾಮಪದಗಳೊಡನೆ ಸೇರಿ ಇಲ್ಲವೇ ಗುಣಪದಗಳು ನಾಮಪದಗಳೊಡನೆ ಸೇರಿ ಹೊಸ ದೊಡ್ಡ ಪದಗಳನ್ನು ಕಟ್ಟಿದ್ದರೆ ಆಗ ಆ ಪದಗಳನ್ನು ಒತ್ತಟ್ಟಿಗೆ ಬರೆಯವುದು ಬೇಕಿಲ್ಲ. ಉದಾ.ಗೆ 'ಶಿಕ್ಷಣ ಸಚಿವ' ಸರಿಯೋ 'ಶಿಕ್ಷಣಸಚಿವ' ಸರಿಯೋ? ಮೊದಲಿಗೆ ಇವೆರಡರಲ್ಲಿ ಯಾವುದಾದರೂ ಸರಿ ಎಂದು ಅನ್ನಿಸುವುದು ದಿಟ. ಆದರೆ ಕೆಲವೊಮ್ಮೆ ಮೂರುನಾಲ್ಕು ಪದಗಳು ಒಮ್ಮೆಗೆ ಸೇರಿರುವ ದೊಡ್ಡ ಪದಗಳನ್ನು ಬರೆಯುವಾಗ ನಡುವೆ ಬಿಡುವು ಕೊಡದೆ ಬರೆದರೆ ಅದನ್ನು ಓದುವುದು ಮತ್ತು ಅರ್ಥ ಮಾಡಿಕೊಳ್ಳುವುದು ತ್ರಾಸವನ್ನುಂಟುಮಾಡುತ್ತದೆ. ಉದಾ.ಗೆ ಅಣುವಿದಳನಪ್ರಕ್ರಿಯೆ, ವಿವೇಚನಾರಹಿತನಿರ್ಣಯ ಎಂದೆಲ್ಲ ಒಂದೇ ಪದದಂತೆ ಬರೆದರೆ ಹೇಗಿರುತ್ತದೆ ಗಮನಿಸಿ. ಇನ್ನೂ ಗೋಜಲಿನ ಉದಾಹರಣೆಗಳಿವೆ. ಹೀಗಿರುವಾಗ ದೊಡ್ಡ ಪದದಲ್ಲಿರುವ ಒಳಗಿನ ಪದಗಳನ್ನು ಬೇರೆಬೇರೆ ಮಾಡಿ ಬರೆಯುವುದು ಸರಿಯಾದುದು.

### ಉಂಟು

ಬೊ.ನಾ.ಕೃಷ್ಣಮೂರ್ತಿ (ಸಾಗರ)ಯವರು 'ಉಂಟು' ಎಂಬ ಪದದ ಬಳಕೆಯನ್ನು ವಿವರಿಸಿದ್ದನ್ನು ಗಮನಸಿ ಪ್ರತಿಕ್ರಿಯೆ ಬರೆದಿದ್ದಾರೆ. ಅವರ ಬರಹದ ತಿರುಳು ಇಷ್ಟು: ಉಂಟು ಎಂಬ ಪದರೂಪವನ್ನು ಭೂತಕಾಲದಲ್ಲಿ ಮಾತ್ರವಲ್ಲದೆ ಬೇರೆ ಬಗೆಯಲ್ಲೂ ಬಳಸಲು ಸಾಧ್ಯವಿದೆ ; ಉಂಟು ಎಂಬುದು ಯಾವಾಗಲೂ ಇದೆ ಎಂಬುದಕ್ಕೆ ಸಮಾನವಲ್ಲ; ಒಂದರ ಬದಲು ಇನ್ನೊಂದನ್ನು ಬಳಸಲು ಸಾಧ್ಯವಾಗದಿರುವ ಪ್ರಯೋಗಗಳು ಇವೆ. ಇವರ ಗ್ರಹಿಕೆ ಸರಿಯಾಗಿಯೇ ಇದೆ. ಆದರೆ ಉಂಟು ಎಂಬ ಪದರೂಪದ ಚರಿತ್ರೆಯನ್ನು ಕೊಂಚ ಗಮನಿಸೋಣ. ಇದು ಉಳ್- ಎಂಬ ಕ್ರಿಯಾಧಾತುವಿಗೆ ಭೂತಕಾಲದ ಪ್ರತ್ಯಯವೊಂದನ್ನು ಮತ್ತು ಪ್ರಥಮ ಪುರುಷ ತಟಸ್ಥಲಿಂಗದ(ನಪುಂಸಕ ಲಿಂಗ)ದ ಆಖ್ಯಾತ ಪ್ರತ್ಯಯವನ್ನು ಸೇರಿಸುವುದರಿಂದ ರೂಪುಗೊಂಡಿದೆ. ನಡುಗನ್ನಡದ ಹೆಚ್ಚು ಪ್ರಯೋಗಗಳು ಈ ಅಂಶವನ್ನು ನಮಗೆ ಸೂಚಿಸುತ್ತವೆ. ಮತ್ತೆ ಅಕ್ಕಮಹಾದೇವಿಯ ಎರಡು ಪ್ರಯೋಗಗಳನ್ನು ನೋಡೋಣ. 'ಹಸಿವಾದಡೆ ಭಿಕ್ಷಾನ್ನಗಳುಂಟು' ಮತ್ತು 'ನನ್ನಲ್ಲಿ ಏನುಂಟೆಂದು ಕರಸ್ಥಲದಲಿ ಇಂಬುಗೊಂಡೆ'. ಮೊದಲ ವಾಕ್ಯವನ್ನು ನಾವು ಅರಿಯುವುದು ಹೀಗೆ: (ನನಗೆ) ಹಸಿವಾದಡೆ ಭಿಕ್ಷಾನ್ನಗಳು (ತಿನ್ನಲು) ಉಂಟು. ಉಂಟು ರೂಪದ ಹಿಂದಿನ ಕ್ರಿಯಾಪದಕ್ಕೆ

ಭೂತನ್ಯೂನರೂಪ ಇರಬೇಕೆಂಬ ನಿಯಮ ಇಂದಿನ ಕನ್ನಡದಲ್ಲೂ ಇದೆ. ಆದರೆ ಈಗೀಗ ಉಂಟು ಬಳಸುವ ವಾಕ್ಯಗಳಲ್ಲಿ 'ನನಗೆ' (ಚತುರ್ಥಿ ವಿಭಕ್ತಿರೂಪ) ಎನ್ನುವ ಬದಲು 'ನಾನು' (ಪ್ರಥಮಾ ವಿಭಕ್ತಿರೂಪ)ವನ್ನು ಬಳಸುವುದುಂಟು. ಉದಾ.ಗೆ ಈ ವಾಕ್ಯಗಳನ್ನು ನೋಡಿ. 'ನನಗೆ ಮಾಡಲು ಕೆಲಸ ಉಂಟು';'ನಾನು ಮಾಡಲು ಕೆಲಸ ಉಂಟು'. ಆದರೆ ಎಲ್ಲ ಸಂದರ್ಭಗಳಲ್ಲೂ ಪ್ರಥಮಾ ವಿಭಕ್ತಿರೂಪ ಬಳಸಲು ಆಗುವುದಿಲ್ಲ. ಇನ್ನು ಅಕ್ಕನ ಎರಡನೆಯ ವಾಕ್ಯದಲ್ಲಿ ಇರುವ 'ನನ್ನಲ್ಲಿ'(ಸಪ್ತಮಿ ವಿಭಕ್ತಿರೂಪ) ಈಗ ಹೆಚ್ಚು ಬಳಕೆಯಾಗದೆ ಅದರ ಬದಲಿಗೆ 'ನನಗೆ' ರೂಪವೇ ನೆಲೆಯಾಗುತ್ತಿದೆ. 'ನನ್ನಲ್ಲಿ ಎರಡು ತೋಟ ಉಂಟು'; 'ನನಗೆ ಎರಡು ತೋಟ ಉಂಟು'

ಇದಲ್ಲದೆ ಉಂಟು ರೂಪದ ಒಳರಚನೆಯು ಈಗ ನಮಗೆ ಗೊತ್ತಿಲ್ಲ. ಅದನ್ನು ಒಂದು ಬಿಡಿಬಿಡಿಯಾಗಿ ಮಾಡಲಾಗದ ಪದವೆಂದು ತಿಳಿದಿದ್ದೇವೆ. ಅದನ್ನೀಗ ಕ್ರಿಯಾನಾಮ(ಪದ)ವೆಂಬಂತೆ ಬಳಸುತ್ತಿದ್ದೇವೆ. ಹಾಗಾಗಿ ಉಂಟಾದ, ಉಂಟಾಗು ಮುಂತಾದ ರಚನೆಗಳು ಈಗ ಕಾಣಸಿಗುತ್ತವೆ. ಈ ಬದಲಾದ ತಿಳುವಳಿಕೆಯಿಂದಾಗಿ 'ಉಂಟು' ಈಗ ಭೂತಕಾಲವನ್ನು ಸೂಚಿಸಲು ಮಾತ್ರ ಬಳಕೆಯಾಗಬೇಕೆಂಬ ಹಳೆಯ ನಿಯಮ ಕಳೆದುಹೋಗಿದೆ. ಇನ್ನು 'ಇದೆ' ಮತ್ತು 'ಉಂಟು' ಪದರೂಪಗಳು ಇಂದಿನ ಕನ್ನಡದಲ್ಲಿ ಬಳಕೆಯಾಗುತ್ತಿರುವ ಬಗೆ ಮತ್ತು ಆ ಬಳಕೆಯಲ್ಲಿರುವ ವ್ಯತ್ಯಾಸಗಳನ್ನೆಲ್ಲ ಇನ್ನೂ ವಿವರವಾಗಿ ನಾವು ಅಭ್ಯಾಸ ಮಾಡುವ ಅಗತ್ಯ ಉಂಟು ( ಅಥವಾ ಇದೆ).

**ಏಸು, ಯೇಸು, ಯೋಹಾನ**

ಮರಿ ಜೋಸೆಫ್ ಒಂದು ಪ್ರಶ್ನೆಯನ್ನು ಕೇಳಿದ್ದಾರೆ. ಯೇಸು ಎಂಬುದನ್ನು ಏಸು ಎಂದು ಬರೆಯುವುದು ರೂಢಿಯಲ್ಲಿದೆ. ಪದಾದಿಯ ಯಕಾರದ ಬದಲು ಎ ಸ್ವರವನ್ನು ಬರೆಯುವುದಾದರೆ ಯೋಹಾನ ಎಂಬ ಪದವನ್ನು ಹೇಗೆ ಬರೆಯಬೇಕು ಎನ್ನುವುದು ಅವರ ಪ್ರಶ್ನೆ. ಹಿಬ್ರೂ ಭಾಷೆಯ ಜೇಸು ಪದ ಇಂಡೋ ಯುರೋಪಿಯನ್ ಭಾಷೆಗಳಲ್ಲಿ ಜೀಸಸ್ ಆಗಿದೆ. ಪದಾದಿಯಲ್ಲಿ ಜಕಾರವನ್ನು ಬರೆದರೂ ಉಚ್ಚರಿಸುವಾಗ ಯಕಾರವಾಗಿಯೇ ಉಚ್ಚರಿಸಲಾಗುತ್ತದೆಂದು ಮರಿಜೋಸೆಫ್ ಹೇಳುತ್ತಾರೆ. ಯ ಮತ್ತು ಜ–ಈ ಎರಡು ಧ್ವನಿಗಳು ಉಚ್ಚಾರಣೆಯಾಗುವ ಜಾಗಗಳು ತುಂಬ ಹತ್ತಿರವಾಗಿವೆ. ಹಾಗಾಗಿ ಒಂದರ ಬದಲು ಇನ್ನೊಂದನ್ನು ಉಚ್ಚರಿಸುವುದು ಕಂಡುಬರುತ್ತದೆ. ಆದರೆ ಭಾರತದ ಮಧ್ಯ ಇಂಡೋ ಯುರೋಪಿಯನ್ ಭಾಷೆಗಳಲ್ಲಿ (ಇವು ಮೊದಲು ಪ್ರಾಕೃತ ನುಡಿಗಳಾಗಿದ್ದವು) ಸಂಸ್ಕೃತದ ಪದಗಳ ಪದಾದಿಯ ಯಕಾರವನ್ನು ಜಕಾರವನ್ನಾಗಿ ಬದಲಿಸಿಕೊಳ್ಳುವ ಬಗೆ ಇದೆ. ಯಮುನಾ/ಜಮುನಾ, ಯಜ್ಞ/ಜನ್ನ, ಯಾತ್ರಾ/ಜಾತ್ರಾ ಇವು ಉದಾಹರಣೆಗಳು. ಇಲ್ಲೆಲ್ಲಾ ಆ ಭಾಷೆಗಳಲ್ಲಿ ಬರವಣಿಗೆಯಲ್ಲೂ ಜಕಾರವನ್ನೇ ಬಳಸಲಾಗುವುದು. ಆದರೆ ಪದಾದಿಯ ಜಕಾರ ಎಲ್ಲಿಯೂ ಯಕಾರವಾದಂತಿಲ್ಲ. ಅಂದರೆ ಇದು ಒಂದು ದಿಕ್ಕಿನ ಬದಲಾವಣೆ.

ಕನ್ನಡದಲ್ಲಿ ಯೇಸು, ಯೆಹೋವಾ ಮತ್ತು ಯೆರಿಕೋ ಎಂಬ ಪದಗಳನ್ನು ಏಸು, ಎಹೋವಾ ಮತ್ತು ಎರಿಕೋ ಎಂದು ಬರೆಯುವ ಪ್ರವೃತ್ತಿ ಇದೆ. ಹಾಗಿದ್ದಲ್ಲಿ

ಜೋಸೆಫ್ (=ಯೋಸೆಫ್), ಜೊವಾನ್ನ (=ಯೊವಾನ್ನ) ಪದಗಳನ್ನು ಹೇಗೆ ಬರೆಯುವುದೆಂಬುದು ಮರಿಜೋಸೆಫ್ ಅವರ ಸಮಸ್ಯೆ. ಕನ್ನಡದಲ್ಲಿ ಪದಾದಿಯಲ್ಲಿರುವ ಎ/ಏ, ಇ/ಈ ಮತ್ತು ಅ ಗಳನ್ನು ಬರೆಯುವಾಗ ಯೆ/ಯೇ, ಯಿ/ಯೀ ಮತ್ತು ಯ ಎಂದು ಬರೆಯುವುದು ರೂಢಿಯಲ್ಲಿದೆ. ಕೆಲವು ಕಡೆಗಳಲ್ಲಿ ಪದಾದಿಯ ಈ ಸ್ವರಗಳನ್ನು ನುಡಿಯುವಾಗ ಯಕಾರ ಸೇರಿಸಿ ನುಡಿಯುವುದುಂಟು. ಅಪ್ಪ ಅಲ್ಲಿ ಯಪ್ಪ ಎಂದಾಗುತ್ತದೆ. ಎಲ್ಲಿ ಎಂಬುದು ಯೆಲ್ಲಿ ಎಂದಾಗುತ್ತದೆ. ಕನ್ನಡ ಶಾಸನ ಮತ್ತು ಹಸ್ತಪ್ರತಿಗಳನ್ನು ನೋಡಿದರೆ ಬರವಣಿಗೆಯಲ್ಲಿ ಪದಾದಿಯ ಈ ಸ್ವರಗಳನ್ನು ಯಕಾರ ಸೇರಿಸಿ ಬರೆಯುವುದು ವ್ಯಾಪಕವಾಗಿ ಬಳಕೆಯಲ್ಲಿದ್ದಂತೆ ತೋರುತ್ತದೆ. ಹೀಗೆಯೇ ಒ/ಓ ಮತ್ತು ಉ/ಊ ಸ್ವರಗಳಿಂದ ಮೊದಲಾಗುವ ಪದಗಳನ್ನು ಬರೆಯುವಾಗ ಕ್ರಮವಾಗಿ ವೊ/ವೋ ಮತ್ತು ವು/ವೂ ಎಂದು ಬರೆಯುವುದುಂಟು.ವತ್ತು(<ಒತ್ತು), ವೋಲೆ(=ಓಲೆ), ವುರಿ(=ಉರಿ), ವೂರು(=ವೂರು) ಇಂತಹ ಪದಗಳು. ಆ ಪದಗಳನ್ನು ಯಕಾರ ಸಹಿತ ಬರೆಯುವುದೇ ಸರಿಯಾದುದು.

ಆದರೆ ಪದಾದಿಯಲ್ಲಿ ಯಕಾರ ಇರುವ ಪದಗಳನ್ನು ನುಡಿಯುವಾಗ ಕನ್ನಡದ ಕೆಲವು ಪ್ರಭೇದಗಳಲ್ಲಿ ಯಕಾರವನ್ನು ಬಿಟ್ಟು ಅದರ ಮುಂದಿನ ಸ್ವರವನ್ನಷ್ಟೆ ಉಳಿಸಿಕೊಳ್ಳುವ ಇಲ್ಲವೇ ಯಕಾರದ ಬದಲು ವಕಾರವನ್ನು ನುಡಿಯುವ ಬಗೆ ಇದೆ. ಯಂತ್ರ>ಅಂತ್ರ, ಯೋಚನೆ>ಏಚ್ನೆ/ವೇಚ್ನೆ ಮುಂತಾದ ಉದಾಹರಣೆಗಳಿವೆ. ಆದರೆ ಈ ಪದಗಳನ್ನು ಬರೆಯುವಾಗ ಯಕಾರವನ್ನು ಬಿಟ್ಟು ಕೇವಲ ಸ್ವರವನ್ನು ಬರೆಯುವುದು ರೂಢಿಯಲ್ಲಿ ಇಲ್ಲ. ಆದ್ದರಿಂದ ಯೇಸು ಎಂದು ಬರೆಯಬೇಕಾದ ಪದವನ್ನು ಏಸು ಎಂದು ಬರೆಯುವುದೇ ಸರಿಯಾದುದಲ್ಲ. ಯಕಾರವನ್ನು ಬಿಟ್ಟು ಬರೆಯುವುದು ಕನ್ನಡ ಬರವಣಿಗೆಯ ರೂಢಿಗೆ ಸಲ್ಲುವ ಬಗೆಯಲ್ಲ. ಹೀಗಿರುವಾಗ ಯೋ,ಯು ನಿಂದ ಮೊದಲಾಗುವ ಹೆಸರುಗಳನ್ನು ಸ್ವರದಿಂದ ಮೊದಲಾಗುವಂತೆ ಬರೆಯುವ ಪ್ರಶ್ನೆಗೆ ಜಾಗವೇ ಇಲ್ಲವೆಂದು ತೋರುತ್ತದೆ.

**ಕಳ್ಳುಬುಸ**

ಓ.ಎಲ್.ನಾಗಭೂಷಣಸ್ವಾಮಿಯವರು ಈಚೆಗೆ ಮಾತಾಡುತ್ತ ತಮ್ಮ ಗಮನಕ್ಕೆ ಬಂದ ಒಂದು ಪದಪ್ರಯೋಗವನ್ನು ಕುರಿತು ಹೇಳಿದರು. **ಕಳ್ಳುಬುಸ** ಎಂಬುದೇ ಈ ಪದ. ಬಸುರಿ ಹೆಂಗಸಿಗೆ ತವರಿನಲ್ಲಿ ಮಾಡುವ ಒಂದು ಆಚರಣೆ ಇದು. ಇದಕ್ಕೆ ಕಳ್ಳ ಕುಬುಸ ಎಂದೇಕೇ ಹೇಳುತ್ತಾರೆಂಬುದು ತಲೆಕೆಡಿಸಿಕೊಳ್ಳುವ ಮಾತೇ ಸರಿ. ಆದರೆ ಬಳಿಕ ಅವರಿವರೊಡನೆ ಮಾತಾಡುವಾಗ ಅದು ಕರುಳ ಕುಬುಸ ಎಂಬ ಸಂಗತಿ ಸ್ವಾಮಿಯವರಿಗೆ ತಿಳಿಯಿತು. ಕರುಳ (=ಕರುಳಿನ) ಎಂಬ ಪದ ಕಳ್ಳ (ಕಳ್ಳುಬಳ್ಳಿ) ಎಂದು ನುಡಿಯಲ್ಲಿ ಬದಲಾಗುವುದು ಸಹಜವೇ ಸರಿ. ಪದದ ಅರ್ಥದ ಗೋಜಲೇನೋ ಬಿಟ್ಟುಕೊಂಡಿತು. ಆದರೆ ನಾವು ಗಮನಿಸಬೇಕಾದ ಇನ್ನೊಂದು ಸಂಗತಿ ಇಲ್ಲಿದೆ. ಕಳ್ಳ(<ಕರುಳು) ಮತ್ತು ಕಳ್ಳ (=ಅಪಹರಿಸುವಾತ) ಎಂಬ ಪದಗಳನ್ನು ಒಂದೇ ರೀತಿ ಬರೆದರೂ ನಾವು ನುಡಿಯುವ ಬಗೆಗಳು ಬೇರೆಬೇರೆಯಾಗಿವೆ. ಕ್ ವ್ಯಂಜನದ ಅನಂತರದ ಸ್ವರವನ್ನು ಎರಡೂ ಪದಗಳಲ್ಲಿ ಒಂದೇ ರೀತಿಯಲ್ಲಿ ನುಡಿಯುವುದಿಲ್ಲ.

ಇವೆರಡೂ ಬೇರೆಬೇರೆ ಸ್ವರಗಳು. ಆದರೆ ಬರೆಯಲು ಒಂದೇ ಚಿಹ್ನೆಯನ್ನು ಬಳಸುತ್ತೇವೆ. ಈ ಎರಡೂ ಸ್ವರಗಳು ನಮ್ಮ ಕನ್ನಡದ ಹಲವು ಪದಜೋಡಿಗಳಲ್ಲಿ ಇವೆ. ಅತ್ತೆ(=ಗಂಡನ/ಹೆಂಡತಿಯ ತಾಯಿ)/ಅತ್ತೆ(=ಕಣ್ಣೀರಿಟ್ಟೆ), ತಂದೆ(=ಅಪ್ಪ)/ತಂದೆ(=ತೆಗೆದುಕೊಂಡು ಬಂದೆ), ಕರಿ(=ಕೂಗು)/ಕರಿ(=ಕಪ್ಪು), ಕತ್ತಿ(=ಹೊರೆಹೊರುವ ಪ್ರಾಣಿಯನ್ನು ಗುಲ್ಬರ್ಗದ ಕಡೆ ಹೀಗೆ ಕರೆಯುತ್ತಾರೆ)/ಕತ್ತಿ(=ಕತ್ತರಿಸುವ ಸಾಧನ) ಹೀಗೆ ಹಲವು ಪದಜೋಡಿಗಳನ್ನು ನೋಡಬಹುದು. ನುಡಿಯುವಾಗ ನಾವು ಎಚ್ಚರದಿಂದಲೇ ಮೊದಲ ಸ್ವರವನ್ನು ಎರಡೂ ಪದಗಳಲ್ಲಿ ಬೇರೆ ಬೇರೆಯಾಗಿಯೇ ನುಡಿಯುತ್ತೇವೆ ಬರೆಯುವಾಗ ಮಾತ್ರ ಒಂದೇ ರೀತಿ ಬರೆಯುತ್ತೇವೆ. ಕಳ್ಳುಬುಸ ಪದವನ್ನು ನುಡಿಯುವಾಗ ಮೊದಲ ಸ್ವರವನ್ನು ಸರಿಯಾಗಿ ಗ್ರಹಿಸದಿದ್ದರೆ ಅರ್ಥದ ಗೊಂದಲವುಂಟಾಗುತ್ತದೆ.

**ಐ ಮತ್ತು ಔ**

ದೊಡ್ಡಪ್ಪ. ಶಿ. ಕೋರೆ (ಇಂಡಿ, ಬಿಜಾಪುರ ಜಿ.) ಇವರಿಗೆ ಒಂದು ಗೊಂದಲ ಉಂಟಾಗಿದೆ. ಕನ್ನಡದ ಐ ಮತ್ತು ಔ ದನಿಗಳು ಹೇಗೆ ಮೈತಳೆದಿವೆ ಎನ್ನುವುದನ್ನು ಅವರು ತಿಳಿಯಬೇಕಿದೆ. ಅ ಮತ್ತು ಇ ದನಿಗಳ ಸೇರ್ಪಡೆಯಿಂದ ಐ/ ಅ ಮತ್ತು ಉ ದನಿಗಳ ಸೇರ್ಪಡೆಯಿಂದ ಔ ಎಂಬ ದನಿಗಳು ಉಂಟಾಗುತ್ತವೆಂದು ಅವರ ಪಠ್ಯ ಪುಸ್ತಕಗಳು ಹೇಳುತ್ತಿವೆ. ಆದರೆ ಬೇರೊಂದು ಮೂಲದಲ್ಲಿ ಅ ಮತ್ತು ಏ ದನಿಗಳ ಸೇರ್ಪಡೆಯಿಂದ ಐ/ ಅ ಮತ್ತು ಓ ದನಿಗಳ ಸೇರ್ಪಡೆಯಿಂದ ಔ ದನಿಗಳು ಉಂಟಾಗುತ್ತವೆಂದು ಹೇಳಿರುವುದನ್ನು ಗಮನಿಸಿ ಯಾವುದು ಸರಿ ಎಂದು ಕೇಳಿದ್ದಾರೆ. ಕನ್ನಡದ ಮಟ್ಟಿಗೆ ಹೇಳುವುದಾದರೆ ಮೊದಲ ವಿವರಣೆಯೇ ಸರಿ. ಆದರೆ ಈ ದನಿಗಳು ಸಂಸ್ಕೃತದಲ್ಲಿಯೂ ಇವೆ. ಸಂಸ್ಕೃತದ ಮಟ್ಟಿಗೆ ಎರಡನೆಯ ವಿವರಣೆ ಹೊಂದಿಕೊಳ್ಳಬಹುದು. (ಸಂಸ್ಕೃತದಲ್ಲಿ ಹ್ರಸ್ವ ಎ ಮತ್ತು ಒ ಗಳು ಇಲ್ಲ ಎನ್ನುವುದನ್ನು ಗಮನಿಸಬೇಕು) ಈ ವ್ಯತ್ಯಾಸವನ್ನು ಗುರುತಿಸಲು ಒಂದು ಹಾದಿ ಇದೆ. ಒಂದೇ ಪದವನ್ನು ಕನ್ನಡದವರು ಮತ್ತು ಹಿಂದಿ ಭಾಷಿಕರು ಬೇರೆಬೇರೆ ಬಗೆಯಲ್ಲಿ ನುಡಿಯುವುದನ್ನು ನೋಡಬಹುದು. ಉದಾ.ಗೆ ವೈಜ್ಞಾನಿಕ ಎಂಬ ಪದದಲ್ಲಿ ಐ (ವೈ) ದನಿಯನ್ನು ಕನ್ನಡಿಗರು **ವಯ್** ಎಂಬಂತೆ ನುಡಿದರೆ ಹಿಂದಿ ಭಾಷಿಕರು **ವೆಯ್** ಎಂಬಂತೆ ನುಡಿಯುತ್ತಾರೆ. ಅದೇನೇ ಇರಲಿ. ಕನ್ನಡದ ಮಟ್ಟಿಗೆ ಐ ಮತ್ತು ಔ ದನಿಗಳು ಅಕಾರಕ್ಕೆ ಕ್ರಮವಾಗಿ ಇ ಮತ್ತು ಉ ಗಳು ಸೇರುವುದರಿಂದ ಉಂಟಾಗುತ್ತವೆಂದು ಹೇಳುವುದೇ ಸರಿ.

**ಅಮಾತ್ರ**

ಗೀತಾ ಶಂಕರ ಪಾಟೀಲ (ಬೀದರ್) ಇವರು **'ಅಮಾತ್ರ'** ಎಂಬ ಪದ ಬಳಕೆ ಸರಿಯೇ ಎಂಬ ಪ್ರಶ್ನೆ ಕೇಳಿದ್ದಾರೆ. ಇದು ಒಂದು ಕೃತಿಯ ಹೆಸರೆಂದು ಹೇಳಿದ್ದಾರೆ. ಅಮಾತ್ರ ಸಂಸ್ಕೃತ ಪದ. ಮೇರೆಯಿಲ್ಲದ್ದು, ಸೀಮೆಗಳಿಲ್ಲದ್ದು ಎಂಬ ತಿರುಳಿದೆ. ಛಂದೋಬದ್ಧವಲ್ಲದ್ದು ಎಂಬ ತಿರುಳಿನಲ್ಲೂ ಬಳಸುವುದುಂಟು. ಇಂದ್ರನಿಗೂ ಈ ಹೆಸರಿದೆಯೆಂದು ಹೇಳಲಾಗಿದೆ. ಈ ಪದ, **ಮಾತ್ರ ಎಂಬುದಕ್ಕೆ ನಿಷೇಧ ಪ್ರತ್ಯಯ ಅ- ಸೇರಿದ್ದರಿಂದ ಉಂಟಾಗಿದೆ ಎಂದು ತಿಳಿಯಬಾರದು**. ಈ ಹೆಸರಿನ ಕೃತಿಯ ಬರಹಗಾರರು ಏಕೆ ಈ ಹೆಸರಿಟ್ಟರೋ ಅದನ್ನು ಹೇಳುವುದು ಇಲ್ಲಿ ಆಗದ ಮಾತು.

**ಸಂಪೂರ್ಣ ಉಚಿತ**

ವೆಂಕಟಪ್ಪ (ದಾಳಿಂಬ, ಕನಕಪುರ) ಇವರು ಜಾಹಿರಾತುಗಳಲ್ಲಿ 'ಸಂಪೂರ್ಣ ಉಚಿತ ಎಂದೇಕೇ ಬರೆಯುತ್ತಾರೆ ಉಚಿತ ಎಂದರೆ ಸಾಕಲ್ಲವೇ' ಎಂದು ಕೇಳಿದ್ದಾರೆ. ಸರಿ; ಉಚಿತ ಎಂದು ಹೇಳಿದರೆ ಸಾಕಾಗುತ್ತದೆ. ಕೊಳ್ಳುವವರನ್ನು ಸೆಳೆಯಲು ಹೀಗೆ ಹೆಚ್ಚುವರಿಯಾಗಿ ಸಂಪೂರ್ಣ ಎಂದು ಸೇರಿಸಿರಬಹುದು; ಇಲ್ಲವೇ ಇಂಗ್ಲಿಶಿನಲ್ಲಿದ್ದ ಟೋಟಲಿ/ ಕಂಪ್ಲಿಟ್ಲೀ ಫ್ರೀ ಎಂಬುದನ್ನು ಕನ್ನಡದಲ್ಲಿ ಹೇಳಲು ಈ ಹಾದಿ ಹಿಡಿದಿರಲೂ ಬಹುದು. ಈ ಉಚಿತ ಎಂಬ ಪದಕ್ಕೆ ಕನ್ನಡದಲ್ಲಿ ಇನ್ನೊಂದು ತಿರುಳಿನ ಬಳಕೆ ಇದೆ. ' ಗಾಯಾಳುಗಳಿಗೆ ಉಚಿತ ಚಿಕಿತ್ಸೆ ಒದಗಿಸುವುದಾಗಿ ಸಚಿವರು ಹೇಳಿದರು' ಮತ್ತು ' ಸಕಾಲದಲ್ಲಿ ಉಚಿತ ಚಿಕಿತ್ಸೆ ದೊರೆಯದೆ ರೋಗಿ ಮೃತರಾದರು' ಎಂಬ ಎರಡೂ ವಾಕ್ಯಗಳನ್ನು ಓದಿ. ಎರಡೂ ಕಡೆ ಉಚಿತ ಎಂಬುದಕ್ಕೆ ಬೇರೆ ಬೇರೆ ತಿರುಳುಗಳಿವೆ. ಮೊದಲ ವಾಕ್ಯದಲ್ಲಿ **ವೆಚ್ಚವಿಲ್ಲದ, ಪುಕ್ಕಟೆ** ಎಂಬ ತಿರುಳಿದೆ. ಎರಡನೆಯ ವಾಕ್ಯದಲ್ಲಿ **ತಕ್ಕ, ಸರಿಯಾದ** ಎಂಬ ತಿರುಳುಗಳಿವೆ. ಅನುಚಿತ ಎಂಬ ನಿಷೇಧ ಸೂಚಕ ಪದದಲ್ಲಿ ಉಚಿತ ಪದಕ್ಕೆ ಎರಡನೆಯ ತಿರುಳಿನ ಬಳಕೆಯಿದೆ. ಔಚಿತ್ಯ ಎಂಬ ನಾಮರೂಪದಲ್ಲಿಯೂ ಹೀಗೆಯೇ. ಅಂದರೆ ಉಚಿತ ಪದಕ್ಕೆ ಪುಕ್ಕಟೆ ಎಂಬ ತಿರುಳಿನ ಬಳಕೆ ಮಿತವಾಗಿದೆ; ವ್ಯಾಪಾರ ವ್ಯವಹಾರಗಳಲ್ಲಿ ಮಾತ್ರ ಬಳಕೆಯಾಗುವಂತಿದೆ.

**ವಾಕ್ಯಗಳ ತಿರುಳಿನಲ್ಲಿ ವ್ಯತ್ಯಾಸ**

ಈ ಮುಂದಿನ ಎರಡು ವಾಕ್ಯಗಳನ್ನು ಓದಿರಿ. 1. ಊರ ತುಂಬ ಕಳ್ಳರಿದ್ದಾರೆ 2. ಊರಲ್ಲಿ ತುಂಬ ಕಳ್ಳರಿದ್ದಾರೆ. ಈ ಎರಡೂ ವಾಕ್ಯಗಳ ತಿರುಳಿನಲ್ಲಿ ವ್ಯತ್ಯಾಸವಿದೆ. ಎರಡರಲ್ಲೂ ತುಂಬ ಪದದ ಕೆಲಸ ಬೇರೆಬೇರೆ. ಮೊದಲ ವಾಕ್ಯದಲ್ಲಿ ತುಂಬ ಎನ್ನುವುದು ಊರು ಪದದೊಡನೆ ನಂಟು ಹೊಂದಿದೆ. ಎರಡನೆಯ ವಾಕ್ಯದಲ್ಲಿ ಅದು ಒಂದು ಗುಣಪದದಂತೆ ಕೆಲಸಮಾಡುತ್ತಿದ್ದು ಕಳ್ಳರಿದ್ದಾರೆ ಎಂಬ ಕ್ರಿಯಾಪದ ಕಂತೆಯೊಡನೆ ನಂಟು ಹೊಂದಿದೆ. ಎರಡನೆಯ ವಾಕ್ಯದಲ್ಲಿ ತುಂಬ ಎನ್ನುವುದು ಪ್ರಮಾಣವನ್ನು ಹೇಳುತ್ತಿದೆ.(ಸಂಖ್ಯೆಯಲ್ಲಿ ಹೆಚ್ಚು ಎಂಬಂತೆ) ಮೊದಲ ವಾಕ್ಯದಲ್ಲಿ ಅದು ಹೆಚ್ಚಾಗಿ ಹರಡಿಕೊಂಡಿರುವುದನ್ನು ಹೇಳುತ್ತಿದೆ. (ತುಂಬ ಎನ್ನುವುದು ತುಂಬು ಎಂಬ ಕ್ರಿಯಾಪದದಿಂದ ರೂಪುಗೊಂಡಿದೆ)

**ಕನ್ನಡ ಬರವಣಿಗೆಯಲ್ಲಿ ಕಾಣುವ ಮತ್ತಷ್ಟು ತಪ್ಪುಗಳು**

ಕನ್ನಡ ಬರವಣಿಗೆಯಲ್ಲಿ ಕಾಣುವ ಮೂರನೆ ಬಗೆಯ ತಪ್ಪುಗಳನ್ನು ಈ ಟಿಪ್ಪಣಿಯಲ್ಲಿ ನೋಡೋಣ. ಇವು ವಾಕ್ಯಗಳನ್ನು ಕಟ್ಟುವಾಗ ಆಗುವ ತಪ್ಪುಗಳು. ಕನ್ನಡವನ್ನು ಮೊದಲನೆಯ ನುಡಿಯನ್ನಾಗಿ ಕಲಿತವರು ವಾಕ್ಯಗಳ ಕಟ್ಟುಗಳಲ್ಲಿ ತಪ್ಪುಗಳನ್ನು ಮಾಡುವುದಿಲ್ಲ. ಆದರೆ ಉದ್ದದ ವಾಕ್ಯಗಳನ್ನು ಬರೆಯುವಾಗ ,ಹಲವು ವಾಕ್ಯಗಳನ್ನು ಒಗ್ಗೂಡಿಸಿ ಒಂದೇ ವಾಕ್ಯವನ್ನಾಗಿ ಕಟ್ಟುವಾಗ ಗೊತ್ತಿಲ್ಲದಂತೆ ಕೆಲವು ತಪ್ಪುಗಳು ಆಗುತ್ತವೆ. ಈ ವಾಕ್ಯವನ್ನು ನೋಡಿ: **ಮೆಚ್ಚಿನ ಶಿಷ್ಯರಿಗೆ ಅಭಿನಂದನೆ ಸಲ್ಲಿಸಲು ಇದೊಂದು ಸುವರ್ಣಾವಕಾಶ**. ಯಾರೋ ಗುರುಗಳಿಗೆ ಅಭಿನಂದನೆ ಸಲ್ಲಿಸುವ ಅವಕಾಶ ಅವರಿಂದ

ಪಾಠ ಕಲಿತ ಶಿಷ್ಯರಿಗೆ ದೊರಕಿದೆ ಎಂದು ಹೇಳುವುದು ವಾಕ್ಯ ಬರೆದವರು ಬಯಸುವ ತಿರುಳಾಗಿದೆ. ಆದರೆ ತಮ್ಮಿಂದ ಕಲಿತ ಮೆಚ್ಚಿನ ಶಿಷ್ಯರಿಗೆ ಅಭಿನಂದನೆ ಸಲ್ಲಿಸಲು ಗುರುಗಳಿಗೆ ಇದೊಂದು ಒಳ್ಳೆಯ ಅವಕಾಶ ಎನ್ನುವ ತಿರುಳೂ ಈ ವಾಕ್ಯಕ್ಕೆ ದೊರಕುವಂತಾಗಿದೆ. ಅಭಿನಂದನೆ ಪಡೆಯುವವರು ಯಾರು ಎನ್ನುವುದನ್ನು ವಾಕ್ಯದಲ್ಲಿ ಹೇಳದಿರುವುದರಿಂದ ಈ ಗೋಜಲು ಉಂಟಾಗಿದೆ. **ಗುರುಗಳಿಗೆ ಅಭಿನಂದನೆ ಸಲ್ಲಿಸಲು ಮೆಚ್ಚಿನ ಶಿಷ್ಯರಿಗೆ ಇದೊಂದು ಸುವರ್ಣಾವಕಾಶ** ಎಂದು ಬರೆದರೆ ಗೊಂದಲ ಇಲ್ಲವಾಗುತ್ತದೆ.

ಹೀಗೇಕೆ ಆಗುತ್ತದೆ ಎನ್ನುವುದನ್ನು ತಿಳಿಯೋಣ. ವಾಕ್ಯದಲ್ಲಿ ಪದಗಳಿರುತ್ತವೆ. ಈ ಪದಗಳು ಎಷ್ಟಿರಬಹುದು? ಒಂದರಿಂದ ಮೊದಲಾಗಿ ಎಷ್ಟು ಬೇಕಾದರೂ ಇರಬಹುದು. ನಲವತ್ತು ಐವತ್ತು ಪದಗಳಿರುವ ವಾಕ್ಯಗಳನ್ನೂ ನಾವು ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಹೀಗೆ ಪದಗಳು ಸುಮ್ಮನೆ ಸಾಲಾಗಿ ಒಗ್ಗೂಡಿದರೆ ವಾಕ್ಯಗಳಾಗುವುದಿಲ್ಲ. ಆ ಪದಗಳು ತಮ್ಮಲ್ಲೇ ಒಳಗುಂಪುಗಳನ್ನು ಮಾಡಿಕೊಂಡಿರುತ್ತವೆ. ಆ ಗುಂಪುಗಳನ್ನು **ಪದಕಂತೆಗಳು** ಎನ್ನೋಣ. ವಾಕ್ಯವೆಂದರೆ ಪದಕಂತೆಗಳ ಜೋಡಣೆ. ಈ ಮುಂದಿನ ವಾಕ್ಯವನ್ನು ಓದಿ: **ನಮ್ಮ ಮನೆಗೆ ನಿನ್ನೆ ಮೈಸೂರಿನಿಂದ ನಂಟರು ಬಂದರು.** ಈ ವಾಕ್ಯದಲ್ಲಿ ಇರುವ **ನಮ್ಮ** ಎಂಬ ಪದವನ್ನು ವಾಕ್ಯದಲ್ಲಿ ಅದು ಇರುವ ಜಾಗದಿಂದ ಬದಲಿಸಿ ಬೇರೆ ಕಡೆ ಇರಿಸಲು ನೋಡಿ. ಹಾಗೆ ಮಾಡಲು ಅಗುವುದಿಲ್ಲ ಎನ್ನುವುದು ಗೊತ್ತಾಗುತ್ತದೆ. ಹಾಗೆಯೇ ಅದರಲ್ಲೇ ಇರುವ **ನಿನ್ನೆ** ಎಂಬ ಪದವನ್ನು ಈಗ ಅದು ಇರುವ ಜಾಗದಿಂದ ತೆಗೆದು ಬೇರೆ ಕಡೆ ಇರಿಸಲು ನೋಡಿ. ಆ ಪದವನ್ನು ವಾಕ್ಯದಲ್ಲಿ ಎಲ್ಲಿ ಬೇಕಾದರೂ ಇರಿಸಬಹುದಾದರೂ **ನಮ್ಮ** ಮತ್ತು **ಮನೆಗೆ** ಎಂಬ ಎರಡು ಪದಗಳ ನಡುವೆ ಇರಿಸಲು ಆಗುವುದಿಲ್ಲ ಎನ್ನುವುದು ತಿಳಿಯುತ್ತದೆ. ಅಂದರೆ **ನಮ್ಮ** ಮತ್ತು **ಮನೆ** ಎಂಬ ಎರಡು ಪದಗಳು ತಮ್ಮಲ್ಲೇ ಒಂದು ಒಳಗುಂಪನ್ನು ಮಾಡಿಕೊಂಡಿವೆ. ಇದೊಂದು ಪದಕಂತೆ. ವಾಕ್ಯದಲ್ಲಿ ಪದಕಂತೆಗಳು ಯಾವುವು ಅವುಗಳನ್ನು ಹೇಗೆ ಕಟ್ಟಲಾಗುತ್ತದೆ ಎನ್ನುವುದನ್ನು ವಾಕ್ಯಗಳನ್ನು ನುಡಿಯುವವರಿಗೆ /ಬರೆಯುವವರಿಗೆ ತಿಳಿದಿರುತ್ತದೆ. ಆದರೆ ಉದ್ದದ ವಾಕ್ಯಗಳನ್ನು, ಒಗ್ಗೂಡಿಸಿದ ವಾಕ್ಯಗಳನ್ನು ನುಡಿಯುವಾಗ/ಬರೆಯುವಾಗ ಈ ಜೋಡಣೆಯ ಲೆಕ್ಕಾಚಾರ ತಪ್ಪುವುದುಂಟು. ಆಗ ಸರಿಯೆಂದು ತೋರದ ವಾಕ್ಯಗಳು ಕಾಣಿಸಿಕೊಳ್ಳುತ್ತವೆ.

ಈ ಮುಂದಿನ ಉದ್ದದ ವಾಕ್ಯವನ್ನು ಓದಿರಿ: **ನಿನ್ನೆ ಮುಂಬೈ ವಿಮಾನ ನಿಲ್ದಾಣದಲ್ಲಿ ದುಬೈನಿಂದ ಬಂದಿಳಿದ ವಿಮಾನದಲ್ಲಿ ಪ್ರಯಾಣಿಸುತ್ತಿದ್ದ ನಾಲ್ವರು ಪ್ರಯಾಣಿಕರ ಬಳಿ ಕ್ರಮಬದ್ಧವಾದ ದಾಖಲೆಗಳಿರದುದ್ದನ್ನು ಗುರುತಿಸಿದ ಪೋಲಿಸ್ ಅಧಿಕಾರಿಗಳು ಅವರನ್ನು ತಪಾಸಣೆ ಮಾಡಬೇಕೆಂದು ಬಂಧಿಸಿ ಮುಂದಿನ ತನಿಖೆಗೆ ಒಳಪಡಿಸಲು ಅನುಮತಿ ನೀಡಬೇಕೆಂದು ಕೋರಲು ಕೂಡಲೇ ಮಾಜಿಸ್ಟ್ರೇಟರ ಮುಂದೆ ಹಾಜರು ಪಡಿಸುವುದಾಗಿ ಹೇಳಿದ್ದಾರೆ.** ಈ ಉದ್ದದ ವಾಕ್ಯದಲ್ಲಿ ಕೊನೆಯಲ್ಲಿರುವ ಇಡಿ ಕೆಲಸಪದ (ಹೇಳಿದ್ದಾರೆ)ವಲ್ಲದೆ ಹತ್ತು ಇಡಿಯಲ್ಲದ ಕೆಲಸಪದಗಳು ಇವೆ. ಅಂದರೆ ಈ ಉದ್ದದ ವಾಕ್ಯ ಹತ್ತು ಬೇರೆಬೇರೆ ಕೆಲಸಗಳನ್ನು ಒಂದೇ ವಾಕ್ಯದಲ್ಲಿ ಸೇರಿಸುವ ಗುರಿಯನ್ನು ಹೊಂದಿದೆ. ಇಡಿಯಲ್ಲದ ಕೆಲಸಪದಗಳು ವಾಕ್ಯದಲ್ಲಿ ಎಲ್ಲೆಂದರಲ್ಲಿ ಕಾಣಿಸಿಕೊಳ್ಳಲು ಆಗುವುದಿಲ್ಲ. ಅವುಗಳಿಗೆ ನಿಗದಿಯಾದ ಜಾಗದಲ್ಲಿ ಮಾತ್ರ ಅವು ಬರಬೇಕು. ಮೇಲೆ ಹೇಳಿದ ವಾಕ್ಯದಲ್ಲಿ ಇರುವ **ಬಂದಿಳಿ, ಪ್ರಯಾಣಿಸು, ಗುರುತಿಸು, ಬಂಧಿಸು, ಕೋರು, ಒಳಪಡಿಸು**

ಮುಂತಾದ ಇಡಿಯಲ್ಲದ ಕ್ರಿಯಾಪದಗಳ ಜಾಗವನ್ನು ಈಗ ಅವು ಇರುವ ಜಾಗದಿಂದ ಬದಲಿಸಲು ಆಗುವುದೇ ನೋಡಿರಿ. ಇಷ್ಟು ಉದ್ದದ ವಾಕ್ಯಗಳನ್ನು ಬರೆಯುವಾಗ, ಒಂದು ಕೆಲಸವನ್ನು, ಅದು ಒಳಗೊಂಡಿರುವ ಬೇರೆ ಬೇರೆ ಒಳಗೆಲಸಗಳನ್ನು ಜೊತೆಯಲ್ಲಿ ಹೇಳುವಾಗ ನಮ್ಮ ಗಮನದಲ್ಲಿ ಕೊಂಚ ಏರುಪೇರಾದರೂ ವಾಕ್ಯಗಳು ಕಟ್ಟುಗಳನ್ನು ಕಳೆದುಕೊಳ್ಳುತ್ತವೆ. ಅಂದರೆ ವಾಕ್ಯಗಳಲ್ಲಿ ಆಗುವ ತಪ್ಪುಗಳಿಗೆ ಸೊಲ್ಲರಿಮೆಯ (=ವ್ಯಾಕರಣದ) ಕಟ್ಟುಗಳನ್ನು ಸರಿಯಾಗಿ ತಿಳಿದುಕೊಳ್ಳದಿರುವುದು ಕಾರಣವಲ್ಲ; ಬದಲಿಗೆ ನಾವು ಆ ವಾಕ್ಯದ ಗತಿಯನ್ನು ಯೋಚಿಸುವ ಅದನ್ನು ಹೇಳುವ/ಬರೆಯುವ ಬಗೆಯಲ್ಲಿ ಆಗುವ ತಪ್ಪುಗಳೇ ಕಾರಣವೆಂದು ಗೊತ್ತಾಗುತ್ತದೆ. ಹಾಗಾಗಿ ನುಡಿಯನ್ನು ಕಲಿತವರು ತಪ್ಪುವಾಕ್ಯಗಳನ್ನು ಬರೆಯಲು ಅವರು ಆ ನುಡಿಯನ್ನು ಸರಿಯಾಗಿ ಕಲಿಯದಿರುವುದೇ ಕಾರಣವೆಂದು ಹೇಳುವುದು ತಪ್ಪಾಗುತ್ತದೆ. ಬದಲಿಗೆ ಕಲಿಕೆಯು ಅವರಲ್ಲಿ ರೂಢಿಸಿರಬೇಕಿದ್ದ ಯೋಚಿಸುವ, ಯೋಚಿಸಿದ್ದನ್ನು ಸರಿಯಾಗಿ ಜೋಡಿಸುವ ಚಳಕವನ್ನು ಅಚ್ಚುಕಟ್ಟಾಗಿ ಬೆಳೆಸದಿರುವುದೇ ಕಾರಣವೆಂದು ತಿಳಿಯಬೇಕು.

**ಮುಸುಕಿನ ಅನುವಾದದ ಹಾದಿಯಲ್ಲಿ**

ದಿನವೂ ನಮಗೆ ಪತ್ರಿಕೆಗಳಲ್ಲಿ ಓದಲು ಸಿಗುವ ಕೆಲವು ಇಂತಹ ವಾಕ್ಯಗಳನ್ನು ನೋಡಿ. 'ಲಾರಿ ಉರುಳಿ ಮೂವರ ಸಾವು, ಇಬ್ಬರ ಪರಿಸ್ಥಿತಿ **ಗಂಭೀರ**', '**ಗಂಭೀರ** ಪರಿಸ್ಥಿತಿಯನ್ನು ನಿಯಂತ್ರಿಸಲು ಪೋಲಿಸ್ ಪಡೆಯನ್ನು ರವಾನಿಸಲಾಗಿದೆ.', 'ದಿನದ ತಾಪಮಾನದಲ್ಲಿ **ತೀವ್ರ** ಹೆಚ್ಚಳ', 'ಶೇರು ಪೇಟೆಯ **ತೀವ್ರ** ಕುಸಿತವನ್ನು ತಡೆಯಲು ಕ್ರಮ ಕೈಗೊಳ್ಳಲಾಗುವುದು' ಈ ವಾಕ್ಯಗಳಲ್ಲಿ ಬಳಕೆಯಾಗಿರುವ 'ಗಂಭೀರ' ಮತ್ತು 'ತೀವ್ರ' ಎಂಬ ಪದಗಳನ್ನು ನೋಡಿ. ಇವು ವಿಶೇಷಣಗಳಾಗಿ ಬಳಕೆಯಾಗಿವೆ. ಈ ವಾಕ್ಯಗಳು ಕನ್ನಡದಲ್ಲಿವೆಯಾದರೂ ಇವು ಬಣ್ಣಿಸುವ ಬಗೆ ಮಾತ್ರ ಕನ್ನಡದ್ದಲ್ಲ. ಇಂಗ್ಲಿಶಿನ ವಾಕ್ಯರಚನೆಯ ಹಾದಿಯನ್ನು ಇರುವಂತೆಯೇ ಅನುಕರಿಸಿರುವುದರಿಂದ ಈ ಬಗೆಯ ವಾಕ್ಯಗಳು ಕನ್ನಡದಲ್ಲಿ ಮೈದಳೆಯುತ್ತವೆ. ಗಂಭೀರ ಮತ್ತು ತೀವ್ರ ಎಂಬ ಪದಗಳ ತಿರುಳೇನು? ಅದನ್ನು ತಿಳಿಯಲು ಇಂಗ್ಲಿಶ್ ವಾಕ್ಯಗಳ ನೆಲೆಗೆ ಹೋಗಬೇಕು. ಕನ್ನಡವು ಸಮೂಹ ಮಾಧ್ಯಮಗಳಲ್ಲಿ ಹೀಗೆ ಮುಸುಕಿನ ಅನುವಾದದ ಹಾದಿಯಲ್ಲಿ ನಡೆಯುತ್ತಿದೆ. ಇಂತಹ ಇನ್ನೂ ಕೆಲವು ವಾಕ್ಯಗಳನ್ನು ನೋಡಿ: 'ಶ್ರೀಯುತರು ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿ ಮಂಡಳವನ್ನು **ಮುನ್ನಡೆಸುತ್ತಿದ್ದಾರೆ**'. 'ಈ ಸಮಸ್ಯೆಯ ಮೇಲೆ **ಬೆಳಕು ಚೆಲ್ಲಲು** ಇನ್ನೂ ಸಾಧ್ಯವಾಗಿಲ್ಲ.' 'ಪರಿಹಾರ ಕಾರ್ಯಗಳು **ಸಮರೋಪಾದಿಯಲ್ಲಿ** ನಡೆಯುತ್ತಿವೆ', 'ಭ್ರಷ್ಟಾಚಾರವನ್ನು ಕುರಿತ ವರದಿಗಳು ಈಗ **ಸಾಮಾನ್ಯವಾಗಿ** ಬಿಟ್ಟಿವೆ.' ಈ ವಾಕ್ಯಗಳಲ್ಲಿ ಮುನ್ನಡೆಸು, ಬೆಳಕುಚೆಲ್ಲು, ಸಮರೋಪಾದಿ ಮತ್ತು ಸಾಮಾನ್ಯವಾಗು ಎಂಬ ಪದರಚನೆಗಳು ನಾನು ಮೊದಲಲ್ಲಿ ಹೇಳಿದ ಮುಸುಕಿನ ಅನುವಾದದ ಹಾದಿಯಲ್ಲಿ ಮೈತಳೆದಿವೆ.

ವರದಿ, ವಿಶ್ಲೇಷಣೆಗಳನ್ನು ಬರೆಯುವವರು ತಮ್ಮ ಬರವಣಿಗೆಗೆ ಇಂಗ್ಲಿಶ್ ಆಕರಗಳನ್ನು ಬಳಸುವ ಜೊತೆಗೆ ಇಂಗ್ಲಿಶ್ ನುಡಿಗಟ್ಟನ್ನೂ ಹಿಂಬಾಲಿಸುತ್ತಾರೆ. ಆ ನುಡಿಗಟ್ಟುಗಳನ್ನು ಕನ್ನಡದಲ್ಲಿ ಹೇಳುವಾಗ ಹೆಚ್ಚಾಗಿ ಸಂಸ್ಕೃತ ಪದರಚನೆಗೆ

ಮೊರೆಹೋಗುತ್ತಾರೆ. ಕೆಲವೊಮ್ಮೆ ಕನ್ನಡಪದಗಳನ್ನು ಬಳಸುವುದೂ ಉಂಟು. ಕನ್ನಡ ವಾಕ್ಯಗಳಲ್ಲಿ ನೆಲೆ ನಿಲ್ಲುತ್ತಿರುವ ಈ ನುಡಿಗಟ್ಟುಗಳು ಕನ್ನಡನುಡಿಯ ಚಹರೆಗೆ ಹೊಂದಿಕೊಳ್ಳಲಾರವು. ಈ ವಾಕ್ಯಗಳನ್ನು ಗಟ್ಟಿಯಾಗಿ ಓದಿಕೊಂಡರೆ ಸಮಸ್ಯೆ ಏನೆಂಬುದು ಗೊತ್ತಾಗುತ್ತದೆ. ಈಚೆಗೆ ಟಿವಿ ಮಾಧ್ಯಮಗಳ ವರದಿಗಾರರು ಬಾಯಿ ಮಾತಿನಲ್ಲೂ ಇದೇ ಬಗೆಯ ರಚನೆಗಳನ್ನು ಹೇಳುತ್ತಿದ್ದಾರೆ. ಅವರು ಕನ್ನಡದಲ್ಲೇ ಮಾತಾಡುತ್ತಿದ್ದರೂ ಅವರ ಕನ್ನಡ ನಮ್ಮ ಕಿವಿಗಳಿಗೆ ಹೊಂದಿಕೊಳ್ಳದೇ ಹೋಗುತ್ತದೆ. ಅವರ ಕನ್ನಡ ರಚನೆಗಳು ಮುಸುಕಿನ ಅನುವಾದಕ್ಕೆ ಜೋತುಬಿದ್ದು ಕನ್ನಡದ ಕಿವಿಯ ನೆಲೆಗೆ ಎರವಾಗುತ್ತಿವೆ.

ಇಂಗ್ಲಿಶಿನ ಪದರಚನೆಗಳನ್ನು 'ಕನ್ನಡ'ಕ್ಕೆ ತಂದುಕೊಳ್ಳುವಾಗ ಸಂಸ್ಕೃತದ ಮೊರೆ ಹೋಗುವುದು ಸರಿಯಾದುದೆಂದು ಹೇಳುವವರಿದ್ದಾರೆ. ಅವರು, ಸಂಸ್ಕೃತ ಪದಗಳು ಬೇಕಾದ ತಿರುಳನ್ನು ಹೇಳಲು ನಮ್ಮ ನೆರವಿಗೆ ಬರಬಲ್ಲವೆಂದು ಹೇಳುತ್ತಾರೆ. ಆದರೆ ಈ ಮಾತು ಅಷ್ಟು ಸರಿಯಲ್ಲವೆಂದು ತೋರುತ್ತದೆ. ಕನ್ನಡ ಬರವಣಿಗೆಯಲ್ಲಿ ಬಳಕೆಯಾಗುವ ಎಷ್ಟೋ ಸಂಸ್ಕೃತ ಪದರಚನೆಗಳ ತಿರುಳೇನು ಎಂಬುದನ್ನು ಕಡ್ಡಿ ಮುರಿದಂತೆ ಹೇಳಲು ಆಗುವುದಿಲ್ಲ. ಅದರಲ್ಲೂ ನಿಷೇಧಪದಗಳ ಮಟ್ಟಿಗಂತೂ ಈ ಮಾತು ಇನ್ನಷ್ಟು ದಿಟ. **ಅಪ್ರಯೋಜಕ ಮತ್ತು ನಿಷ್ಪ್ರಯೋಜಕ** ಎಂಬ ಎರಡೂ ಪದಗಳನ್ನು ಕನ್ನಡದಲ್ಲಿ ಬಳಸುವಾಗ ಒಂದೇ ತಿರುಳುಳ್ಳ ಪದಗಳೆಂಬಂತೆ ಬಳಸುತ್ತೇವೆ. ಅ– ಮತ್ತು ನಿಃ– ಎಂಬ ನಿಷೇಧ ಪ್ರತ್ಯಯಗಳ ಕೆಲಸ ಬೇರೆಬೇರೆ. ಆದರೆ ಕನ್ನಡದಲ್ಲಿ ಇದು ಲೆಕ್ಕಕ್ಕೆ ಬರುವಂತೆ ಕಾಣುತ್ತಿಲ್ಲ. ಇಷ್ಟಲ್ಲದೆ ಈಗ ಹೆಚ್ಚಾಗಿ ಬಳಕೆಯಾಗುತ್ತಿರುವ ಅ– ನಿಷೇಧ ಪ್ರತ್ಯಯ ಬಳಸಿದ ಪದರಚನೆಗಳ ತಿರುಳು ಕೂಡ ಹೀಗೇ ಎಂದು ಹೇಳಲಾಗುತ್ತಿಲ್ಲ. **'ಅವಾಚ್ಯ'** ಎಂದರೆ ಹೇಳಬಾರದ ಎಂದೋ ಇಲ್ಲವೇ ಹೇಳಲಾಗದ ಎಂದೋ? ಅಸುರಕ್ಷಿತ, ಅಬಾಧಿತ, ಅನಿರ್ಬಂಧಿತ, ಅಪ್ರಚೋದಿತ, ಅನಿರ್ಧಾರಿತ, ಅನಿಯಂತ್ರಿತ, ಇವೇ ಮೊದಲಾದ ಪದಗಳ ಬಳಕೆಯನ್ನು ನೊಡಿದರೆ ಈ ಗೋಜಲು ಇರುವುದು ಇನ್ನಷ್ಟು ಗಟ್ಟಿಯಾಗುತ್ತದೆ. ಇಂತಹ ಪದರಚನೆಗಳನ್ನು ಬಳಸಲೆಬೇಕೇ? ಇವುಗಳ ಬದಲಿಗೆ ಕನ್ನಡದ ಪದರಚನೆಗಳನ್ನು ಬಳಸಲು ಆಗುವುದಿಲ್ಲವೇ? ಈ ನಿಟ್ಟಿನಿಂದ ಈಗ ನಾವು ನೋಡಬೇಕಾಗಿದೆ. ಕನ್ನಡವೆಂದು ಮುಸುಕಿನ ಅನುವಾದ ಮತ್ತು ತಿರುಳು ಇಂತಹುದೇ ಎಂದು ಹೇಳಲಾಗದ ಪದರಚನೆಗಳನ್ನು ಬಳಸುವುದು ಸರಿಯಲ್ಲವೇನೋ. ಈ ನಿಟ್ಟಿನಲ್ಲಿ ಬಲ್ಲವರು ತಕ್ಕ ಹಾದಿಗಳನ್ನು ಹುಡುಕಬೇಕಾಗಿದೆ.

### ಬರವಣಿಗೆಗೆ ಹೊಂದದ ಬಣ್ಣನೆಗಳು

ಕನ್ನಡ ಬರವಣಿಗೆಯ ಇನ್ನೊಂದು ಕುರುಹನ್ನು ನಾವೀಗ ನೊಡೋಣ. ಮಾಧ್ಯಮಗಳು ಈಚಿನ ದಿನಗಳಲ್ಲಿ ವರದಿಗಳನ್ನು ಬರೆಯುವಾಗ, ತಮ್ಮ ಬರವಣಿಗೆ ಓದುವವರಿಗೆ ಚೆನ್ನಾಗಿ ತೋರಲೆಂದು ಮಾತುಗಳಿಗೆ ತೊಡವುಗಳನ್ನು ಹೇರಲು ಮೊದಲು ಮಾಡಿವೆ. ಈ ವಾಕ್ಯಗಳನ್ನು ನೋಡಿ: 'ಚೀನಾದಲ್ಲಿ ಈಚೆಗೆ ನಡೆದ ಭೂಮಿಯ ರುದ್ರನರ್ತನದಿಂದಾಗಿ ಲಕ್ಷಾಂತರ ಜನರು ನಿರಾಶ್ರಿತರಾಗಿದ್ದಾರೆ.', ' ಮತ್ತೆಮತ್ತೆ ಪರಾಭವ ಎನ್ನುವ ಪ್ರೇಯಸಿಯ ತೆಕ್ಕೆಯ ಬಿಗಿಯಪ್ಪುಗೆಯಲ್ಲಿ ರಾಹುಲ್ ದ್ರಾವಿಡ್ ಬಳಗ

ಬಂಧಿ!' ಇವು ನಾನು ಬೇಕೆಂದೇ ಬರೆದ ವಾಕ್ಯಗಳಲ್ಲ. ನೀವೂ ಓದಿರಬಹುದಾದ/ ಕೇಳಿರಬಹುದಾದ ವಾಕ್ಯಗಳು. ಹೇಳಬೇಕಾದ್ದನ್ನು 'ಚೆನ್ನಾಗಿ' ಬರೆಯಬೇಕೆಂದು ಹೊರಟವರು ಹೀಗೆ ನುಡಿಗೆ ಬೇಡದ ತೊಡವುಗಳನ್ನು ಹಾಕಿದರೆ ಏನಾಗುವುದೆಂಬುದನ್ನು ಈ ಬಗೆಯ ವಾಕ್ಯಗಳು ತೋರಿಸಿಕೊಡುತ್ತವೆ. ಹಾಗೆಂದು ಬರವಣಿಗೆ ಒಣ ಒಣ ಪದಗಳ ಜೋಡಣೆಯಾಗಬೇಕೆಂದಲ್ಲ. ಆದರೆ ಚೆನ್ನಾಗಿಸಬೇಕೆಂದು ಹೊರಟು ಹೀಗೆ ಹೊಂದದ ಬಣ್ಣನೆಗಳನ್ನು ನೀಡುವುದು ನಗೆಗೆ ಕಾರಣವಾಗಬಹುದು ಅಷ್ಟೆ. ಆದ್ದರಿಂದ ಮಾಧ್ಯಮಗಳು ಮಾತು ಮತ್ತು ಬರಹಗಳಲ್ಲಿ ಕನ್ನಡವನ್ನು ಬಳಸುವ ನೆಲೆಯಲ್ಲಿ ತಕ್ಕ ದಾರಿಯನ್ನು ಹುಡುಕಿಕೊಳ್ಳಬೇಕಾಗಿದೆ.

**ನುಡಿಯಲ್ಲಿ ಕಟ್ಟುಗಳು ಯಾಕಿವೆ?**

ನುಡಿಯಲ್ಲಿ ಒಂದು ಕಟ್ಟು ಇದೆ ಎಂದುಕೊಳ್ಳಿ. ಆ ಕಟ್ಟು ಏನು ಎಂದು ಬಣ್ಣಿಸಿದರೆ ಮುಗಿಯಿತೇ? ಆ ಕಟ್ಟು ಏಕಿದೆ ಎನ್ನುವುದನ್ನೂ ಕಂಡುಕೊಳ್ಳಬೇಕಾಗುತ್ತದೆ. ಆ ಕಟ್ಟನ್ನು ಯಾರಾದರೂ ಪಾಲಿಸದಿದ್ದರೆ ಇಲ್ಲವೇ ಆ ಕಟ್ಟು ನುಡಿಯ ಬೇರೆ ಒಳನುಡಿಗಳಲ್ಲಿ ಬಳಕೆಯಾಗದಿದ್ದರೆ ಆಗ ಏನು ಮಾಡುತ್ತೇವೆ? ಸುಮ್ಮನೆ ತಪ್ಪು ಎಂದು ಹೇಳಿ ನುಡಿಯುವವರನ್ನು ಇಲ್ಲವೇ ಬರೆಯುವವರನ್ನು ಹೊಣೆ ಮಾಡುತ್ತೇವೆ

ಈಗ ಒಂದು ಉದಾಹರಣೆಯನ್ನು ನೋಡೋಣ. ಶಾಲೆಯ ವ್ಯಾಕರಣಗಳನ್ನು ನೋಡಿದವರಿಗೆ **ಉಕಾರದಿಂದ ಕೊನೆಯಾಗುವ ಹೆಸರುಪದಗಳಿಗೆ ತೃತೀಯಾ.ಷಷ್ಠೀ ಮತ್ತು ಸಪ್ತಮೀ ವಿಭಕ್ತಿ ಪ್ರತ್ಯಯಗಳು ಸೇರುವಾಗ –ಇನ್ ಸೇರ್ಪಡೆಯಾಗುತ್ತದೆ** ಎಂಬ ಕಟ್ಟನ್ನು ಹೇಳಿರುವುದು ಗೊತ್ತಿರುತ್ತದೆ. **ಊರು** ಎಂಬುದು ಹಾಗಾಗಿ **ಊರಿನಿಂದ, ಊರಿನ ಮತ್ತು ಊರಿನಲ್ಲಿ** ಎಂದಾಗುತ್ತದೆಂದು ತಿಳಿಯುತ್ತೇವೆ. ಆದರೆ ಈ ವ್ಯಾಕರಣಗಳು – ಇನ್ ಎಂಬುದೇ ಏಕೆ ಸೇರ್ಪಡೆಯಾಗ ಬೇಕು ಎಂದು ತಿಳಿಸುವುದಿಲ್ಲ. ಹಾಗೆ ತಿಳಿಸದೇ ಇದ್ದಾಗ ಕನ್ನಡದ ಒಂದು ಒಳನುಡಿಯನ್ನಾಡುವವರು **ಊರ್ಲಿಂದ(=ಊರಿನಿಂದ), ಊರಾಗ(=ಊರಿನಲ್ಲಿ)** ಎಂದೆಲ್ಲ ನುಡಿದರೆ ಅದು ತಪ್ಪೆಂದು ತೋರುತ್ತದೆ. ಅಲ್ಲದೆ **ಮಗು** ಎಂಬ ಹೆಸರು ಪದಕ್ಕೆ ಷಷ್ಠೀ ವಿಭಕ್ತಿ ಪ್ರತ್ಯಯ ಸೇರಿದಾಗ ಅದು **ಮಗಿನ** (ಮಗು+ಇನ) ಎಂದಾಗದೇ **ಮಗುವಿನ** ಎಂದೇಕೆ ಆಗುತ್ತದೆ? (ಹಾಗೆ ನೋಡಿದರೆ ಕನ್ನಡದ ಕೆಲವು ಒಳನುಡಿಗಳಲ್ಲಿ **ಮಗೀನ್ ಬಟ್ಟೆ** ಎಂದು ಹೇಳುವರೇ ಹೊರತು **ಮಗುವಿನ ಬಟ್ಟೆ** ಎನ್ನುವುದಿಲ್ಲ) ಅಂದರೆ ಇನ್ ಎಂಬುದು ಸೇರ್ಪಡೆಯಾಗುವುದು ಏಕೆಂದು ಹೇಳಬೇಕು.ಇಲ್ಲದಿದ್ದರೆ ಕೆಲವು ಗೋಜಲುಗಳು ಹಾಗೇ ಉಳಿದು ಬಿಡುತ್ತವೆ. ಇಲ್ಲವೇ ಇನ್ ಎಂಬುದು ಉಕಾರಾಂತವಲ್ಲದ ಹೆಸರು ಪದಗಳಿಗೂ ಸೇರಿದರೆ ಆಗ ಕಟ್ಟನ್ನು ಬದಲಿಸಬೇಕಾಗುವುದು. **ಆಚಿನ (ಆಚೆ+ಇನ) ಮನೆ, ನಾಳಿನ (ನಾಳೆ+ಇನ)ಪ್ರಜೆಗಳು** ಮುಂತಾದ ಬಳಕೆಗಳನ್ನು ನಾವು ಏನು ಮಾಡಬೇಕು?

ಇದನ್ನು ಇನ್ನೂ ಉದಾಹರಣೆಯನ್ನು ನೀಡುತ್ತೇನೆ. ಅಕಾರದಿಂದ **ಕೊನೆಯಾಗುವ** ಹೆಸರು ಪದಗಳಿಗೆ –ಕ್ಕೆ ಎಂಬ ಷಷ್ಠೀ ವಿಭಕ್ತಿ ಪ್ರತ್ಯಯ ಸೇರುವುದೆಂದು ತಿಳಿದಿದ್ದೇವೆ. ಉದಾ.ಗೆ ದೀಪಕ್ಕೆ, **ಪುಸ್ತಕಕ್ಕೆ, ಹಸ್ತಕ್ಕೆ, ಹಾಸನಕ್ಕೆ** ಮುಂತಾದವು. ಕನ್ನಡವನ್ನು ಎರಡನೆಯ

ನುಡಿಯನ್ನಾಗಿ ಕಲಿಯುವವರು ಅಕಾರದಿಂದ ಕೊನೆಯಾಗುವ ಹೆಸರು ಪದಗಳಿಗೆ -ಕ್ಕೆ ಬದಲು -ಗೆ ಎಂಬ ಪ್ರತ್ಯಯವನ್ನು ಸೇರಿಸಿದರೆ ಆಗ ನಾವು ಅದು ತಪ್ಪೆಂದು ಹೇಳುತ್ತೇವೆ. ಉರ್ದು ನುಡಿಯನ್ನಾಡುವವರು **ದೀಪಾಗೆ, ಪುಸ್ತಕಾಗೆ, ಹಾಸನಾಗೆ, ಸಿನಿಮಾಗೆ** ಎಂದು ಹೇಳುವುದುಂಟು. ಕನ್ನಡದ ಕೆಲವು ಒಳನುಡಿಯನ್ನಾಡುವವರು ಈ ಅಕಾರದಿಂದ ಕೊನೆಯಾಗುವ ಹೆಸರುಪದಗಳನ್ನು ಉಕಾರದಿಂದ ಕೊನೆಗೊಳಿಸಿ ಮತ್ತೆ -ಕ್ಕೆ ಪ್ರತ್ಯಯವನ್ನೇ ಸೇರಿಸುವುದುಂಟು. ಉದಾ.ಗೆ. **ದೀಪುಕ್ಕೆ, ಪುಸ್ತುಕುಕ್ಕೆ, ಸಿನಿಮುಕ್ಕೆ, ಹಾಸನುಕ್ಕೆ** ಹೀಗೆ. ನಾವು ಹೇಳಿದ ಕಟ್ಟಿನ ಹಿಂದೆ ಇರುವ ಕಾರಣಗಳನ್ನು ತಿಳಿದುಕೊಳ್ಳದಿದ್ದರೆ ಆಗ ನುಡಿಯಲ್ಲಿ ಆಗುವ ತಪ್ಪುಗಳನ್ನು ಗುರುತಿಸುತ್ತಾ ಕೂರಬೇಕಾಗುವುದೇ ಹೊರತು ಬೇರೇನೂ ಆಗುವುದಿಲ್ಲ. ಈ ಕಾರಣಗಳು ನಮ್ಮ ನುಡಿ ಬೆಳೆದುಬಂದ ಬಗೆಯಲ್ಲಿ ಅಡಕವಾಗಿರಬಹುದು ಇಲ್ಲವೇ ನುಡಿಯ ಆಚೆಯ ಬೇರೆ ಯಾವುದೋ ಒತ್ತಡ ಕೆಲಸ ಮಾಡುತ್ತಿರಬಹುದು.

ತಪ್ಪುಗಳನ್ನು ಬೆಂಬಲಿಸುವುದು ನನ್ನ ಗುರಿಯಲ್ಲ. ತಪ್ಪುಗಳನ್ನು ತಿದ್ದುತ್ತ ಕೂರುವುದೂ ಅಲ್ಲ. ತಪ್ಪುಗಳು ಕುರುಹುಗಳಿದ್ದಂತೆ. ಕುರುಹುಗಳನ್ನು ಅಳಿಸಿದರೆ ಅರಿವು ಅಳಿಯುವುದಲ್ಲ. ತಪ್ಪುಗಳನ್ನು ತಿದ್ದುವುದು ಮೈತಾಪವನ್ನು ತಣ್ಣೀರು ಬಟ್ಟೆಯಿಂದ ಕಡಿಮೆ ಮಾಡಿದ ಹಾಗೆ. ತಪ್ಪಿಗೆ ಕಾರಣಗಳನ್ನು ಅರಿತು ಅಲ್ಲಿ ಬದಲಾವಣೆ ಮಾಡದಿದ್ದರೆ ತಪ್ಪುಗಳು ಕಾಣಿಸಿಕೊಳ್ಳುತ್ತಲೇ ಇರುತ್ತವೆ. ಇದು ಇಲ್ಲಿನ ನಿಲುವು.

### ಬರತಾವ, ಬರತಾದ

ಏಕನಾಥ ಬೊಂಗಾಳೆ (ಕಮ್ಮಚ್ಚಿ, ಹೊಸನಗರ ತಾ.) ಇವರು ಒಂದು ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. 'ಬಂದೇ ಬರತಾವ ಕಾಲ ಎಂಬ ವಾಕ್ಯದಲ್ಲಿ ಬರತಾವ ಎಂದು ಹೇಳವುದು ಸರಿಯಲ್ಲ; ಅದು ಬರತಾದ ಎಂದಿರಬೇಕಲ್ಲವೇ?' ಇದು ಅವರ ಪ್ರಶ್ನೆ. ಕನ್ನಡದ ನಾಮಪದಗಳನ್ನು ವಿಂಗಡಿಸಿಕೊಳ್ಳುವ ಹಲವು ಬಗೆಗಳಲ್ಲಿ ಎಣಿಸಬಹುದಾದವು ಮತ್ತು ಎಣಿಸಲಾಗದವು ಎಂಬುದು ಒಂದು ಬಗೆ. ಮನೆ, ಮರ, ಕೋತಿ, ಕಾಲುಇವೆಲ್ಲ ಎಣಿಸಬಹುದಾದ ನಾಮಪದಗಳು. ನೀರು, ಕಾಲ, ಹೊತ್ತು, ಗಾಳಿ ಇವೆಲ್ಲ ಎಣಿಸಲಾಗದ ನಾಮಪದಗಳು. ಎಣಿಸಲಾಗದ ನಾಮಪದಗಳನ್ನು ವಾಕ್ಯದಲ್ಲಿ ಬಳಸಿದಾಗ ಕ್ರಿಯಾಪದಕ್ಕೆ ಬಹುವಚನ ಸೂಚಿಸುವ ಪ್ರತ್ಯಯ ಸೇರಿಸುವುದಿಲ್ಲ. ಈ ನಾಮಪದಗಳಿಗೆ ಕೂಡ ಬಹುವಚನ ರೂಪಗಳಿಲ್ಲ. ಇದು ಸಾಮಾನ್ಯವಾಗಿ ಪಾಲಿಸುವ ಕಟ್ಟು. ಅದರಂತೆ ಮೇಲೆ ಹೇಳಿದ ವಾಕ್ಯದಲ್ಲಿ ಕಾಲ ಎಂಬ ನಾಮಪದಕ್ಕೆ ಬರತಾವ ಎಂಬ ಬಹುವಚನ ಪ್ರತ್ಯಯ ಇರುವ ಕ್ರಿಯಾರೂಪ ಬೇಕಿಲ್ಲ. ಆದರೆ ಈ ಕಟ್ಟನ್ನು ಕೆಲವೊಮ್ಮೆ ಮೀರುತ್ತೇವೆ. ಪ್ರಸಂಗವನ್ನು ಅನುಸರಿಸಿ ಹೀಗಾಗುವುದು ಅನಿವಾರ್ಯ. ಈ ವಾಕ್ಯದಲ್ಲಿ ಕಾಲ ಎಂಬ ಪದವಿದ್ದರೂ ಅದರ ತಿರುಳು ಮಾತ್ರ ದಿನಗಳು ಎಂದಲ್ಲವೇ? ಹಾಗಾಗಿ ಕ್ರಿಯಾಪದದಲ್ಲಿ ಬಹುವಚನ ರೂಪ ತಪ್ಪೇನೂ ಅಲ್ಲ. (ನೀರ್ಗಳ್ ಎಂಬ ರೂಪವನ್ನು ಬಹು ಹಿಂದೆಯೇ ಕವಿಗಳು ಬಳಸಿದ್ದಾರೆ)

ಈ 'ಬರತಾವ' ಎಂಬ ರೂಪ ಬೇರೆ ಕಾರಣದಿಂದ ಕುತೂಹಲಕಾರಿಯಾಗಿದೆ. ಇದು ಒಂದು ಹಾಡಿನ ಸಾಲು. ಹಾಡುವಾಗ ತಾಳದ ಲೆಕ್ಕಕ್ಕೆ ತಕ್ಕಂತೆ ಕೆಲವು ಪದಗಳ

ಸ್ವರಗಳನ್ನು ದೀರ್ಘ ಮಾಡಿಕೊಳ್ಳುವುದುಂಟು. ದ.ರಾ. ಬೇಂದ್ರೆಯವರ ಬೆಳಗು ಕವಿತೆಯನ್ನು ಹಾಡುವವರು ಮೊದಲ ಚರಣದಲ್ಲಿ 'ಸುಣ್ಣನ್ನೆರಕಾವ ಹೊಯ್ದಾ' ಎಂದು ಹೇಳುತ್ತಾರೆ. ಎರಕವ(<ಎರಕವನ್ನು) ಎಂಬುದು ಎರಕಾವ ಎಂದಾಗಿಬಿಡುತ್ತದೆ. ಈಚೆಗೆ ಈ ಕವಿತೆಯ ಮುದ್ರಿತ ರೂಪದಲ್ಲೂ ಎರಕಾವ ಎಂಬ ರೂಪವೇ ಕಾಣುತ್ತಿದೆ. ಹಾಗೆಯೇ ಬರತಾವ ರೂಪ ಕೂಡ ಹಾಡುವುದಕ್ಕಾಗಿ ರೂಪುಗೊಂಡಿರುವುದು. ಬರತದ(ಏಕವಚನ), ಬರತವ(ಬಹುವಚನ) ಇವು ಸರಿರೂಪಗಳು. ಹಾಡುವಾಗ ಎಳೆದು ಹಾಡಿ ಬರತಾದ, ಬರತಾವ ಎಂದಾಗಿಬಿಡುತ್ತವೆ. (ಬರತಾವು ಎಂಬ ಬೇರೊಂದು ರೂಪವಿದೆ. ಅದು ಇವುಗಳಿಗಿಂತ ಬೇರೆಯಾದುದು.)

**ಅಲ್ಲ**

ಕನ್ನಡ ಮಾತಾಡುವವರು ಬಳಸುವ ವಾಕ್ಯದ ಒಂದು ಮಾದರಿಯನ್ನು ಈಗ ನೋಡೋಣ. ಈ ವಾಕ್ಯಗಳ ಕ್ರಿಯಾಪದಗಳ ಕೊನೆಗೆ **ಅಲ್ಲ** ಎಂಬ ಪದ ಬಂದು ಸೇರಿರುತ್ತದೆ. ಆದರೆ ಈ **ಅಲ್ಲ** ನಿಷೇಧವನ್ನು ಹೇಳುವಂತಿರುವುದಿಲ್ಲ. ಉದಾ.ಗೆ

**1) ಬಸ್ಸಿನ್ನೂ ಬಂದಿಲ್ಲವಲ್ಲ.**

**2. ಚುನಾವಣೆಯಲ್ಲಿ ಅವರು ಸೋತು ಹೋದರಲ್ಲ.**

**3. ಹುಡುಕಿದರೂ ಏನೂ ಸಿಗಲಿಲ್ಲವಲ್ಲ.**

ಈ ವಾಕ್ಯಗಳಲ್ಲಿ ಕ್ರಿಯಾಪದದೊಡನೆ ಸೇರಿಕೊಳ್ಳುತ್ತಿರುವ 'ಅಲ್ಲ'ಪದದ ಕೆಲಸ ಏನು? ಆ ಪದವನ್ನು ಬಿಟ್ಟರೂ ವಾಕ್ಯದ ತಿರುಳನ್ನು ಅರಿಯಲು ಅಡ್ಡಿಯೇನೂ ಆಗುವುದಿಲ್ಲ. ಈ ಬಗೆಯ ವಾಕ್ಯಗಳು ಮಾತಿನಲ್ಲಿ ಕೇಳಿಸಲು ಸಿಗುವಂತೆ ಬರಹದಲ್ಲಿ ಕಾಣಸಿಗುವುದಿಲ್ಲ. ಬರಹದಲ್ಲಿ ಕಂಡರೂ ಅವು ಕತೆ ಕಾದಂಬರಿ ನಾಟಕಗಳಲ್ಲಿ ಮಾತುಕತೆಯಲ್ಲಿ ಸಿಗುತ್ತವೆ. ಹಾಗಾಗಿ ಈ ಮಾದರಿಯ ವಾಕ್ಯಗಳು ಮಾತಿನ ವರಸೆಗೆ ಸೇರುತ್ತವೆ. ವಾಕ್ಯಗಳು ಯಾವುದೋ ಒಂದು ಗೊತ್ತಾದ ತಿರುಳನ್ನು ಹೇಳುವುದನ್ನೇ ಗುರಿಯಾಗಿ ಇರಿಸಿಕೊಂಡಿರುತ್ತವೆ ಎಂದು ತಿಳಿಯಬಾರದು. ಆ ತಿರುಳಿನ ಜೊತೆಗೆ ಮಾತುಕತೆಗೆ ಸೇರಿದ ಮತ್ತೇನನ್ನೋ ನಮಗೆ ತಿಳಿಸುತ್ತಿರುತ್ತವೆ. ಈ **ಅಲ್ಲ** ಸೇರಿಕೊಂಡ ವಾಕ್ಯಗಳನ್ನು ನೋಡಿ. ಅಲ್ಲೆಲ್ಲ ಮಾತಾಡುವವರು ಹೇಳಬೇಕಾದ್ದನ್ನು ಹೇಳಿ ಮತ್ತೇನನ್ನೋ ಕೇಳಿಸಿಕೊಳ್ಳುವವರಿಗೆ ತಿಳಿಸಲು ಬಯಸುತ್ತಿದ್ದಾರೆ ಎನ್ನುವುದು ಗೊತ್ತಾಗುತ್ತದೆ. **ಬಸ್ಸು ಬರಲಿಲ್ಲವಲ್ಲ** ಎಂದಾಗ ಬಸ್ಸು ಬಾರದಿರುವುದನ್ನು ಹೇಳುವ ಜೊತೆಗೆ ಮುಂದೇನು ಮಾಡುವುದು ಎಂದು ಆ ಎದುರಿಗಿರುವವರನ್ನು ಕೇಳುವುದೂ ಆ ವಾಕ್ಯದ ಗುರಿಯಾಗಿದೆ. ಹೀಗೆ ಅಲ್ಲ ಸೇರಿಕೊಂಡ ವಾಕ್ಯಗಳು ತಮ್ಮ ಹಿಂದಿನ ಇಲ್ಲವೇ/ಮತ್ತು ಮುಂದಿನ ವಾಕ್ಯಗಳ ಜೊತೆಗೆ ಏನೋ ನಂಟನ್ನು ಕಟ್ಟಿಕೊಳ್ಳುತ್ತಿರುತ್ತವೆ. ಈ ನಂಟು ತಿರುಳಿನದ್ದಲ್ಲ. ಮಾತಾಡುತ್ತಿರುವವರ ನಡುವೆ ಇರುವ ನಂಟನ್ನು ಹೇಳುತ್ತಿರಬಹುದು. ಅಲ್ಲ ಸೇರಿದ ಕ್ರಿಯಾಪದಗಳು ವಾಕ್ಯಗಳ ನಡುವೆಯೂ ಬರುತ್ತವೆ. ಉದಾ.ಗೆ

**1. ಮೊನ್ನೆ ಪೇಟೆಯಲ್ಲಿ ಸಿಕ್ಕಿದ್ದರಲ್ಲ ಅವರ ಮನೆ ಇದು.**

**2. ಹೇಗಿದ್ದರೂ ನಾಳೆ ಕಾಲೇಜಿನಲ್ಲಿ ಸಿಕ್ತಾನಲ್ಲ ಆಗ ಕೇಳಿದರಾಯ್ತು.**

**3. ಕಳೆದ ವಾರ ನಾನು ಬಂದಿದ್ದಾಗ ಓದುವುದಕ್ಕೆ ಶುರು ಮಾಡಿದ್ದೆಯಲ್ಲ ಆ ಕಾದಂಬರಿ ಓದಿ ಮುಗೀತಾ?**

ಈ ವಾಕ್ಯಗಳಲ್ಲಿ ಅಲ್ಲ ಪದಕ್ಕೆ ರಚನೆಯ ನೆಲೆಯ ಕೆಲಸವೂ ಇದೆ. ಈ ವಾಕ್ಯಗಳೆಲ್ಲ ಸಂಕೀರ್ಣ ವಾಕ್ಯಗಳು. ಆಂದರೆ ಒಂದಕ್ಕಿಂತ ಹೆಚ್ಚು ವಾಕ್ಯಗಳು ಸೇರಿಕೊಂಡು ರಚನೆಯಾಗಿವೆ. ಹಾಗೆ ವಾಕ್ಯಗಳನ್ನು ಒಟ್ಟಾಗಿಸಲು ಈ ವಾಕ್ಯಗಳಲ್ಲಿ **ಅಲ್ಲ** ಪದವನ್ನು ಬಳಸಲಾಗಿದೆ. **ಅಲ್ಲ** ಪದ ಬಳಸದೆಯೂ ಈ ವಾಕ್ಯಗಳನ್ನು ಒಟ್ಟಾಗಿಸಲು ಬರುತ್ತದೆ.

**1. ಮೊನ್ನೆ ಪೇಟೆಯಲ್ಲಿ ಸಿಕ್ಕಿದ್ದವರ ಮನೆ ಇದು.**

**2. ಹೇಗಿದ್ದರೂ ನಾಳೆ ಕಾಲೇಜಿನಲ್ಲಿ ಅವನು ಸಿಕ್ಕಾಗ ಕೇಳಿದರಾಯ್ತು.**

**3. ಕಳೆದ ವಾರ ನಾನು ಬಂದಾಗ ಓದುವುದಕ್ಕೆ ಶುರು ಮಾಡಿದ್ದ ಕಾದಂಬರಿ ಓದಿ ಮುಗೀತಾ?**

ಈ ಜೋಡಣೆ ಬರಹಕ್ಕೆ ಹೆಚ್ಚು ಹತ್ತಿರವಾಗಿದೆ. ಅಂದರೆ **ಅಲ್ಲ** ಪದ ವಾಕ್ಯಗಳನ್ನು ಒಟ್ಟಾಗಿಸಲು ನೆರವಾಗುತ್ತಿರುವಂತೆಯೇ ಮಾತಿನ ವರಸೆಯನ್ನೂ ಕಾಯ್ದುಕೊಳ್ಳುತ್ತಿದೆ. **ಅಲ್ಲ** ಪದ ವಾಕ್ಯದ ಮೊದಲಲ್ಲೂ ಬರುತ್ತದೆ. ಹೀಗೆ ಮೊದಲಲ್ಲಿ ಬರುವಾಗ ಅಲ್ಲ ಪದವನ್ನು ಕೊಂಚ ಎಳೆದು **ಅಲ್ಲಾ** ಎಂದು ಹೇಳುವಂತೆ ತೋರುತ್ತದೆ. ಉದಾ.ಗೆ

**1. ಅಲ್ಲ, ನನ್ನ ಮಾತು ಕೇಳಿದ್ರೆ ಹೀಗಾಗುತಿತ್ತಾ?**

**2. ಅಲ್ಲ, ನೀವೇ ಈಗ ಈ ಕಗ್ಗಂಟು ಬಿಡಿಸಬೇಕು.**

**3. ಅಲ್ಲ, ಇದೆಲ್ಲ ಯಾಕೋ ಅತಿಯಾಯ್ತು.**

ಇಲ್ಲೆಲ್ಲ **ಅಲ್ಲ** ಪದ ಮುಂದೆ ಬರುವ ವಾಕ್ಯದ ಭಾಗವಾಗಿರುವುದಿಲ್ಲ. ಆದರೆ ಕೇಳುತ್ತಿರುವವರ ಗಮನವನ್ನು ತನ್ನ ಮಾತಿನ ಕಡೆಗೆ ಎಳೆದುಕೊಳ್ಳಲು **ಅಲ್ಲ** ಪದ ನೆರವಾಗುವಂತಿದೆ. ಹೆಚ್ಚು ಜನ ಒಂದೆಡೆ ಸೇರಿ ಮಾತಾಡುವಾಗ ತನ್ನ ಮಾತನ್ನು ಸೇರಿಸಲು ಬಯಸುವವರು ಈ ಪದವನ್ನು ಬಳಸಿ ತಮ್ಮ ವಾಕ್ಯವನ್ನು ಮೊದಲು ಮಾಡುವ ಮೂಲಕ ಮಾತುಕತೆಯೊಳಗೆ ಸೇರಿಕೊಳ್ಳುತ್ತಾರೆ.

ಹೀಗೆಲ್ಲ ಮಾತಿನಲ್ಲಿ ಬಳಕೆಯಾಗುವ ಅಲ್ಲ ಪದವನ್ನು ಬಳಸಲು ಕೆಲವು ಶರತ್ತುಗಳೂ ಇದ್ದಂತಿವೆ. ವಾಕ್ಯದ ಮೊದಲಲ್ಲಿ ಬಿಡಿಯಾಗಿ ಬರುವುದನ್ನು ಬಿಟ್ಟರೆ ಉಳಿದಂತೆ ಆದು ಯಾವಾಗಲೂ ಪೂರ್ಣ ಕ್ರಿಯಾಪದಕ್ಕೆ ಅಂಟಿಕೊಂಡೇ ಬರುತ್ತದೆ. ಇದನ್ನು ಬಳಸುವವರು ಬಳಕೆಯ ಯಾವ ವಲಯದಲ್ಲಿ ಹೆಚ್ಚಾಗಿ ಬಳಸುತ್ತಾರೆ ಎಂಬ ಬಗೆಗೆ ಹೆಚ್ಚಿನ ತರದೂದು ನಡೆಯಬೇಕಿದೆ. **ಅಲ್ಲ** ಪದವನ್ನೇ ಕೊಂಚ ಬದಲಿಸಿ ಒಂದು ಪ್ರಶ್ನೆ ರೂಪದ ಪದವನ್ನಾಗಿ

ಬಳಸುವುದನ್ನೂ ನೋಡುತ್ತೇವೆ. ಅಲ್ಲವಾ, ಅಲ್ಲವೇ, ಅಲ್ಲಾ ಎಂಬೆಲ್ಲ ರೂಪಗಳಲ್ಲಿ ಈ ಪ್ರಶ್ನೆ ಕಾಣಿಸಿಕೊಳ್ಳುತ್ತದೆ. ಈ ಪ್ರಶ್ನೆಪದಗಳನ್ನು ಎಲ್ಲೆಲ್ಲಿ,ಯಾವಾಗ ಯಾರುಯಾರು ಏಕೆ ಬಳಸುತ್ತಾರೆ ಎನ್ನುವುದನ್ನು ತಿಳಿಯಲು ಬೇರೊಂದು ಟಿಪ್ಪಣಿ ಬರೆಯಬೇಕಾಗುತ್ತದೆ.

**ಮದ್ಯಪಾನ ಸೇವಿಸಿ, ಮದ್ಯಪಾನ ಮಾಡಿ**

** ಎಸ್. ಶೇಷಾದ್ರಿ (ಬೆಂಗಳೂರು) ಒಂದು ಸಮಸ್ಯೆಯನ್ನು ಮುಂದಿಟ್ಟಿದ್ದಾರೆ. ಬೆಂಗಳೂರು ನಗರದ ಪೋಲಿಸರು ಹಾಕಿರುವ ಫಲಕವೊಂದರ ಬರಹ ಸರಿಯಾಗಿಲ್ಲ ಎನ್ನುವುದು ಅವರ ತಕರಾರು. ಆ ಫಲಕದಲ್ಲಿ 'ಮದ್ಯಪಾನ ಸೇವಿಸಿ ವಾಹನ ನಡೆಸಬೇಡಿ' ಎಂದಿದೆಯಂತೆ. ಈ ವಾಕ್ಯದಲ್ಲಿ **ಮದ್ಯಪಾನ ಸೇವಿಸಿ** ಎನ್ನುವುದು ಸರಿಯಲ್ಲ; ಅದನ್ನು **ಮದ್ಯ ಸೇವಿಸಿ** ಇಲ್ಲವೇ **ಮದ್ಯಪಾನ ಮಾಡಿ** ಎಂದು ಬರೆಯಬೇಕು ಎನ್ನುವುದು ಅವರ ವಾದ. ಅವರ ತಿಳುವಳಿಕೆ ಸರಿಯಾಗಿದೆ. **ಕುಡಿದು ವಾಹನ ನಡೆಸಬೇಡಿ** ಎಂದು ಬರೆಯುವುದು ಇನ್ನೂ ಹೆಚ್ಚು ಸರಿ. ಅದು ಎಲ್ಲರಿಗೂ ಸರಿಯಾಗಿ ತಿಳಿಯುವ ಮಾತು. ಅಲ್ಲದೆ **ಮದ್ಯಪಾನ ಮಾಡಿ ವಾಹನ ನಡೆಸಬೇಡಿ** ಎಂದು ಬರೆಯುತ್ತಾರೆ ಎಂದಿಟ್ಟುಕೊಳ್ಳಿ. ಇದನ್ನು ಒಂದು ವಾಕ್ಯವೆಂದು ಓದಿಕೊಳ್ಳದೆ ಎರಡು ವಾಕ್ಯಗಳೆಂದು ಓದಿಕೊಂಡರೆ ಏನಾಗುತ್ತದೆ? **ಮದ್ಯಪಾನ ಮಾಡಿ. (ಆದರೆ) ವಾಹನ ನಡೆಸಬೇಡಿ** ಎಂದಾಗುವುದಲ್ಲವೇ? ಅಂದರೆ ಈ ಫಲಕ ಏನನ್ನು ಮಾಡಬೇಕು ಮತ್ತು ಏನನ್ನು ಮಾಡಬಾರದು ಎಂಬುದನ್ನು ಹೇಳುತ್ತಿದ್ದರೂ ಅವುಗಳ ನಡುವೆ ಇರುವ ನಂಟನ್ನು ವಾಕ್ಯರಚನೆಯ ಮೂಲಕ ಹೇಳುತ್ತಿಲ್ಲ. ಇಲ್ಲವೇ ಈ ಸೂಚನೆಯಂತೂ ವಾಹನ ಚಾಲನೆಯ ಬಗೆಗೆ ಎಚ್ಚರವಹಿಸುವಂತೆ ಹೇಳುತ್ತಿದೆಯಾದರೂ ಮದ್ಯಪಾನದ ಬಗೆಗೆ ತಟಸ್ಥ ನಿಲುವನ್ನು ಹೊಂದಿದೆ.

**ವಾಕ್ಯಕ್ಕೆ ಎರಡು ತಿರುಳುಗಳು**

** ಅಂಬರೀಷ (ಮಲ್ಲತ್ತಹಳ್ಳಿ, ಬೆಂಗಳೂರು) ಇವರನ್ನು ಒಂದು ವಾಕ್ಯ ಹಲವು ವರ್ಷಗಳಿಂದ ಕಾಡುತ್ತಿದೆ. ಒಂಬತ್ತನೆಯ ತರಗತಿಯ ಸಮಾಜ ಪಾಠ ಪುಸ್ತಕದಲ್ಲಿ ಅವರು ಓದಿದ ವಾಕ್ಯ ಹೀಗಿದೆ. **'ಬ್ರಿಟಿಶರು ಒಪ್ಪಂದದಂತೆ ಯುದ್ಧ ಮಾಡಲಿಲ್ಲ'** ಈ ವಾಕ್ಯಕ್ಕೆ ಎರಡು ತಿರುಳುಗಳಿವೆ ಎನ್ನುವುದು ಅವರ ಅನಿಸಿಕೆ. ದಿಟ. ಈ ವಾಕ್ಯಕ್ಕೆ ಎರಡು ತಿರುಳುಗಳಿವೆ. 1. ಬ್ರಿಟಿಶರು ಒಂದು ಒಪ್ಪಂದ ಮಾಡಿಕೊಂಡಿದ್ದರು. ಆದರೆ ಯುದ್ಧ ಮಾಡುವಾಗ ಆ ಒಪ್ಪಂದವನ್ನು ಪಾಲಿಸಲಿಲ್ಲ (ಯುದ್ಧ ಮಾಡಿದ್ದು ದಿಟ) 2. ಬ್ರಿಟಿಶರು ಒಂದು ಒಪ್ಪಂದವನ್ನು ಮಾಡಿಕೊಂಡಿದ್ದರು. ಹಾಗಾಗಿ ಯುದ್ಧವನ್ನು ಮಾಡಲಿಲ್ಲ (ಈ ತಿರುಳಿನ ಪ್ರಕಾರ ಯುದ್ಧ ಮಾಡಿಲ್ಲ ಎಂಬುದು ದಿಟ.) ಯುದ್ಧ ಮಾಡುವುದಿಲ್ಲ ಎನ್ನುವ ಒಪ್ಪಂದವನ್ನು ಮಾಡಿಕೊಂಡಿದ್ದು ಇದಕ್ಕೆ ಕಾರಣ. ಒಂದು ವಾಕ್ಯದಲ್ಲಿ ಹೀಗೆ ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳಿದ್ದಾಗ (ಪೂರ್ಣ ಮತ್ತು ಅಪೂರ್ಣ) ಹಾಗೂ ಆ ವಾಕ್ಯದಲ್ಲಿ ನಿಷೇಧರೂಪವಿದ್ದಾಗ (=ಇಲ್ಲ) ಆ ನಿಷೇಧರೂಪ ಯಾವ ಕ್ರಿಯಾಪದಕ್ಕೆ ಹೊಂದುತ್ತದೆ ಎನ್ನುವುದು ಒಂದು ಪ್ರಶ್ನೆಯಾಗುತ್ತದೆ. ಮಾತಾಡುವಾಗ ಮಾತಿನ ಏರಿಳಿತಗಳ ಮೂಲಕ ಯಾವುದು ವಾಕ್ಯದ ತಿರುಳು ಎನ್ನುವುದನ್ನು ಆಡಿ ತೋರಿಸಬಹುದು. ಆದರೆ ಬರೆದಾಗ ಗೊಂದಲ ಉಳಿದು ಬಿಡುತ್ತದೆ. ಆದರೆ ಆ ವಾಕ್ಯ

ಬಳಕೆಯಾದ ಸಂದರ್ಭನ್ನು ನೋಡಿದರೆ ತಿರುಳು ಯಾವುದು ಎಂಬುದು ಗೊತ್ತಾಗುವಂತಿರುತ್ತದೆ.

**ವಾಕ್ಯದ ಗೊಂದಲ**

ಇಂತಹದೇ ಒಂದು ಗೊಂದಲದ ರಚನೆಯನ್ನು ಗಣೇಶಭಟ್( ಶಿರಸಿ) ಇವರು ಮುಂದಿಟ್ಟಿದ್ದಾರೆ. **'ಔಷಧದ ಅಡ್ಡಪರಿಣಾಮದಿಂದ ಅಸ್ವಸ್ಥಗೊಂಡ ಗಾಯಕಿ__ಅವರ ಪುತ್ರಿ-ಯನ್ನು ಆಸ್ಪತ್ರೆಗೆ ದಾಖಲಿಸಲಾಗಿದೆ'** ಈ ವಾಕ್ಯದಲ್ಲಿ ಔಷಧಿಯ ಅಡ್ಡ ಪರಿಣಾಮಕ್ಕೆ ಒಳಗಾದವರು ಗಾಯಕಿಯೋ ಇಲ್ಲವೇ ಅವರ ಮಗಳೋ ಎಂಬ ಗೊಂದಲವಿದೆ. ಸಂದರ್ಭದಿಂದ ಸಂಗತಿ ಗೊತ್ತಾಗುತ್ತದೆಯಾದರೂ ರಚನೆಯಲ್ಲಿ ಎರಡೂ ಬಗೆಯಲ್ಲಿ ತಿಳಿಯಲು ಅವಕಾಶವಿರುವುದಂತೂ ದಿಟ. ಈ ತೊಂದರೆಯುಂಟಾಗದಂತೆ ವಾಕ್ಯವನ್ನು ರಚಿಸಲು ಆಗುತ್ತದೆ. ಉದಾ: **ಗಾಯಕಿ-ಯವರ ಪುತ್ರಿ-,ಔಷಧದ ಅಡ್ಡಪರಿಣಾಮದಿಂದ ಅಸ್ವಸ್ಥಗೊಂಡದ್ದರಿಂದ (ಅವರನ್ನು) ಆಸ್ಪತ್ರೆಗೆ ದಾಖಲಿಸಲಾಗಿದೆ**. ಇದು ಒಂದು ಸಾಧ್ಯತೆ.

**ಕರ್ತೃವನ್ನು ಸೂಚಿಸುವ ಪದವಿಲ್ಲದ ವಾಕ್ಯಗಳು**

ಮೇಲೆ ಹೇಳಿದ ವಾಕ್ಯದ ಕೊನೆಗೆ ಬಂದ ಕ್ರಿಯಾಪದವನ್ನು ನೋಡಿ. 'ದಾಖಲಿಸಲಾಗಿದೆ'ಎಂದಾಗ ಯಾರು ದಾಖಲಿಸಿದರು ಎಂಬುದು ತಿಳಿಯುವಂತಿಲ್ಲ. ಈ ಬಗೆಯ ಕ್ರಿಯಾಪದಗಳಿರುವ ವಾಕ್ಯಗಳ ಬಗೆಗೆ ಶ್ರೀಶೈಲ ಬಿ.ಕಂಬಾರ (ವಿಜಾಪುರ) ಕೇಳಿದ್ದಾರೆ. **'ಪೇಟೆಯಿಂದ ತಂದ ಹಣ್ಣುಗಳನ್ನು ತಿನ್ನಲಾಯಿತು'** ಎಂಬ ವಾಕ್ಯದಲ್ಲಿ ಕರ್ತೃಪದವಿದೆಯೇ ಎಂಬುದು ಪ್ರಶ್ನೆ. ಇಂತಹ ರಚನೆಗಳಲ್ಲಿ ಕ್ರಿಯೆಯ ಪರಿಣಾಮವನ್ನು ಗುರುತಿಸಬಹುದು. ಆದರೆ ಕ್ರಿಯೆಯನ್ನು ಯಾರು ಮಾಡಿದರು ಎನ್ನುವುದನ್ನು ಗುರುತಿಸಲು ಆಗುವುದಿಲ್ಲ. ಕ್ರಿಯೆಯನ್ನು ಮಾಡಿದವರು ಕರ್ತೃ ಎನ್ನುವುದಾದರೆ ಈ ವಾಕ್ಯದಲ್ಲಿ ಕರ್ತೃವನ್ನು ಸೂಚಿಸುವ ಪದ ಇಲ್ಲ. ಕನ್ನಡದಲ್ಲಿ ಹೀಗೆ ಕರ್ತೃವನ್ನು ಹೇಳದೇ ಬಿಟ್ಟ ವಾಕ್ಯರಚನೆಗಳು ಹಲವು ಬಗೆಗಳಲ್ಲಿ ಇರುತ್ತವೆ. **ಹಣ್ಣನ್ನು ತಿಂದರು** ಎಂಬ ವಾಕ್ಯದಲ್ಲಿ ಕರ್ತೃ ಯಾರೋ ಇದ್ದಾರೆಂಬುದು ತಿಂದರು ಎಂಬ ಕ್ರಿಯಾಪದದಲ್ಲಿ ಅಡಕವಾಗಿದೆ. **ಹಣ್ಣು ತಿನ್ನಲ್ಪಟ್ಟಿತು** ಇಲ್ಲವೇ **ಹಣ್ಣನ್ನು ತಿನ್ನಲಾಯಿತು** ಎಂದು ಹೇಳಿದಾಗ ಕ್ರಿಯಾಪದದಿಂದ ಕರ್ತೃ ಯಾರೆಂಬುದನ್ನು ಗುರುತಿಸಲು ಬರುವುದಿಲ್ಲ. (ಕನ್ನಡ ಶಾಲಾವ್ಯಾಕರಣಗಳು ಇಂಗ್ಲಿಶ್ ವ್ಯಾಕರಣದಲ್ಲಿ ಬಳಕೆಯಾಗುವ **ಸಬ್ಜೆಕ್ಟ್** ಎಂಬ ಪದಕ್ಕೆ **ಕರ್ತೃಪದ** ಸಮಾನವೆಂದು ಪರಿಗಣಿಸುತ್ತವೆ. ಇದು ಸರಿಯಲ್ಲ. ಹೀಗೆ ಮಾಡಿದ್ದರಿಂದ ಹಲವು ಗೊಂದಲಗಳು ಉಂಟಾಗಿವೆ)

**ಮಾತಿನ ತಿರುಳನ್ನು ಕಡೆಗಣಿಸಬಹುದೇ?**

ಚೆನ್ನಾಗಿ ಬರೆಯಬೇಕೆಂಬ ಬಯಕೆಯಿಂದ ಏನು ಬರೆಯುತ್ತಿದ್ದೇವೆ ,ಅದರ ತಿರುಳೇನು ಎಂಬುದನ್ನು ತಿಳಿದುಕೊಳ್ಳದೆ ಹೋಗಿರುವ ಬರವಣಿಗೆಗಳು ಈಗ ಪತ್ರಿಕೆ ಮತ್ತು ಟಿವಿಗಳಲ್ಲಿ ದಂಡಿಯಾಗಿ ಸಿಗುತ್ತಿವೆ. '.. ಭಾರತ ತಂಡ ತನ್ನ ಗೆಲುವನ್ನು ಕಣ್ತುಂಬಿಕೊಂಡಿತು." ಎಂಬ ವಾಕ್ಯವನ್ನು ನೋಡಿ. ಗೆಲವನ್ನು ಕಣ್ತುಂಬಿಕೊಳ್ಳುವುದು

ಎಂದರೇನು? ' ಮಳೆಯಿಂದ ದ್ವೀಪಾವೃತವಾದ ಭಾಗಮಂಡಲ' ಇಲ್ಲಿ ದ್ವೀಪಾವೃತ ಎಂದರೇನು? ಹಾಗೆಯೆ ಈ ಮುಂದಿನ ವಾಕ್ಯವನ್ನು ನೋಡಿ.'..ಅವರು ಕಡಿಮೆ ರನ್ನುಗಳನ್ನು ಪೇರಿಸಿದರು.' ಪೇರಿಸು ಎಂಬುದನ್ನು ಹೆಚ್ಚು ಹೆಚ್ಚು ಎಂಬ ತಿರುಳಿನೊಡನೆ ಬಳಸುತ್ತೇವೆ. ಕಡಿಮೆ ಇರುವುದು ಪೇರಿಸಿದ್ದು ಹೇಗೆ? ಹೀಗೆ ದಿನದಿನವೂ ಈ ಬಗೆಯ ಬಳಕೆಗಳು ಹೆಚ್ಚಾಗುತ್ತಿವೆ. ಭಾಷೆಯ ಕಟ್ಟುಗಳನ್ನು ಹೊಂದಿರದ ರಚನೆಗಳ ಮಾತು ಒತ್ತಟ್ಟಿಗಿರಲಿ; ಇಲ್ಲೆಲ್ಲಾ ಮಾತಿನ ತಿರುಳನ್ನು ಕಡೆಗಣಿಸಿರುವುದು ರಾಚುವಂತಿದೆ.

### ವಂದ್ಯರಲ್ಲ

ಆನಂದಕುಮಾರ್ ಎಚ್.(ಚಿತ್ರದುರ್ಗ) ಇವರು 'ವಂದ್ಯರಲ್ಲ' ಎಂಬ ರಚನೆಯನ್ನು ಹೇಗೆ ಬಳಸಬೇಕೆಂದು ಕೇಳುತ್ತಾರೆ. ವಂದನೆ, ಗೌರವ, ಮನ್ನಣೆ ಮುಂತಾದವುಗಳನ್ನು ಪಡೆಯಲು ತಕ್ಕವರು 'ವಂದ್ಯರು' (ಇದು ಗೌರವಸೂಚಿಸುವ ಪ್ರತ್ಯಯ –ರು ವನ್ನು ಹೊಂದಿದೆ.) ಯಾರು ಗೌರವಕ್ಕೆ ,ವಂದನೆಗೆ, ಮನ್ನಣೆಗೆ ತಕ್ಕವರಲ್ಲವೋ ಅವರು 'ವಂದ್ಯರಲ್ಲ' ಎಂದು ಹೇಳುವುದು ವಾಡಿಕೆ. ವಂದ್ಯ ಸಂಸ್ಕೃತದಿಂದ ಬಂದು ಸೇರಿದ ಪದ. 'ವಂದನೀಯ' ಎನ್ನುವ ಇನ್ನೊಂದು ರಚನೆ ಕೂಡ ಇದೇ ತಿರುಳಿನಲ್ಲಿ ಬಳಕೆಯಾಗಬಲ್ಲುದು. ಗುಣ ಇಲ್ಲವೇ ಸ್ಥಿತಿ ಇಲ್ಲದಿರುವುದನ್ನು ಹೇಳಲು ಎರಡು ಬಗೆಗಳಿವೆ. ಒಂದು: ಅವು ಇಲ್ಲವೆಂದು ನೇರವಾಗಿ ಹೇಳುವುದು. ಇನ್ನೊಂದು ಬಗೆ: ಆ ಗುಣ ಇಲ್ಲವೇ ಸ್ಥಿತಿಯ ನಿಷೇಧರೂಪವನ್ನು ಬಳಸಿ ಹೇಳುವುದು. ಉದಾ.ಗೆ **ಅವರು ಯೋಗ್ಯರಲ್ಲ** ಮತ್ತು **ಅವರು ಅಯೋಗ್ಯರು** ಎಂಬ ಎರಡು ಪ್ರಯೋಗಗಳನ್ನು ನೋಡಿ. ಎರಡರ ತಿರುಳು ಒಂದೇ. ಆದರೆ ಹೇಳುವ ಕ್ರಮ ಬೇರೆಬೇರೆ.

### ಗಂಟೆ ಮತ್ತು ಘಂಟೆ

ಚನ್ನೇಶ್ ಎಂ ಜಿ. (ಹೆಬ್ಬಲಿಗೆ,ಸಾಗರ) ಗಂಟೆ ಮತ್ತು ಘಂಟೆ ಈ ಪದಗಳನ್ನು ಹೇಗೆ ಬಳಸಬೇಕು ಎಂದು ಕೇಳುತ್ತಾರೆ. ಇವೆರಡೂ ಒಂದೇ ತಿರುಳುಳ್ಳ ಪದಗಳು. ಘಂಟಾ ಎಂಬ ಸಂಸ್ಕೃತ ರೂಪದ ತದ್ಭವಗಳು. ಕೆಲವರು ದೇಗುಲಗಳಲ್ಲಿ ನಾದ ಹೊರಡಿಸುವ ಸಾಧನವನ್ನು ಘಂಟೆ ಎಂದು ತಿಳಿದು ಹಾಗೆಯೇ ಬಳಸುವುದುಂಟು. ಇದರಲ್ಲಿ ತಪ್ಪೇನೂ ಇಲ್ಲ. ಆದರೆ ಅಲ್ಲಿ ಗಂಟೆ ಎಂಬ ಪದವನ್ನು ನುಡಿದು, ಬರೆಯುವವರೂ ಇದ್ದಾರೆ. ಹಾಗೆಯೇ ದಿನದ ಕಾಲಾವಧಿಯನ್ನು ಸೂಚಿಸಲು ಗಂಟೆ ಎಂಬ ಪದವನ್ನು ಬಳಸುವುದು ಹೆಚ್ಚು ವಾಡಿಕೆಯಲ್ಲಿದೆ. ಇಲ್ಲಿ ಘಂಟೆ ಎಂದು ನುಡಿದು ಬರೆಯುವವರು ಕಡಿಮೆ. ತೀರಾ ಔಪಚಾರಿಕವಾದ ಕರೆಯೋಲೆಗಳಲ್ಲಿ ಅಲ್ಲಿಯೂ ಘಂಟೆ ಎಂದೇ ಬರೆಯುವುದುಂಟು. ಉದಾ.ಗೆ ಮದುವೆಯ ಕರೆಯೋಲೆಗಳನ್ನು ನೋಡಿ. ಕನ್ನಡ ಮಾತಾಡುವ ಕೆಲವು ಕಡೆಗಳಲ್ಲಿ ಕಾಲಾವಧಿಯನ್ನು ಹೇಳಲು ತಾಸು ಎಂಬ ಪದವನ್ನೂ, ಗೊತ್ತಾದ ಹೊತ್ತನ್ನು ಹೇಳಲು ಗಂಟೆ ಎಂಬ ಪದವನ್ನೂ ಬಳಸುತ್ತಾರೆ. ಎರಡು ತಾಸು ಎಂದರೆ ಅದು ಅವಧಿ; ಎರಡು ಗಂಟೆ ಎಂದರೆ ಅದು ದಿನದ ಗೊತ್ತಾದ ಹೊತ್ತು. (ಲೋಲಕಗಳಿದ್ದು ಕಾಲಸೂಚಿಸಲು ಗೊತ್ತಾದ ಸಂಖ್ಯೆಯಲ್ಲಿ 'ಗಂಟೆ' ಬಾರಿಸುತ್ತಿದ್ದ ಗಡಿಯಾರಗಳಿಂದ ಈ ಬಳಕೆ ಜಾರಿಗೆ ಬಂದಿರಬಹುದು)

### ಕನ್ನಡ ಪದಗಳೇ ಇರಬೇಕೆಂಬ ತವಕ

ನಮ್ಮ ನುಡಿ, ಬರಹಗಳಲ್ಲಿ ಕನ್ನಡ ಪದಗಳೇ ಇರಬೇಕೆಂಬ ತವಕದಿಂದ ತುಡಿಯುವ ಹಲವರು ಕಾಗದ ಬರೆದು ಕೇಳುತ್ತಾರೆ. ಡಾಕ್ಟರೇಟ್ ಎಂಬುದಕ್ಕೆ ಏಕೆ ಕನ್ನಡ ಪದವನ್ನು ಕಂಡುಹಿಡಿಯಲಾಗಿಲ್ಲ? (ಚಿದಂಬರ ಪಾಂ.ನಿಂಬರಗಿ, ಶಿರೋಳ, ಗದಗ) ಲೆಕ್ಚರರ್,ರೀಡರ್ ಮತ್ತು ಪ್ರೊಫೆಸರ್ ಈ ಪದಗಳಿಗೆ ಹೊಂದುವ ಕನ್ನಡ ಪದಗಳು ಯಾವುವು?(ಗುರುಮೂರ್ತಿ ಪೆಂಡಕೂರು, ವಿದೇಶದಿಂದ ಇ-ಅಂಚೆಯಲ್ಲಿ) ಇವು ಈ ಮಾದರಿಯ ಕೇಳ್ವಿಗಳು. ಹೀಗೆ ಕನ್ನಡವೇ ಬೇಕೆಂದು ಹೊರಡುವ ಹಲವರು ಅಚ್ಚ ಸಂಸ್ಕೃತಪದ ರಚನೆಗಳ ಮೊರೆ ಹೋಗುತ್ತಾರೆ. ಆ ರಚನೆಗಳೇ ಶುದ್ಧ ಕನ್ನಡವೆಂದು ತಿಳಿಯುತ್ತಾರೆ. ಉದಾ.ಗೆ ಆಸ್ಪತ್ರೆ ಎಂಬುದಕ್ಕೆ 'ಕನ್ನಡದಲ್ಲಿ' 'ಆರೋಗ್ಯಾಲಯ'ವೆಂದು ಏಕೆ ಹೇಳಬಾರದು ಎಂದು ಗಾಯತ್ರಿ ಮಂಜುನಾಥ್ (ಕುಣಿಗಲ್) ಕೇಳುತ್ತಾರೆ. ಇದು ಕನ್ನಡಿಗರ ಎದುರಿಗಿರುವ ಇಕ್ಕಟ್ಟು. ಇಂಗ್ಲಿಶ್(ಹಾಗೂ ಇತರ ಭಾಷೆಗಳು) ಮತ್ತು ಸಂಸ್ಕೃತಗಳ ನಡುವೆ ಆಯ್ದುಕೊಳ್ಳಬೇಕಾಗಿದೆ. ಪದವಿಗಳನ್ನು ಸೂಚಿಸುವ ರಚನೆಗಳಿಗೆ ಕನ್ನಡ ಪದಗಳನ್ನು ಹುಡುಕುವುದು ಬೇಕಾಗಿಲ್ಲ. ಏಕೆಂದರೆ ಅವು ಸೂಚಕಗಳಾಗಿರುತ್ತವೆ; ಅಷ್ಟೆ. ಇದೇ ಮಾತು ಜನರ ಹೆಸರುಗಳಿಗೂ ಹೊಂದುತ್ತದೆ. ಅಲೆಕ್ಸಾಂಡರ್ ಎಂಬುದನ್ನು ಅಲಕಸುಂದರ, ಗುಂಡರ್ಟ್ ಅನ್ನು ಗುಂಡುರಟ್ಟೆ, ಕಿಟ್ಟೆಲ್ ಅನ್ನು ಕಿತ್ತೀಳೆ ಎಂದೂ ಕರೆದದ್ದು ನಗೆ ಉಕ್ಕಿಸಬಹುದು. ಕನ್ನಡದಲ್ಲಿ ಕನ್ನಡ ಪದಗಳ ಜತೆಗೆ ಬೇರೆ ಭಾಷೆಯ ಪದಗಳು ಇರುವುದು ಈ ನುಡಿಯ ಹೆಚ್ಚಳವೆಂದೇ ತಿಳಿಯೋಣ. ಆದರೆ ಅವುಗಳನ್ನು ಬಳಸಲು ತಕ್ಕ ದಾರಿಗಳನ್ನು ಕಂಡುಕೊಳ್ಳಬೇಕು.

### ವಾಕ್ಯದಲ್ಲಿ ಐಬು

ಈ ವಾಕ್ಯವನ್ನು ಓದಿ: **ನನ್ನ ಮೇಲಿನ ಆರೋಪವೆಲ್ಲವೂ ಸತ್ಯಕ್ಕೆ ದೂರವಾದುದು.** ಇದನ್ನು ಓದಿದ ನಮಗೆ ಯಾರಿಗೂ ಈ ವಾಕ್ಯದಲ್ಲಿ ಏನೋ ಐಬು ಇದೆಯೆಂದು ಅನಿಸುವುದಿಲ್ಲ. ಏಕೆಂದರೆ ಈಚಿನ ದಿನಗಳಲ್ಲಿ ಪತ್ರಿಕೆಗಳು ಈ ಬಗೆಯ ವಾಕ್ಯಗಳನ್ನು ಓದಿ ಒಪ್ಪಿಕೊಳ್ಳುವುದನ್ನು ನಮಗೆ ಕಲಿಸಿಬಿಟ್ಟಿವೆ. ಸತ್ಯಕ್ಕೆ ದೂರವಾದ ಆರೋಪವೊಂದಿದ್ದರೆ ಸತ್ಯಕ್ಕೆ ಹತ್ತಿರವಾದ ಆರೋಪವೊಂದು ಇರಬೇಕಲ್ಲವೇ? ಆರೋಪ ಸತ್ಯವಾಗಿರುತ್ತದೆ ಇಲ್ಲವೇ ಸುಳ್ಳಾಗಿರುತ್ತದೆ. ಒಂದಕ್ಕಿಂತ ಹೆಚ್ಚಿನ ಆರೋಪಗಳನ್ನು ಮಾಡಿದಾಗ ಕೆಲವು ಸತ್ಯವಾಗಿರಬಹುದು ಮತ್ತೆ ಕೆಲವು ಸುಳ್ಳಾಗಿರಬಹುದು. ಒಂದೇ ಆರೋಪ ಸತ್ಯಕ್ಕೆ ದೂರ ಇಲ್ಲವೇ ಹತ್ತಿರವಾಗಿರುವುದು ಆಗದ ಮಾತು. ಹಾಗಿದ್ದಲ್ಲಿ ಈ ಬಗೆಯ ವಾಕ್ಯಗಳು ಕನ್ನಡದಲ್ಲಿ ರಚನೆಯಾಗಿ ಬಳಕೆಗೆ ಬರುತ್ತಿರುವುದೇಕೆ? ಇಂಗ್ಲಿಶಿನ ಮಾತಿನ ವರಸೆಗಳನ್ನು( ಉದಾ. ಫಾರ್ ಫ್ರಮ್ ಟ್ರೂತ್) ಅವು ಇರುವಂತೆಯೇ ಕನ್ನಡದಲ್ಲಿ ಹೇಳಲು ಹೊರಟಾಗ ಈ ಬಗೆಯ ರಚನೆಗಳು ಬಳಕೆಗೆ ಬರುತ್ತವೆ. ಅಲ್ಲದೆ **ಫ್ಯಾಕ್ಟ್** (ಸಂಗತಿ/ಮಾಹಿತಿ) ಮತ್ತು **ಟ್ರೂತ್** ಈ ಎರಡೂ ಪದಗಳಿಗೆ ಬದಲಾಗಿ ಸತ್ಯ ಎನ್ನುವ ಒಂದೇ ಪದವನ್ನು ಬಳಸಿದಾಗಲೂ ಹೀಗಾಗುತ್ತದೆ. ಮಾಹಿತಿಗಳಲ್ಲಿ ಕೊಂಚ ಹತ್ತಿರ ಇಲ್ಲವೇ ದೂರ ಇರಬಹುದು. ಆದರೆ ಸತ್ಯದ ಮಟ್ಟಿಗೆ ಇದು ಆಗದ ಮಾತು. ಕೋರ್ಟುಗಳಲ್ಲಿ ಸಾಕ್ಷಿ ಹೇಳಲು ಬಂದವರಿಂದ ಹೇಳಿಸುವ ಮಾತುಗಳನ್ನು ನೋಡಿ.

'ಸತ್ಯವನ್ನೇ ಹೇಳುತ್ತೇನೆ; ಸತ್ಯವನ್ನಲ್ಲದೆ ಬೇರೆನನ್ನೂ ಹೇಳುವುದಿಲ್ಲ ಮತ್ತು ನಾನು ಹೇಳುವುದೆಲ್ಲವೂ ಸತ್ಯ.' ಈ ಮೂರು ವಾಕ್ಯಗಳೂ ಒಟ್ಟಾಗಿ ಹೇಳುವುದೇನನ್ನು? ಸತ್ಯಕ್ಕೆ ಹತ್ತಿರವಾದುದು ಮತ್ತು ದೂರವಾದುದು ಎಂಬುದೇನೂ ಇಲ್ಲ ಎನ್ನುವುದನ್ನು ತಾನೆ? (ಸಾಕ್ಷಿಗಳು ಸತ್ಯವನ್ನೇ ಹೇಳುತ್ತಾರೋ ಇಲ್ಲವೋ ಎನ್ನುವುದು ಬೇರೆ ಮಾತು)

**ನಪುಂಸಕ**

ನಟರಾಜು. ವಿ (ಕೊಳ್ಳೇಗಾಲ) ಇವರು ನಾನು ಬರೆದ ಮಾತೊಂದಕ್ಕೆ ತಕರಾರು ಎತ್ತಿದ್ದಾರೆ. 'ಎತ್ತು ಎನ್ನುವುದು ನಪುಂಸಕ ಲಿಂಗವೆನ್ನುವಿರಿ. ಬುದ್ಧಿ ಇಲ್ಲದ ಎಲ್ಲವನ್ನೂ ನಪುಂಸಕವಾಗಿಸಿದ್ದರೆ ಹಸು ಎಂಬ ಪದವೇ ಸೃಷ್ಟಿಯಾಗುತ್ತಿರಲಿಲ್ಲ' ಎನ್ನುವುದು ಇವರ ವಾದ. ಜೀವಜಗತ್ತಿನಲ್ಲಿ ಹೆಣ್ಣುಗಂಡು ಎನ್ನುವ ವಿಂಗಡನೆಯಾಗುವ ಬಗೆಗೂ ಭಾಷೆಗಳು ತಮ್ಮ ರಚನೆಯ ಕಟ್ಟುಗಳಲ್ಲಿ ಲಿಂಗವೆಂಬುದನ್ನು ಗುರುತಿಸುವ ಬಗೆಗೂ ವ್ಯತ್ಯಾಸಗಳಿವೆ. ಒಂದೊಂದು ಭಾಷೆಯೂ ತನ್ನದೇ ಆದ ರೀತಿಯಲ್ಲಿ ಲಿಂಗವಿವಕ್ಷೆಯನ್ನು ಮಾಡಿಕೊಳ್ಳುತ್ತದೆ. ಕೆಲವು ಭಾಷೆಗಳಲ್ಲಿ ನಾಮಪದಗಳ ಕೊನೆಗೆ ಬರುವ ಸ್ವರವು ಹ್ರಸ್ವವೋ ಇಲ್ಲವೇ ದೀರ್ಘವೋ ಎನ್ನುವುದು ಆ ನಾಮಪದ ಪುಲ್ಲಿಂಗವೋ ಸ್ತ್ರೀಲಿಂಗವೋ ಎನ್ನುವುದನ್ನು ಹೇಳುತ್ತದೆ. ಹೀಗಾಗಿ ಸಂಸ್ಕೃತದ ಕೃಷ್ಣಾ, ಭೀಮಾ ಸ್ತ್ರೀಲಿಂಗಸೂಚಕಗಳಾಗುತ್ತವೆ. ಮತ್ತೆ ಕೆಲವು ಭಾಷೆಗಳಲ್ಲಿ ಕನ್ನಡದವರು ನಪುಂಸಕ ಎಂದು ಗುರುತಿಸುವ ನಾಮಪದಗಳಲ್ಲೂ ಪುಲ್ಲಿಂಗ ಮತ್ತು ಸ್ತ್ರೀಲಿಂಗಗಳನ್ನು ಗುರುತಿಸುತ್ತೇವೆ. ಮೀಸೆ, ಗಡ್ಡ ಎಂಬ ಪದಗಳ ಹಿಂದಿ ಭಾಷೆಯ ರೂಪಗಳು ಆ ಭಾಷೆಯಲ್ಲಿ ನಪುಂಸಕ ಲಿಂಗಗಳಲ್ಲ; ಅವು ಸ್ತ್ರೀಲಿಂಗವೋ ಪುಲ್ಲಿಂಗವೋ ಆಗಿರುತ್ತವೆ. ಕನ್ನಡದಂತಹ ಕೆಲವು ಭಾಷೆಗಳು ಈ ಲಿಂಗವಿವಕ್ಷೆಗೆ ಬಳಸುವ ಮಾದರಿ ಹೀಗಿದೆ. ನಮ್ಮ ಸುತ್ತಣ ಜಗತ್ತಿನಲ್ಲಿರುವ ವಸ್ತು, ಸಸ್ಯ ಮತ್ತು ಪ್ರಾಣಿಗಳನ್ನು ಮೊದಲು ಸ್ವತಂತ್ರ ವಿವೇಚನೆಯುಳ್ಳವು (ಮಹತ್) ಮತ್ತು ಸ್ವತಂತ್ರ ವಿವೇಚನೆ ಇರದವು(ಅಮಹತ್) ಎಂಬ ಎರಡು ಗುಂಪುಗಳನ್ನು ಮಾಡಬೇಕು. ಇವುಗಳಲ್ಲಿ ಎರಡನೆಯ ಗುಂಪಿಗೆ ಸೇರಿದ ನಾಪದಗಳೆಲ್ಲ ನಪುಂಸಕ; ಮೊದಲಗುಂಪಿನ ಪದಗಳಲ್ಲಿ ಜೈವಿಕ ರಚನೆಗೆ ತಕ್ಕಂತೆ ಗಂಡು ಇಲ್ಲವೇ ಹೆಣ್ಣು ಎಂಬ ಗುಂಪುಗಳನ್ನು ಮಾಡಿ ಅವುಗಳನ್ನು ಪುಲ್ಲಿಂಗ ಹಾಗೂ ಸ್ತ್ರೀಲಿಂಗ ಎಂದು ಗುರುತಿಸಬೇಕು. ಆದ್ದರಿಂದ ಎತ್ತು ಮತ್ತು ಹಸು ಎಂಬುದು ಗಂಡು ಇಲ್ಲವೆ ಹೆಣ್ಣು ಎನ್ನುವುದು ಗಣನೆಗೆ ಬರುವುದಕ್ಕೆ ಮೊದಲೇ ಅವೆಲ್ಲವೂ ಸ್ವತಂತ್ರ ವಿವೇಚನೆ ಇಲ್ಲದ ಗುಂಪಿಗೆ ಸೇರಿದ ನಾಮಪದಗಳಾಗಿರುವುದರಿಂದ ನಪುಂಸಕ ಎನಿಸಿಕೊಳ್ಳುತ್ತವೆ.

ಒಂದು ಭಾಷೆ ತಾನು ಲಿಂಗವಿವಕ್ಷೆ ಮಾಡುವ ಬಗೆಯನ್ನು ಕಾಲದಿಂದ ಕಾಲಕ್ಕೆ ಬದಲಿಸಿಕೊಳ್ಳಲೂ ಬಹುದು. ಉದಾಹರಣೆಗೆ ಈಗ ಕನ್ನಡದಲ್ಲಿ ಪ್ರಾಣಿಪಕ್ಷಿಗಳನ್ನೆಲ್ಲ ನಪುಂಸಕ ಲಿಂಗದ ಗುಂಪಿನಲ್ಲಿ ಇರಿಸುವುದುಂಟು ತಾನೆ. ಆದರೆ ನಡುಗನ್ನಡದಲ್ಲಿ ಈ ಗುಂಪಿಗೆ ಸೇರಿದ ನಾಮಪದಗಳಲ್ಲಿ ಕೆಲವನ್ನು ಸ್ವತಂತ್ರ ವಿವೇಚನೆಯುಳ್ಳ ನಾಮಪದಗಳ ಗುಂಪಿನ ಭಾಗವಾಗಿ ನೋಡುತ್ತಿದ್ದಂತೆ ತೋರುತ್ತದೆ. ಬಸವಣ್ಣನವರ ಈ ವಚನವನ್ನು ನೋಡಿ: **ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ. ಅಂಬುಜಕೆ ಭಾನುವಿನ ಉದಯದ**

**ಚಿಂತೆ'** ಇಲ್ಲಿ ಚಕೋರ ಮತ್ತು ಅಂಬುಜ ಎರಡೂ ಪದಗಳನ್ನು ಇಂದಿನ ಕನ್ನಡ ನಪುಂಸಕವೆಂದೆ ತಿಳಿಯುತ್ತದೆ. ನಾವು ಈ ಪದಗಳಿಗೆ ಚತುರ್ಥಿ ವಿಭಕ್ತಿ ಪ್ರತ್ಯಯವನ್ನು ಸೇರಿಸಿದರೆ **ಚಕೋರಕ್ಕೆ** ಮತ್ತು **ಅಂಬುಜಕ್ಕೆ** ಎಂದೇ ಹೇಳುತ್ತೇವೆ. ಆದರೆ ವಚನದಲ್ಲಿ **ಚಕೋರಂಗೆ(>ಚಕೋರನಿಗೆ)** ಎಂಬ ರೂಪವಿದೆ. ಚಕೋರವನ್ನು ಪುಲ್ಲಿಂಗವೆಂದು ಗುರುತಿಸಿರುವುದು ಇದರಿಂದ ತಿಳಿಯುವುದಷ್ಟೆ. (ಇದೇ ವಚನದಲ್ಲಿ ಮುಂದೆ ಬರುವ **ಭ್ರಮರ** ಎನ್ನುವ ನಾಮಪದ ಕೂಡ ಪುಲ್ಲಿಂಗವಾಗಿಯೇ ಪರಿಗಣಿತವಾಗಿದೆ)ಹೀಗಾಗಿ ಭಾಷೆಗಳಲ್ಲಿ ಲಿಂಗವಿವಕ್ಷೆ ಎನ್ನುವುದು ಲೋಕಸತ್ಯವನ್ನು ಅವಲಂಬಿಸುವುದಿಲ್ಲ ಮತ್ತು ಅದು ಕಾಲದಿಂದ ಕಾಲಕ್ಕೆ ಬದಲಾಗುತ್ತಲೂ ಹೋಗಬಹುದು ಎನ್ನುವುದು ತಿಳಿಯುತ್ತದೆ.

**ಒಂದುವೇಳೆ ಮತ್ತು ಅಕಸ್ಮಾತ್**

ಗೆಳೆಯರೊಬ್ಬರು 'ಒಂದುವೇಳೆ' ಮತ್ತು 'ಅಕಸ್ಮಾತ್' ಎಂಬ ರಚನೆಗಳನ್ನು ಒಂದರ ಬದಲು ಇನ್ನೊಂದು ಬರುವಂತೆ ಬಳಸಬಹುದೇ ಎಂದು ಕೇಳಿದರು. ಅಕಸ್ಮಾತ್ ಎಂಬುದು ಸಂಸ್ಕೃತ ನುಡಿಯ ರಚನೆ. ಈ ಪದವನ್ನು ಬಿಡಿಯಾಗಿ ಇಲ್ಲವೇ **–ಆಗಿ** ( ಅಕಸ್ಮಾತ್ತಾಗಿ) ಎಂಬ ಪದಭಾಗದೊಡನೆ ಬಳಸುವುದುಂಟು. ಅಕಸ್ಮಾತ್ತಾಗಿ ಎಂಬುದರ ಬದಲು ಕೆಲವು ಕಡೆ ಆಕಸ್ಮಿಕವಾಗಿ ಎಂದೂ ಬಳಕೆಯಾಗುವುದುಂಟು. ಹಾಗೆಯೇ ಆಕಸ್ಮಿಕ ಎಂಬ ಬಿಡಿ ಪದದ ಬಳಕೆಯೂ ಇದೆ. **ಒಂದುವೇಳೆ** ಎಂಬುದು ಒಂದು ರಚನೆಯಾದರೂ ಅದರ ಬಳಕೆಯ ನೆಲೆಯಲ್ಲಿ ಒಂದು ಪದದಂತೆಯೇ ನಡೆದುಕೊಳ್ಳುತ್ತದೆ. ಏಕೆಂದರೆ ಆ ರಚನೆಯಲ್ಲಿರುವ ವೇಳೆ ಪದದ ತಿರುಳನ್ನೆ ಪಡೆದಿರುವ **ಕಾಲ, ಸಮಯ, ಹೊತ್ತು** ಎಂಬ ಪದಗಳನ್ನು ಅದರ ಜಾಗದಲ್ಲಿ ಬಳಸಲು ಬರುವುದಿಲ್ಲ. ಕೆಲವರು ಅಲ್ಲಲ್ಲಿ ಬಳಸುವ **ಒಂದು ಸಮಯ** ಎಂಬ ರಚನೆಯನ್ನು ಬಿಟ್ಟರೆ **ಒಂದು ಕಾಲ, ಒಂದು ಹೊತ್ತು** ಎಂಬ ರಚನೆಗಳನ್ನು ಒಂದುವೇಳೆ ಎಂಬುದಕ್ಕೆ ಬದಲಾಗಿ ಬಳಸಲು ಬರುವುದಿಲ್ಲ. ತೀರಾ ಈಚೆಗೆ ಕೆಲವು ಕಡೆ **ಒಂದೊಮ್ಮೆ** ಎಂಬ ರಚನೆಯು **ಒಂದುವೇಳೆ** ಎಂಬುದರ ಬದಲು ಬಳಕೆಯಾಗುವಂತೆ ಕಾಣುತ್ತಿದೆ.

'ನೀವು ಪೇಟೆಗೆ ಹೋದಾಗ ಅಕಸ್ಮಾತ್ ನಮ್ಮ ತಂದೆ ಕಂಡರೆ ಅವರಿಗೆ ಬೇಗ ಮನೆಗೆ ಬರಲು ಹೇಳಿ' ಎಂಬ ವಾಕ್ಯವನ್ನು 'ನೀವು ಪೇಟೆಗೆ ಹೋದಾಗ ಒಂದುವೇಳೆ ನಮ್ಮ ತಂದೆ ಕಂಡರೆ ಅವರಿಗೆ ಬೇಗೆ ಮನೆಗೆ ಬರಲು ಹೇಳಿ' ಎಂದು ಹೇಳಿದರೆ ಎರಡೂ ವಾಕ್ಯಗಳ ತಿರುಳಿನಲ್ಲಿ ಅಷ್ಟೇನೂ ಬದಲಾವಣೆಯಾದಂತೆ ತೋರುವುದಿಲ್ಲ. ಆದರೆ ಮುಂದಿನ ವಾಕ್ಯಗಳನ್ನು ನೋಡಿ: ' ಅಕಸ್ಮಾತ್ ಎದುರಿಗೆ ಬಂದ ಕಾರಿಗೆ ಡಿಕ್ಕಿ ಹೊಡೆದು ಕೆಳಗೆ ಬಿದ್ದನು' ಮತ್ತು ' ಒಂದುವೇಳೆ ಎದುರಿಗೆ ಬಂದ ಕಾರಿಗೆ ಡಿಕ್ಕಿ ಹೊಡೆದು ಕೆಳಗೆ ಬಿದ್ದನು' ಈ ಎರಡು ವಾಕ್ಯದಲ್ಲಿ ಎರಡನೆಯದು ಒಪ್ಪಿತ ವಾಕ್ಯವಲ್ಲ. ಅಂದರೆ ಇಂತಹ ಕಡೆಗಳಲ್ಲಿ ಅಕಸ್ಮಾತ್ ಬದಲು ಒಂದುವೇಳೆ ಎಂದು ಹೇಳಲು ಆಗುವುದಿಲ್ಲ. ಈ ಮುಂದಿನ ಎರಡು ವಾಕ್ಯಗಳನ್ನು ನೋಡಿ: 'ಈ ಶರತ್ತಿಗೆ ನೀನು ಒಂದುವೇಳೆ ಒಪ್ಪಿದರೂ ಅವನು ಒಪ್ಪಲಾರ.' ಮತ್ತು 'ಈ ಶರತ್ತಿಗೆ ನೀನು ಅಕಸ್ಮಾತ್ ಒಪ್ಪಿದರೂ ಅವನು ಒಪ್ಪಲಾರ' ಇವೆರಡೂ ಒಪ್ಪಿತ ವಾಕ್ಯಗಳೆಂದು ತೋರಿದರೂ

ಒಂದರ ಬದಲು ಇನ್ನೊಂದು ಬಳಕೆಯಾಗಲಾರವು. ಅವೆರಡರ ನಡುವೆ ತಿರುಳಿನ ಬದಲಾವಣೆ ಇದೆ. ಒಟ್ಟಾರೆ ಕೆಲವು ಕಡೆಗಳಲ್ಲಿ ಅಕಸ್ಮಾತ್ ಮತ್ತು ಒಂದುವೇಳೆ ಎಂಬ ರಚನೆಗಳು ಒಂದರ ಬದಲು ಇನ್ನೊಂದು ಬಳಕೆಯಾಗಬಲ್ಲವಾದರೂ ಎಲ್ಲ ಕಡೆಗಳಲ್ಲೂ ಹಾಗೆ ಮಾಡಲು ಆಗುವುದಿಲ್ಲ.

**ಗೋಜಲನ್ನು ಉಂಟುಮಾಡುವ ವಾಕ್ಯಗಳು**

ಈ ಮುಂದಿನ ವಾಕ್ಯವನ್ನು ನೋಡಿ; 'ರಾಜ್ಯದಲ್ಲಿ ವಿದ್ಯುತ್ ಕೊರತೆ ಇದೆ ಎಂಬುದಂತೂ ಸುಳ್ಳಲ್ಲ.' ಈ ವಾಕ್ಯದಲ್ಲಿ ಎರಡು ವಾಕ್ಯಗಳಿವೆ. ಮೊದಲ ವಾಕ್ಯ: ರಾಜ್ಯದಲ್ಲಿ ವಿದ್ಯುತ್ ಕೊರತೆ ಇದೆ' ಎಂಬ ಪ್ರಸ್ತಾವವನ್ನು ಮಂಡಿಸುತ್ತದೆ. ಈ ವಾಕ್ಯದ ಪ್ರಸ್ತಾವದ ಬಗೆಗೆ ಒಂದು ನಿಲುವನ್ನು ಮಂಡಿಸುತ್ತ'(ಇದು=ಈ ಪ್ರಸ್ತಾವ) ಸುಳ್ಳಲ್ಲ' ಎಂದು ಎರಡನೆಯ ವಾಕ್ಯ ಹೇಳುತ್ತದೆ. ಹೀಗೆ ಒಂದು ಪ್ರಸ್ತಾವ ಮತ್ತು ಆ ಪ್ರಸ್ತಾವವನ್ನು ಕುರಿತ ನಿಲುವು ಇವೆರಡನ್ನೂ ಒಟ್ಟಿಗೆ ಹೇಳುವ ವಾಕ್ಯರಚನೆಗಳು ಕನ್ನಡದಲ್ಲಿ ಈಚೆಗೆ ಹೆಚ್ಚಾಗುತ್ತಿವೆ. ಅದರಲ್ಲೂ ಕೆಲವು ದಶಕಗಳಿಂದ ಬರವಣಿಗೆಗೆ ಈ ಬಗೆಯ ರಚನೆಗಳು ಮೀಸಲಾಗಿದ್ದರೂ ಈಗ ಔಪಚಾರಿಕ ಮಾತಿನಲ್ಲೂ ಕಾಣಿಸಿಕೊಳ್ಳತೊಡಗಿವೆ. ರಾಜಕಾರಣಿಗಳ ಭಾಷಣದಲ್ಲಿ ಟಿವಿ ನಿರೂಪಣೆಗಳಲ್ಲಿ ಇಂತಹ ವಾಕ್ಯಗಳನ್ನು ಹೆಚ್ಚು ಕೇಳಬಹುದಾಗಿದೆ. ಉದಾ. ' ರಾಷ್ಟ್ರ ಆರ್ಥಿಕ ಉನ್ನತಿಯನ್ನು ಪಡೆದಿದೆಯೆಂದು ಬಿಂಬಿಸಲಾಗುತ್ತಿದೆ', 'ರೈತರು ಸಾಲ ತೀರಿಸಲಾರದೆ ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ ಎಂಬುದು ನಾವೆಲ್ಲರೂ ಒಪ್ಪಬೇಕಾದ ಮಾತು'

ಮೇಲೆ ಹೇಳಿದ ಇಂತಹ ರಚನೆಗಳಲ್ಲಿ ಎರಡು ನಿರೂಪಣೆಯ ನೆಲೆಗಳಿರುತ್ತವೆ. ಪ್ರಸ್ತಾವವನ್ನು ಮಂಡಿಸುವ ನಿರೂಪಣೆಯ ನೆಲೆ ಒಂದು; ಆ ಪ್ರಸ್ತಾವದ ಬಗೆಗೆ ನಿಲುವನ್ನು ಹೇಳುವ ನೆಲೆ ಇನ್ನೊಂದು. ಇವೆರಡೂ ನೆಲೆಗಳನ್ನೂ ಒಂದುಗೂಡಿಸಿದರೆ ಆಗ ಮೇಲೆ ಹೇಳಿದ ವಾಕ್ಯ ಸರಳವಾಗಿ 'ರಾಜ್ಯದಲ್ಲಿ ವಿದ್ಯುತ್ ಕೊರತೆ ಇದೆ' ಎಂದಾಗುತ್ತದೆ. ಆದರೆ ಬರೆಯುವವರು ಹಾಗೂ ಮಾತನಾಡುವವರು ಏಕೆ ಎರಡು ನಿರೂಪಣೆಯ ನೆಲೆಗಳಿರುವ ವಾಕ್ಯರಚನೆಗಳನ್ನು ಆಯ್ದುಕೊಳ್ಳುತ್ತಾರೆ ಎನ್ನುವುದು ಕುತೂಹಲದ ಸಂಗತಿ. ಸರಳ ಇಲ್ಲವೇ ನೇರ ನಿರೂಪಣೆ ಬಯಸುವವರು ಇವೆರಡೂ ನಿರೂಪಣೆಯ ನೆಲೆಗಳನ್ನು ಎರಡು ಬೇರೆಬೇರೆ ವಾಕ್ಯಗಳನ್ನಾಗಿ ಮಾಡಿ ಬರೆಯಬೇಕೆಂದು ಇಲ್ಲವೇ ಹೇಳಬೇಕೆಂದು ವಾದಿಸುವುದುಂಟು. ಬರವಣಿಗೆಯಲ್ಲಿ ಕೆಲವೊಮ್ಮೆ ಬರೆಯುವವರು ತಮ್ಮ ದೃಷ್ಟಿಕೋನವು ತಟಸ್ಥವಾಗಿದೆಯೆಂದು ತೋರಿಸಲು ಈ ಬಗೆಯ ತಂತ್ರವನ್ನು ಬಳಸುವುಂಟು. ಆದರೆ ಮಾತಿನಲ್ಲಿ ಇಂತಹ ರಚನೆಗಳು ಕೇಳಿಸಿಕೊಳ್ಳುವವರಿಗೆ ಗೋಜಲನ್ನು ಉಂಟುಮಾಡುತ್ತವೆ. ಏಕೆಂದರೆ ಮಾತಾಡುತ್ತಿರುವವರು ಬೇಕೆಂದೇ ತಮ್ಮ ನಿರೂಪಣೆಯನ್ನು ಗಂಟುಗಂಟು ಮಾಡುತ್ತಿರುತ್ತಾರೆ. ಇಲ್ಲವೇ ಪ್ರಸ್ತಾವ ಮಂಡಿಸುವ ಮತ್ತು ಅದರ ಬಗೆಗೆ ನಿಲುವನ್ನು ಹೇಳುವ ಎರಡೂ ಪಾತ್ರಗಳನ್ನು ಒಬ್ಬರೇ ನಿರ್ವಹಿಸುತ್ತಿದ್ದಾರೆಂದು ಕೇಳುಗರಿಗೆ ಅನಿಸತೊಡಗುತ್ತದೆ.ಇವೆರಡರಲ್ಲಿ ಯಾವುದು ಅಧಿಕೃತ ಎಂಬ ಗೊಂದಲ ಕೇಳುತ್ತಿರುವವರಲ್ಲಿ ಉಂಟಾಗುತ್ತದೆ. ಸಂವಹನ ತಂತ್ರಗಳನ್ನು ಅಭ್ಯಾಸಮಾಡುವವರು ಈ ಬಗೆಯ ರಚನೆಗಳು ಹೆಚ್ಚುತ್ತಿರುವ ಬಗೆಗೆ ತಲೆಕೆಡಿಸಿಕೊಳ್ಳಬೇಕಾಗಿದೆ.

**ಫ಼್**

ನಾಗರಾಜರಾವ್. ಎ(ಬೆಂಗಳೂರು) ಇವರು ಕನ್ನಡದಲ್ಲಿ ಬರವಣಿಗೆಯ ಚಿಹ್ನೆಯೊಂದನ್ನು ಸರಿಯಾಗಿ ಬಳಸುತ್ತಿಲ್ಲವೆಂದು ಸೂಚಿಸಿದ್ದಾರೆ. ಇಂಗ್ಲಿಶಿನಿಂದ ಪಡೆದುಕೊಂಡು ಬಳಸುತ್ತಿರುವ ಪದಗಳ ಮೂಲದಲ್ಲಿ ಎಫ಼್ ಧ್ವನಿಯು ಇದ್ದರೆ ಅದನ್ನು ಕನ್ನಡದಲ್ಲಿ ಬರೆಯಲು **ಫ಼್** ಎಂಬ ಚಿಹ್ನೆಯನ್ನು ರೂಪಿಸಿಕೊಂಡಿದ್ದೇವೆ. ಈ ಚಿಹ್ನೆಯ ಬಳಕೆಯನ್ನು ನಾವು ಮಕ್ಕಳಿಗೆ ಶಾಲಾ ದಿನಗಳಲ್ಲಿ ಹೇಳಿಕೊಡುವುದಿಲ್ಲ. ಅದಿರಲಿ. ದಿ ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆಯ ಹೆಸರನ್ನು ಕನ್ನಡದಲ್ಲಿ ಬರೆಯುವಾಗ ಆಫ಼್ ಎಂದೇಕೆ ಬರೆಯುತ್ತಿಲ್ಲ ಎನ್ನುವುದು ಈ ಓದುಗರ ಪ್ರಶ್ನೆ. **ಫ಼್** ಮತ್ತು **ಜ಼್** (ಇಂಗ್ಲಿಶಿನ ಜಡ್ ಮತ್ತು ಡ್‌ಜ್ ಧ್ವನಿಯುಳ್ಳ ಪದಗಳನ್ನು ಬರೆಯುವಾಗ ಬಳಸುವ ಚಿಹ್ನೆ ಉದಾ.ಗೆ ಜ಼ೂ, ಬಜೆ಼ಟ್ ಮುಂತಾದವು) ಚಿಹ್ನೆಗಳ ಬಳಕೆಯು ಹೇಗೆ ನಡೆಯ ಬೇಕು ಎಂಬುದನ್ನು ಇನ್ನೂ ಖಚಿತಮಾಡಿಕೊಂಡಿಲ್ಲ. ಆಗಲೇ ಹೇಳಿದಂತೆ ಅದು ಶಾಲಾ ಕಲಿಕೆಯಲ್ಲಿ ನೆಲೆಯಾಗದಿದ್ದರೆ ಆಗ ಆ ಚಿಹ್ನೆಗಳನ್ನು ಬಳಸುವಲ್ಲಿ ಗೊಂದಲಗಳು ಮುಂದುವರೆಯುತ್ತವೆ.

ಇದಲ್ಲದೆ ಇಂಗ್ಲಿಶಿನ **ಫ಼್** ಧ್ವನಿಯು ಮೂಲದಲ್ಲಿ ಕೆಳತುಟಿ ಮತ್ತು ಮೇಲಿನ ಹಲ್ಲಿನ ಸಾಲುಗಳ ನೆರವಿನಿಂದ ಉಚ್ಚಾರವಾಗುತ್ತದೆ. ಕನ್ನಡದಲ್ಲಿ ಆ ಬಗೆಯಲ್ಲಿ ನುಡಿಯುವ ಧ್ವನಿಗಳು ಯಾವುವೂ ಇಲ್ಲ. **ಫ಼್** ಧ್ವನಿಯುಳ್ಳ ಪದಗಳನ್ನು ನಾವು ಎರಡೂ ತುಟಿಗಳನ್ನು ಹತ್ತಿರ ತರುವ ಮೂಲಕ ನುಡಿಯುತ್ತೇವೆ. ಆದರೆ **ಫ್** (ಮಹಾಪ್ರಾಣ) ಮತ್ತು **ಫ಼್** ಗಳ ನುಡಿಯುವಿಕೆಯಲ್ಲಿ ವ್ಯತ್ಯಾಸವಿದೆ. **ಫ್** ನುಡಿಯುವಾಗ ಬಾಯಿಯಿಂದ ಹೊರಹೋಗುವ ಗಾಳಿಯನ್ನು ಕೊಂಚಕಾಲ ತುಟಿಗಳಿಂದ ತಡೆದು ಬಳಿಕ ತಟಕ್ಕನೆ ಹೊರಬಿಡುತ್ತೇವೆ. ಆದರೆ **ಫ಼್** ನುಡಿಯುವಾಗ ಗಾಳಿಯನ್ನು ಹೆಚ್ಚು ಒತ್ತಡದಿಂದ ತುಟಿಗಳ ನಡುವೆ ನುಗ್ಗುವಂತೆ ಮಾಡುತ್ತೇವೆ; ತಡೆಯುವುದಿಲ್ಲ. ಹಾಗಾಗಿ ಇವೆರಡೂ ಬೇರೆಬೇರೆ ಧ್ವನಿಗಳೇ ಆಗಿವೆ. ಎರಡನೆಯ ಬಗೆಯ(**ಫ಼್**) ಧ್ವನಿಗೆ ಚಿಹ್ನೆ ಹೇಗೆ ಎಲ್ಲ ಕನ್ನಡಿಗರಲ್ಲೂ ನೆಲೆಗೊಂಡಿಲ್ಲವೋ ಹಾಗೆಯೇ ಈ ಧ್ವನಿಯ ನುಡಿಯುವಿಕೆ ಕೂಡ ಎಲ್ಲ ಕನ್ನಡಿಗರಲ್ಲಿ ನೆಲೆಗೊಂಡಿಲ್ಲ. **ಫ಼್** ಧ್ವನಿಯನ್ನು **ಫ್** ಇಲ್ಲವೇ **ಪ್** ಎಂದೇ ನುಡಿಯುವುದು ವಾಡಿಕೆ. **ಫ಼್** ಚಿಹ್ನೆ ಕನ್ನಡ ಬರವಣಿಗೆಯಲ್ಲಿ ನೆಲೆಗೊಳ್ಳಲೇ ಬೇಕಾದ ಒತ್ತಡ ಮೂಡಬೇಕಾದರೆ ಅದರ ನುಡಿಯುವಿಕೆ ಕೂಡ ಕನ್ನಡಿಗರಲ್ಲಿ ನೆಲಯೂರ ಬೇಕು. ಅಲ್ಲಿಯವರೆಗೆ ಈ ಗೊಂದಲ ಮುಂದುವರೆಯತ್ತಲೇ ಇರುತ್ತದೆ.

**ಶ, ಷ ಯಾವ ಚಿಹ್ನೆಯನ್ನು ಎಲ್ಲಿ ಬರೆಯಬೇಕು?**

ಅನಂತಮೂರ್ತಿ ಎಂ.ಎನ್ (ಬೆಂಗಳೂರು) ಇವರೂ ಕನ್ನಡ ಬರವಣಿಗೆಯ ಒಂದು ಗೊಂದಲವನ್ನು ಮುಂದಿಟ್ಟಿದ್ದಾರೆ. **ಶ, ಷ** ಧ್ವನಿಚಿಹ್ನೆಗಳಿರುವ ಪದಗಳನ್ನು ಬರೆಯುವಾಗ ಯಾವ ಚಿಹ್ನೆಯನ್ನು ಎಲ್ಲಿ ಬರೆಯಬೇಕು ಎಂಬುದನ್ನು ಹೇಗೆ ಪರಿಹರಿಸಿಕೊಳ್ಳುವುದೆಂಬುದು ಇವರ ಸಮಸ್ಯೆ, ಉದಾ.ಗೆ **ಸುಭಾಶಿತ/ಸುಭಾಷಿತ, ಶುಭಾಶಯ/ಶುಭಾಷಯ** ಮುಂತಾದವು. ಶ ಮತ್ತು ಷ ಧ್ವನಿಗಳು ಕನ್ನಡದ ಧ್ವನಿಗಳಲ್ಲ.

ಹೇಗೋ **ಇಷ್ಟು, ಎಷ್ಟು** ಮತ್ತು **ಅಷ್ಟು** ಎಂಬ ಪದಗಳ ಬರೆಹರೂಪದಲ್ಲಿ ಈ ಷಕಾರ ಚಿಹ್ನೆ ಕಾಲೂರಿಬಿಟ್ಟಿದೆ. ಇವುಗಳ ಹಳೆಯ ರೂಪದಲ್ಲಿ ಈ ಧ್ವನಿಗಳು ಇರಲಿಲ್ಲ. ಆ ಮಾತು ಬದಿಗಿರಿಸಿ. **ಶ** ಮತ್ತು **ಷ** ಇವು ಬೇರೆ ಭಾಷೆಗಳಿಂದ ಪಡೆದುಕೊಂಡ ಪದಗಳಲ್ಲಿ ಕಾಣಿಸುವ ಧ್ವನಿಗಳು. ಆದರೆ ಇವೆರಡರ ನಡುವೆ ನುಡಿಯುಪಿಕೆಯಲ್ಲಿ ಇರುವ ವ್ಯತ್ಯಾಸಗಳನ್ನು ನಾವು ಪಾಲಿಸುತ್ತಿಲ್ಲ. ಇವೆರಡನ್ನೂ ಒಂದೇ ರೀತಿಯಲ್ಲಿ ನುಡಿಯುತ್ತಿದ್ದೇವೆ; ಅಲ್ಲದೆ ಯಾರಾದರೂ ಬೇರೆಬೇರೆ ಬಗೆಯಲ್ಲಿ ನುಡಿದರೂ ನಮಗೆ ಅವುಗಳ ನಡುವೆ ಇರುವ ವ್ಯತ್ಯಾಸ ತಿಳಿಯುವುದೂ ಇಲ್ಲ. ಆದ್ದರಿಂದ ಇವೆರಡೂ ಧ್ವನಿಗಳಿಗೆ ಒಂದೇ ಚಿಹ್ನೆಯನ್ನು ಬಳಸುವುದು ಸರಿ. ಇದರಿಂದ ಮೊದಮೊದಲು ಹಳಬರ ಕಣ್ಣಿಗೆ ಮುಜುಗರವಾದರೂ ದಿನಕಳೆದಂತೆ ಸರಿಹೋಗುತ್ತದೆ. ಅಲ್ಲದೆ ಯಾವಾಗ ಯಾವ ಚಿಹ್ನೆ ಬರೆಯಬೇಕೆಂಬ ಗೊಂದಲವೂ ಇರುವುದಿಲ್ಲ.

ಇಲ್ಲಿ ಸೂಚಿಸಿದ ಪರಿಹಾರವನ್ನು ನಾವು ಈಗಾಗಲೇ ಬೇರೊಂದು ಬಗೆಯಲ್ಲಿ ಬಳಸುತ್ತಲೇ ಇದ್ದೇವೆ. ಇಂಗ್ಲಿಶ್ ಮತ್ತು ಪರ್ಸೋ-ಅರಾಬಿಕ್(ಉರ್ದು) ಮೂಲದಿಂದ ಪಡೆದುಕೊಂಡ ಪದಗಳಲ್ಲಿ ಈ ಎರಡೂ ಧ್ವನಿಚಿಹ್ನೆಗಳಲ್ಲಿ ಒಂದರ ಬದಲು ಇನ್ನೊಂದನ್ನು ಬಳಸುತ್ತಿದ್ದೇವೆ. **ಶರತ್ತು/ಷರತ್ತು, ಶರಬತ್ತು/ ಷರಬತ್ತು, ಶೇಕ್ಸ್‌ಪಿಯರ್/ಷೇಕ್ಸ್‌ಪಿಯರ್** ಹೀಗೆ. ಇಲ್ಲಿ ಯಾವ ನಿಯಮವನ್ನೂ ಹೇಳಲು ಬರುವುದಿಲ್ಲ. ಏಕೆಂದರೆ ಇವೆರಡೂ ಧ್ವನಿಗಳೂ ಮೂಲ ಭಾಷೆಗಳಲ್ಲಿ ಇಲ್ಲ. ಇದು ನಾವು, ಕನ್ನಡಿಗರು ಆರೋಪಿಸಿಕೊಂಡಿರುವ ನುಡಿಯುವಿಕೆ. ಆದ್ದರಿಂದ **ಶ** ಮತ್ತು **ಷ** ಗಳಲ್ಲಿ ಒಂದನ್ನು ಮಾತ್ರ ಕನ್ನಡ ಬರವಣಿಗೆಯಲ್ಲಿ ಬಳಸುವುದು ಸರಿ. ಹೆಚ್ಚು ಕಡೆ **ಶ** ಬರುವುದರಿಂದ ಅದನ್ನೆ ಉಳಿಸಿಕೊಳ್ಳುವುದು ಸರಿಯಾದೀತು.

**ಋ**

ಇದೇ ಓದುಗರು ಋಕಾರ ಚಿಹ್ನೆಯ ಬಳಕೆಯ ಗೊಂದಲವನ್ನೂ ಮುಂದಿಟ್ಟಿದ್ದಾರೆ. ಈಗಾಗಲೇ **ಋಕಾರ** ಮತ್ತು ಅದರ ಕಾಗುಣಿತ ಚಿಹ್ನೆಯ ಬಳಕೆಯನ್ನು ಬದಲಿಸಬೇಕೆಂಬ ಸೂಚನೆಯನ್ನು ಶಿಕ್ಷಣ ವಲಯದಲ್ಲಿ ಚರ್ಚಿಸಿದ್ದಾರೆ. ಕನ್ನಡ ಕಲಿಕೆಯ ಪುಸ್ತಕಗಳಿಂದ ಋಕಾರವನ್ನು ಹೊರಗಿಡಬೇಕೆಂದೂ ಸಲಹೆ ನೀಡಲಾಗಿದೆ. ಇದಕ್ಕೆ ಕಾರಣವಿದೆ. ಋಕಾರ ಮತ್ತು ಅದರ ಕಾಗುಣಿತ ಚಿಹ್ನೆಯುಳ್ಳ ಪದಗಳೆಲ್ಲ ಸಂಸ್ಕೃತ ಭಾಷೆಯಿಂದ ಕನ್ನಡಕ್ಕೆ ಬಂದಿವೆ. ಈ ಧ್ವನಿಯನ್ನು ನಾವು ಸಂಸ್ಕೃತ ಪದಗಳಲ್ಲಿ ಇರುವಂತೆ ನುಡಿಯುತ್ತಿಲ್ಲ. ಹಾಗೆ ನುಡಿಯಲು ಕನ್ನಡಿಗರಿಗೆ ಬರುವುದಿಲ್ಲವೆಂದಲ್ಲ. ಅದನ್ನು ನುಡಿಯಬೇಕಾದ ಅಗತ್ಯವಿಲ್ಲ. ಆದ್ದರಿಂದ ಅದನ್ನು ಹೆಚ್ಚಿನ ಬರವಣಿಗೆಯ ಚಿಹ್ನೆಯಾಗಿ ಕಲಿಯಬೇಕಿಲ್ಲ ಎನ್ನುವುದು ಒಂದು ವಾದ. ಕಲಿತ ಮೇಲೂ ಎಲ್ಲಿ ಅದನ್ನು ಬಳಸಬೇಕು ಎಂಬುದು ಒಂದು ಗೊಂದಲವಾಗಿಯೇ ಉಳಿದಿದೆ. ಕೆಲವರು ಅತಿ ಎಚ್ಚರಿಕೆಯಿಂದ ಋಕಾರದ ಕಾಗುಣಿತ ಚಿಹ್ನೆ ಇಲ್ಲದಿರುವ ಕಡೆಯಲ್ಲೂ ಅದನ್ನು ಬಳಸುವುದುಂಟು. ಉದಾ.ಗೆ **ಧೃವ** (<**ಧ್ರುವ**), **ಶೃತಿ** (<**ಶ್ರುತಿ**) ಮುಂತಾದವು. ಋಕಾರವನ್ನು ತೊರೆದರೆ ಅದರ ಬದಲು ಏನನ್ನು ಬರೆಯುವುದು? ನಾವು ಹೇಗೆ ನುಡಿಯುತ್ತೇವೋ ಹಾಗೆ ಬರೆಯವುದು ಸರಿಯಲ್ಲವೇ? **ಋಣ** ಎನ್ನುವುದಿಲ್ಲ **ರುಣ** ಎನ್ನುತ್ತೇವೆ. ಹಾಗೆಯೇ ಬರೆಯಬಹುದಲ್ಲವೇ?

ಕೆಲವರೆನ್ನುವುದುಂಟು. ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ನುಡಿಯುತ್ತಾರಲ್ಲ; ಆಗ ಅವರವರ ಬಗೆಯಲ್ಲೇ ಬರೆಯುತ್ತಾ ಹೋದರೆ ಗತಿಯೇನು? ಇದು ಇಲ್ಲದಿರುವ ಸಮಸ್ಯೆ. **ಋಣ** ಎನ್ನುವುದನ್ನು ನೂರಾರು ಬಗೆಯಲ್ಲಿ ಯಾರೂ ಹೇಳುವುದಿಲ್ಲ. ಹೆಚ್ಚೆಂದರೆ ಕೆಲವರು **ರುಣದ** ಬದಲು **ರಿಣ** ಎಂದಾರು. ಹೀಗೆ ಬೇರೆ ಬೇರೆ ಬಗೆಯಲ್ಲಿ ನುಡಿಯುತ್ತಿರುವುದಕ್ಕೆ ಆ ಧ್ವನಿಯನ್ನು ಹೇಗೆ ನುಡಿಯಬೇಕೆಂಬ ನಿಯಮವನ್ನು ಕನ್ನಡಿಗರು ಕಲಿಯದಿರುವುದೇ ಕಾರಣ. ದಕ್ಷಿಣ ಕನ್ನಡದಲ್ಲಿ ಯಕ್ಷಗಾನದ ಪ್ರಭಾವದಿಂದ ಸಂಸ್ಕೃತ ಪದಗಳನ್ನು 'ಅಚ್ಚುಕಟ್ಟಾಗಿ' ನುಡಿಯುತ್ತಾರೆಂದು ಸಾಮಾನ್ಯವಾಗಿ ತಿಳಿದಿದ್ದೇವೆ. ಇಲ್ಲಿ ಕೂಡ **ಬೃಹತ್, ವೃಥಾ** ಮುಂತಾದ ಪದಗಳನ್ನು **ಬ್ರಹತ್, ವ್ರಥಾ** ಎಂದು ನುಡಿಯುವಂತೆ ನಮಗೆ ಕೇಳುತ್ತದೆ. ಈ ಎಲ್ಲ ಗೊಂದಲಗಳು ನುಡಿಯುವಿಕೆಯಲ್ಲಿ ಇವೆ. ಬರಹದಲ್ಲಿ ಈ ಗೊಂದಲವನ್ನು ಬಗೆಹರಿಸಿದರೆ ನುಡಿಯುವಿಕೆಯಲ್ಲೂ ಗೊಂದಲ ಕಡಿಮೆಯಾದೀತು. ಕೆಲವು ನಿಯಮಗಳ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಬಹುದು. ಅದಕ್ಕೂ ಮೊದಲು **ಋಕಾರವನ್ನು** ಕನ್ನಡ ಬರವಣಿಗೆಯಿಂದ ಹೊರಗಿಡಬೇಕೇ ಬೇಡವೇ ಎಂಬ ಪ್ರಶ್ನೆಗೆ ಉತ್ತರ ಹೇಳಬೇಕಾಗಿದೆ.

**ಇಂಗ್ಲಿಶಿನ ಜನರಲ್**

ಮಿಥುನ್. ಎಂ.ವಿ (ಕುರದಗಡ್ಡಿ, ಬಳ್ಳಾರಿ) ಇವರು **'ಸಾರ್ವಜನಿಕ ತಾಲೂಕು ಆಸ್ಪತ್ರೆ'** ಮತ್ತು **'ತಾಲೂಕು ಸಾರ್ವಜನಿಕ ಆಸ್ಪತ್ರೆ'** ಇವುಗಳಲ್ಲಿ ಯಾವುದು ಸರಿ ಎಂದು ಕೇಳುತ್ತಾರೆ. ಎರಡೂ ಸರಿಯಲ್ಲ. ಇದ್ದುದರಲ್ಲಿ ಎರಡನೆಯದು ಹೆಚ್ಚು ಸರಿ ಎನ್ನಬಹುದು. ಇಂಗ್ಲಿಶಿನ ಪದಕಂತೆಗಳನ್ನು ಕನ್ನಡದಲ್ಲಿ ಹೇಳಲು ಹೊರಟಾಗ ಈ ಗೊಂದಲಗಳು ಎಂದಿನಿಂದಲೂ ಇದ್ದುದೇ. ಹಾಗೆ ನೋಡಿದರೆ ಮೇಲಿನ 'ಕನ್ನಡ' ರೂಪದಲ್ಲಿ ಕನ್ನಡ ಪದಗಳೇ ಇಲ್ಲ. ಅದು ಹಾಗಿರಲಿ. ಇಂಗ್ಲಿಶಿನ ಜನರಲ್ ಎಂಬ ಪದವನ್ನು ಕನ್ನಡದಲ್ಲಿ ಸಾಮಾನ್ಯ , ಸಾರ್ವತ್ರಿಕ, ಸಾರ್ವಜನಿಕ, ಸರ್ವತೋಮುಖ ಹೀಗೆ ಬೇರೆಬೇರೆ ಬಗೆಯಲ್ಲಿ ಅನುವಾದಿಸಿಕೊಳ್ಳಲಾಗಿದೆ. ಇಂಗ್ಲಿಶಿನಲ್ಲಿ ಎರಡು ನಾಮಪದಗಳನ್ನು ಒಂದರೊಡನೊಂದು ಇರಿಸಿದರೆ ಎಷ್ಟೋ ಕಡೆಗಳಲ್ಲಿ ಅವುಗಳ ತಿರುಳು ಸಂಬಂಧ ಏನೆಂಬುದನ್ನು ತಿಳಿಯಲು ನಡುವೆ ಹೊಸ ಪ್ರತ್ಯಯ ಬೇಕಿಲ್ಲ. ಉದಾ.ಗೆ ನೋಡಿ: **ಬುಕ್ ಸ್ಟೋರ್, ರಿವರ್ ಬ್ಯಾಂಕ್, ಟ್ರ ಟ್ರಂಕ್** ಮುಂ. ಆದರೆ ಕನ್ನಡದಲ್ಲಿ ಹೀಗೆ ಮಾಡಲು ಬರುವುದಿಲ್ಲ. ನಾಮಪದಗಳ ನಡುವೆ ಇರುವ ತಿರುಳು ಸಂಬಂಧವನ್ನು ಹೇಳುವ ಪ್ರತ್ಯಯವೊಂದನ್ನು ಸೇರಿಸಬೇಕಾಗುತ್ತದೆ, ಉದಾ.ಗೆ ಮೇಲೆ ಹೇಳಿದ ಇಂಗ್ಲಿಶ್ ಪದಕಂತೆಗಳನ್ನು ಕನ್ನಡದಲ್ಲಿ **ಪುಸ್ತಕದ ಅಂಗಡಿ, ನದಿಯ ದಡ, ಮರದ ಕಾಂಡ** ಹೀಗೆಂದು ಹೇಳಬೇಕಾಗುತ್ತದೆ. ಅಲ್ಲದೆ ಎರಡಕ್ಕಿಂತ ಹೆಚ್ಚು ನಾಮಪದಗಳನ್ನು ಒಟ್ಟಾಗಿ ಸೇರಿಸಿದಾಗ ತಿರುಳು ಸಂಬಂಧವನ್ನು ಗುರುತಿಸುವುದು ಇನ್ನೂ ಕಷ್ಟ. ಹಾಗಾಗಿ ಇಂಗ್ಲಿಶಿನ ಪದಕಂತೆಗಳನ್ನು ಇಲ್ಲಿರುವಂತೆಯೇ ಕನ್ನಡದಲ್ಲಿ ಹೇಳಲು ಹೊರಡುವ ಬದಲು ಕನ್ನಡಕ್ಕೆ ತಕ್ಕಂತೆ ಬೇರೊಂದು ಬಗೆಯಲ್ಲಿ ಹೇಳುವುದು ಸರಿ. ಆದರೆ ಈ ದಾರಿ ಕಡಿದಾದುದು. ಅದಕ್ಕೆಂದೆ ಸುಮ್ಮನೆ ಪದಗಳನ್ನು ಅಕ್ಕಪಕ್ಕದಲ್ಲಿ ಇಡುವ ಮಾದರಿಗೆ ಜೋತುಬಿದ್ದು ಗೊಂದಲಗಳನ್ನು ಹುಟ್ಟಿಹಾಕುತ್ತಿದ್ದೇವೆ.

**ಚೂಲ**

ಸೌಮ್ಯ ಬಿ.ಪಿ (ಅಜ್ಜಂಪುರ) ಇವರು **ಮೂಲಚೂಲ** ಎಂಬ ಪದದಲ್ಲಿರುವ ಚೂಲ ಎಂದರೇನು ಎಂದು ಕೇಳಿದ್ದಾರೆ. ಮೂಲಚೂಲ ಎನ್ನುವುದು ಮಾತಿನ ವರಸೆ. ತುದಿಮೊದಲು ಎಂಬುದು ಇದರ ತಿರುಳು. ಇದೇ ತಿರುಳುಳ್ಳ **ಆದ್ಯಂತ, ಆಮೂಲಾಗ್ರ** ಎಂಬ ರಚನೆಗಳನ್ನು ಬಳಸುವುದುಂಟು. ಮೂಲ ಎಂದರೆ ಇಲ್ಲಿ ಬೇರು ಎಂದು ತಿಳಿಯೋಣ. ಚೂಲ ಎಂದರೆ ತುದಿ ಎಂದು ತಿಳಿಯಬೇಕು. ಚೂಲ ಎಂಬುದು ಸಂಸ್ಕೃತದಿಂದ ಬಂದ ಪದ. ಇದಕ್ಕೆ **ಚೂಳ,ಚೂಡ** ಎಂಬ ರೂಪಗಳೂ ಇವೆ. (ತಾಮ್ರಚೂಡ ಎಂದು ಹುಂಜವನ್ನು ಕರೆಯುವುದುಂಟು. ಹುಂಜಕ್ಕೆ ತಲೆಯ ಮೇಲೆ ಕೆಂಪು(ತಾಮ್ರ=ಕೆಂಪು) ಜುಟ್ಟಿನಂತಹ ಭಾಗ ಇರುವುದಷ್ಟೆ.) ಒಟ್ಟಾರೆ ಮೂಲಚೂಲ ಎಂದರೆ ಮೊದಲಿನಿಂದ ಕೊನೆಯವರೆಗೂ ಎಂದು ತಿಳಿಯಬೇಕು.

**ಪರಂತು, ಹೊರತು ಮತ್ತು ವಿನಹಃ**

ಬಸವನಗೌಡ.ಕೆ(ಹಗರಿ ಬೊಮ್ಮನಹಳ್ಳಿ) ಇವರು ಪರಂತು, ಹೊರತು ಮತ್ತು ವಿನಹಃ– ಈ ಮೂರೂ ಪದಗಳೂ 'ಒಂದೆಯೋ ಅಥವಾ ಬೇರೆ ಬೇರೆ ಅರ್ಥ ಕೊಡುತ್ತವೆಯೋ?' ಎಂದು ಕೇಳುತ್ತಾರೆ. ಹೊರತು ಕನ್ನಡ ಪದ (ಈ ಪದದ ಬಗೆಗೆ ಹಿಂದೊಮ್ಮೆ ಇದೇ ಅಂಕಣದಲ್ಲಿ ಬರೆದಿದ್ದೆ) ಪರಂತು ಮತ್ತು ವಿನಹಃ ಸಂಸ್ಕೃತದಿಂದ ಬಂದ ಪದಗಳು. ಪರಂತು ಪದವನ್ನು ಈಚೆಗೆ ಅಂದರೆ ಒಂದು ನೂರು ವರುಷಗಳಿಂದ ಕನ್ನಡದಲ್ಲಿ ಬಳಸುತ್ತಿರುವಂತಿದೆ. ಹಳೆಯ ಪ್ರಯೋಗಗಳು ದೊರಕಿಲ್ಲ. ವಿನಹಃ, ವಿನಾ, ವಿನಹ ಎಂಬ ರೂಪಗಳು ಕನ್ನಡ ಬರಹದಲ್ಲಿ ಕಾಣಸಿಗುತ್ತವೆ. ವಿನಹಃ ಎಂಬುದನ್ನು ನುಡಿಯಲು ಬರುವುದಿಲ್ಲ. ಅದಿರಲಿ. ಈಗ ಈ ಪದಗಳ ತಿರುಳಿಗೆ ಬರೋಣ. ಇವುಗಳನ್ನು ಒಂದೇ ತಿರುಳುಳ್ಳ ಪದಗಳೆಂದು ಬಳಸಲು ಬರುತ್ತದೆ. ಪರಂತು ಎಂಬ ಪದವನ್ನು ವಾಕ್ಯದ ಮೊದಲಲ್ಲಿ ಹಿಂದಿನ ವಾಕ್ಯದ ಸಂದರ್ಭಕ್ಕೆ ತಕ್ಕಂತೆ ಬಳಸಬಹುದು. **ಈ ಜಮೀನಿನ ಫಲವನ್ನು ನೀವು ಉಣ್ಣಬಹುದು.ಪರಂತು ಪರಭಾರೆ ಮಾಡುವಂತಿಲ್ಲ.** ಆದರೆ ಇಲ್ಲಿ ಪರಂತು ಪದದ ಬದಲಾಗಿ ವಿನಾ ಇಲ್ಲವೇ ಹೊರತು ಪದಗಳನ್ನು ಬಳಸಲು ಆಗುವುದಿಲ್ಲ. ಆಡಳಿತದಲ್ಲಿ ಬಳಸುವ ಕನ್ನಡದಲ್ಲಿ ಪರಂತುವಿನ ಬಳಕೆ ಹೆಚ್ಚಾಗಿದೆ. ವಿನಾಕಾರಣ(=ಕಾರಣವಿಲ್ಲದೆ) ಎಂಬ ರಚನೆಯನ್ನು ಬಿಟ್ಟರೆ ಉಳಿದಂತೆ ವಿನಾ ಎಂಬುದನ್ನು ಶರತ್ತು ಸೂಚಿಸುವ ಪದರಚನೆಯ ಬಳಿಕವಷ್ಟೇ ಬಳಸಬೇಕು. **ನಾವೇ ಅಲ್ಲಿಗೆ ಹೋಗಬೇಕೇ ವಿನಾ ಅವರು ಇಲ್ಲಿಗೆ ಬರುವುದಿಲ್ಲ.** ಹೊರತು ಪದಕ್ಕೆ ಕನ್ನಡದಲ್ಲಿ ಹೆಚ್ಚು ಬಳಕೆ ಇದೆ. ಹೊರತಾದ, ಹೊರತಾಗಿ ಎಂಬ ರೂಪಗಳೂ ಇವೆ.

**ತಾತ–ತಾತಿ?**

ಸೂರ್ಯನಾರಾಯಣ ಎಚ್.ಎಸ್ (ಕಡೂರು) ಇವರು **'ಅಜ್ಜ–ಅಜ್ಜಿ** ಬಳಕೆಯಲ್ಲಿರುವಂತೆ **ತಾತ–ತಾತಿ** ಏಕಿಲ್ಲ' ಎಂದು ಕೇಳುತ್ತಾರೆ. ಕನ್ನಡದಲ್ಲಿ ಗಂಡಸನ್ನು ಗುರುತಿಸುವ ಪದಗಳು **ಅಕಾರದಿಂದ** ಕೊನೆಗೊಳ್ಳುತ್ತಿದ್ದರೆ ಅವುಗಳನ್ನು **ಇಕಾರದಿಂದ** ಕೊನೆಗೊಳ್ಳುವಂತೆ ಮಾಡಿ ಹೆಂಗಸನ್ನು ಗುರುತಿಸುವ ಪದಗಳನ್ನಾಗಿ ಬದಲಿಸುವ

ಕಟ್ಟು ಬಳಕೆಯಲ್ಲಿದೆ. ಕುರುಡ–ಕುರುಡಿ, ಕುಂಟ–ಕುಂಟಿ, ಕೆಪ್ಪ– ಕೆಪ್ಪಿ, ರಂಗ – ರಂಗಿ ಮುಂತಾದ ಕಡೆ ಈ ಕಟ್ಟು ಇರುವುದನ್ನು ನೋಡುತ್ತೇವೆ. ಆದರೆ ಇದನ್ನು ಎಲ್ಲ ಕಡೆಗಳಲ್ಲೂ ಬಳಸಲು ಆಗದು. ಜಾಣ ಪದ ಜಾಣಿ ಆಗುವುದಿಲ್ಲ; ಜಾಣೆ ಆಗುತ್ತದೆ. (ಕನ್ನಡದ ಕೆಲವು ಬಗೆಗಳಲ್ಲಿ ಜಾಣಿ ಪದ ಬಳಕೆಯಲ್ಲಿದೆ. ಕವಿಗಳು ತಮ್ಮ ಕವಿತೆಗಳಲ್ಲಿ ಇದನ್ನು ಬಳಸಿರುವುದೂ ಉಂಟು) ಅಜ್ಜ ಪದದಿಂದ ಅಜ್ಜಿ ಪದವನ್ನು ಈ ಮೇಲೆ ಹೇಳಿದ ಕಟ್ಟನ್ನು ಬಳಸಿ ಪಡೆದಂತೆ ತೋರುವುದಿಲ್ಲ. ಆರ್ಯ ಎಂಬ ಸಂಸ್ಕೃತ ಪದದ ಪ್ರಾಕೃತ ರೂಪ ಅಜ್ಜ. ಇದು ಕನ್ನಡಕ್ಕೆ ಹಾಗೆಯೇ ಬಂದು ಸೇರಿಕೊಂಡಿದೆ. ಹಿರಿಯ ಗಂಡಸನ್ನು ಕುರಿತು ಹೇಳುವ ಪದವಾಗಿ ಬಳಕೆಯಾಗುತ್ತದೆ. ಹಾಗೆಯೇ ಆರ್ಯಾ ಹೆಂಗಸನ್ನು ಗುರುತಿಸಲು ಬಳಕೆಯಾಗುವ ಪದ. ಇದರ ಪ್ರಾಕೃತ ರೂಪ ಆಜಿ. ಇದು ಹೀಗೆಯೇ ಕನ್ನಡಕ್ಕೆ ಬಂದು ಸೇರಿದೆ. ರತ್ನಾಜಿ, ಕುಸುಮಾಜಿ ಮುಂತಾದ ಕಡೆಗಳಲ್ಲಿ ಈ ಆಜಿ ಪದದ ಕೊನೆಯಲ್ಲಿ ಇದೆ. ಆಜಿ ಪದವನ್ನು ನುಡಿಯುವ ಇನ್ನೊಂದು ಬಗೆಯೇ ಅಜ್ಜಿ. ಹಾಗಾಗಿ ಅಜ್ಜ–ಅಜ್ಜಿ ಕನ್ನಡದ ಕಟ್ಟನ್ನು ಬಳಸಿ ಮೈದಳೆದ ಪದಗಳಾಗಿರದೆ ಬೇರೆಬೇರೆ ಪದಗಳಾಗಿ ಪ್ರಾಕೃತದಿಂದ ಬಂದು ಸೇರಿವೆ. ತಾತ ಪದ ಸಂಸ್ಕೃತದ್ದು. ಅದರಿಂದ ಕನ್ನಡವೇ ತಾತಿ ಪದವನ್ನು ಕಟ್ಟಿಕೊಳ್ಳಲು ಬರುವುದಿಲ್ಲ. ತಾತ ಮತ್ತು ಅಜ್ಜ ಪದಗಳನ್ನು ಬಳಸುವಲ್ಲಿಯೂ ಕನ್ನಡ ಮಾತಾಡುವ ಬೇರೆ ಬೇರೆ ಕಡೆ ಬೇರೆಬೇರೆ ತಿರುಳು ಇರುವಂತಿದೆ. ಕೆಲವು ಕಡೆ ತಂದೆಯ ತಂದೆಯನ್ನು ತಾತ ಎಂತಲೂ ತಾಯಿಯ ತಂದೆಯನ್ನು ಅಜ್ಜ ಎಂತಲೂ ಹೇಳುವುದುಂಟು. ಆದರೆ ಹೀಗೆ ಬೇರೆಯಾಗಿರಿಸಲು ಗೊತ್ತಾದ ಕಾರಣಗಳು ಇದ್ದಂತಿಲ್ಲ.

### ತಪ್ಪುಗಳನ್ನು ತಿದ್ದುವುದು ಹೇಗೆ

ರಂಗಭಟ್ಟ (ಹಗರಿ ಬೊಮ್ಮನಹಳ್ಳಿ) ಮತ್ತು ಗೋಪಾಲಗೌಡ ಕಲ್ವಮಂಜಲಿ (ಚಿಕ್ಕಬಳ್ಳಾಪುರ) ಕನ್ನಡ ಬರವಣಿಗೆ ಮತ್ತು ಮಾತುಗಳಲ್ಲಿ ಎದ್ದುಕಾಣುತ್ತಿರುವ ತಪ್ಪುಗಳನ್ನು ತಿದ್ದುವುದು ಹೇಗೆ ಎನ್ನುವುದು ಅವರನ್ನು ಕಾಡುತ್ತಿದೆ. ತಾವು ತಪ್ಪು ಎಂದು ತಿಳಿದ ಕನ್ನಡದ ಮಾದರಿಗಳನ್ನು ಕೂಡ ಕಾಗದಗಳಲ್ಲಿ ಬರೆದು ತೋರಿಸಿದ್ದಾರೆ. ಮಾತಿನಲ್ಲಿ ನಾವು ತಪ್ಪು ಎಂದು ತಿಳಿಯುವ ಬಗೆಗಳನ್ನು ನೋಡೋಣ. ಮಾತಾಡುವವರು ನಾಡಿನ ಯಾವ ಕಡೆಯಿಂದ ಬಂದವರು ಮತ್ತು ಅಲ್ಲಿಯೂ ಸಮಾಜದ ಯಾವ ನೆಲೆಗೆ ಸೇರಿದವರು ಎನ್ನುವುದರ ಮೇಲೆ ಅವರ ಕನ್ನಡದ ಮಾತು ರೂಪುಗೊಂಡಿರುತ್ತದೆ. ಇದರಲ್ಲಿ ತಪ್ಪೇನೂ ಇಲ್ಲ. ಬರುತ್ತದೆ ಎನ್ನುವುದಕ್ಕೆ ಬತ್ತೈತೆ ಇಲ್ಲವೇ ಬರತೈತಿ ಎನ್ನುವುದು ತಪ್ಪು ಅಲ್ಲ. ಹಾಗಾದರೆ ಮಾತಿನಲ್ಲಿ ತಪ್ಪುಗಳು ಆಗುವುದೇ ಇಲ್ಲವೇ? ಕೆಲವೊಮ್ಮೆ ಜನರು ತಾವು ಬಳಸುತ್ತಿರುವ ಕನ್ನಡದ ಬಗೆಯಿಂದ ಹೊರಬಂದು 'ಎಲ್ಲರಿಗೂ ಒಪ್ಪಿತವಾಗುವುದೆಂದು ತಿಳಿದ' ಕನ್ನಡದ ಮಾದರಿಯಲ್ಲಿ ಮಾತಾಡಲು ತೊಡಗಿದಾಗ ತಪ್ಪುಗಳು ಆಗುತ್ತವೆ. ಕ್ಯಾಮೆರಾ ಮುಂದೆ ಇರುವಾಗ, ಎದುರಿಗೆ ಮೈಕ್ ಹಿಡಿದಾಗ ಎಷ್ಟೋ ಜನರು ಮಾತಾಡಲು ತಡಬಡಾಯಿಸಿ ತಪ್ಪು ನುಡಿಗಳನ್ನು ಹೊರಹಾಕುವುದನ್ನು ನಾವೆಲ್ಲರೂ ಕಂಡಿದ್ದೇವೆ. ಇದಕ್ಕೆ ಅವರಿಗೆ ಕನ್ನಡ ಸರಿಯಾಗಿ ನುಡಿಯಲು ಬರದಿರುವುದು ಕಾರಣವಲ್ಲ. ತಮ್ಮದಲ್ಲದ ಕನ್ನಡದ ಬಗೆಯಲ್ಲಿ ಮಾತಾಡಲು ಹೊರಟದ್ದರಿಂದ ಈ ತಪ್ಪುಗಳು ಆಗುತ್ತವೆ.

ಇನ್ನು ಬರವಣಿಗೆಯಲ್ಲಿ ಆಗುವ ತಪ್ಪುಗಳಿಗೆ, ಬರೆಯುತ್ತಿರುವವರ ತಿಳುವಳಿಕೆಯಲ್ಲಿ ಇರುವ ಕೊರತೆಗಳ ಜೊತೆಗೆ ತಾವು ಕಿವಿಯಲ್ಲಿ ಕೇಳಿರುವ ಪದರೂಪಗಳ ಬರಹರೂಪವನ್ನು ಕಣ್ಣಲ್ಲಿ ಕಂಡಿಲ್ಲದಿರುವುದು ಮತ್ತು ಹಾಗೆ ಕಂಡಿದ್ದರೂ ಅದರ ಕಾಗುಣಿತವನ್ನು ಸರಿಯಾಗಿ 'ಕಲಿತಿಲ್ಲ'ದಿರುವುದು ಕಾರಣವಾಗುತ್ತವೆ. ಈ ಬಗೆಯ ತಪ್ಪುಗಳು ಬರೆಯುತ್ತ ಹೋದಂತೆ ಸರಿ ಹೋಗುವಂತಹವು. ಅಲ್ಲದೆ ಓದುವಾಗ ಪದಗಳ ತಿರುಳು ಮಾತ್ರವಲ್ಲದೆ ರೂಪವನ್ನು ಸರಿಯಾಗಿ ತಿಳಿದುಕೊಳ್ಳುವುದನ್ನು ಕಲಿಸಬೇಕಾಗುತ್ತದೆ.

**ಆಧಿ-ವ್ಯಾಧಿ**

ನರಸಿಂಹ (ನರಸೀಪುರ) ಇವರು ಆಧಿ-ವ್ಯಾಧಿ ಎಂಬ ಪದಗಳ ಸಂಬಂಧ ಕುರಿತಂತೆ ಪ್ರಶ್ನೆಯೊಂದನ್ನು ಕೇಳಿದ್ದಾರೆ. ಇದೂ ಕೂಡ ಕೆಪಿಎಸ್‌ಸಿ ಪರೀಕ್ಷೆಯಲ್ಲಿ ಕಾಣಿಸಿಕೊಂಡಿತ್ತೆಂದು ಅವರು ಹೇಳಿದ್ದಾರೆ. ಈ ಎರಡೂ ಸಂಸ್ಕೃತ ಪದಗಳು. ವಿ ಎಂಬ ಉಪಸರ್ಗ ಸೇರುವುದರಿಂದ ಆಧಿ ಪದವು ವ್ಯಾಧಿ ಎಂದಾಗುವುದೂ ಕೂಡ ಆ ಭಾಷೆಯ ನಿಯಮೇ ಸರಿ. ಕನ್ನಡ ಈ ಪದರಚನೆಯ ನಿಯಮವನ್ನು ಪಾಲಿಸುವುದಿಲ್ಲ. ಅಲ್ಲದೆ ಆ ಪದಗಳಿಗೆ ಸಂಸ್ಕೃತದಲ್ಲಿರುವ ಅರ್ಥವನ್ನೇ ಕನ್ನಡವೂ ಬಳಸಬೇಕೆಂಬ ಕಟ್ಟನ್ನು ಹಾಕಲು ಬರುವುದಿಲ್ಲ. ಹಾಗಾಗಿ ವ್ಯಾಧಿ ಎಂಬ ಪದವನ್ನು ಕನ್ನಡದಲ್ಲಿ ಯಾವ ತಿರುಳಿನೊಂದಿಗೆ ಬಳಸುತ್ತೇವೆ ಎನ್ನುವದಷ್ಟೇ ನಮಗೆ ಬೇಕಾಗಿದೆ. ( ಪದರಚನೆಯ ಕಟ್ಟುಗಳು ನುಡಿಕೋವಿದರಿಗೆ ಸೇರಿದ್ದು) ಹಾಗಾಗಿ ವ್ಯಾಧಿ ಎಂಬ ಪದಕ್ಕೆ ಕನ್ನಡದಲ್ಲಿ ದೈಹಿಕರೋಗ ಎಂದಷ್ಟೇ ಅರ್ಥವಿದೆ ಎಂದು ಹೇಳುವುದು ಸರಿಯಾಗದು. ಮನಸ್ಸಿಗೆ ಸಂಬಂಧಿಸಿದಂತೆಯೂ ಈ ಪದವನ್ನು ಬಳಸುತ್ತೇವೆ. ಗೀಳು ಹತ್ತಿಸಿಕೊಂಡವರನ್ನು ಕುರಿತು ಮಾತಾಡುವಾಗ ಈ ಪದವನ್ನು ಹೇಗೆ ಬಳಸುತ್ತೇವೆ ಎನ್ನುವುದನ್ನು ನೋಡಿದರೆ ಈ ಮಾತು ಗೊತ್ತಾಗುತ್ತದೆ.

**ಬಾಚು-ಗೋಚು**

ಪದ್ಮಾ ಕೃಷ್ಣಮೂರ್ತಿ(ತುಮಕೂರು) ಇವರು 'ಕೂದಲನ್ನು ಬಾಚು ಎಂದು ಹೇಳುವಂತೆ ಗೋಚು ಎನ್ನಬಹುದೇ?' ಎಂದು ಕೇಳಿದ್ದಾರೆ. ಈ ಸಂದೇಹ ಅವರಿಗೆ ಏಕೆ ಬಂದಿತೋ ತಿಳಿಯದು. ಆದರೆ ಕೂದಲನ್ನು ಒಂದು ಕಟ್ಟುಪಾಡಿಗೆ ತರುವ ಕೆಲಸವನ್ನು 'ಬಾಚು' ಎಂದು ಹೇಳುವಂತೆ ಗೋಚು ಎಂದು ಹೇಳಲು ಬರುವುದಿಲ್ಲ. ಒಂದು ವೇಳೆ ಗೋಚು ಎಂಬ ಕ್ರಿಯಾರೂಪವನ್ನು 'ಗೋರು' ಎಂಬ ಧಾತುವಿನಿಂದ ಪಡೆದಿದ್ದೇವೆ ಎಂದುಕೊಳ್ಳಿ. ಆಗ ಉದುರಿ ಕೆಳಗೆ ಬಿದ್ದ ಕೂದಲನ್ನು ಒಂದೆಡೆಗೆ ತರುವ ಕೆಲಸವನ್ನು ಗೋಚು (ಗೋರು+ಚು) ಎನ್ನಬಹುದು. ಗೋರು ಎನ್ನುವ ಪದವನ್ನು ಈ ತಿರುಳಿನೊಡನೆ ಕನ್ನಡ ಮಾತಾಡುವ ಕೆಲವು ಕಡೆಗಳಲ್ಲಿ ಬಳಸುವುದುಂಟು. (ತೋಚು ಪದ ಕೂಡ ಹೀಗೆ ತೋರು+ಚು ಎಂಬ ಬಗೆಯಲ್ಲಿ ಮೈತಳೆದಿದೆ)

**ಗಂಟಿ-ಕಂಟಿ**

ಗಿಡಗಂಟಿ ಎಂಬ ರಚನೆಯ ಬಗೆಗೆ ಬರೆದಿದ್ದೆ. ಇದರಲ್ಲಿ ಎರಡನೆಯ ಪದ ಕಂಟಿ ಎಂದು ಕೆಲವು ಓದುಗರು ಬರೆದಿದ್ದಾರೆ. ಕಂಟಿ ಎಂಬ ಪದ ತಿರುಳುಳ್ಳದ್ದು

ಎನ್ನುವುದು ಅವರ ಅನಿಸಿಕೆ. ಇಲ್ಲಿ ಕಂಟಿ ಎಂಬ ಪದವಿದೆ ಎನ್ನುವುದಾದರೆ ಗಿಡಗಂಟಿ ಎನ್ನುವುದು ದ್ವಂದ್ವ ಸಮಾಸವಾಗುತ್ತದೆ ಎನ್ನುವುದು ಸರ್ವಜಿತ (ನವನಗರ) ಇವರ ನಿಲುವು. **ಗಿಡಗಂಟಿಯ (ಗಿಟಗಂಟಿಗಳ ಅಲ್ಲ)** ಎಂಬ ಏಕವಚನ ಪ್ರತ್ಯಯದ ಪ್ರಯೋಗವನ್ನು ಗಮನಿಸಿದರೆ ಇಲ್ಲಿರುವುದು ಜೋಡುನುಡಿ ಎನ್ನುವುದೇ ಸರಿಯಾದೀತು. ಅಲ್ಲದೆ ಕಂಟಿ ಎಂಬ ರೂಪ ಕನ್ನಡ ಮಾತಾಡುವ ತೆಂಕಣ ಭಾಗದಲ್ಲಿ ಕೂಡ ಬಳಕೆಯಲ್ಲಿದೆ. ಆದರೆ ಇಲ್ಲಿ ಗಿಡಗಂಟೆ ಎಂಬ ರಚನೆ ಕೇಳಸಿಗುತ್ತದೆ. ಹಾಗಾಗಿ ಗಿಡಗಂಟಿ ಎನ್ನುವಲ್ಲಿ ಎರಡನೆಯ ಪದ ಕಂಟಿ ಎಂದು ಹೇಳುವುದನ್ನು ಮತ್ತೊಮ್ಮೆ ಪರಿಶೀಲಿಸಬೇಕಾಗಬಹುದು.

## ಹೆಂಗಸರ ಹೆಸರುಗಳ ಉದ್ದ ಸ್ವರ

ಮುರುಲೀಧರ ಕುಲಕರ್ಣಿ (ಬೀದರ್) ಇವರು ಒಂದು ಪ್ರಶ್ನೆ ಕೇಳಿದ್ದಾರೆ. 'ಉತ್ತರ ಕರ್ನಾಟಕದ ಕಡೆ ಅಕಾರದಿಂದ ಕೊನೆಯಾಗುವ ಹೆಂಗಸರ ಹೆಸರುಗಳನ್ನು ಆ ಎಂಬ ಉದ್ದ ಸ್ವರದೊಡನೆ ಬರೆದು ನುಡಿಯುತ್ತಾರೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಹಾಗೆ ಕೊನೆಯ ಅಕಾರವನ್ನು ಉದ್ದ ಮಾಡದೆ ಗಿಡ್ಡವಾಗಿಯೇ ಬರೆದು ನುಡಿಯುತ್ತಾರೆ. ಏಕೆ?' ಎನ್ನುವುದು ಅವರ ಪ್ರಶ್ನೆ. ನುಡಿಯುವ ಮಾತಿಗೆ ಬಂದರೆ ಎಲ್ಲ ಕಡೆಗಳಲ್ಲೂ ಈ ಹೆಸರುಗಳನ್ನು ಉದ್ದ ಸ್ವರದೊಡನೆ ಹೇಳುವುದು ದಿಟ. ಆದರೆ ಬರೆಯುವಾಗ ಉತ್ತರ ಕರ್ನಾಟಕದಲ್ಲಿ ಉದ್ದ ಸ್ವರವನ್ನು ಸೇರಿಸಲು ಕಾರಣವಿದೆ. ಅಕಾರಾಂತವಾಗಿ ಬರೆಯುವ ಪದಗಳನ್ನು ವ್ಯಂಜನಾಂತವಾಗಿ ನುಡಿಯುವ ಬಗೆಯೊಂದು ತುಂಗಭದ್ರೆಯ ಉತ್ತರದ ಕಡೆ ಇದೆ. ಇದು ಮರಾಠಿ ಪ್ರಭಾವವಿರುವ ಕಡೆ ಹೆಚ್ಚು. ಹಾಟೆಲ, ಕಾಲೇಜ, ರೋಡ ಎಂದು ಬರೆದರೂ ನುಡಿಯುವಾಗ ಮಾತ್ರ ಇವೆಲ್ಲವೂ ವ್ಯಂಜನಾಂತವಾಗಿ ಬಿಡುತ್ತವೆ. ಹೀಗಾಗಬಾರದೆಂದು ಅಕಾರದಿಂದ ಕೊನೆಯಾಗುವ ಹೆಂಗಸರ ಹೆಸರುಗಳನ್ನು ಉದ್ದ ಸ್ವರದೊಡನೆ ಬರೆಯುವ ಬಗೆ ಬಳಕೆಗೆ ಬಂದಿರಬೇಕು. ಅಂದರೆ ಗೀತ, ನಿರ್ಮಲ ಎಂದು ಬರೆದಾಗ ಈ ಹೆಸರುಗಳನ್ನು ಗೀತ್, ನಿರ್ಮಲ್ ಎಂದು ನುಡಿಯುವ ಸಾಧ್ಯತೆ ಇದೆ. ಉದ್ದ ಸ್ವರದೊಡನೆ ಬರೆದರೆ ಈ ತೊಂದರೆ ಇರುವುದಿಲ್ಲವಷ್ಟೆ.

## ಅಂತಾರಾಷ್ಟ್ರೀಯ-ಅಂತರ್ರಾಷ್ಟ್ರೀಯ

ಭೀ.ಗು. ದೇಶಪಾಂಡೆ (ಕಟಗೂರ, ಹುನಗುಂದ) ಮತ್ತು ಸಹನಾ ಭಂಡಾರಿ (ಅರೆಅಂಗಡಿ, ಹೊನ್ನಾವರ) ಇವರು ಅಂತಾರಾಷ್ಟ್ರೀಯ ಮತ್ತು ಅಂತರ್ರಾಷ್ಟ್ರೀಯ ಈ ರೂಪಗಳಲ್ಲಿ ಯಾವುದು ಸರಿ ಎಂದು ಕೇಳುತ್ತಾರೆ. ಸಂಸ್ಕೃತ ಪದಗಳಿವು. ಅಂತಃ ಎಂಬ ಪೂರ್ವಪದವುಳ್ಳ ರಚನೆಗಳಲ್ಲಿ ಎರಡನೆಯ ಪದಗಳು ಸ್ವರ ಇಲ್ಲವೇ ಘೋಷವ್ಯಂಜನಗಳಿಂದ ಮೊದಲಾದರೆ ಆಗ ಅಂತಃ ಎಂಬುದು ಅಂತರ್ ಎಂದು ಬದಲಾಗುತ್ತದೆ. ನೋಡಿ: ಅಂತರಂಗ, ಅಂತರಾಳ, ಅಂತರ್ಜಲ, ಅಂತರ್ಗಾಮಿ ಮುಂತಾದವು. ಎರಡನೆಯ ಪದ ಅಘೋಷ ಧ್ವನಿಯಿಂದ ಮೊದಲಾಗುತ್ತಿದ್ದರೆ ಆಗ ಅಂತಃ ಎಂಬುದು ಬದಲಾಗದೆ ಉಳಿಯುವುದು. ಉದಾ.ಅಂತಃಕರಣ, ಅಂತಃಚಕ್ಷು ಮುಂತಾದವು. ಆದರೆ ಎರಡನೆಯ ಪದ ರಕಾರದಿಂದ ಮೊದಲಾಗುತ್ತಿದ್ದರೆ ಅಂತಃ

ಎಂಬುದು ಅಂತಾ ಎಂದಾಗುತ್ತದೆ. ಹಾಗಾಗಿ ಅಂತಾರಾಷ್ಟ್ರೀಯ ಎಂಬುದು ಸರಿ. ಇಂತಹುದೇ ಉದಾಹರಣೆಯನ್ನು ಪುನಃ ಎಂಬ ಪೂರ್ವಪದದ ಸನ್ನಿವೇಶದಲ್ಲೂ ನೋಡುತ್ತೇವೆ. ಪುನಾರಚನೆ ಎಂಬುದೇ ಸರಿಯಾದ ರೂಪ.

ಇಂಗ್ಲಿಶಿನಿಂದ ಬಂದ ಇಂಟ್ರ ಮತ್ತು ಇಂಟರ್ ಎಂಬ ಪೂರ್ವ ಪದಗಳಿಗೆ ಹೊಂದುವಂತೆ ಅಂತರ ಮತ್ತು ಅಂತಃ ಎಂಬ ಪೂರ್ವಪದಗಳನ್ನು ಬಳಸುವುದು ಬಳಕೆಗೆ ಬಂದಿದೆ. ಇಂಗ್ಲಿಶಿನ ಈ ಪದಗಳನ್ನು ಕ್ರಮವಾಗಿ **ಒಳಗೆ** ಮತ್ತು **ನಡುವೆ** ಎಂಬ ತಿರುಳಿನೊಡನೆ ಗ್ರಹಿಸಬಹುದು. ಹಾಗಾಗಿ ಅಂತರರಾಜ್ಯ ಎಂದರೆ ರಾಜ್ಯಗಳ ನಡುವೆ ಎಂಬ ಅರ್ಥ ಬರುತ್ತದೆಯೇ ಹೊರತು ರಾಜ್ಯದ ಒಳಗೆ ಎಂಬ ಅರ್ಥವಲ್ಲ.

### ನಿಜ ಹೇಳಲಾ

ನಾಗರಾಜ ಸಿ.ಪಿ. (ಬೆಂಗಳೂರು) ಇವರು ಕೇಳುವ ಪ್ರಶ್ನೆ ಹೀಗಿದೆ: **"ನಿಜ ಹೇಳಬೇಕು ಅಂದ್ರೆ, ನಿಜವಾಗಿಯೂ ಹೇಳುವುದಾದರೆ, ನಿಜ ಹೇಳಲಾ** ಮುಂತಾದ ಪದಕಂತೆಗಳನ್ನು ಏಕೆ ಬಳಸುತ್ತೇವೆ?" ಮಾತಿನಲ್ಲಿ ಈ ಬಗೆಯ ಪದಕಂತೆಗಳನ್ನು ಬಳಸುವುದಕ್ಕೆ ಗೊತ್ತಾದ ಕಾರಣಗಳಿಲ್ಲ. ಅಂದರೆ ಈ ಮಾತು ಹೇಳಿದವರು ನಿಜ ಹೇಳುತ್ತಾರೆ ಎಂದಾಗಲೀ, ಹಾಗೆ ಹೇಳದೆ ಮಾತಾಡುವವರು ಸುಳ್ಳು ಹೇಳುತ್ತಾರೆ ಎಂದಾಗಲೀ ತಿಳಿಯಬಾರದು. ಇವೆಲ್ಲವನ್ನೂ ಮಾತಿನ ವರಸೆಗಳು ಎಂದೇ ತಿಳಿಯಬೇಕು. ಇಂತಹ ಹಲವು ಪದಗಳು, ಪದಕಂತೆಗಳು ನಮ್ಮ ಮಾತಿನಲ್ಲಿ ಸೇರಿಕೊಂಡಿವೆ. ಕೇಳುವವರ ಗಮನ ಸೆಳೆಯಲು ಬಳಸುವ **ಏನೂ, ಅಲ್ಲ, ನನ್ನ ಕೇಳಿದ್ರೆ, ನಿಮಗೆ ಗೊತ್ತಾ** ಮುಂತಾದವು ವಾಕ್ಯದ ಮೊದಲಲ್ಲಿ ಬರುತ್ತವೆ. ವಾಕ್ಯಗಳ ನಡುವೆಯೂ ಇಂತಹ ಪದರಚನೆಗಳು ಬಂದು ಸೇರಬಹುದು. ಮಾತಾಡುವವರು ತಾವು ಆಡುತ್ತಿರುವ ಮಾತನ್ನು ಹೆಚ್ಚು ಒತ್ತು ಕೊಟ್ಟು ಹೇಳಲೆಂದೋ ಇಲ್ಲವೇ ಕೇಳುತ್ತಿರುವವರನ್ನು ನಂಬಿಸಲೆಂದೋ ಹೊರಟಾಗ ವಾಕ್ಯದ ನಡುವೆಯೇ **ಗೊತ್ತಾ, ಇಲ್ಲಿ ಕೇಳಿ, ಏನು** ಹೀಗೆ ಹಲವು ಪದರಚನೆಗಳನ್ನು ಸೇರಿಸುವುದುಂಟು. ಈಚೆಗೆ ಇಂಗ್ಲಿಶಿನಿಂದ ಪಡೆದುಕೊಂಡ **ಸೊ, ಬಟ್, ಆಕ್ಚುಯಲಿ** ಮುಂತಾದ ಪದಗಳನ್ನು ಮಾತಿನ ಮೊದಲಲ್ಲಿ ಸೇರಿರುವುದನ್ನು ಕೇಳುತ್ತಿದ್ದೇವೆ. ಇದೆಲ್ಲ ಕನ್ನಡ ನುಡಿರಚನೆಯ ಕಟ್ಟುಗಳಿಗೆ ಸೇರಿಲ್ಲವಾದರೂ ಇಂತಹ 'ಹೆಚ್ಚಿನ' ಪದಕಂತೆಗಳನ್ನು ವಾಕ್ಯದಲ್ಲಿ ಎಲ್ಲಿ ಸೇರಿಸಬೇಕು ಎಂಬ ಬಗೆಗೆ ಮಾತ್ರ ಗೊತ್ತಾದ ಕಟ್ಟುಗಳಿವೆ. ಈ ಕಟ್ಟುಗಳನ್ನು ಮಾತಾಡುವವರು ಮೀರುವುದಿಲ್ಲ. 'ಈ ವರ್ಷ/ ನಮ್ಮ ಮನೆ ಹಿತ್ತಲಲ್ಲಿರುವ/ ದೊಡ್ಡ ಮಾವಿನ ಮರದಲ್ಲಿ/ ನೂರಾರು ಹಣ್ಣು ಬಿಡುತ್ತವೆ.' ಈ ವಾಕ್ಯದಲ್ಲಿ ಗೆರೆ ಎಳೆದಿರುವಲ್ಲಿ ಮಾತ್ರ ಹೆಚ್ಚಿನ ಪದ, ಪದಕಂತೆಗಳು ಸೇರಬಹುದು. ಗೆರೆಗಳ ನಡುವೆ ಇರುವ ಪದಗಳ ಸಂದಿಯಲ್ಲಿ ಹೀಗೆ ಸೇರಿಸಲು ಆಗುವುದಿಲ್ಲ.

### ಅಸ್ಮಿತೆ

ಸೌಮ್ಯ.ಬಿ.ಪಿ (ಬುಕ್ಕಾಂಬುಧಿ) ಅವರು ಪತ್ರಿಕೆಯೊಂದರಲ್ಲಿ ಕಾಣಿಸಿದ 'ಅಸ್ಮಿತೆ' ಪದದ ಅರ್ಥವೇನು ಎಂದು ಕೇಳಿದ್ದಾರೆ. ಅಸ್ಮಿತೆ ಎಂದರೆ **ತನ್ನತನ, ಗುರುತು,**

**ಕುರುಹು**. ನಾವು ನಮ್ಮ ಕನ್ನಡ ಬರೆಹದಲ್ಲಿ ಅದರಲ್ಲೂ ಜನರು ಹೆಚ್ಚಾಗಿ ಓದುವ ಕನ್ನಡ ಬರೆಹಗಳಲ್ಲಿ ಹೆಚ್ಚು ಕನ್ನಡಪದಗಳನ್ನು ಬಳಸುತ್ತಿಲ್ಲ. ಕನ್ನಡದ ಪದಗಳು ಇದ್ದರೂ ಬದಲಿಗೆ ಸಂಸ್ಕೃತಪದಗಳನ್ನು ಬಳಸುತ್ತೇವೆ. ಇದರಿಂದ ಹೆಚ್ಚಿನವರಿಗೆ ಓದುವುದೆಂದರೆ ತ್ರಾಸದ ಕೆಲಸವಾಗುತ್ತದೆ. ಬರೆಯುವವರು ಬೇಕೆಂತಲೇ ಹೀಗೆ ಸಂಸ್ಕೃತಪದಗಳನ್ನು ಬಳಸುವುದಿಲ್ಲ. ಎಷ್ಟೋ ಕಡೆಗಳಲ್ಲಿ ಹೀಗೆ ಸಂಸ್ಕೃತ ಪದಗಳನ್ನು ಬಳಸುತ್ತಿದ್ದೇವೆ ಎನ್ನುವುದೂ ಅವರಿಗೆ ಗೊತ್ತಿರುವುದಿಲ್ಲ. ಈವರೆಗೆ ಬಳಸುತ್ತ ಬಂದ ಪದ, ಪದಕಂತೆಗಳನ್ನು ಸುಮ್ಮನೆ ಬಳಸಿಬಿಡುತ್ತಾರೆ. ಏನೇ ಆಗಲಿ ಇದರಿಂದ ಎರಡು ತೊಂದರೆಗಳು ಆಗುತ್ತಿವೆ. ಒಂದು: ಓದುವವರಿಗೆ ಆ ಸಂಸ್ಕೃತ ಪದಗಳು ಗೊತ್ತಿಲ್ಲದೇ ಇರುವುದರಿಂದ ಬರಹಗಳನ್ನು ಓದಿ ತಿಳಿದುಕೊಳ್ಳಲು ಆಗುತ್ತಿಲ್ಲ. ಎರಡು: ನಮ್ಮ ಬರವಣಿಗೆ ಸವೆದ ಜಾಡಿನಲ್ಲಿ ಸಾಗುತ್ತಿರುವಂತಾಗಿದೆ. **ತಮಗೆ ದೊರೆತ ಸುವರ್ಣಾವಕಾಶವನ್ನು ಕಳೆದುಕೊಂಡರು** ಎಂಬ ವಾಕ್ಯವನ್ನು ನೋಡೋಣ. **ಸುವರ್ಣಾವಕಾಶ** ಎನ್ನುವುದು ಬರೆಯುತ್ತಿರುವವರ ರಚನೆಯಲ್ಲ. **ಗೋಲ್ಡನ್ ಆಪರ್ಚುನಿಟಿ** ಎಂಬುದಕ್ಕೆ ಯಾರೋ ಯಾವಾಗಲೋ ಕನ್ನಡದಲ್ಲಿ ಕಟ್ಟಿಕೊಟ್ಟ ಸಂಸ್ಕೃತ ಪದಕಂತೆ. ಇದನ್ನು ಅದು ಇರುವಂತೆಯೇ ಬಳಸುತ್ತಿದ್ದೇವೆಯೇ ಹೊರತು ದಿಟವಾಗಿಯೂ ಕೈತಪ್ಪಿಹೋದ ಅವಕಾಶವನ್ನು ಬಣ್ಣಿಸಲು ನಮ್ಮದೇ ಮಾತುಗಳನ್ನು ಹುಡುಕುತ್ತಿಲ್ಲ. ಇಂತಹ ನೂರಾರು ಪದಕಂತೆಗಳನ್ನು ಪಟ್ಟಿ ಮಾಡಿ ತೋರಿಸಬಹುದು. ಇನ್ನಾದರೂ ಇಂಗ್ಲಿಶ್ ಮಾತನ್ನು ಸಂಸ್ಕೃತ ಪದಗಳಲ್ಲಿ ಮಂಡಿಸಿ ಅದನ್ನು ಕನ್ನಡವೆಂದು ನಂಬಿಸುವ ಹಾದಿಯನ್ನು ನಮ್ಮ ಬರವಣಿಗೆ ಬಿಟ್ಟುಕೊಡಬೇಕಲ್ಲವೇ?

**ಬಹುತೇಕ**

ಸತ್ಯನಾರಾಯಣ ರಾವ್ ಎಂ.ಎಸ್ (ಬೆಂಗಳೂರು) ಇವರು 'ಬಹುತೇಕ' ಎಂಬ ರಚನೆಯ ತಿರುಳನ್ನು ಕುರಿತು ಕೇಳಿದ್ದಾರೆ. **ಎಲ್ಲ ಸೇರಿದಂತೆ, ಒಟ್ಟಾರೆ, ಹೆಚ್ಚೂ ಕಡಿಮೆ, ಏನೂ ಬಿಡದಂತೆ** ಮುಂತಾದ ತಿರುಳುಗಳನ್ನು ಹೇಳಲು ಈ ಬಹುತೇಕ ಎನ್ನುವ ಮಾತನ್ನು ಬಳಸುತ್ತೇವೆ. ಕೆಲವು ಕಡೆ **ಎಲ್ಲರೂ** ಎಂದು ಹೇಳಲು **ಬಹುತೇಕರು** ಎಂದೂ ಬರೆಯುವುಂಟು. ಹೀಗಾಗಿ ಈ ಪದ ಕನ್ನಡದಲ್ಲಿ ನಾಮಪದ ಮತ್ತು ಗುಣಪದ ಈ ಎರಡೂ ಬಗೆಯ ಪದಗಳ ಕೆಲಸಗಳನ್ನು ಮಾಡುತ್ತಿದೆ. ಕನ್ನಡದ್ದಲ್ಲದ ಈ ಪದವನ್ನು ಆದಷ್ಟು ಕಡಿಮೆ ಬಳಸುವುದು ಒಳ್ಳೆಯದು. ಅದರಿಂದಾಗಿ ನಮ್ಮ ಬರವಣಿಗೆಗೆ ಹೆಚ್ಚಿನ ಮೊನಚು ಬರುವುದು.

**ಮೊಸಳೆ ಕಣ್ಣೀರು**

ಸುಹಾಸ್. ಎನ್ (ಬೆಂಗಳೂರು) ಇವರು 'ಮೊಸಳೆ ಕಣ್ಣೀರು' ಎಂದೇಕೆ ಹೇಳುತ್ತೇವೆ ಎಂದು ಕೇಳಿದ್ದಾರೆ. ಈ ಪದಕಂತೆಯ ತಿರುಳನ್ನು ಅವರು ಸರಿಯಾಗಿಯೇ ತಿಳಿಸಿದ್ದಾರೆ. 'ಅನುಕಂಪ ತೋರಿಸಿದಾಗ, ಅದು ಸ್ವಾರ್ಥದೃಷ್ಟಿಯಿಂದ ಕೂಡಿದ್ದು ಎನಿಸಿದರೆ ಅದನ್ನು ಮೊಸಳೆ ಕಣ್ಣೀರು ಎನ್ನುತ್ತೇವೆ' ಇದು ಇಂಗ್ಲಿಶಿನ 'ಕ್ರೊಕೊಡಾಯಿಲ್ ಟಿಯರ್ಸ್' ಎಂಬುದರ ಕನ್ನಡ ರೂಪ. ತಾನು ಒಂದು ಪ್ರಾಣಿಯನ್ನು ಹಿಡಿದು ತಿನ್ನುವಾಗ ಮೊಸಳೆ ಕಣ್ಣೀರು ಸುರಿಸುತ್ತಿರುವಂತೆ ತೋರುತ್ತದೆಂದು ತಿಳಿದ ಯಾರೋ ಈ ಮಾತು

ಇಂಗ್ಲಿಶಿನಲ್ಲಿ ಬಳಕೆಗೆ ತಂದರು. ಕನ್ನಡದಲ್ಲೂ ಅದು ನೆಲೆಯೂರಿದೆ. ಮುಂದುವರೆದು, ಇದು ಮೊಸಳೆಗೆ ಮಾಡಿದ ಅವಮಾನವಲ್ಲವೇ ಎಂದು ಸುಹಾಸ್ ಅವರು ಕೇಳುತ್ತಾರೆ. ಸದ್ಯ ಕನ್ನಡ ಬಲ್ಲ ಮೊಸಳೆಗಳಿಲ್ಲವಲ್ಲ!

**ಕೈಯಲ್ಲಿ ಬೈಸಿಕೊಳ್ಳುವುದು**

ಚಂದ್ರಕಾಂತ (ಹೊಸಪೇಟೆ) ಇವರಿಗೆ 'ಎಲ್ಲರ ಕೈಯಲ್ಲಿ ಬೈಸಿಕೊಳ್ಳುವುದು' ಎಂಬ ವಾಕ್ಯ ಸರಿ ಎನಿಸಿಲ್ಲ. ಬೈಸಿಕೊಳ್ಳುವುದು ಬಾಯಲ್ಲಿ ಅಲ್ಲವೇ ಎನ್ನುವುದು ಅವರ ತಕರಾರು. ಮಾತನ್ನು ಹೀಗೆ ಪದಗಳ ತಿರುಳಿನ ಮೂಲಕವೇ ಅರಿಯಲು ಹೋಗಬಾರದು. ಎಲ್ಲ ನುಡಿಗಳಲ್ಲೂ ಪದಗಳ ತಿರುಳನ್ನು ಮೀರಿ ಬಳಕೆಯ ತಿರುಳು ಎಂಬುದೊಂದು ಇರುತ್ತದೆ. 'ಅವನು ಸಾಲದಲ್ಲಿ ಮುಳುಗಿಹೋಗಿದ್ದಾನೆ' ಎಂದರೆ ಏನು? ಇಲ್ಲಿ ಮುಳುಗು ಪದದ ತಿರುಳನ್ನು ಹಿಡಿದು ಜಗ್ಗುವಂತಿಲ್ಲ. ಅಲ್ಲವೇ? ಅದಿರಲಿ. ಮೇಲೆ ಹೇಳಿದ ವಾಕ್ಯದಲ್ಲಿ **ಕೈಯಲ್ಲಿ** ಎಂಬುದು ವಿಭಕ್ತಿ ಪ್ರತ್ಯಯದ ಕೆಲಸವನ್ನು ಮಾಡುತ್ತಿದೆ. **ಇಂದ** ಎಂಬ ಪ್ರತ್ಯಯದ ಬದಲು ಇಲ್ಲಿ **ಕೈಯಲ್ಲಿ** ಎಂದು ಹೇಳಲಾಗಿದೆ. ಕೆಲವರು ಕೈಯಲ್ಲಿ ಬದಲು **ಕೈಯಿಂದ, ಕೈಯಾಗ** ಎಂದೂ ಹೇಳುವುದುಂಟು. ಇದು ಈಚೆಗೆ ಬಂದಿರುವ ಬಳಕೆ. ಕನ್ನಡ ಮಾತನಾಡುವ ಕೆಲವು ಕಡೆಗಳಲ್ಲಿ ಈ ಪದದ ಬದಲಿಗೆ **'ಕಡೆಯಿಂದ, ಕಡಿಂದ'** (ಕಡೆಯಲ್ಲಿ, ಕಡೀಲಿ ಎಂದು ಬಳಸಲಾಗದು) ಎಂದೂ ಬಳಸುವುದನ್ನು ಕೇಳಬಹುದು.

**ಕೈಯಲ್ಲಿ, ಕೈಯಿಂದ, ಕಡೆಯಿಂದ** ಮುಂತಾದ ಪದಗಳನ್ನು ಬಳಸಿದಾಗ ಈ ಪದಗಳಿಗೆ ಮೊದಲು ಬರುವ ನಾಮಪದಕ್ಕೆ ಆಗಲೇ ಷಷ್ಠಿ ವಿಭಕ್ತಿ ಪ್ರತ್ಯಯ (ಅವನ ಕೈಯಲ್ಲಿ, ನನ್ನ ಕಡಿಂದ) ಸೇರಿರುತ್ತದೆ ಎನ್ನುವುದನ್ನು ಗಮನಿಸಬೇಕು. ಇದು ಕನ್ನಡ ವಾಕ್ಯ ರಚನೆಯನ್ನು ಕುರಿತು ಏನೋ ಸೂಚನೆಯನ್ನು ನೀಡುವಂತಿದೆ. ಇಂದ ಪ್ರತ್ಯಯ ಸೇರುವಾಗ ನೇರವಾಗಿ ನಾಮಪದಕ್ಕೇ ಸೇರುತ್ತದೆ ಎಂದು ಹೇಳುತ್ತೇವೆ. **ಊರಿನಿಂದ** ರೂಪವನ್ನು **ಊರು+ಇಂದ** ಎಂದು ಒಡೆದು ಅಲ್ಲಿ ಇನ್ ಎಂಬುದು ಹೆಚ್ಚುವರಿಯಾಗಿ ಸೇರಿದೆ ಎನ್ನುತ್ತೇವೆ ಅಲ್ಲವೇ. ಆದರೆ ಇಂದ ಎಂಬುದು ಊರಿನ ಎಂಬ ಷಷ್ಠೀ ರೂಪಕ್ಕೆ ಸೇರಿದೆ ಎಂದು ಹೇಳಲು ಬರುವುದಿಲ್ಲವೇ? ಹಾಗಾಗಿ ನಾವು ಈಗ ಗಮನಿಸುತ್ತಿರುವ ಕೈಯಲ್ಲಿ, ಕಡಿಂದ ಇವೆಲ್ಲ ಷಷ್ಠಿ ರೂಪಗಳ ಜತೆ ಬರುತ್ತಿರುವುದು ಸರಿಯಾಗಿಯೇ ಇದೆ.

**ಸರ್ಕಾರಿ ಬಾಲಕಿಯರು**

ಬಾಳಿಕಾಯಿ.ಕೆ.ಎಸ್ (ಲಕ್ಕುಂಡಿ, ಗದಗ ಜಿಲ್ಲೆ) ಇವರು '**ಸರ್ಕಾರಿ ಬಾಲಕಿಯರ ಪ್ರೌಢಶಾಲೆ** ಎಂದು ಬರೆಯಬೇಕೋ ಇಲ್ಲವೇ **ಬಾಲಕಿಯರ ಸರ್ಕಾರಿ ಪ್ರೌಢಶಾಲೆ** ಎಂದು ಬರೆಯಬೇಕೋ' ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. **ಬಾಲಕಿಯರ ಸರ್ಕಾರಿ ಪ್ರೌಢಶಾಲೆ** ಎಂದು ಬರೆಯುವುದೇ ಸರಿ. ಹೀಗೆ ಮೂರು ನಾಲ್ಕು ಪದಗಳನ್ನು ಒಟ್ಟಾಗಿ ಬರೆಯುವಾಗ ತಿರುಳಿನ ಗೊಂದಲಗಳು ಉಂಟಾಗುತ್ತವೆ. ಈ ಗೊಂದಲ ಕಡಿಮೆ ಮಾಡುವ ಹಾಗೆ ಪದಗಳನ್ನು ಜೋಡಿಸಿ ಬರೆಯುವುದು ಹೆಚ್ಚು ಸರಿ. ಪದಗಳನ್ನು

ಒಟ್ಟಾಗಿ ಜೋಡಿಸಿದಾಗ ಕೊನೆಯಲ್ಲಿ ಬರುವ ನಾಮಪದ ಆ ರಚನೆಯ ತಲೆಯಾಗಿರುತ್ತದೆ. ಒಟ್ಟು ರಚನೆಯ ತಿರುಳು ಈ ತಲೆಪದವನ್ನು ಅವಲಂಬಿಸಿರುತ್ತದೆ. ನಾಯಿ ಮರಿ ಮತ್ತು ಮರಿನಾಯಿ ಎಂಬ ರಚನೆಗಳಲ್ಲಿ ಇರುವ ತಿರುಳಿನ ಬದಲನ್ನು ನೋಡಿ. ಮೊದಲನೆಯದು ಹುಲಿಮರಿ, ಕುರಿಮರಿ, ಆನೆಮರಿ, ಗುಬ್ಬಿಮರಿ ತರಹದ ರಚನೆಯಾದರೆ ಎರಡನೆಯದು ದೊಡ್ಡನಾಯಿ, ಕೆಂಪುನಾಯಿ, ಕುಂಟುನಾಯಿ, ಹುಚ್ಚುನಾಯಿ ತರಹದ ರಚನೆ. ಇಂತಹ ರಚನೆಗಳಲ್ಲಿ ಎರಡಕ್ಕಿಂತ ಹೆಚ್ಚು ಪದಗಳಿದ್ದಾಗ ಕೊನೆಯ ತಲೆಪದಕ್ಕೆ ಮೊದಲು ಬರುವ ಯಾವ ಪದವನ್ನು ಹೇಗೆ ಹೊಂದಿಸಿಕೊಳ್ಳ ಬೇಕು ಎನ್ನುವ ಗೊಂದಲ ಉಂಟಾಗುತ್ತದೆ. ಮಾತಿನಲ್ಲಿ ಈ ಗೊಂದಲ ಇಲ್ಲದಂತೆ ಮಾಡಬಹುದು. ಆದರೆ ಬರವಣಿಗೆಯಲ್ಲಿ ಹಾಗಾಗದು. ದೊಡ್ಡ ಪಟ್ಟೆ ಹುಲಿ ಎಂದರೆ ಅದು ದೊಡ್ಡ ಪಟ್ಟೆಗಳಿರುವ ಹುಲಿಯೋ ಇಲ್ಲವೇ ದೊಡ್ಡದಾಗಿರುವ ಪಟ್ಟೆ ಹುಲಿಯೋ? ಮೇಲೆ ಕೇಳಿದ ಪ್ರಶ್ನೆಯಲ್ಲಿ ಹೇಳಿದ ರಚನೆಯಲ್ಲೂ ಗೊಂದಲ ಕಡಿಮೆ ಮಾಡಲು ಪದಗಳನ್ನು ಜೋಡಿಸುವ ಬಗೆಯಲ್ಲಿ ಬದಲಾವಣೆ ಮಾಡುವುದು ಒಂದು ದಾರಿ.

**ಕೇಳ್ಪಟ್ಟೆ**

ಕನ್ನಡದಲ್ಲಿ ಈಚೆಗೆ **'ಕೇಳ್ಪಟ್ಟೆ'** ಎಂಬ ಮಾತೊಂದು ಕೇಳಿಸುತ್ತಿದೆ. ಉದಾ. 'ನಿಮಗೆ ಬ್ಯುಸಿನೆಸ್ಸಲ್ಲಿ ತುಂಬಾ ಲಾಸ್ ಆಯ್ತು ಅಂತ ಕೇಳ್ಪಟ್ಟೆ' ಇಲ್ಲಿ ಕೇಳ್ಪಡು ಎಂಬ ಕ್ರಿಯಾರೂಪವಿದೆಯೆಂದು ತಿಳಿಯೋಣ. ಇದು ಬೇರೆ ಯಾವ ರೂಪದಲ್ಲೂ ಬಳಕೆಯಾಗುತ್ತಿರುವಂತೆ ತೋರುತ್ತಿಲ್ಲ(ಉದಾ.ಕೇಳ್ಪಡುತ್ತಾನೆ, ಕೇಳ್ಪಡುತ್ತಾರೆ, ಕೇಳ್ಪಟ್ಟರು ಮುಂ.) ಈ ರಚನೆಯಲ್ಲಿರುವ ಕೇಳ್ಪಡು ರೂಪದಲ್ಲಿ ಕೇಳ್ ಎಂಬ ಕ್ರಿಯಾಧಾತುವಿಗೆ ಪಡು ಎಂಬ ಪದ ಬಂದು ಸೇರಿದೆ. ಇದೇ ಮಾದರಿಯ ಕೆಲವು ರಚನೆಗಳು ಕನ್ನಡದಲ್ಲಿ ಇವೆ. ಉದಾ.ತೋರ್ಪಡು, ಮಾರ್ಪಡು. ಆದರೆ ಇವು ತೋರ್ಪಟ್ಟೆ, ಮಾರ್ಪಟ್ಟೆ ಎಂದು ಬಳಕೆಯಾಗುವುದಿಲ್ಲ. ಹಾಗಾಗಿ ಕೇಳ್ಪಟ್ಟೆ ಎಂಬ ರಚನೆಗೆ ಬೇರೆ ಮಾದರಿಗಳಿದ್ದರೂ ಅದು ಬಳಕೆಯಾಗುತ್ತಿರುವ ಬಗೆ ಮಾತ್ರ ಹೊಸದು. ಹೆಚ್ಚಾಗಿ ನಾವು ಯಾರೋ ಹೇಳಿದ ಮಾತನ್ನು ಕೇಳಿಸಿಕೊಂಡಿದ್ದರೆ ಆಗ ಈ ಕೇಳ್ಪಟ್ಟೆ ಎಂಬ ರೂಪವನ್ನು ಬಳಸುತ್ತಿರುವಂತಿದೆ. ಅಂದರೆ ನಾವು ಕೇಳಿದ ಇಲ್ಲವೇ ತಿಳಿದುಕೊಂಡ ಮಾತು ದಿಟವೋ ಸಟೆಯೋ ಎಂಬುದು ಗೊತ್ತಿಲ್ಲದಿದ್ದರೆ ಆಗ ಈ ಕೇಳ್ಪಟ್ಟೆ ಎಂಬ ಪದವನ್ನು ಬಳಸುವಂತಿದೆ.

ಹಲವರು ( ಬೆಂಗಳೂರಿನ ಎನ್,ಎಸ್,ಶಂಕರ್, ಕೊಳ್ಳೆಗಾಲದ ನಟರಾಜ್.ವಿ. ಬೆಂಗಳೂರಿನ ಎಸ್,ಗುರುದತ್) ಇದು ತಮಿಳಿನಿಂದ ಬಂದು ಸೇರಿರುವ ರಚನೆ ಎಂದು ಹೇಳಿದ್ದಾರೆ. ಸರಿ. ಹೀಗಿದ್ದರೂ ತಮಿಳಿನಲ್ಲಿ ಕೇಳ್ ಎಂಬ ಕ್ರಿಯಾ ರೂಪಕ್ಕೆ ನೇರವಾಗಿ ಪಡು ಸೇರುವುದಿಲ್ಲ. ಮೊದಲು ಕೇಳ್ವಿ ಎಂಬ ಕಾಂಡವನ್ನು ರಚಿಸಿಕೊಂಡು ಬಳಿಕ ಅದಕ್ಕೆ ಪಡು (ಉದಾ.ಕೇಳ್ವಿಪಟ್ಟೇನ್) ಸೇರಿಸಲಾಗುತ್ತದೆ.

**ಕೊಡಮಾಡು**

ಕುಪ್ಪುಸ್ವಾಮಿ.ಎಸ್.ಕೆ( ಬೆಂಗಳೂರು) ಇವರು 'ಕೊಡಮಾಡು' ಎಂಬ ರಚನೆಯನ್ನು ಕುರಿತು ಕೇಳಿದ್ದಾರೆ. ಮಾಡು ಎಂಬ ರೂಪವನ್ನು ನಾಮಪದಗಳಿಗೆ

ಸೇರಿಸಿ ಕ್ರಿಯಾ ರೂಪವನ್ನು ಪಡೆದುಕೊಳ್ಳುವ ಬಗೆಯೊಂದು ಕನ್ನಡದಲ್ಲಿದೆ. ಸಾಲಮಾಡು, ಕೆಲಸಮಾಡು, ತಡಮಾಡು, ನಿಗಾಮಾಡು, ಊಟಮಾಡು, ಮರೆಮಾಡು ಇವೆಲ್ಲವೂ ಇಂತಹ ರಚನೆಗಳು. ಆದರೆ ಕ್ರಿಯಾ ಧಾತುಗಳಿಗೆ ಮಾಡು ಸೇರಿಸಿ ಹೊಸ ರಚನೆಯನ್ನು ಪಡೆದುಕೊಳ್ಳುವುದು ಕಡಿಮೆ. ಬರಮಾಡು (=ಬರುವಂತೆ ಮಾಡು), ಆಗುಮಾಡು (=ಆಗುವಂತೆ ಮಾಡು) ಕೂಡಲೇ ನೆನಪಿಗೆ ಬರುವ ರಚನೆಗಳಾಗಿವೆ. ಕೊಡಮಾಡು ಎಂಬ ರಚನೆಯನ್ನು ನೀಡು, ಕೊಡು ಎಂಬ ತಿರುಳಿನೊಡನೆ ಬಳಸುತ್ತೇವೆ. ಹೆಚ್ಚಿನ ಬದಲಾವಣೆ ಏನೂ ಇಲ್ಲ. 'ಕೇಂದ್ರ ಸರಕಾರ ಕೊಡಮಾಡುವ ಅನುದಾನದಲ್ಲಿ ಈ ಕಾಮಗಾರಿಯನ್ನು ಮಾಡಲಾಗುವುದು' ಎಂಬ ಬಳಕೆಯನ್ನು ನೋಡಿ. ಇಲ್ಲಿ ಕೊಡಮಾಡುವ ಎಂದರೇನು? ಕೊಡುವ, ನೀಡುವ ಎಂದು ತಾನೆ. ಕೊಡುವಿಕೆಗೆ ಹೆಚ್ಚಿನ ಮನ್ನಣೆಯನ್ನು ತೋರಬೇಕಾಗಿ ಬಂದಾಗ ಈ ಕೊಡಮಾಡು ಎಂಬ ರಚನೆಯನ್ನು ಬಳಸಲಾಗುತ್ತದೆ.

**ಮನೆ+ಒಳಗಣ ಇಲ್ಲವೇ ಮನೆಯ+ ಒಳಗಣ**

ಮುರಳೀಧರ.ಬಿ.ಕೆ (ದೊಡ್ಡಬಳ್ಳಾಪುರ) ಇವರು ಮನೆಯೊಳಗಣ ಎಂಬ ರಚನೆಯನ್ನು ಹೇಗೆ ಬಿಡಿಸಿಕೊಳ್ಳಬೇಕು ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಅದು ಮನೆ+ಒಳಗಣ ಎಂದೋ ಇಲ್ಲವೇ ಮನೆಯ+ ಒಳಗಣ ಎಂದೋ ಎಂಬುದು ಅವರ ಗೊಂದಲ. ನಮ್ಮ ಶಾಲಾ ವ್ಯಾಕರಣಗಳು ಹೇಳುವಂತೆ ಮೊದಲ ಹಾದಿ ಯಕಾರಾಗಮ ಸಂಧಿಯಾದರೆ ಎರಡನೆಯದು ಲೋಪ ಸಂಧಿ (ಅಕಾರ ಲೋಪ) ಆಗುತ್ತದೆ. ಇಲ್ಲಿ ಎರಡನೆಯದೇ ಸರಿ. ಮನೆಯ ಒಳಗಣ ಎಂಬುದೇ ಅಲ್ಲಿರುವ ರಚನೆ. ಮನೆ ಎಂಬ ನಾಮಪದದ ಷಷ್ಠಿ ವಿಭಕ್ತಿ ರೂಪಕ್ಕೆ ಒಳಗಣ ಸೇರಬೇಕು. ಮರದೊಳಗಣ ಮತ್ತು ಊರೊಳಗಣ ಎಂಬ ರಚನೆಗಳನ್ನು ನೋಡಿ. ಇಲ್ಲಿಯೂ ಮರ ಮತ್ತು ಊರು ಎಂಬ ನಾಮಪದಗಳಿಗೆ ಮೊದಲು ಷಷ್ಠಿ ವಿಭಕ್ತಿ ಪ್ರತ್ಯಯ ಸೇರಬೇಕು. ಆಗ ಸಿಗುವ ಮರದ ಮತ್ತು ಊರ ಎಂಬ ರೂಪಗಳಿಗೆ ಒಳಗಣ ಸೇರುತ್ತದೆ. ಹಾಗಾಗಿ ಮನೆ ಪದಕ್ಕೆ ನೇರವಾಗಿ ಒಳಗಣ ಸೇರುವುದೆಂದು ಹೇಳುವುದು ಸರಿಯಾಗಲಾರದು.

**ಅಣ್ಣ ಎಂಬ ಪದ ಕನ್ನಡದ್ದಲ್ಲ!?**

ನಟರಾಜ. ವಿ (ಕೊಳ್ಳೇಗಾಲ) ಇವರ ಪ್ರಶ್ನೆ ಹೀಗಿದೆ. 'ಅಣ್ಣ ಎಂಬ ಪದ ಕನ್ನಡದ್ದಲ್ಲ ಎಂದು ಬಾನುಲಿಯ ಕಾರ್ಯಕ್ರಮದಲ್ಲಿ ಹೇಳಿದರು. ಹಾಗಾದರೆ ಇದು ಯಾವ ಭಾಷೆಯ ಪದ?' ಅಣ್ಣ ಕನ್ನಡದ್ದೇ ಪದ. ಈ ನುಡಿಯ ನಂಟಿರುವ ಎಲ್ಲ ನುಡಿಗಳಲ್ಲೂ ಈ ಪದಕ್ಕೆ ಹತ್ತಿರದ ಉಚ್ಚಾರಣೆಯುಳ್ಳ ಪದಗಳಿವೆ. ಇದು ನೆತ್ತರ ನಂಟನ್ನು ಹೇಳುವ ಪದವಾಗಿರುವಂತೆ ನಮಗಿಂತ ಹಿರಿಯರಾದ ಯಾರೊಡನಾದರೂ ಮಾತಾಡುವಾಗ ಬಳಸಬಹುದಾದ ಪದವೂ ಆಗಿದೆ. ದೊಡ್ಡದು, ಎತ್ತರವಾದದು, ಹಿರಿದಾದುದು ಎಂಬುದನ್ನು ಹೇಳಲು ಕೆಲವು ದ್ರಾವಿಡ ನುಡಿಗಳಲ್ಲಿ ಈ ಪದದ ನಂಟುಳ್ಳ ಪದಭಾಗವನ್ನು ಬಳಸುತ್ತಾರೆ. ಹಾಗಿದ್ದರೆ ಈ ಮೇಲಿನ ಪ್ರಶ್ನೆ ಏಕೆ ಬಂತು? ಕನ್ನಡ ಮಾತಾಡುವ ಕೆಲವು ಪ್ರದೇಶಗಳಲ್ಲಿ ಮೂಡಲ ಕಡೆ ಕೋಲಾರದಿಂದ ಕೆಳಗೆ

ಕೊಳ್ಳೇಗಾಲದವರೆಗೆ ಮತ್ತು ಪಡುವಲಲ್ಲಿ ಬಾಗಲಕೋಟೆಯಿಂದ ಬೆಳಗಾಂ ಜಿಲ್ಲೆಯ ಕೆಲವು ತಾಲೂಕುಗಳವರೆಗೆ ಣಕಾರ ಮತ್ತು ನಕಾರಗಳನ್ನು ನುಡಿಯುವ ಮತ್ತು ಕೇಳಿಸಿಕೊಳ್ಳುವ ಬಗೆಯಲ್ಲಿ ಕೆಲವು ಬದಲಾವಣೆಗಳಿವೆ. ಅದರಲ್ಲೂ ಇಲ್ಲಿನ ಜನರು ನಕಾರವನ್ನು ಣಕಾರವನ್ನಾಗಿ ನುಡಿದಂತೆ ಬೇರೆಯವರಿಗೆ ಅನ್ನಿಸುತ್ತದೆ. ಹಾಗೆಯೇ ಬೇರೆಯ ಕನ್ನಡಿಗರು ನುಡಿಯುವ ನಕಾರವನ್ನು ಣಕಾರವನ್ನಾಗಿ ಈ ವಲಯದ ಜನರು ಕೇಳಿಸಿಕೊಳ್ಳುವುದುಂಟು. ಈ ಗೊಂದಲ ಅವರ ಬರವಣಿಗೆಯಲ್ಲೂ ಕಾಣಿಸಿಕೊಳ್ಳುತ್ತದೆ. ಈ ಪ್ರಶ್ನೆ ಕೇಳಿದವರು ಕೊಳ್ಳೇಗಾಲದವರು. ಹಾಗಾಗಿ ಇಲ್ಲಿಯೂ ಅಣ್ಣ ಮತ್ತು ಅನ್ನ ಎಂಬ ಪದಗಳ ನಡುವೆ ಗೊಂದಲವಾದಂತಿದೆ. ಅನ್ನ ಕನ್ನಡ ಪದವಲ್ಲ; ಇದು ಸಂಸ್ಕೃತದ ಪದ.

### ಬರಹದಲ್ಲಿ ಸರಿಯಾದ ರೂಪ

ಬರಹದಲ್ಲಿ ಸರಿಯಾದ ರೂಪ ಯಾವುದು ಎಂಬುದು ಹಲವರನ್ನು ಯಾವಾಗಲೂ ಕಾಡುವ ಸಮಸ್ಯೆ. ಸರಿಯಲ್ಲದ ರೂಪಗಳನ್ನು ನಾವು ಗುರುತಿಸುವುದು ಹೇಗೆ? 1. ಕಾಗುಣಿತದಲ್ಲಿ ಸರಿಯಾದ ರೂಪಗಳನ್ನು ಬಳಸದಿರುವುದು. 2. ಸರಿಯಾದ ರಚನೆಯನ್ನು ಹೊಂದಿಲ್ಲದ ರೂಪಗಳನ್ನು ಬಳಸದಿರುವುದು ಮತ್ತು 3. ಸರಿಯಾದ ಅರ್ಥವನ್ನು ನೀಡದ ರೂಪವನ್ನು ಬಳಸದಿರುವುದು. ಅರ್ಥ ಸರಿಯಾಗದಿದ್ದರೂ ಓದುವವರೆಲ್ಲರಿಗೂ ಒಪ್ಪಿಗೆಯಾಗದಿರುವುದು. ಇವುಗಳಲ್ಲಿ ಮೊದಲನೆಯದು ಎರಡು ಕಾರಣಗಳಿಂದ ಆಗುವಂತಹದು. ಒಂದು:ಸರಿಯಾದ ಕಾಗುಣಿತ ಗೊತ್ತಿಲ್ಲದೆ ತಪ್ಪಾಗಿ ಬರೆಯುವುದು( ಶಾಲೆಯಲ್ಲಿ ಮಕ್ಕಳು ಇಂತಹ ತಪ್ಪುಗಳನ್ನು ಮಾಡುತ್ತಲೇ ಇರುತ್ತಾರೆ) ಎರಡು: ಸರಿಯಾದ ಕಾಗುಣಿತ ಯಾವುದು ಎಂಬುದು ಖಚಿತವಾಗಿ ಹೇಳಲು ಆಗದಿರುವುದು. ಅಂದರೆ ಒಂದು ಪದವನ್ನು ಒಂದಕ್ಕಿಂತ ಹೆಚ್ಚು ರೀತಿಗಳಲ್ಲಿ ಬರೆಯುವುದು ಬಳಕೆಯಲ್ಲಿರುತ್ತದೆ. ಉದಾಹರಣೆಗೆ ಗಮನಿಸಿ: ಆದ್ದರಿಂದ,ಅದರಿಂದ,ಆದುದರಿಂದ; ಈ ಬೇರೆ ಬೇರೆ ರೂಪಗಳಲ್ಲಿ ಯಾವುದು ಸರಿ ಎಂದು ಹೇಳಲು ಆಗುವುದಿಲ್ಲವೆಂದಲ್ಲ. ಆದರೆ ಆ ಸರಿಯಾದ ರೂಪವನ್ನೇ ಎಲ್ಲರೂ ಬಳಸುವಂತೆ ಮಾಡುವುದು ಆಗದ ಮಾತು. ಇದಕ್ಕೆ ಅಡ್ಡಿಗಳು ಹಲವಿವೆ. ಸಂಸ್ಕೃತದಿಂದ ಪಡೆದುಕೊಂಡ ಪದಗಳ ಸರಿಯಾದ ಬರಹ ರೂಪಗಳನ್ನು ಬಳಸಬೇಕೆಂದು ಒತ್ತಾಯ ಮಾಡಲಾಗುತ್ತದೆ. ಹಾಗಿಲ್ಲದಿದ್ದರೆ ತಪ್ಪು ಅರ್ಥ ಉಂಟಾಗುವುದೆಂದು ಹೇಳಿದರೂ ತಿದ್ದುವುದು ಹೇಗೆ? ಶಾಕಾಹಾರಿ ಮತ್ತು ಶಾಖಾಹಾರಿ ಎಂಬ ರೂಪಗಳನ್ನೇ ನೋಡಿ. ಮಾಂಸಾಹಾರವಲ್ಲದು ಎಂಬ ಆರ್ಥದಲ್ಲಿ ಬಳಸಿದರೆ ಮೊದಲನೆಯ ರೂಪವಷ್ಟೇ ಸರಿ. ಆದರೂ ಇನ್ನೊಂದು ರೂಪವನ್ನು ಬಳಸುವುದು ನಡೆದೇ ಇರುತ್ತದೆ.

### ವಿರುದ್ಧಾರ್ಥ ಮತ್ತು ನಿಷೇಧಾರ್ಥ ರೂಪ

ಅಧ್ಯಾಪಕಿಯೊಬ್ಬರು **ಅಮರ** ಪದದ ವಿರುದ್ಧಾರ್ಥ ಪದವೇನೆಂದು ಕೇಳಿದ್ದಾರೆ. ಅಳಿವು ಇಲ್ಲದ್ದು ಅಮರ. ಇದನ್ನು ಗುಣಪದವಾಗಿ ಕನ್ನಡದಲ್ಲಿ ಹೆಚ್ಚಾಗಿ ಬಳಸುತ್ತೇವೆ. ಹೀಗೆ ಗುಣಪದವಾಗಿರುವಾಗ ಅಳಿಯುವ ಎಂಬ ಆರ್ಥದ ನಶ್ವರ ಎಂಬುದು ವಿರುದ್ಧಪದವೆಂದು ತೋರಬಹುದು. ಅಮರ ಎಂಬುದು ದೇವತೆ ಎನ್ನುವ ಅರ್ಥದಲ್ಲಿ

ಬಳಕೆಯಾದರೆ ಆಗ ಅಸುರ, ರಾಕ್ಷಸ ಎಂಬುದು ವಿರುದ್ಧವಾಗಿ ತೋರುತ್ತದೆ. (ಕನ್ನಡದ ಕೆಲವು ಕವಿಗಳು ಮರಗಳನ್ನು ಕಡಿಯುವ ಕೆಲಸಕ್ಕೆ ಅಮರಗೊಳಿಸುವುದು ಎಂದು ಹೆಸರಿಟ್ಟು ಚಮತ್ಕಾರ ಮಾಡಿದ್ದಾರೆ)

ಶಾಲೆಯಲ್ಲಿ ಕನ್ನಡ ಕಲಿಸುವವರೆಲ್ಲರಿಗೂ ಪದಗಳಿಗೆ ವಿರುದ್ಧಾರ್ಥ ಮತ್ತು ನಿಷೇಧಾರ್ಥ ರೂಪಗಳನ್ನು ಕಲಿಸುವುದು ಯಾವಾಗಲೂ ಕಾಡುವ ಭಾಷಾಭ್ಯಾಸ ಭಾಗಗಳಾಗಿರುತ್ತವೆ. ಭಾಷೆಯಲ್ಲಿ ಹೇಗೆ ಒಂದೇ ಅರ್ಥ ಕೊಡುವ ಪದಗಳಿರುವುದಲ್ಲವೋ ಹಾಗೆಯೇ ವಿರುದ್ಧ ಅರ್ಥವಿರುವ ಪದಗಳು ಇರುವುದಿಲ್ಲ. ಎರಡು ಪದಗಳಿಗೆ ಒಂದೇ ಅರ್ಥವಿರುವುದಾದರೆ ಭಾಷೆಯಲ್ಲಿ ಹಾಗೆ ಬೇರೆ ಬೇರೆ ಪದಗಳಿರಲು ಕಾರಣವಿಲ್ಲ. ನಾವು ಸಮಾನಾರ್ಥಕಗಳು ಎಂದು ಹೇಳುವ ಪದಗಳಿಗೂ ಬಳಕೆಯಲ್ಲಿ ವ್ಯತ್ಯಾಸಗಳಿರುತ್ತವೆ. ಇಲ್ಲವೇ ಆ ಪದಗಳ ರಾಚನಿಕ ನೆಲೆಯಲ್ಲಿ ವ್ಯತ್ಯಾಸಗಳಿರುತ್ತವೆ. ಇದೇ ಮಾತು ನಾವು ವಿರುದ್ಧಪದಗಳೆಂದು ಭಾವಿಸುವ ಜೋಡಿ ಪದಗಳಿಗೂ ಅನ್ವಯಿಸುತ್ತದೆ. ನಾವು ಲೋಕವನ್ನು ಗ್ರಹಿಸುವ ಬಗೆಯಲ್ಲಿರುವ ವಿರೋಧಗಳನ್ನು ಪದಗಳ ನಡುವಣ ವಿರೋಧವೆಂದು ತಿಳಿದುಬಿಡುತ್ತೇವೆ. ಹೀಗಾಗಿ ರಾತ್ರಿ/ಹಗಲು. ಗಂಡು/ಹೆಣ್ಣು, ಕಪ್ಪು/ಬಿಳುಪು, ಎಡ/ಬಲ, ಹಿಂದೆ/ಮುಂದೆ ಇವೆಲ್ಲವೂ ವಿರುದ್ಧ ಪದಜೋಡಿಗಳಾಗಿ ಬಿಡುತ್ತವೆ. ಆದರೆ ವಿರುದ್ದ ಪದಗಳ ಜೋಡಿಯು ನಮ್ಮ ಗ್ರಹಿಕೆಯಿಂದ ಹುಟ್ಟಿರುವುದೇ ಹೊರತು ಆ ಪದಗಳಲ್ಲಿ ವಿರುದ್ಧ ಅರ್ಥವನ್ನು ಸೂಚಿಸುವ ಸಾಮರ್ಥ್ಯವಿಲ್ಲ. ಶಾಲೆಗಳಲ್ಲಿ ಮಕ್ಕಳಿಗೆ ಹೀಗೆ ವಿರುದ್ಧಪದಗಳನ್ನು ಹೇಳಿಕೊಡುವ ಮೂಲಕ ನಮಗೇ ಗೊತ್ತಿಲ್ಲದೇ ಅವರಲ್ಲಿ ಒಂದು ಬೇಡದ ಲೋಕದೃಷ್ಟಿಯನ್ನು ಬೆಳೆಸುತ್ತಿರುತ್ತೇವೆ.

ಇನ್ನು ನಿಷೇಧ ಪದಗಳ ಮಾತು. ನಿಷೇಧಪದಗಳು ಪದರಚನೆಯ ನಿಯಮಗಳ ಮೂಲಕ ರೂಪುಗೊಳ್ಳುತ್ತವೆ. ನಿಷೇಧವನ್ನು ಸೂಚಿಸುವ ಪ್ರತ್ಯಯವನ್ನು ಸೇರಿಸಿ ನಿಷೇಧರೂಪಗಳನ್ನು ಪಡೆಯುತ್ತೇವೆ. ನ್ಯಾಯ/ಅನ್ಯಾಯ, ಹಿಂಸೆ/ಅಹಿಂಸೆ, ಚಿಂತೆ/ನಿಶ್ಚಿಂತೆ, ಫಲ/ನಿಷ್ಫಲ, ಗತಿ/ದುರ್ಗತಿ, ಬಲ/ದುರ್ಬಲ ಮುಂತಾದ ಜೋಡಿಪದಗಳಲ್ಲಿ ಮೊದಲ ಪದಕ್ಕೆ ಒಂದು ಪ್ರತ್ಯಯ ಸೇರಿಸಿ ಅದರ ನಿಷೇಧರೂಪವನ್ನು ಪಡೆಯಲಾಗಿದೆ. ಈ ಎಲ್ಲ ಪದಗಳೂ ಸಂಸ್ಕೃತದಿಂದ ಬಂದು ಸೇರಿರುವಂತಹವು. ಕನ್ನಡ ನಾಮಪದ ಮತ್ತು ಗುಣಪದಗಳಿಗೆ ಕನ್ನಡದ ಪ್ರತ್ಯಯವನ್ನೇ ಸೇರಿಸಿ ನಿಷೇಧರೂಪಗಳನ್ನು ಪಡೆಯುವುದು ಆಗದು. ಹೀಗಿದ್ದರೂ ಕೆಲವು ಕನ್ನಡ ಪದಗಳಿಗೆ ಸಂಸ್ಕೃತದ ಪ್ರತ್ಯಯಗಳನ್ನು ಸೇರಿಸಿ ನಿಷೇಧರೂಪಗಳನ್ನು ಪಡೆಯುವುದುಂಟು. ಉದಾ.ನಡತೆ/ದುರ್ನಡತೆ. ನಿಷೇಧಪದಗಳನ್ನು ಪಡೆಯುವಾಗ ಒಂದು ಭಾಷಿಕ ನಿಯಮವನ್ನು ಬಳಸುತ್ತೇವೆ. ಹಾಗಾಗಿ ಅಂತಹ ಪದಗಳ ಬಗೆಗೆ ಶಾಲೆಗಳಲ್ಲಿ ಹೇಳಿಕೊಡುವ ಅಗತ್ಯವಿದೆ: ಆದರೆ ವಿರುದ್ಧಪದಗಳ ಬಗೆಗೆ ಅಂತಹ ಅಗತ್ಯವಿದ್ದಂತಿಲ್ಲ.

**ಮೂಲಭಾಷೆಯಲ್ಲಿ ಇಲ್ಲದ ರೂಪ ಮತ್ತು ಅರ್ಥಗಳು**

ಮಂಗಳೂರಿನ ಡಾ.ಪ್ರಭಾಕರ ಜೋಶಿಯವರು ಬೇರೆ ಭಾಷೆಗಳಿಂದ ಪದಗಳನ್ನು ಪಡೆದುಕೊಂಡು ಬಳಸುವಾಗ ಕೆಲವು ಪದಗಳಿಗೆ ಮೂಲಭಾಷೆಯಲ್ಲಿ ಇಲ್ಲದ ರೂಪ ಮತ್ತು ಅರ್ಥಗಳು ನಮ್ಮ ಭಾಷೆಯಲ್ಲಿ ಬಂದೊದಗುವುದು ಏಕೆ ಎಂದು ಕೇಳುತ್ತಾರೆ.

ಉದಾಹರಣೆಯಾಗಿ **ಜವಾಬ್ದಾರಿ** ಎಂಬ ಪದವನ್ನು ಸೂಚಿಸಿದ್ದಾರೆ. ಜವಾಬ್ದಾರಿ ಎಂಬ ಪದ ಹೊಣೆಗಾರಿಕೆ ಎನ್ನುವ ಅರ್ಥದಲ್ಲಿ ಈಗ ಕನ್ನಡದಲ್ಲಿ ಬಳಕೆಯಾಗುತ್ತಿದೆ. ಉತ್ತರದಾಯಿತ್ವ ಎನ್ನುವ ಅರ್ಥದಲ್ಲೂ ಅಲ್ಲಲ್ಲಿ ಬಳಕೆಯಾಗುವುದುಂಟು. 1.'ಹೊಸ ಖಾತೆಯ ಜವಾಬ್ದಾರಿಯನ್ನು ಸಚಿವರು ನಿರ್ವಹಿಸುವಲ್ಲಿ ಸೋತಿದ್ದಾರೆ' 2. ದೆಹಲಿಯ ಸ್ಫೋಟದ ಜವಾಬ್ದಾರಿ ತನ್ನದೇ ಎಂದು ಈ ಸಂಘಟನೆ ಹೇಳಿಕೆ ನೀಡಿದೆ. ಈ ಎರಡೂ ವಾಕ್ಯಗಳಲ್ಲಿ ಜವಾಬ್ದಾರಿ ಪದ ಬೇರೆ ಬೇರೆ ಆರ್ಥಗಳಲ್ಲಿ ಬಳಕೆಯಾಗಿದೆಯಷ್ಟೆ. ಈ ಪದ ಪರ್ಸೋ ಅರಾಬಿಕ್ ಮೂಲದ್ದು. ಈ ರೂಪ ಮತ್ತು ಅರ್ಥದಲ್ಲಿ ಪರ್ಸಿಯನ್ ಇಲ್ಲವೇ ಅರಾಬಿಕ್‌ನಲ್ಲಿ ಬಳಕೆಯಾಗುತ್ತಿಲ್ಲ. ಕನ್ನಡ ಪದದ ರೂಪ ಮತ್ತು ಬಳಕೆಯ ಅರ್ಥಗಳನ್ನು ತನಗೆ ಬೇಕಾದಂತೆ ರೂಪಿಸಿಕೊಂಡಿದೆ.

ಪದದ ರೂಪ ಮತ್ತು ಅರ್ಥಗಳೆರಡೂ ಹೀಗೆ ಬದಲಾಗುವುದು ಅಪರೂಪವೇನಲ್ಲ. ಇದಕ್ಕೆ ಕಾರಣಗಳಿವೆ. ಒಂದು ಭಾಷೆಯ ಪದಗಳು ಇನ್ನೊಂದು ಭಾಷೆಗೆ ನುಸುಳಿ ಬರುವ ಸಂದರ್ಭಗಳು ಎರಡು ರೀತಿಯಲ್ಲಿರುತ್ತವೆ. ಎರಡೂ ಭಾಷೆಗಳನ್ನು ಆಡುವ ಜನಸಮುದಾಯಗಳು ಒಟ್ಟಿಗೆ ಬದುಕಬೇಕಾದ ಸಂದರ್ಭ ಅವುಗಳಲ್ಲಿ ಒಂದು.(ತೆಲುಗು/ಕನ್ನಡ, ತುಳು/ಕನ್ನಡ ಇಂತಹ ಸಂದರ್ಭಕ್ಕೆ ಮಾದರಿಗಳು) ಮತ್ತೆ ಕೆಲವು ಸಂದರ್ಭದಲ್ಲಿ ಒಂದು ಭಾಷೆ ಆಡಳಿತ ಮತ್ತು ಸಾಮಾಜಿಕ ಕಾರಣಗಳಿಂದಾಗಿ ಇನ್ನೊಂದು ಭಾಷಾ ಪ್ರದೇಶದಲ್ಲಿ ಬಳಕೆಯಾಗತೊಡಗುತ್ತದೆ. ಕನ್ನಡನಾಡಿನಲ್ಲಿ ಇಂಗ್ಲಿಶ್ ಬಳಕೆಯಾಗಿದ್ದು ಹೀಗೆ. ಇಂಗ್ಲಿಶ್ ಮಾತಾಡುವ ಜನಸಮುದಾಯದೊಡನೆ ಕನ್ನಡಗಳು ಒಟ್ಟಾಗಿ ಬದುಕಬೇಕಾದ ಪ್ರಸಂಗ ಉಂಟಾಗಲಿಲ್ಲ. ಈ ಎರಡೂ ಸಂದರ್ಭಗಳಲ್ಲಿ ಪದಗಳ ಒಳ ನುಸುಳುವಿಕೆ ಮತ್ತು ಅವುಗಳಲ್ಲಿ ಆಗುವ ಬದಲಾವಣೆಗಳು ಬೇರೆ ಬೇರೆ ಬಗೆಯಲ್ಲಿರುತ್ತವೆ. ಎರಡನೆಯ ಸಂದರ್ಭದಲ್ಲಿ ಪದದ ರೂಪ ಮತ್ತು ಆರ್ಥಗಳು ಬದಲಾಗುವ ಸಾಧ್ಯತೆ ಹೆಚ್ಚು. ಏಕೆಂದರೆ ಇನ್ನೊಂದು ಭಾಷೆಯನ್ನು ಆಡುವ ಜನರ ನುಡಿಯ ರೀತಿ ಮತ್ತು ಪದಗಳ ಅರ್ಥಗಳನ್ನು ನಮಗೆ ಬೇಕಾದಂತೆ ನಾವು ತಿಳಿದುಕೊಳ್ಳುತ್ತೇವೆ. ಅದರಂತೆ ಬಳಸತೊಡಗುತ್ತೇವೆ. ಜವಾಬ್ದಾರಿ ಎಂಬ ಪದವನ್ನೇ ನೋಡಿ: ಬೇಜವಾಬ್ದಾರಿ ಎಂಬ ಪದವಿರುವಂತೆ ಜವಾಬ್ದಾರಿಯುತ, ಜವಾಬ್ದಾರಿಕೆ, ಜವಾಬ್ದಾರಿತನ ಎಂಬ ಪದಗಳನ್ನು ಕೂಡ ನಾವು ಬಳಸುತ್ತೇವೆ. ಆಂದರೆ ಪರ್ಸೋ ಅರಾಬಿಕ್ ಮೂಲದ ಪದಕ್ಕೆ ಕನ್ನಡದ ಪ್ರತ್ಯಯಗಳನ್ನು(–ತನ, –ಇಕೆ) ಹಾಗೆಯೇ ಸಂಸ್ಕೃತ ಪ್ರತ್ಯಯ (–ಯುತ)ವನ್ನು ಸೇರಿಸಲು ಹಿಂಜರಿಯುವುದಿಲ್ಲ. ಒಂದು ಭಾಷೆಯ ಪದಕೋಶ ಬೆಳೆಯುವ ಬಗೆಯೇ ಹೀಗೆ.

**ಸಂಭಾವ್ಯತೆಯನ್ನೋ, ಅನುಮತಿಯನ್ನೋ?**

ಕರ್ನಾಟಕ ರಾಜ್ಯ ಲೋಕಸೇವಾ ಆಯೋಗ ನಡೆಸುವ ಕನ್ನಡ ಭಾಷೆಯ ಪರೀಕ್ಷೆಗಳಲ್ಲಿ ಕೊಟ್ಟ ಪ್ರಶ್ನೆ ಮತ್ತು ನೀಡಿದ ಉತ್ತರಗಳ ಬಗೆಗೆ ಹಲವರು ಕಾಗದ ಬರೆದಿದ್ದಾರೆ. ಶೇಖರ್.ಟಿ.ಬಿ (ಕಾರ್ಕಳ) ತಿನ್ನಬಹುದು ಎಂಬುದು ಸಂಭಾವ್ಯತೆಯನ್ನು ಹೇಳುವುದೋ ಇಲ್ಲವೇ ಅನುಮತಿಯನ್ನೋ ಎಂದು ಕೇಳಿದ್ದಾರೆ. ಆಯೋಗದ ಉತ್ತರದಲ್ಲಿ ಅದು ಅನುಮತಿಯನ್ನು ಹೇಳುತ್ತದೆ. ಆದರೆ ತಿನ್ನಬಹುದು ಎಂಬ ರಚನೆಯು

ಯಾವ ವಾಕ್ಯದಲ್ಲಿ ಬಳಕೆಯಾಗಿದೆ ಎಂಬುದನ್ನು ನೋಡಿ ಈ ಗೊಂದಲವನ್ನು ಇಲ್ಲವಾಗಿಸಲು ಬರುತ್ತದೆ. ಈ ವಾಕ್ಯಗಳನ್ನು ನೋಡಿ: 1.ನೀವಿನ್ನು ನಿಮಗೆ ಕೊಟ್ಟ ತಿಂಡಿ ತಿನ್ನಬಹುದು. 2. ಹುಡುಗರು ಡಬ್ಬಿಯಲ್ಲಿದ್ದ ತಿಂಡಿ ಕದ್ದು ತಿನ್ನಬಹುದು ಎಂದು ಕೊಠಡಿಗೆ ಬೀಗಹಾಕಿದ್ದ. ಮೊದಲ ವಾಕ್ಯದಲ್ಲಿ ಒಪ್ಪಿಗೆ (ಅನುಮತಿ) ಇದ್ದರೆ ಎರಡನೆಯದರಲ್ಲಿ ಸಂಭಾವ್ಯತೆಯನ್ನು ಗುರುತಿಸಬಹುದು. ಹಾಗಾಗಿ 'ತಿನ್ನಬಹುದು' ಎಂದಷ್ಟೇ ಹೇಳಿದರೆ ಅದರ ಚಹರೆಗಳನ್ನು ಗುರುತಿಸುವುದು ಆಗದ ಮಾತು. ಇದೇ ಪ್ರಶ್ನಪತ್ರಿಕೆಯಲ್ಲಿ ಕರತಲಾಮಲಕ ಎಂಬ ರಚನೆಯ ಅರ್ಥವನ್ನು ಕೇಳಿ ಅಂಗೈಮೇಲಿನ ನೆಲ್ಲಿಕಾಯಿ ಎಂಬುದು ಸರಿಯಾದ ಅರ್ಥವೆಂದು ಹೇಳಿದ್ದಾರಂತೆ. ಆದರೆ ನೀಡಿರುವ ಉತ್ತರಗಳಲ್ಲಿ ಸುಲಭ ಎಂಬುದೂ ಒಂದಿದೆ. ಸುಲಭ ಎಂಬುದೇ ಈ ರಚನೆಯ ಅರ್ಥವೆಂದು ಹೇಳಿದರೆ ತಪ್ಪೇನು? ತಪ್ಪಲ್ಲ. ಎಷ್ಟೋ ಪದಗಳಿಗೆ ಪದಕೋಶದ ಅರ್ಥದ ಜೊತೆಗೆ ಬಳಕೆಯ ಅರ್ಥವೂ ಇರುತ್ತದೆ. ಅನೇಕರಿಗೆ ಬಳಕೆಯ ಅರ್ಥಮಾತ್ರ ಗೊತ್ತಿರುತ್ತದೆ. ಕಾಕತಾಳೀಯ ಎಂದು ಹೇಳುವವರು ಕಾಗೆ ಮರದ ಮೇಲೆ ಬಂದು ಕುಳಿತದ್ದು ಮತ್ತು ಆಗ ಮರದ ಕೊಂಬೆ ಮುರಿದು ಬಿದ್ದದ್ದನ್ನು ತಿಳಿದಿರುವುದಿಲ್ಲ. ಹಾಗೆಯೇ ಕರತಲಾಮಲಕ ಎಂದು ಹೇಳುವವರಿಗೆ ಅದರಲ್ಲಿ ಅಂಗೈ ಮತ್ತು ನೆಲ್ಲಿಕಾಯಿಗಳು ಇರುವುದು ಗೊತ್ತಿರುವುದಿಲ್ಲ. ಹಾಗಾಗಿ ಅರ್ಥವನ್ನು ಕೇಳುವಾಗ ಯಾವ ಅರ್ಥವನ್ನು ಕೇಳುತ್ತಿದ್ದೇವೆ ಎಂಬುದನ್ನು ಸರಿಯಾಗಿ ಹೇಳುವುದು ಒಳ್ಳೆಯದು.

**ಯಾರೂ ಎಂದೂ ಇಂತಹ ವಾಕ್ಯಗಳನ್ನು ಬಳಸುವುದಿಲ್ಲ**

ವಿಜಯಕುಮಾರ್ ಎಸ್.ಎಂ(ಸಾಸಲು) ಅವರು ಇದೇ ಪರೀಕ್ಷೆಯ ಇನ್ನೊಂದು ಪ್ರಶ್ನೆಯನ್ನು ಕುರಿತು ಕೇಳಿದ್ದಾರೆ. 'ಪರೀಕ್ಷೆಗಳನ್ನು ಸಕಾಲದಲ್ಲಿ ನಡೆಸಬೇಕೆಂಬ ಒತ್ತಾಯ ಮಾಡಲ್ಪಟ್ಟಿತು' ಎಂಬ ವಾಕ್ಯದ ಯಾವ ಭಾಗದಲ್ಲಿ ತಪ್ಪಿದೆ ಎಂಬುದು ಪ್ರಶ್ನೆ. ಆಯೋಗ ನೀಡಿರುವ ಸರಿಯುತ್ತರದಲ್ಲಿ ಈ ವಾಕ್ಯದ ಯಾವ ಭಾಗದಲ್ಲೂ ತಪ್ಪಿಲ್ಲ. ಇದು ಸರಿಯೇ ಎಂಬುದು ಇವರ ಪ್ರಶ್ನೆ. ಈ ವಾಕ್ಯ ಕೆಟ್ಟ ಕನ್ನಡಕ್ಕೆ ಒಂದು ಮಾದರಿ. ಪ್ರಶ್ನೆಯನ್ನು ರೂಪಿಸಿದವರು ಇದನ್ನು 'ಕರ್ಮಣೀ' ವಾಕ್ಯವೆಂದು ಹೇಳುವರಾದರೆ ಇದರ 'ಕರ್ತರೀ' ರೂಪ ಯಾವುದು? ' .. ಪರೀಕ್ಷೆಗಳನ್ನು ಸಕಾಲದಲ್ಲಿ ನಡೆಸಬೇಕೆಂದು ಒತ್ತಾಯ ಮಾಡಿದರು' ಹೀಗೆ ಒತ್ತಾಯ ಮಾಡಿದವರು ಜನರು ಎಂದುಕೊಳ್ಳೋಣ. ಎರಡೂ ವಾಕ್ಯಗಳಲ್ಲಿ ಮೇಲು ನೋಟಕ್ಕೆ 'ಒತ್ತಾಯ' ಎಂಬ ರೂಪವಿದ್ದರೂ ಮೊದಲ ವಾಕ್ಯದಲ್ಲಿ ಅದು ಪ್ರಥಮಾ ವಿಭಕ್ತಿಯಲ್ಲೂ(ಒತ್ತಾಯವು) ಎರಡನೆಯ ವಾಕ್ಯದಲ್ಲಿ ದ್ವಿತೀಯಾ ವಿಭಕ್ತಿಯಲ್ಲೂ(ಒತ್ತಾಯವನ್ನು) ಇದೆ. ಹಾಗಾಗಿ ವಾಕ್ಯ ಸರಿ ಎಂದು ಹೇಳಿಯಾರು. ಆದರೆ ಯಾರೂ ಎಂದೂ ಇಂತಹ ವಾಕ್ಯಗಳನ್ನು ಬಳಸುವುದಿಲ್ಲ. ಅಲ್ಲವೇ?

**ಬೇಕೆಂದೇ ಗಾಯ ಮಾಡಿಕೊಂಡರು**

ಪ್ರಭಾಕರ ಜೋಶಿ.ಎಂ(ಮಂಗಳೂರು) ಅವರು 'ಅಭ್ಯಾಸದ ವೇಳೆ ತೆಂಡುಲ್ಕರ್ ಗಾಯಮಾಡಿಕೊಂಡರು' ಎಂಬುದು ಸರಿಯಲ್ಲ ಅಲ್ಲವೇ ಎಂದು ಕೇಳಿದ್ದಾರೆ. ಇದು ಕನ್ನಡ ನುಡಿಯ ಕಟ್ಟುಗಳಿಗೆ ಹೊಂದುವ ವಾಕ್ಯವೇ ಸರಿ. ಆದರೆ ಈ ವಾಕ್ಯ ಹೇಳುವುದೇನು? ಅಭ್ಯಾಸ ಮಾಡುವಾಗ 'ಬೇಕೆಂದೇ' ಗಾಯ ಮಾಡಿಕೊಂಡರು

ಎಂದಲ್ಲವೇ/ ಆದರೆ ಬರೆದವರ ಗುರಿ ಇದಲ್ಲ. 'ಕೊಳ್' ಎಂಬುದು, ಕೆಲಸ ಹೇಳುವ ಪದಗಳಿಗೆ ಸೇರಿದಾಗ, ಆ ಕೆಲಸವನ್ನು ಯಾರೋ ಬೇಕೆಂದೇ ಮಾಡಿದ್ದಾರೆ ಇಲ್ಲವೇ ತಾವು ಏನು ಮಾಡುತ್ತಿದ್ದೇವೆ ಎನ್ನುವುದು ಅವರಿಗೆ ಗೊತ್ತಿದೆ ಎಂದಾಗುತ್ತದೆ. 'ಕನ್ನಡಿಯಲ್ಲಿ ಮುಖ ನೋಡಿಕೊಂಡರು', 'ತಟ್ಟೆಗೆ ಊಟ ಬಡಿಸಿಕೊಂಡರು' ಮುಂತಾದ ರಚನೆಗಳನ್ನು ನೋಡಿ. ಹೀಗಿರುವಾಗ 'ಗಾಯ ಆಯಿತು' ಎನ್ನುವುದು ಸರಿಯಾದೀತೇ ಹೊರತು 'ಗಾಯ ಮಾಡಿಕೊಂಡರು' ಎನ್ನುವುದಲ್ಲ.

**ಗಂಡು ಮೆಟ್ಟಿದ-ಗಂಡುಮೆಟ್ಟಿನ**

ಮೊಹಿದ್ದೀನ್ ಖಾನ್.ಬಿ (ಚಿತ್ರದುರ್ಗ) ಅವರಿಗೆ 'ಗಂಡು ಮೆಟ್ಟಿದ ನಾಡು' ಮತ್ತು 'ಗಂಡುಮೆಟ್ಟಿನ ನಾಡು' ಇವುಗಳಲ್ಲಿ ಯಾವುದು ಸರಿ ಎಂದು ತಿಳಿಯ ಬೇಕಾಗಿದೆ. ಮೆಟ್ಟು ಎಂಬುದು ಕನ್ನಡದಲ್ಲಿ ಕ್ರಿಯಾಪದವಷ್ಟೇ ಅಲ್ಲ; ಅದೊಂದು ನಾಮಪದವೂ ಆಗಿದೆ. ಗಂಡುಮೆಟ್ಟು ಎಂಬ ರಚನೆ ಕನ್ನಡದಲ್ಲಿ ಬಳಕೆಯಲ್ಲಿದೆ. ಇದು 'ಪರಾಕ್ರಮಿಗಳ ಭೂಮಿ, ಕೆಚ್ಚಿನ ನೆಲ' ಎಂಬ ತಿರುಳುಳ್ಳ ರಚನೆ. ಆದ್ದರಿಂದ ಗಂಡುಮೆಟ್ಟಿನ ನಾಡು ಎಂದು ಹೇಳುವುದೇ ಸರಿ. ಮೆಟ್ಟು ಎಂಬುದನ್ನು ಕ್ರಿಯಾಪದವಾಗಿ ತಿಳಿದರೆ ಆಗ ಗಂಡುಮೆಟ್ಟಿದ ನಾಡು ಎನ್ನಬೇಕಾಗುತ್ತದೆ. ಆದರೆ ಎಲ್ಲ ನಾಡುಗಳೂ ಗಂಡುಮೆಟ್ಟಿದ ನಾಡುಗಳೇ ಸರಿ! ಅಲ್ಲವೇ?

**ಮುಂಗಟ್ಟು**

ಸತ್ಯನಾರಾಯಣ ನಾಡಿಗ್ (ಸಂತೇ ಬೆನ್ನೂರು) ಇವರು **ಅಂಗಡಿ-ಮುಂಗಟ್ಟು** ಎಂದು ಹೇಳುವಲ್ಲಿ ಮುಂಗಟ್ಟು ಎಂದರೇನು ಎಂದು ಕೇಳಿದ್ದಾರೆ. ಮೊದಲನೆಯದಾಗಿ ಈ ಪದವನ್ನು ಬರೆಯುವಾಗ ನಡುವೆ ಗೆರೆಯನ್ನು ಎಳೆಯಬೇಕಾಗಿಲ್ಲ. ಅದು ಕನ್ನಡಕ್ಕೆ ಹೇಗೋ ಬಂದು ಸೇರಿಬಿಟ್ಟಿದೆ. ಹಿಂಗಟ್ಟು ಎಂಬಂತೆ ಮುಂಗಟ್ಟು ಎಂಬ ಪದವೊಂದು ಬೇರೆಯಾಗಿ ಕನ್ನಡದಲ್ಲಿ ಬಳಕೆಯಲ್ಲಿದೆ. ಆದರೆ ಇಲ್ಲಿ **ಮುಂಗಟ್ಟೆ** ಎಂಬುದು ಸರಿಯಾದ ರೂಪವಿದ್ದೀತು. ಅಂಗಡಿ ಎನ್ನುವುದು ಸರಂಜಾಮುಗಳನ್ನು ಕೂಡಿಟ್ಟ ಜಾಗವಾಗಿದ್ದು ಆ ಸರಂಜಾಮುಗಳನ್ನು ಜನರು ಕೊಳ್ಳಲು ಆಗುವಂತೆ ಇರಿಸಿದ, ಮುಂಗಟ್ಟೆಯೊಂದು ಅಂಗಡಿಯ ಮುಂದೆ ಅಂಗಡಿಯ ಮುಂದೆ ಇರುವುದು. ಇವೆರಡೂ ಒಟ್ಟು ಮಾರಾಟದ ಜಾಗಗಳೇ.

**ಕೊರಕಲು ಇರಬಾರದಲ್ಲವೇ?**

ಗುರುದತ್.ಟಿ.ಎನ್ ಇವರಿಗೆ ಜನಬಳಕೆಯ ಕನ್ನಡಕ್ಕೆ ಒಪ್ಪಿಗೆ ನೀಡಬೇಕೆಂಬ ಇಲ್ಲಿನ ನಿಲುವು ಸರಿಯೆಂದು ಕಂಡಿಲ್ಲ. ಹೀಗೆ ಒಪ್ಪಿಬಿಟ್ಟರೆ ಒಬ್ಬರು ಹೇಳುವುದು ಇನ್ನೊಬ್ಬರಿಗೆ ತಿಳಿಯದ ಹಾಗಾಗುವುದಿಲ್ಲವೇ ಎಂದು ಕೇಳುತ್ತಾರೆ. ಅಲ್ಲದೆ ಈಗ ಮೊಬೈಲ್ ಗಳಲ್ಲಿ ಬಳಸುವ ಪದಗಳನ್ನು, ಸಿನಿಮಾಗಳಲ್ಲಿ ಬಳಸುತ್ತಿರುವ 'ಮುದ್ರಿಸಬಾರದ' (ಇಲ್ಲವೇ ಮುದ್ರಿಸಲಾಗದ) ಪದಗಳಿಗೂ ನಿಮ್ಮ ಒಪ್ಪಿಗೆ ಇದೆಯೇ ಎಂದು ಕೇಳುತ್ತಾರೆ. ಮಾತು ಮತ್ತು ಬರಹಗಳ ನಡುವೆ ತುಂಬಲಾಗದ ಕೊರಕಲು ಇರಬಾರದೆನ್ನುವುದನ್ನು

ಒಪ್ಪಬಹುದು ತಾನೆ? ಅಂತಹ ಕೊರಕಲುಗಳು ಮಾತಾಡುವವರಿಗೆ ಮತ್ತು ಬರಯುವವರಿಗೆ, ಬರೆದದ್ದನ್ನು ಓದುವವರಿಗೆ ಹಿಂಜರಿಕೆಯನ್ನು ತರುತ್ತವೆ. ನಾವು ಬರೆದದ್ದನ್ನು ಮಾತಾಡಿದ್ದನ್ನು ಇನ್ನೊಬ್ಬರು ತಿಳಿದುಕೊಳ್ಳಬೇಕೆಂದು ಬಯಸುವವರು ಆ ಇನ್ನೊಬ್ಬರು ಬರೆದದ್ದನ್ನು ಮಾತಾಡಿದ್ದನ್ನು ತಿಳಿದುಕೊಳ್ಳಬೇಕು ತಾನೆ? ಅಂದರೆ ಎಲ್ಲರಿಗೂ ನುಡಿಯ ನೆಲೆಗಳು ಬರೆಯಲು ಮಾತಾಡಲು ನೆರವಾಗುವ ಬಗೆಯಲ್ಲಿ ಇರಬೇಕು. ಹೆಚ್ಚು ಕನ್ನಡ ಪದಗಳನ್ನು ಬಳಸಬೇಕೆಂದು ಹೇಳುತ್ತಿರುವುದು ಈ ನಿಟ್ಟಿನಲ್ಲಿಯೇ. ಇನ್ನು ಬೇರೆ ನುಡಿಗಳಿಂದ ನಮ್ಮ ನುಡಿಗೆ ಪಡೆದುಕೊಂಡ ಪದಗಳನ್ನು ಹೇಗೆ ಬರೆಯಬೇಕು? ನಾವು ಹೇಗೆ ಆ ಪದಗಳನ್ನು ನುಡಿಯುತ್ತೇವೋ ಹಾಗೆ ಬರೆಯುವುದು ಸರಿ. ತದ್ಭವಗಳೆಂದು ನಮ್ಮ ಹಿಂದಿನ ವ್ಯಾಕರಣಕಾರರು ಕರೆದ ಪದಗಳನ್ನು ಕೇವಲ ಮಾತಿಗಷ್ಟೇ ಮಿತಗೊಳಿಸಬೇಕಿಲ್ಲ. ಅವುಗಳನ್ನು ಬರೆಯುವಾಗಲೂ ಬಳಸಬೇಕು.

**ಅಧುನಾತನ**

ಆನಂದಕುಮಾರ್.ಎಚ್(ಚಿತ್ರದುರ್ಗ) ಅವರು 'ಅಧುನಾತನ' ಎಂಬ ಪದ ಕನ್ನಡದ್ದೇನು ಎಂದು ಕೇಳುತ್ತಾರೆ. ಇದು ಕನ್ನಡದ ಪ್ರತ್ಯಯ (ತನ) ಇರುವ ಪದ. 'ಅಧುನಾ' ಎಂಬುದು ಸಂಸ್ಕೃತದಿಂದ ಬಂದಿರುವ, ಆದರೆ ಕನ್ನಡದಲ್ಲಿ ಹೆಚ್ಚು ಬಳಕೆಯಲ್ಲಿ ಇಲ್ಲದ ರೂಪ. ಆಧುನಿಕ ಎಂಬ ಪದಕ್ಕೂ ಅಧುನಾ ಎಂಬುದಕ್ಕೂ ನಂಟಿದೆ. **ಅಧುನಾತನ** ಎನ್ನುವ ಬದಲು **ಹೊಸತನ** ಎಂಬ ಪದವನ್ನು ಬಳಸಬಹುದು.

**ಪ್ರೇರಣೆ–ಪ್ರೇರೇಪಣೆ**

ರಘುನಾಥ್.ಎಂ.ಎಸ್(ಬೆಂಗಳೂರು) ಅವರಿಗೆ **ಪ್ರೇರಣೆ** ಮತ್ತು **ಪ್ರೇರೇಪಣೆ** ಎಂಬ ಎರಡು ರೂಪಗಳು ಬೇಕೆ ಎಂಬ ಪ್ರಶ್ನೆಯಿದೆ. ಮೇಲು ನೋಟಕ್ಕೆ ಇವುಗಳ ತಿರುಳಿನಲ್ಲಿ ಬದಲೇನೂ ಇಲ್ಲ. ಆದರೆ ಕೆಲವೊಮ್ಮೆ ಈ ಪದಗಳಿಂದ ನಾವು ಪಡೆದುಕೊಳ್ಳುವ ಬೇರೆಬೇರೆ ಪದಗಳನ್ನು ನೋಡಿದಾಗ ಕೊಂಚ ಬದಲಾವಣೆ ಇರುವಂತೆ ತೋರುತ್ತದೆ. **ಸ್ವಪ್ರೇರಣೆ** ಇರುವಂತೆ **ಸ್ವಪ್ರೇರೇಪಣೆ** ಬಳಕೆಯಲ್ಲಿ ಇಲ್ಲ. ಹಾಗೆಯೇ **ಪ್ರೇರೇಪಿಸು** ಇರುವಂತೆ **ಪ್ರೇರಿಸು** ಬಳಕೆಯಲ್ಲಿ ಇಲ್ಲ. ಈ ಎರಡೂ ಪದಗಳು ಸೂಚಿಸುವ ಕೆಲಸ ಹೇಗೆ ನಡೆಯುತ್ತದೆ ಎಂಬುದರಲ್ಲಿ ಬದಲಾವಣೆ ಇದ್ದಂತಿದೆ. **ಪ್ರೇರಣೆ**ಯಲ್ಲಿ ಅದಕ್ಕೆ ಕಾರಣವಾಗುವ ಕರ್ತೃ ಯಾರೆಂಬುದು ಗೊತ್ತಾಗುವುದಿಲ್ಲ. ಆದರೆ **ಪ್ರೇರೇಪಣೆ**ಯಲ್ಲಿ ಅದಕ್ಕೆ ಕಾರಣವಾಗುವ ಕರ್ತೃವೊಬ್ಬರು ಇರುವುದು ಗೊತ್ತಾಗುವಂತಿರುತ್ತದೆ.

**ತಾವ**

ಮಲ್ಲಿಕಾರ್ಜುನ ಎಂ.ಟಿ (ಬೆಂಗಳೂರು) ಇವರು 'ಮನೇತಾವ' ಎನ್ನುವುದು ಯಾವ ವಿಭಕ್ತಿಯಲ್ಲಿದೆ ಎಂದು ಕೇಳುತ್ತಾರೆ. ಇದು ಮಾತಿನಲ್ಲಿ ಬಳಕೆಯಲ್ಲಿರುವ ರಚನೆ. ಎಲ್ಲ ಕಡೆಯಲ್ಲೂ ಈ ಬಳಕೆ ನಮಗೆ ಕೇಳಿಬರುವುದಿಲ್ಲ. ಅದು ಹಾಗಿರಲಿ. ಇಂತಹ ರಚನೆಗಳಲ್ಲಿ ವಿಭಕ್ತಿ ಪ್ರತ್ಯಯವನ್ನು ಗುರುತಿಸುವುದಿಲ್ಲ. ಏಕೆಂದರೆ ಇಲ್ಲಿ ಪ್ರತ್ಯಯವೆಂಬ ಪದಭಾಗವನ್ನು ತೋರಿಸಲು ಬರುವುದಿಲ್ಲ. **ತಾವ** ಎನ್ನುವುದೇ ಬೇರೊಂದು

ಪದ. ಬಳಿ, ಹತ್ತಿರ, ಸನಿಹ ಮುಂತಾದ ಪದಗಳ ತಿರುಳನ್ನೇ ಇದೂ ಕೂಡ ಹೊಂದಿದೆ. **ತಾವು (=ಜಾಗ,ತಾಣ), ತಾವಿಗೆ(>ತಕೆ), ತಾವಲ್ಲಿ(>ತಲ್ಲಿ)** ಇವೆಲ್ಲ ನಂಟಿರುವ ಪದಗಳು. ಕನ್ನಡ ನುಡಿಯಲ್ಲಿ ವಿಭಕ್ತಿ ಪ್ರತ್ಯಯಗಳನ್ನು ಬಳಸುವ ಕಡೆಗಳಲ್ಲಿ ಕೆಲವೊಮ್ಮೆ ಬೇರೆ ಪದಗಳನ್ನು ಬಳಸಲು ಬರುತ್ತದೆ. **ಇಂದ** ಎನ್ನುವ ಪ್ರತ್ಯಯದ ಬದಲು **ಕೈಲಿ** ಎಂದು ಬಳಸುವುದನ್ನು ನೋಡಿ. (ನನ್ನ ಕೈಲಿ ಎತ್ತೋಕೆ ಆಗೋಲ್ಲ< ನನ್ನಿಂದ ಎತ್ತೋಕೆ ಆಗೋಲ್ಲ) ಇದರಂತೆ **ತಾವ** ಎನ್ನುವ ಪದ ಕೂಡ ಬಳಕೆಯಾಗುತ್ತದೆ. ಅದು ಮಾಡುತ್ತಿರುವ ಕೆಲಸವನ್ನು ನೋಡಿದರೆ ಸಪ್ತಮಿ ವಿಭಕ್ತಿ ಪ್ರತ್ಯಯದಂತೆ ತೋರುವುದು. (ನನ್ತಾವ ಕಾಸಿಲ್ಲ<ನನ್ನಲ್ಲಿ ಕಾಸಿಲ್ಲ) ಆದರೆ **ತಾವ** ಬಳಕೆಯಾಗಿರುವ ಕಡೆಗಳಲ್ಲೆಲ್ಲ ಸಪ್ತಮಿಯೇ ಇರುವುದೆಂದು ಗಟ್ಟಿಯಾಗಿ ಹೇಳಲಾಗುವುದಿಲ್ಲ.

**ಕರ್ಕಶ** ವರ್ಣಗಳು, **ಮೃದು** ವರ್ಣಗಳು

ವಿರೂಪಾಕ್ಷ.ಎಚ್, ಹೇಮಂತ್.ಎಚ್ ಮತ್ತು ಗಿರೀಶ್.ಎಚ್ (ಧಾರವಾಡ) ಇವರು ಕೆಲವು ಪ್ರಶ್ನೆಗಳನ್ನು ಕೇಳಿದ್ದಾರೆ. 1. ಕನ್ನಡ ವರ್ಣಮಾಲೆಯಲ್ಲಿ ವರ್ಗೀಯ ಮತ್ತು ಅವರ್ಗೀಯ ವ್ಯಂಜನಗಳಲ್ಲಿ 'ಕರ್ಕಶ' ವರ್ಣಗಳು ಮತ್ತು 'ಮೃದು'ವರ್ಣಗಳು ಯಾವುವು? ಅವುಗಳನ್ನು ಯಾವ ಆಧಾರದ ಮೇಲೆ ವರ್ಗೀಕರಿಸಿದ್ದಾರೆ? ಇದು ಇವರ ಮೊದಲ ಪ್ರಶ್ನೆ. ಯೂರೋಪಿನ ಭಾಷೆಗಳ ರಚನೆಯನ್ನು ತಿಳಿಸುವಾಗ ಕೆಲವರು ಆ ಭಾಷೆಗಳ ವ್ಯಂಜನಗಳನ್ನು ಹೀಗೆ 'ಕರ್ಕಶ' ಮತ್ತು 'ಮೃದು' ಎಂದು ವಿಭಜಿಸಿಕೊಂಡದ್ದುಂಟು. ಇವು ಕ್ರಮವಾಗಿ ಹಾರ್ಡ್ ಮತ್ತು ಸಾಫ್ಟ್ ಎಂಬ ಪದಗಳ ಬದಲಿಗೆ ಬಳಕೆಗೆ ಬಂದಿವೆ. ಧ್ವನಿಗಳನ್ನು ಅವುಗಳ ಉಚ್ಚಾರಣೆಯ ಬಗೆಯನ್ನು ಅನುಸರಿಸಿ ವಿಂಗಡಿಸುವ ಬಗೆಯೊಂದು ಜಾರಿಯಲ್ಲಿರುವಂತೆ ಅವುಗಳು ಕೇಳಿಸಿಕೊಳ್ಳಲು ಹೇಗಿರುತ್ತವೆ ಎನ್ನುವುದನ್ನು ಅನುಸರಿಸಿ ವಿಭಜಿಸುವ ಬಗೆಯೂ ಒಂದಿದೆ. ಕರ್ಕಶ ಮತ್ತು ಮೃದು ಎಂಬ ಪದಗಳೇ ನಮ್ಮ ಕಿವಿಯ ಅನುಭವವನ್ನು ಹೇಳುತ್ತವೆ. ಹಾಗೆ ನೋಡಿದರೆ ಭಾಷೆಯಲ್ಲಿರುವ ಧ್ವನಿಗಳು ಎಷ್ಟು ದೂರಕ್ಕೆ ಕೇಳಿಸಬಲ್ಲವು ಎನ್ನುವುದನ್ನು ಗುರುತಿಸಿ ಅವುಗಳನ್ನು ವಿಭಜಿಸುವ ಬಗೆಯೂ ಒಂದಿದೆ. ಅದರಂತೆ ಸ್ವರಗಳು ಬಹುದೂರಕ್ಕೆ ಕೇಳಿಸಬಲ್ಲವು. ಅವುಗಳ ತರುವಾಯ ಘರ್ಷ ಧ್ವನಿಗಳು (ಉದಾ. ಶ್,ಸ್) ಬರುತ್ತವೆ. ಮುಂದಿನ ಜಾಗ ಅನುನಾಸಿಕ ಧ್ವನಿಗಳಿಗೆ ಸಿಗುತ್ತದೆ. ಆಮೇಲೆ ಘೋಷ ಧ್ವನಿಗಳು ಬರುತ್ತವೆ (ಗ,ಜ,ದ,ಡ,ಬ ಮೊದಲಾವು) ಕೊನೆಯ ಜಾಗ ಅಘೋಷಗಳಿಗೆ ಸಿಗುತ್ತದೆ.(ಕ,ಚ,ಟ,ತ,ಪ ಮೊದಲಾದವು)ಈ ನಿಟ್ಟಿನಲ್ಲಿ ಕರ್ಕಶ ಮತ್ತು ಮೃದು ಎಂಬ ಗುಂಪುಗಳನ್ನು ಮಾಡಲು ಅವಕಾಶವಿದೆಯಾದರೂ ಈಗ ನಾವು ಕೇಳಿಸಿಕೊಳ್ಳುವಾಗ ಆಗುವ ಅನುಭವವನ್ನು ಅವಲಂಬಿಸಿ ಮಾಡುವ ಈ ವಿಭಜನೆಯು ಬೇಕಿಲ್ಲವೆಂದು ಹೇಳುತ್ತಾರೆ. ಅಂದರೆ ವ್ಯಂಜನಗಳನ್ನು ಕರ್ಕಶ ಮತ್ತು ಮೃದು ಎಂದು ಬಣ್ಣಿಸುವುದು ಆ ಧ್ವನಿಗಳ ಲಕ್ಷಣವನ್ನು ಅರಿಯಲು ನೆರವಾಗುವ ನೆಲೆಯಾಗಿಲ್ಲ. ಏಕೆಂದರೆ ಈ 'ಗುಣ'ಗಳು ಆ ಧ್ವನಿಗಳಲ್ಲಿ ಇರುವುದಿಲ್ಲ. ಬದಲಿಗೆ ಕೇಳಿಸಿಕೊಳ್ಳುವ ಕಿವಿಗಳಲ್ಲಿ ಇರುತ್ತವೆ. ಹೀಗಿದ್ದರೂ ನಮ್ಮ ಶಾಲಾ ಪಠ್ಯಪುಸ್ತಕಗಳ ರಚಕರು ಹಳೆಯ ಹಾದಿಯನ್ನು ಬಿಡಲು ಸಿದ್ಧರಿಲ್ಲ. ಹಾಗಾಗಿ ಶಾಲಾ ಪುಸ್ತಕಗಳಲ್ಲಿ ಗೊಂದಲಗಳು ಮುಂದುವರೆದಿವೆ.

**'ಋ' ಸ್ವರವನ್ನು ವ್ಯಂಜನವೆಂದು ಕರೆದಿದ್ದಾರೆ ಏಕೆ?**

ಎರಡನೆಯ ಪ್ರಶ್ನೆ ಹೀಗಿದೆ: 'ಆಧುನಿಕ ಕನ್ನಡ ಭಾಷಾವಿಜ್ಞಾನಿಗಳು 'ಋ' ಸ್ವರವನ್ನು ವ್ಯಂಜನವೆಂದು ಕರೆದಿದ್ದಾರೆ ಏಕೆ? (8ನೇ ತರಗತಿ ಕನ್ನಡ ಭಾಷಾ ಪುಸ್ತಕ ಪು 163) ಕೆಲವು ಭಾಷೆಗಳಲ್ಲಿ ಕೆಲವು ವ್ಯಂಜನಗಳು ಸಂದರ್ಭವನ್ನು ಅವಲಂಬಿಸಿ ಸ್ವರದಂತೆಯೂ ವರ್ತಿಸುತ್ತವೆ. ಒಂದು ಉದಾಹರಣೆಯನ್ನು ನೋಡೋಣ. ಇಂಗ್ಲಿಶ್ ಭಾಷೆಯಲ್ಲಿ ಎನ್ ಎಂಬುದು ಒಂದು ವ್ಯಂಜನ. ಆದರೆ ಕೆಲವೊಮ್ಮೆ ಅದು ಸ್ವರದಂತೆಯೂ ನಡೆದುಕೊಳ್ಳುತ್ತದೆ. ಬಟ್ನ್ (= ಗುಂಡಿ, ಗುಬ್ಬಿ) ಎಂಬ ಪದದ ಕೊನೆಯಲ್ಲಿ ನ್ ಎಂಬ ವ್ಯಂಜನವಿದ್ದರೂ ಅದು ಸ್ವರದಂತೆ ಕೆಲಸಮಾಡುತ್ತದೆ. (ನಾವು ಈ ಪದವನ್ನು ಬಟನ್ ಎಂದು ಹೇಳುತ್ತೇವೆ. ಆಗ ನ್ ಎಂಬುದು ವ್ಯಂಜನ ಮಾತ್ರ). ಸಂಸ್ಕೃತ ಭಾಷೆಯಲ್ಲಿ ರ್ ವ್ಯಂಜನ ಕೂಡ ಕೆಲವು ಕಡೆಗಳಲ್ಲಿ ಸ್ವರದಂತೆ ನಡೆದುಕೊಳ್ಳುತ್ತದೆ. ಎಲ್ಲೆಲ್ಲಿ ಅದು ಸ್ವರದಂತೆ ನಡೆದುಕೊಳ್ಳುವುದೋ ಅಂತಹ ಪದಗಳನ್ನು ಬರೆಯುವಾಗ ರ್ ಎಂಬುದು ವ್ಯಂಜನದ ಚಿಹ್ನೆಯ ಬದಲು ಬೇರೆ ಬರಹ ಚಿಹ್ನೆಯನ್ನು ಬಳಸಲು ಮೊದಲು ಮಾಡಿದರು. ಅಂತಹ ಪದಗಳನ್ನು ಕನ್ನಡದಲ್ಲಿ ಬಳಸತೊಡಗಿದಾಗ ಇಲ್ಲಿಯೂ ರ್ ವ್ಯಂಜನದ ಸ್ವರದ ನೆಲೆಯ ಕೆಲಸವನ್ನು ಸೂಚಿಸಲು ಋ ಎಂಬ ಚಿಹ್ನೆಯನ್ನು ರೂಪಿಸಿಕೊಳ್ಳಲಾಯಿತು. ಇಲ್ಲಿಯವರೆಗೆ ಎಲ್ಲ ಸರಿ. ಆದರೆ ಸಂಸ್ಕೃತದಿಂದ ಬಂದ ಇಂತಹ ಪದಗಳನ್ನು ಕನ್ನಡಿಗರು ನುಡಿಯುವಾಗ ರ್ ಕಾರವನ್ನು ವ್ಯಂಜನದಂತೆಯೇ ನುಡಿಯುತ್ತಾರೆ (ಬಟನ್ ಪದದ ಮಾದರಿಯನ್ನು ನೆನಪಿಸಿಕೊಳ್ಳಿ) ಅಂದರೆ ಕನ್ನಡದಲ್ಲಿ ರ್ ದನಿಗೆ ಸ್ವರದ ಕೆಲಸವಿಲ್ಲ. ಹಾಗಾಗಿ ಋ ಎಂಬ ಬೇರೆ ಚಿಹ್ನೆಯು ಬೇಕಾಗಿಲ್ಲ ಎನ್ನುವುದು ಒಂದು ನೆಲೆಯ ಚಿಂತನೆ. ಉದಾಹರಣೆಗೆ ಸಂಸ್ಕೃತದಲ್ಲಿ 'ಅಮೃತ' ಎಂಬ ಪದದಲ್ಲಿ ರ್ ಕಾರವು ಸ್ವರದಂತೆ ಇರುವುದರಿಂದ ಅದನ್ನು ಬರೆಯುವಾಗ ಆ ಭಾಷೆಯಲ್ಲಿ ಋಕಾರದ ಚಿಹ್ನೆಯನ್ನು ಬಳಸಬೇಕು. ಆದರೆ ಕನ್ನಡದಲ್ಲಿ ಅದನ್ನು ಅಮ್ರುತ ಎಂದೇ ಉಚ್ಚರಿಸುವಾಗ ಹಾಗೇ ಬರೆಯುವುದು ಸರಿ. ಅಲ್ಲಿ ಋಕಾರದ ಚಿಹ್ನೆ ಬೇಕಿಲ್ಲ. ಕನ್ನಡದ ಕಲ್ಬರಹಗಳಲ್ಲಿ ಕೂಡ ಅಮ್ರುತ ಎಂದೇ ಬರೆದಿರುವುದನ್ನು ನೋಡುತ್ತೇವೆ. ಇದು ಈಗ ನಡೆಯುತ್ತಿರುವ ಒಂದು ಚರ್ಚೆ. ನಾನೂ ಕೂಡ ಋಕಾರಕ್ಕೆ ಬೇರೆ ಬರಹದ ಚಿಹ್ನೆ ಬೇಡವೆಂದು ಹೇಳುವವನೇ ಸರಿ.

**ಸಂಸ್ಕೃತ ಪದಗಳನ್ನು ಗರುತಿಸುವುದು ಹೇಗೆ?**

ಇವರದೇ ಮೂರನೆಯ ಪ್ರಶ್ನೆ: ಕನ್ನಡದಲ್ಲಿರುವ ಸಂಸ್ಕೃತ ಪದಗಳನ್ನು ಗರುತಿಸುವುದು ಹೇಗೆ? ಕನ್ನಡ ಬರಹದಲ್ಲಿರುವ ಸಂಸ್ಕೃತ ಪದಗಳನ್ನು ಗುರುತಿಸುವುದು ಹೇಗೆ ಎಂಬುದನ್ನು ಗಮನಿಸೋಣ. ಸುಲಭವಾದ ದಾರಿಯೆಂದರೆ ಯಾವುದೇ ಒಂದು ಒಳ್ಳೆಯ ಕನ್ನಡ ನಿಘಂಟನ್ನು ನೋಡಿದರೆ ಸಂಸ್ಕೃತದಿಂದ ಬಂದಿದ್ದೇ ಅಲ್ಲವೇ ಎಂಬುದು ಗೊತ್ತಾಗಿ ಬಿಡುತ್ತದೆ. ಆದರೆ ಈ ಹಾದಿಯನ್ನು ಹಿಡಿದು ಬಹುದೂರ ನಡೆಯಲಾಗುವುದಿಲ್ಲ. ಬದಲಿಗೆ ಕೆಲವು ಒಳದಾರಿಗಳನ್ನು ಗೊತ್ತುಮಾಡಿಕೊಳ್ಳಬಹುದು. ಅಂತಹ ಕೆಲವನ್ನು ಇಲ್ಲಿ ಹೇಳುತ್ತೇನೆ. 1. ಒಂದು ಪದದ ಬರೆಹರೂಪದಲ್ಲಿ ಮಹಾಪ್ರಾಣ ಚಿಹ್ನೆಗಳಿದ್ದರೆ ಅದು ಹೆಚ್ಚಾಗಿ ಸಂಸ್ಕೃತದಿಂದ ಬಂದದ್ದಾಗಿರುತ್ತದೆ. 2. ಶ,ಷ ಗಳಿರುವ

ಪದಗಳಾದರೆ (ಅಷ್ಟು, ಇಷ್ಟು, ಎಷ್ಟು ಪದಗಳನ್ನು ಬಿಟ್ಟು) ಅವು ಕೂಡ ಕನ್ನಡದ ಪದಗಳಲ್ಲವೆಂದು ಗುರುತುಮಾಡಬಹುದು. 3. ಋಕಾರ ,ಐಕಾರ ಮತ್ತು ಷಕಾರ ಚಿಹ್ನೆಗಳನ್ನು ಬರಹದಲ್ಲಿ ಕೋರುವ ಪದಗಳು ಕೂಡ ಸಂಸ್ಕೃತದಿಂದ ಬಂದಿರುವಂತಹವು. 4. ಪದದ ಮೊದಲಲ್ಲಿ ಎರಡು ವ್ಯಂಜನಗಳು ಒಟ್ಟಾಗಿ ಬಂದಿದ್ದರೆ, ಅಂದರೆ ಬರಹದಲ್ಲಿ ಒತ್ತಕ್ಷರದಿಂದ ಮೊದಲಾಗುತ್ತಿದ್ದರೆ, ಆ ಪದ ಕೂಡ ಸಂಸ್ಕೃತದಿಂದ ಬಂದಿರುವ ಸಾಧ್ಯತೆಗಳು ಹೆಚ್ಚು.

ಈ ನಿಯಮಗಳನ್ನು ಬಳಸಿದಾಗ ಹೆಚ್ಚುಪಾಲು ಸಂಸ್ಕೃತಪದಗಳು ಗೊತ್ತಾಗಿ ಬಿಡುತ್ತವೆ. ಇದಲ್ಲದೆ ಎಚ್ಚರದಿಂದ ನೋಡಬೇಕಾದ ಇನ್ನೂ ಕೆಲವು ನಿಯಮಗಳಿವೆ. ಅವುಗಳಲ್ಲಿ ಕೆಲವು ಹೀಗಿವೆ. ಯಾವುದೇ ಪ್ರತ್ಯಯವಿಲ್ಲದ ಪದವೊಂದರಲ್ಲಿ ಮೂರಕ್ಕಿಂತ ಹೆಚ್ಚು ಸ್ವರಗಳಿದ್ದರೆ ಅದು ಸಂಸ್ಕೃತಕ್ಕೆ ಸೇರಿದ್ದಾಗಿರಬಹುದು.(ಉದಾ. ಜನಪದ, ಪ್ರಜಾವಾಣಿ, ಮಹಾರಾಜ ಮುಂ.) 2. ನೀವು ಒಂದು ಪದದಲ್ಲಿರುವ ಮಾತ್ರೆಗಳನ್ನು ಲೆಕ್ಕಹಾಕಬಲ್ಲಿರಾದರೆ ಈ ಮುಂದಿನ ನಿಯಮವನ್ನು ಕೂಡ ಬಳಸಬಹುದು. ಒಂದು ಪದದಲ್ಲಿ ಜಗಣದ ರಚನೆಯಿದೆಯೆನ್ನಿ. ಉದಾಹರಣೆಗೆ ಅಸೂಯೆ, ಉದಾರ, ಅಗಾಧ, ಅನಂತ ಮುಂ. ಇಲ್ಲೆಲ್ಲ ಮೊದಲು ಲಘು ಅಕ್ಷರವಿದ್ದು ಎರಡನೆಯದು ಗುರು ಆಗಿರುತ್ತದೆ. ಇಂತಹ ಪದಗಳು ಕೂಡ ಸಂಸ್ಕೃತದಿಂದ ಕನ್ನಡಕ್ಕೆ ಬಂದು ಸೇರಿರುವಂತಹವು. 3.ಈಗ ಹೇಳುವ ನಿಯಮ ಹೆಚ್ಚು ಪಾಲು ಒಂದು ಪದ ಕನ್ನಡದ್ದೋ ಅಲ್ಲವೋ ಎಂಬುದನ್ನು ಹೇಳಲು ನೆರವಾಗುತ್ತದೆ. ಒಂದು ಪದದ ಮೊದಲಲ್ಲಿ ದೀರ್ಘ ಸ್ವರವಿದ್ದು ಅದರ ಬಳಿಕ ಒಂದು ವ್ಯಂಜನದ್ವಿತ್ವ(ಒತ್ತಕ್ಷರ) ಬಂದಿದ್ದರೆ ಅಂತಹ ಪದಗಳು ಕೂಡ ಕನ್ನಡದವಲ್ಲ.( ಇದು ಕನ್ನಡ ಪದಗಳ ಬರವಣಿಗೆಯ ರೂಪವನ್ನು ಗಮನದಲ್ಲಿಟ್ಟುಕೊಂಡು ಹೇಳುತ್ತಿರುವ ನಿಯಮ.) ಉದಾ.ಗೆ ರಾತ್ರಿ. ಸೂರ್ಯ ಮುಂ. ಈ ಎಲ್ಲ ನಿಯಮಗಳನ್ನು ಬಳಸಿ ಬರವಣಿಗೆಯಲ್ಲಿರುವ ಸಂಸ್ಕೃತಪದಗಳನ್ನು ಗುರುತಿಸುವ ಕಂಪ್ಯೂಟರ್ ಕಾರ್ಯವಾಹಿಯನ್ನು ರೂಪಿಸಲು ಸಾಧ್ಯವಿದೆ.

### ನಿರ್ದೇಶನ–ನಿರ್ದೇಶನ

ವೈಷ್ಣವಿ (ಚಳ್ಳಕೆರೆ) ಇವರು 'ನಿರ್ದೇಶನ' ಪದವನ್ನು ಬರೆಯುವಾಗ ಅರ್‌ಕಾರದ ಗುರುತನ್ನು ಎಲ್ಲಿ ಬರೆಯಬೇಕು ಎಂದು ಕೇಳಿದ್ದಾರೆ. ಇದು ಈಗಾಗಲೇ ಹೆಚ್ಚು ಕಡೆ ಚರ್ಚೆಗೆ ಬಂದಿರುವ ಸಂಗತಿ. ಹಿಂದಿನ ವಾಕ್ಯದಲ್ಲಿ 'ಬರೆದಿರುವ' ಬಗೆ ಸರಿ. ಅದರ ಬದಲು ಅರ್ ಕಾರದ ಗುರುತನ್ನು ಬರೆದ ಮೇಲೆ ದೀರ್ಘದ ಗುರುತನ್ನು ಬರೆಯುವುದು ಸರಿಯಲ್ಲ. ಏಕೆಂದರೆ ದಕಾರಕ್ಕೆ ಸೇರಿದ ಸ್ವರದ ಗುರುತುಗಳನ್ನು ಒಟ್ಟಾಗಿ ಬರೆಯುವುದೇ ಸರಿ ತಾನೆ. ಈ ಗೊಂದಲವನ್ನು ಬಗೆಹರಿಸಿಕೊಳ್ಳಲು 'ನಿರ್ದ್ದೇಶನ' ಎಂದು ಬರೆಯಲು ಮೊದಲು ಮಾಡುವುದು ಇನ್ನೊಂದು ಸರಿಯಾದ ದಾರಿ.

### ನಲ್ಲಿಯಲ್ಲಿ–ನಲ್ಲಿನಲ್ಲಿ

ಜಯಭಾರತಿ (ಬೆಂಗಳೂರು) ಇವರು ನಲ್ಲಿಯಲ್ಲಿ/ನಲ್ಲಿನಲ್ಲಿ ಈ ಎರಡು ಬಳಕೆಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. 'ನಲ್ಲಿ' ಇಕಾರದಿಂದ ಕೊನೆಯಾಗುವ ಪದವಾಗಿದೆ.

ಹಾಗಾಗಿ ನಲ್ಲಿಯಲ್ಲಿ ಎಂಬುದೇ ಸರಿಯಾದುದು.(ನೋಡಿ:ಕಿವಿಯಲ್ಲಿ, ತುದಿಯಲ್ಲಿ, ಬದಿಯಲ್ಲಿ) ಮಾತಿನಲ್ಲಿ ಕೆಲವರು ನಲ್ಲಿನಲ್ಲಿ ಎಂದು ಬಳಸುವುದನ್ನು ಕೇಳುತ್ತೇವೆ. ಇದು ಸರಿಯಲ್ಲವಾದರೂ ಹೀಗೆ ಬಳಸುವುದೇಕೆ ಎಂಬುದನ್ನು ತಿಳಿಯಬೇಕು. ಬರಹದಲ್ಲೂ ವ್ಯಂಜನದಿಂದ ಕೊನೆಯಾಗುವ ಪದಗಳಿಗೆ 'ಅಲ್ಲಿ' ಸೇರಿಸಿದಾಗ ಅದನ್ನು 'ನಲ್ಲಿ' ಎಂದು ಬದಲಿಸಿಕೊಳ್ಳುವುದು ವಾಡಿಕೆಯಾಗಿಬಿಟ್ಟಿದೆ. **ಬ್ಯಾಟ್‌ನಲ್ಲಿ, ಇಂಗ್ಲಿಶ್‌ನಲ್ಲಿ, ಬಸ್‌ನಲ್ಲಿ** ಮುಂತಾದ ಬಳಕೆಗಳನ್ನು ನೋಡಿ. ಉಕಾರದಿಂದ ಕೊನೆಯಾಗುವ ಪದಗಳಿಗೆ 'ಅಲ್ಲಿ' ಸೇರಿಸುವಾಗ ಕೊನೆಯ ಉಕಾರವನ್ನು ಬಿಟ್ಟು 'ನಲ್ಲಿ' ಸೇರಿಸಿಕೊಳ್ಳುತ್ತೇವೆ. ನೋಡಿ: **ಕಾಲ್ನಲ್ಲಿ, ಕಾರ್ನಲ್ಲಿ, ಊರ್ನಲ್ಲಿ, ಗೂಡ್ನಲ್ಲಿ**. ಇದೆಲ್ಲವೂ ಸೇರಿಕೊಂಡು 'ನಲ್ಲಿ' ಎಂಬುದೇ ಸೇರಿಕೊಳ್ಳಬೇಕಾದ ಪ್ರತ್ಯಯವೆಂದು ತಪ್ಪಾಗಿ ತಿಳಿಯಲಾಗುತ್ತಿದೆ. ಆದ್ದರಿಂದ ನಲ್ಲಿನಲ್ಲಿ, ಬೀದಿನಲ್ಲಿ, ಕೇರಿನಲ್ಲಿ, ಎಂದೆಲ್ಲ ಬಳಸುತ್ತಿದ್ದಾರೆ. ಹೊಸದಾಗಿ ಕನ್ನಡ ಕಲಿತು ಮಾತಾಡುವ ಬೇರೆ ನುಡಿಬಳಕೆದಾರರು, ಅಕಾರದಿಂದ ಕೊನೆಯಾಗುವ ಪದಗಳಿಗೂ 'ನಲ್ಲಿ' ಸೇರಿಸುವುದನ್ನು ಕೇಳಬಹುದು. ಇಂತಹವರು **ಸಿನಿಮಾನಲ್ಲಿ, ಹಾಸನಾನಲ್ಲಿ, ಡ್ರಾಮಾನಲ್ಲಿ** ಎಂದೆಲ್ಲ ಬಳಸುತ್ತಾರೆ. ಬರುವ ದಿನಗಳಲ್ಲಿ 'ಅಲ್ಲಿ' ಬದಲು 'ನಲ್ಲಿ' ಎಂಬುದೇ ಪ್ರತ್ಯಯವಾಗಿ ಬಿಡುವುದೋ ಏನೋ ತಿಳಿಯುತ್ತಿಲ್ಲ.

### ಶ ಮತ್ತು ಷ ಬಳಕೆಯ ತೊಡಕು–1

ನನಗೆ ಕನ್ನಡ ಕಲಿಸಿದ ಮೊದಮೊದಲ ಗುರುಗಳಲ್ಲಿ ಒಬ್ಬರಾದ ಎಸ್.ಟಿ.ದಕ್ಷಿಣಾಮೂರ್ತಿ (ಪಿರಿಯಾಪಟ್ಟಣ) ಯವರು ಒಂದು ಸಮಸ್ಯೆಯನ್ನು ಮುಂದಿಟ್ಟಿದ್ದಾರೆ. ಕನ್ನಡ ಬರವಣಿಗೆಯಲ್ಲಿ ಶ ಮತ್ತು ಷ ಇವುಗಳಲ್ಲಿ ಯಾವುದಾದರೊಂದನ್ನು ಉಳಿಸಿಕೊಂಡರೆ ಸಾಕೋ ಇಲ್ಲವೇ ಎರಡೂ ಇರಬೇಕೋ ಎಂದು ಕೆಲವು ಶಾಲೆಯ ಉಪಾಧ್ಯಾಯರು ಅವರನ್ನು ಕೇಳಿದರಂತೆ. ಶ/ಷ ಇವುಗಳ ನಡುವೆ ಇರುವ ವ್ಯತ್ಯಾಸ ಕನ್ನಡದ ಮಟ್ಟಿಗೆ ಕಣ್ಣು/ಕೈಬೆರಳುಗಳಿಗಷ್ಟೆ ಗೊತ್ತು. ಕಿವಿ/ ಬಾಯಿಗಳಿಗೆ ತಿಳಿಯುವುದಿಲ್ಲ. ( ಈಚೆಗೆ ಅಂತರ್ಜಾಲವೊಂದರಲ್ಲಿ ಒಬ್ಬರು, ತಾವು ಶ/ಷಗಳನ್ನು ಬೇರೆಬೇರೆಯಾಗಿ ಗೊತ್ತಾಗುವಂತೆ ನುಡಿಯಬಲ್ಲವರೆಂದೂ ಹಾಗಾಗಿ ಶ/ಷಗಳನ್ನು ಬೇರೆಬೇರೆ ಬರೆಯುವುದೇ ಸರಿಯೆಂದು ವಾದಿಸಿದ್ದರು. ಒಂದು ದನಿಯನ್ನು ನುಡಿಯಲು ನನಗೆ ಆಗುವುದೋ ಇಲ್ಲವೋ ಎಂಬುದಕ್ಕಿಂತ ಆ ನುಡಿಯನ್ನು ಆಡುವವರೆಲ್ಲರೂ ಆ ದನಿಯನ್ನು ಬಳಸುತ್ತಾರೋ ಇಲ್ಲವೋ ಎಂಬುದನ್ನು ನಾವು ನೋಡಬೇಕು.)ಅಂದರೆ ಬರೆಯುವಾಗ ಬೇರೆಬೇರೆ ಲಿಪಿಗುರುತುಗಳನ್ನು ಬರೆಯುತ್ತೇವೆ. ಆದರೆ ಮಾತಾಡುವಾಗ ಎರಡೂ ಒಂದೇ. ಅವೆರಡನ್ನೂ ನಮ್ಮ ಕಿವಿಗಳು ಬೇರೆಬೇರೆಯಾಗಿ ಕೇಳಿಸಿಕೊಳ್ಳುವುದಿಲ್ಲ. ಇವೆರಡೂ ಲಿಪಿಗುರುತುಗಳನ್ನು ಬೇರೆಬೇರೆಯಾಗಿ ಬರೆಯಬೇಕಾಗಿ ಬರುವುದು ಸಂಸ್ಕೃತದಿಂದ ಪಡೆದುಕೊಂಡ ಪದಗಳನ್ನು ಬರೆಯುವಾಗ. ಈಗ ಇಂಗ್ಲಿಶ್, ಪರ್ಶಿಯನ್–ಅರಾಬಿಕ್ ನುಡಿಗಳಿಂದ ಬಂದ ಪದಗಳನ್ನು ಬರೆಯುವಾಗ ಇವುಗಳಲ್ಲಿ ಯಾವುದನ್ನು ಬರೆಯಬೇಕು ಎಂದು ನಿಗದಿಯಿಲ್ಲ. ನೋಡಿ: ಶೇಕ್ಸ್ ಪಿಯರ್/ಷೇಕ್ಸ್ ಪಿಯರ್, ಬುಶ್/ಬುಷ್, ಶರತ್ತು/ ಷರತ್ತು, ಶೋಕಿ/ಷೋಕಿ ಹೀಗೆ. ಇಲ್ಲಿಯೂ ಹೇಗೆ ಬರೆದರೂ ನುಡಿಯುವ ಬಗೆಯಲ್ಲಿ ಏನೂ ಬದಲಾವಣೆಯಾಗುವುದಿಲ್ಲ. ಈ ಗೋಜಲಿನಿಂದ ಪಾರಾಗಲೂ ಶ/ಷಗಳಲ್ಲಿ ಯಾವುದಾದರೂ ಒಂದನ್ನು ಮಾತ್ರ

ನಮ್ಮ ಬರವಣಿಗೆಯಲ್ಲಿ ಉಳಿಸಿಕೊಳ್ಳುವುದು ಸರಿಯಾದೀತು. ಯಾವ ಲಿಪಿಗುರುತು ಬರೆಯಬೇಕು, ಶಂಕರ ಶನೋ, ಷಡಕ್ಷರಿ ಷನೋ ಎಂದೆಲ್ಲ ಕೇಳಿಕೊಳ್ಳುವುದು ಆಗ ಇಲ್ಲವಾಗುತ್ತದೆ. ಹೆಚ್ಚು ಪದಗಳಲ್ಲಿ ಶ ಲಿಪಿ ಗುರುತು ಬರುವುದರಿಂದ ಅದನ್ನೇ ಉಳಿಸಿಕೊಳ್ಳಬಹುದು.ದಿಟ; ಮೊದಮೊದಲು ಭಾಶೆ, ಶಡಕ್ಷರಿ, ವಿಶಯ ಎಂದೆಲ್ಲ ಬರಹದಲ್ಲಿ ನೋಡಿದಾಗ ಕೊಂಚ ಇರಿಸುಮುರಿಸಾಗುತ್ತದೆ. ಆದರೆ ದಿನ ಕಳೆದಂತೆ ಎಲ್ಲ ಸರಿಹೋಗುವುದು. ರಳದ ಬದಲು ಳ ಲಿಪಿ ಗುರುತನ್ನು, ಶಕಟರೇಫೆಯ ಬದಲು ರಕಾರದ ಗುರುತನ್ನು ಬರೆಯತೊಡಗಿದಾಗಲೂ ಹೀಗೆ ಆಗಿರಬಹುದಲ್ಲವೇ?

**ಬಿಸಿಲುಗೋಲು**

ನಾಗರಾಜು (ಸಬ್ಬನಹಳ್ಳಿ, ಮದ್ದೂರು ತಾ.) ಇವರು **'ಬಿಸಿಲುಗೋಲು'** ಪದದ ಸಮಾಸ ವಿಚಾರವನ್ನು ಕೇಳಿದ್ದಾರೆ. ಇದನ್ನು ಹೆಚ್ಚಾಗಿ **ಬಿಸಿಲುಕೋಲು** ಎಂದು ಬರೆದು, ಹಾಗೇ ನುಡಿಯುವುದುಂಟು. ಕೆಲವೊಮ್ಮೆ **ಬಿಸಿಲಕೋಲು** ಎಂದೂ ಹೇಳುತ್ತಾರೆ. ಹೇಗೆ ಬರೆದು ನುಡಿದರೂ ತಿರುಳಿನಲ್ಲಿ ಬದಲಾವಣೆಯಾಗುವುದಿಲ್ಲ. ನಮ್ಮ ಶಾಲಾವ್ಯಾಕರಣಗಳು ಇಂತಹ ಪದಗಳ ಯಾವ ಸಮಾಸ ಎಂದು ವಿವರಿಸಲು ಸಂಸ್ಕೃತ ಸಮಾಸಗಳ ಮೊರೆಹೋಗುತ್ತವೆ. ಹಾಗೆ ನೋಡಿದರೆ ಇದು ಒಂದು ಸಮಾಸ ಎಂದು ತಿಳಿಯಬೇಕೇ ಹೊರತು ಯಾವ ಸಮಾಸ ಎಂದು ಗೊತ್ತುಮಾಡಿಕೊಳ್ಳ ಹೋಗುವುದು ನುಡಿಯ ಬಳಕೆದಾರರಿಗೆ ಬೇಡವಾದದ್ದು. ಇದು ಒಂದು ಸಮಾಸ; ಏಕೆಂದರೆ ಇದರಲ್ಲಿ ಒಂದಕ್ಕಿಂತ ಹೆಚ್ಚು ಬಿಡಿಪದಗಳು ಸೇರಿವೆ. ಹಾಗೆ ಸೇರಿದಾಗ ಮೈತಳೆದ ಪದವು ಅದರಲ್ಲಿ ಸೇರಿಕೊಂಡ ಪದಗಳಿಗೆ ಇರುವ ತಿರುಳಿಗಿಂತ ಬೇರೆಯದೇ ಆದ ತಿರುಳನ್ನು ಹೊಂದಿದೆ. ಬಿಸಿಲುಕೋಲಿನಲ್ಲಿ ಬಿಸಿಲೂ ಇಲ್ಲ. ಕೋಲೂ ಇಲ್ಲ. ಈ ನಿಟ್ಟಿನಿಂದ ನೋಡಿದಾಗ **ಬಿಸಿಲಕೋಲು** ಎಂಬುದು ಸಮಾಸವೆನಿಸಲಾರದು. ಬಿಸಿಲು ಪದಕ್ಕೆ ಷಷ್ಠೀ ವಿಭಕ್ತಿ ಪ್ರತ್ಯಯವನ್ನು ಸೇರಿಸಿ ಈ ಬಿಸಿಲಕೋಲು ಎಂಬ ರೂಪವನ್ನು ಪಡೆದಿದ್ದೇವೆ.(ಬಿಸಿಲಿನ ಕೋಲು>ಬಿಸಿಲಕೋಲು) ಇದು ಒಂದು ಪದಗುಚ್ಛ ಎನಿಸಿಕೊಳ್ಳುತ್ತದೆ; ಸಮಾಸವಲ್ಲ. ಇವೆರಡಕ್ಕೂ ಇರುವ ವ್ಯತ್ಯಾಸವನ್ನು ಹೇಳಲು ಇಲ್ಲಿ ಜಾಗವಿಲ್ಲ. ಕನ್ನಡದಲ್ಲಿ ಸಮಾಸರಚನೆಯಾಗುವಾಗ ಅದರಲ್ಲಿ ಸೇರುವ ಪದಗಳು ನಾಮಪದಗಳೇ, ಕ್ರಿಯಾಪದಗಳೇ ಇಲ್ಲವೇ ಗುಣಪದಗಳೇ ಎಂಬುದನ್ನಷ್ಟೇ ಗುರುತಿಸಿದರೆ ಸಾಕೆಂದು ಈಚೆಗೆ ಡಾ. ಡಿ.ಎನ್. ಶಂಕರಭಟ್ ಅವರು ಹೇಳುತ್ತಿದ್ದಾರೆ.

**ಬಾಳಿಕೆಯೇತರ**

ಈಚೆಗೆ ಪತ್ರಿಕೆಯೊಂದರಲ್ಲಿ 'ಬಾಳಿಕೆಯೇತರ' ಎಂಬ ಪದ ಬಳಕೆಯಾಗಿದ್ದನ್ನು ಓದಿದೆ. ಅದು ಬಳಕೆಯಾಗಿದ್ದ ವರದಿಯ ಚೌಕಟ್ಟಿನಲ್ಲಿ ಇದು, ಇಂಗ್ಲಿಶಿನ 'ನಾನ್-ಡ್ಯೂರಬಲ್' ಎಂಬುದಕ್ಕೆ ಹೊಂದುವಂತೆ ಕನ್ನಡದಲ್ಲಿ ಕಟ್ಟಿಕೊಂಡ ಪದವೆಂಬುದು ಗೊತ್ತಾಗುವಂತಿತ್ತು. ಬಾಳಿಕೆ ಕನ್ನಡಪದ. ಅದಕ್ಕೆ ಇತರ ಎಂಬ ಸಂಸ್ಕೃತ ಪದವನ್ನು ಸೇರಿಸಲಾಗಿದೆ. ಇವೆರಡು ಪದಗಳು ಸೇರುವಾಗ ಯಾವ ಸಂಧಿನಿಯಮ ಬಳಕೆಯಾಗಬೇಕು? ಇಲ್ಲಿ ಕನ್ನಡ ಇಲ್ಲವೇ ಸಂಸ್ಕೃತದ ಯಾವ ನಿಯಮವೂ ಕಾಣುವುದಿಲ್ಲ. ಅದು ಹಾಗಿರಲಿ ನಾನ್- ಎಂದು ಮೊದಲಾಗುವ ಇಂಗ್ಲಿಶ್ ಪದಗಳನ್ನು

ಕನ್ನಡದಲ್ಲಿ ಹೇಳಬೇಕಾಗಿ ಬಂದಾಗ ಇತರ ಎಂಬ ಪದವನ್ನು ಸೇರಿಸಿ ಹೊಸಪದವನ್ನು ಕಟ್ಟಲಾಗುತ್ತಿದೆ. ಹಿಂದಿಯೇತರ, ಕನ್ನಡೇತರ, ಖಾದ್ಯೇತರ, ಸಿಗರೇಟೇತರ, ಡಾಲರೇತರ, ವಸತಿಯೇತರ ಮುಂತಾದ ಪದಗಳನ್ನು ನಮ್ಮ ಪತ್ರಿಕೆಗಳು ಈಗಾಗಲೇ ಬಳಸಿವೆ. ಈ ಪದಗಳ ಬದಲು ಕನ್ನಡಕ್ಕೆ ಸರಿಹೊಂದುವ ಪದಗಳನ್ನು ಕಟ್ಟಿಕೊಳ್ಳುವುದು ಸರಿಯಲ್ಲವೇ? ಉದಾ.ಗೆ ಬಾಳಿಕೆಯೇತರ ಎನ್ನುವ ಬದಲು ಬಾಳಿಕೆಯಿಲ್ಲದ, ಬಾಳಿಕೆಬರದ ಎಂದರೆ ಏನಾಗುವುದು? ತಪ್ಪಲ್ಲ ಅಲ್ಲವೇ? ಸಂಸ್ಕೃತದ **ಇತರ, ಬಾಹಿರ, ಪೂರಿತ, ಭರಿತ, ಪೂರ್ವಕ, ಮಯ** ಮುಂತಾದ ಪದರೂಪಗಳನ್ನು ಸೇರಿಸಿ ಕನ್ನಡಕ್ಕೆ ಹೊಂದದ ಪದಗಳನ್ನು ಕಟ್ಟುವ ಮೊದಲು ಬೇರೆ ದಾರಿಗಳಿಲ್ಲವೇ ಎಂದು ಹುಡುಕಿಕೊಳ್ಳುವುದು ಸರಿಯಾದೀತು.

**ವಿಶೇಷಣವು ನಾಮಪದದ ಮುಂದೆ ಬರುತ್ತದೋ ಹಿಂದೆ ಬರುವುದೋ?**

ನಟರಾಜು ವಿ (ಕೊಳ್ಳೇಗಾಲ) ಇವರು ಒಂದು ಪ್ರಶ್ನೆ ಕೇಳಿದ್ದಾರೆ. ಸ್ಪರ್ಧಾ ಪರೀಕ್ಷೆಯೊಂದರಲ್ಲಿ 'ವಿಶೇಷಣವು ನಾಮಪದದ ಮುಂದೆ ಬರುತ್ತದೋ ಹಿಂದೆ ಬರುವುದೋ?' ಎಂದು ಪ್ರಶ್ನೆ ಕೇಳಿದ್ದಾರಂತೆ. ಈ ಪ್ರಶ್ನೆಗೆ ಉತ್ತರ ಕೊಡುವವರು ನಾಮಪದದ ಹಿಂದೆ ವಿಶೇಷಣ ಬರುತ್ತದೆ ಎಂದು ಹೇಳುವುದು ನಟರಾಜು ಅವರಿಗೆ ಒಪ್ಪಿಗೆ ಇಲ್ಲ. **ಕೆಂಪು ಹಕ್ಕಿ** ಎನ್ನುವಾಗ **ಕೆಂಪು** ಎನ್ನುವ ವಿಶೇಷಣ **ಹಕ್ಕಿ** ಎಂಬ ನಾಮಪದಕ್ಕಿಂತ ಮೊದಲು ಬರುವುದರಿಂದ ಅದು ಮುಂದೆ ಬಂದ ಹಾಗಾಯಿತಲ್ಲವೇ? ಅದನ್ನೇಕೆ ನಾಮಪದದ ಹಿಂದೆ ಬರುವ ಪದ ಎನ್ನಬೇಕು ಎಂಬುದು ಅವರ ಪ್ರಶ್ನೆ. ಈ ಬಗೆಯ ಗೊಂದಲಗಳು **ಹಿಂದೆ/ಮುಂದೆ** ಪದಗಳನ್ನು ಬಳಸುವಾಗಲೆಲ್ಲ ಆಗುವುದುಂಟು. ಹೀಗಾಗದಿರಲು ನಾವು ಹೇಳುವ ಬಗೆಯನ್ನೇ ಕೊಂಚ ಬದಲಿಸಿಕೊಳ್ಳುವುದು ಸರಿ.' ಕನ್ನಡದಲ್ಲಿ ವಿಶೇಷಣದ ಬಳಿಕ ನಾಮಪದ ಬರುತ್ತದೆ' ಎಂತಲೋ ಇಲ್ಲವೇ 'ಕನ್ನಡದಲ್ಲಿ ವಿಶೇಷಣವು ನಾಮಪದಕ್ಕಿಂತ ಮೊದಲೇ ಬರುತ್ತದೆ' ಎಂತಲೋ ಹೇಳಬಹುದು.

ಮೇಲೆ ಬದಲುಮಾಡಿ ಹೇಳಿದ ವಾಕ್ಯದಲ್ಲಿ 'ಕನ್ನಡದಲ್ಲಿ' ಎಂಬ ಹೆಚ್ಚಿನ ಪದವಿದೆ. ಏಕೆಂದರೆ ಇದು ಕನ್ನಡ ಮತ್ತು ಅದರಂತಹ ಭಾಷೆಗಳ ಒಂದು ಗುರುತು. ಎಷ್ಟೋ ಭಾಷೆಗಳಲ್ಲಿ ನಾಮಪದದ ಬಳಿಕ ವಿಶೇಷಣ ಬರುವುದುಂಟು. ಕನ್ನಡದಲ್ಲಿ ಹೀಗೆ ಜಾಗ ಬದಲಿಸಲು ಬರುವುದಿಲ್ಲ. ಹಾಗೆ ಬದಲಿಸಿದರೆ ಆಗುವ ಏರುಪೇರನ್ನು ಮುಂದಿನ ರಚನೆಗಳಲ್ಲಿ ನೋಡಿ. **ದೊಡ್ಡ ಮರ** ಎನ್ನುವ ಬದಲು **ಮರ ದೊಡ್ಡ** ಎನ್ನಲಾಗದು. **ಮರ ದೊಡ್ಡದು** ಎನ್ನಬಹುದು. ಆದರೆ ಆಗ **ದೊಡ್ಡದು** ಎಂಬುದು ನಾಮಪದವಾಗಿ ಬದಲಾಗಿ ಬಿಟ್ಟಿರುತ್ತದೆ. ಹಾಗೆಯೇ **'ನಿರೀಕ್ಷಿತ ಫಲಿತಾಂಶ'** ಎನ್ನುವ ಬದಲು **'ಫಲಿತಾಂಶ ನಿರೀಕ್ಷಿತ'** ಎನ್ನಬಹುದು. ಆದರೆ ಎರಡೂ ರಚನೆಗಳ ತಿರುಳಿನಲ್ಲಿ ಬದಲಾವಣೆ ಆಗಿದೆ. ಅಲ್ಲದೆ ಎರಡನೆಯ ರಚನೆಯಲ್ಲಿ ನಿರೀಕ್ಷಿತ ವಿಶೇಷಣವಾಗಿ ಉಳಿದಿಲ್ಲ. ಅದು ನಾಮಪದವಾಗಿದೆ.

**ಈ ಪದಗಳು ಬಳಕೆಗೆ ಬಂದದ್ದು ಹೇಗೆ**

ಎಚ್.ಎಸ್. ಸೂರ್ಯನಾರಾಯಣ (ಕಡೂರು) ಇವರು ಸುತರಾಂ.ಬೇಕಾಬಿಟ್ಟಿ, ಜುಲುಮೆ. ಬಿಲ್ಕುಲ್. ಬೇವಾರಸಿ. ಪೋಕರಿ. ತದೇಕಚಿತ್ತ. 'ಥೇಟ್' ಅದೇ ಎಂಬ

ಪದಗಳನ್ನು ಕೊಟ್ಟು 'ಇವು ಕನ್ನಡದವಲ್ಲ. ಹಾಗಾದರೆ ಇವು ಬಳಕೆಗೆ ಬಂದದ್ದು ಹೇಗೆ. ಜನರಲ್ಲಿ ಬಳಕೆಯಲ್ಲಿರುವ ಈ ಪದಗಳನ್ನು ಸ್ವೀಕರಿಸುವುದು ಸರಿಯೇ ಎಂದು ಕೇಳುತ್ತಾರೆ. ಕನ್ನಡದ್ದಲ್ಲದ ಪದಗಳು ಕನ್ನಡ ಮಾತಿನಲ್ಲಿ ಸೇರಿಹೋದದ್ದು ಯಾವಾಗ ಎಂದು ಹೇಳುವುದು ಆಗದ ಮಾತು. ಆದರೆ ಬೇರೆ ನುಡಿಗಳನ್ನು ಆಡುವ ಜನರೊಡನೆ ಬಾಳುವೆ ಮಾಡಬೇಕಾಗಿ ಬಂದಾಗ ಹೊಸ ಪದಗಳನ್ನು ನಮ್ಮ ನುಡಿಗೆ ಸೇರಿಕೊಳ್ಳುವುಕ್ಕೂ, ಹೆಚ್ಚು ಮನ್ನಣೆ ಪಡೆದ ಇನ್ನೊಂದು ನುಡಿಯಿಂದ ನಾವೇ ಪದಗಳನ್ನು ಪಡೆದುಕೊಂಡು ನಮ್ಮಲ್ಲಿರುವ ಪದಗಳನ್ನು ಬಿಟ್ಟು ಅವುಗಳನ್ನು ಬಳಸುವುದು ಕೊಂಚ ಬೇರೆಬೇರೆ. ಇಲ್ಲಿ ಪಟ್ಟಿ ಮಾಡಿರುವ ಪದಗಳಲ್ಲದೆ ಇನ್ನೂ ನೂರಾರು ಪದಗಳು ಜನರ ದಿನದ ಮಾತಿನಲ್ಲಿ ನೆಲೆ ಪಡೆದುಕೊಂಡಿವೆ. ಆ ಪದಗಳನ್ನು ಬಳಸುವಾಗ ಅವುಗಳ ಬದಲಿಗೆ ಕನ್ನಡದ ಬದಲಿ ಪದವನ್ನು ಬಳಸಲು ಬರುವುದೇ ಎಂದು ಒಮ್ಮೆ ನೋಡುವುದು ಒಳ್ಳೆಯದು. ಹಾಗೆ ಕನ್ನಡದ ಪದವೊಂದಿದ್ದು ಅದನ್ನು ಮಾತಿನಲ್ಲಿ ನಾವು ಈಗ ಬಳಸುತ್ತಿದ್ದರೆ ಆಗ ಎರವಲು ಪಡೆದ ಪದವನ್ನು ಬದಿಗಿಡಬಹುದು. ಇದು ಮಾತಿಗಿಂತ ಬರವಣಿಗೆಗೆ ಹೆಚ್ಚು ಹೊಂದುತ್ತದೆ. ಏಕೆಂಧರೆ ಮಾತಿನಲ್ಲಿ ನಾವು ಬೇರೆ ನುಡಿಯ ಪದಗಳನ್ನು ಬಳಸುತ್ತಿದ್ದರೆ ಅದಕ್ಕೆ ನುಡಿಯ ನೆಲೆಯಲ್ಲಷ್ಟೇ ಅಲ್ಲದೆ ನಾವು ಬದುಕುತ್ತಿರುವ ಸಮಾಜದ ನೆಲೆಯಲ್ಲೂ ಬೇರುಗಳಿರುತ್ತವೆ. ಕೆಲವು ಜಾತಿ ಹೆಸರು ಹೇಳುವ ಪದಗಳ ಬದಲಿಗೆ ನಾವೇಕೆ ಕನ್ನಡವ ಪದಗಳ ಬದಲು ಬೇರೆ ನುಡಿಯ ಪದಗಳಿಗೆ ಮೊರೆ ಹೋಗುತ್ತೇವೆ ಎನ್ನುವುದನ್ನು ನೋಡಿದರೆ ಮೇಲಿನ ಮಾತಿನ ತಿರುಳು ಗೊತ್ತಾಗುತ್ತದೆ. ಇಲ್ಲೆಲ್ಲ ಕನ್ನಡದ ಪದಗಳನ್ನೇ ಬಳಸಬೇಕೆಂದು ಚಂಡಿ ಹಿಡಿಯಲಾಗದು ಅಲ್ಲವೆ?

## ಶುದ್ಧ, ಸ್ವಚ್ಛ ಮತ್ತು ಇಂಪಾದ ಕನ್ನಡ ಯಾವುದು?

ರತ್ನ ಹುಲ್ಲಳ್ಳಿ (ಹುಲ್ಲಳ್ಳಿ, ನಂಜನಗೂಡು) ಇವರು ಇಂದಿನ ಕನ್ನಡ ಮಾತುಗಳ ಬಗೆಗೆ ಹೇಳುತ್ತಾ ಈಗ 'ಶುದ್ಧ, ಸ್ವಚ್ಛ, ಇಂಪು ನಮ್ಮ ಕಿವಿ ತಲುಪುತ್ತಿಲ್ಲ' ಎಂದಿದ್ದಾರೆ. ಹೀಗೆ ಕನ್ನಡ ಮಾತು ಹಾಳಾಗಿ ಹೋಗುತ್ತಿರುವುದನ್ನು ಹೇಳುವವರು ಬಯಸುವ ಶುದ್ಧ ,ಸ್ವಚ್ಛ ಮತ್ತು ಇಂಪಾದ ಕನ್ನಡ ಯಾವುದು? ಮಾತಿನಲ್ಲಿ ಬಳಸುವ ದನಿಗಳಲ್ಲಿ 'ಶುದ್ಧತೆ'ಯನ್ನು ಕಾಯ್ದುಕೊಳ್ಳಬೇಕೆಂಬುದು ಮೊದಲ ಬಯಕೆ. ಮೂರು ತಕರಾರುಗಳು ಯಾವಾಗಲೂ ಇರುತ್ತವೆ. 1. ಪದದ ಮೊದಲಲ್ಲಿ ಬರುವ ಹಕಾರದ ಬದಲು ಅಕಾರ ಬಳಸುವುದು (ಕೆಲವೊಮ್ಮೆ ಅಕಾರ ಇರಬೇಕಾದಲ್ಲೂ ಹಕಾರ ನುಡಿಯುವುದು) 2. ಮಹಾಪ್ರಾಣಗಳನ್ನು ಸರಿಯಾಗಿ ನುಡಿಯುವುದು ಮತ್ತು 3. ಸ.ಶ ಮತ್ತು ಷ ಗಳನ್ನು ಎಲ್ಲೆಲ್ಲಿ ನುಡಿಯಬೇಕೋ ಅಲ್ಲೆಲ್ಲಾ ಮತ್ತು ಅಲ್ಲಲ್ಲಿ ಮಾತ್ರ ನುಡಿಯುವುದು. ಎರಡನೆಯ ಬಯಕೆ: ಪದಗಳ ಬಳಕೆಯೊಡನೆ ಬೆಸೆದುಕೊಂಡಿದೆ. ಹೆಚ್ಚು ಹೆಚ್ಚು ಸಂಸ್ಕೃತದ ಪದಗಳನ್ನು ಬಳಸುವುದು; ಇಂಗ್ಲಿಶ್, ಉರ್ದು ಪದಗಳನ್ನು ಬಳಕೆಯಿಂದ ದೂರವಿಡುವುದು 'ಶುದ್ಧ, ಸ್ವಚ್ಛ ಮತ್ತು ಇಂಪಾದ' ಕನ್ನಡ ಎನಿಸಿಕೊಳ್ಳುತ್ತಿದೆ. ಈ ಎರಡೂ ಬಯಕೆಗಳ ಬೇರುಗಳು ಕೆಲವೊಮ್ಮೆ ನುಡಿಗಷ್ಟೇ ಸೇರಿರುವುದಿಲ್ಲ. ಮಾತಾಡುವವರ ಸಾಮಾಜಿಕ ಹಿನ್ನೆಲೆಯನ್ನೂ ಲೆಕ್ಕಕ್ಕೆ ತೆಗೆದುಕೊಂಡಿರುತ್ತದೆ. ಅಲ್ಲದೆ ನಮಗೆ ಬಗೆಬಗೆಯ ಕನ್ನಡಗಳನ್ನು ಕಿವಿಯಲ್ಲಿ ಕೇಳಿ, ತಾಳಿಕೊಳ್ಳುವುದು ಕೂಡ ಆಗುತ್ತಿಲ್ಲ. ನಮ್ಮ ಕಲಿಕೆಯ ಚೌಕಟ್ಟಿನಲ್ಲೂ ಕನ್ನಡ ನುಡಿಯ ಬಗೆಗಳನ್ನು ಅಳಿಸಿಹಾಕುವುದೇ

ಗುರಿಯಾಗಿದೆ; ಜೊತೆಗೆ ನುಡಿಯ ಬಗೆಗಳನ್ನು ಸಹಿಸಿಕೊಳ್ಳುವುದನ್ನು ಕಲಿಸಿಕೊಡುತ್ತಿಲ್ಲ. ಇದೆಲ್ಲವೂ ಸೇರಿ, ಇರದ 'ಶುದ್ಧ, ಸ್ವಚ್ಛ, ಇಂಪು' ಕನ್ನಡಕ್ಕಾಗಿ ತುಡಿಯುತ್ತ , ಇರುವ ಕನ್ನಡನುಡಿಯ ಸೊಗಡನ್ನು ಮರೆಯುವಂತೆ ಮಾಡುತ್ತಿದೆ.

**ಶ ಮತ್ತು ಷ ಗಳ ತೊಡಕು**

ಜೆ.ಆರ್. ಲಕ್ಷ್ಮಣರಾವ್ (ಮೈಸೂರು) ಅವರು ಇಲ್ಲಿ ಹೇಳಿದ ಕೆಲವು ಮಾತುಗಳನ್ನು ಒಪ್ಪಲು ಆಗುವುದಿಲ್ಲವೆಂದು ಹೇಳಿ ಕಾಗದ ಬರೆದಿದ್ದಾರೆ. **ಶ** ಮತ್ತು **ಷ**ಗಳಿಗೆ ಬರಹದಲ್ಲಿ ಒಂದೇ ಗುರುತು ಬಳಸಲು ಹೇಳಿದ್ದು ಅವರಿಗೆ ಸರಿಯಾಗಿ ಕಂಡಿಲ್ಲ. 'ನಿಮ್ಮ ವಾದದ ಜಾಡು ಹಿಡಿದು ಮುಂದುವರೆದರೆ ಸ,ಶ,ಷ ಮೂರರ ಪೈಕಿ ಒಂದು ಸಾಕಾಗುತ್ತದೆ' ಎಂದಿದ್ದಾರೆ. ಇಲ್ಲಿ ನನ್ನ ವಾದ ಎನ್ನುವುದೊಂದು ಇಲ್ಲ. ಕನ್ನಡ ನುಡಿಯುವವರು ಈ ಮೂರೂ ದನಿಗಳನ್ನು ನುಡಿಯುಬಲ್ಲರೇ ಇಲ್ಲವೇ ಎಂಬುದು ಕೂಡ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದ ಮಾತಲ್ಲ. ಆದರೆ ಈ ದನಿಗಳು ಬೇರೆ ಬೇರೆ ಎನ್ನುವುದನ್ನು ಕನ್ನಡಿಗರು ನುಡಿಯುವಾಗ ಇಲ್ಲವೇ/ಮತ್ತು ಬರೆಯುವಾಗ ಗುರುತಿಸಬಲ್ಲರೇ ಎಂಬುದು ಗುರುತಿಸಬೇಕಾದ ಮಾತು. ಕನ್ನಡದ ಕೆಲವು ಬಗೆಗಳಲ್ಲಿ, ಅದರಲ್ಲೂ ಮಲೆನಾಡು ಮತ್ತು ಪಡು-ಬಡಗು ಸೀಮೆಯಲ್ಲಿ **ಸ** ಮತ್ತು ಶ ಗಳನ್ನು ಬೇರೆಯಾಗಿ ನುಡಿಯುತ್ತಾರೆ. **ಸ** ಉಲಿಯನ್ನು ನುಡಿಯಬೇಕಾದ ಕಡೆಗಳಲ್ಲಿ ಅದನ್ನು **ಶ** ಉಲಿಯನ್ನಾಗಿ ನುಡಿಯುವುದುಂಟು. ಆದರೆ ಇದು ಒಂದು ಕಟ್ಟುಪಾಡನ್ನು ಹೊಂದಿದೆ. **ಸ** ಉಲಿಯ ಬಳಿಕ **ಇ** ಸ್ವರವಿದ್ದರೆ ಆಗ **ಸ** ಉಲಿಯನ್ನು **ಶ** ಎಂದು ಬದಲಿಸಿ ನುಡಿಯುತ್ತಾರೆ. ಅದನ್ನು ನಮ್ಮ ಕಿವಿಗಳು ಗುರುತಿಸಬಲ್ಲವು. ಅಂದರೆ **ಸ** ಮತ್ತು **ಶ** ಎಂಬ ಎರಡು ಉಲಿಗಳ ಬಳಕೆಯನ್ನು ಕನ್ನಡಿಗರು ಒಂದು ಕಟ್ಟುಪಾಡಿನಲ್ಲಿ ಬಳಸುತ್ತಿದ್ದಾರೆ ಎಂದಾಯ್ತು. ಹಾಗಾಗಿ ಸ,ಶ ಮತ್ತು ಷಗಳನ್ನು ಒಟ್ಟುಗೂಡಿಸುವ ವಾದವನ್ನು ಹೂಡಲು ಬರುವುದಿಲ್ಲ. **ಷ** ಎಂಬುದು **ಟ** ಉಲಿಯ ಗುಂಪಿಗೆ ಸೇರಿದ ಉಜ್ಜುಲಿ(=ಘರ್ಷ). ಆದರೆ ಕನ್ನಡದಲ್ಲಿ **ಟ** ಗುಂಪಿಗೆ ಸೇರಿದ ಉಲಿಗಳನ್ನು ನುಡಿಯುವ ಬಗೆಯಲ್ಲೇ ಬದಲಾವಣೆಗಳಾಗಿದೆ. ಅವನ್ನು **ತ** ಗುಂಪಿನ ಉಲಿಗಳನ್ನು ನುಡಿಯುವ ಅಂಗಳಿನ ಜಾಗದ ತುಸು ಹಿಂದೆ, ನಾಲಿಗೆಯ ಮುಂಭಾಗವನ್ನು ಬಳಸಿ ನುಡಿಯುತ್ತಿದ್ದೇವೆ. ಹಾಗಾಗಿ **ಷ** ಉಲಿಯನ್ನು ಅದು ಇರಬೇಕಾದಂತೆ ನಾವು ನುಡಿಯುತ್ತಿಲ್ಲ. ಅದು ನಮಗೆ ಶ ಉಲಿಯಂತೆಯೇ ಕೇಳುತ್ತಿದೆ. ಇದರಿಂದ ಅವೆರಡನ್ನೂ ಬರೆಯುವಾಗ ಒಂದೇ ಗುರುತು ಸಾಕೆಂದು ಹೇಳಿದ್ದು.

ಶ್ರೀಯುತರು ಮುಂದುವರೆದು 'ಇಂದಿನ ಜನಸಾಮಾನ್ಯರ ಪ್ರವೃತ್ತಿ ಇದು' ಎಂದು ತಾವೇ ನಿರ್ಧರಿಸಿ ತಪ್ಪುಗಳನ್ನೆಲ್ಲಾ ಸರಿಯೆಂದು ಹೇಳುವುದು ಬೇಜವಾಬ್ದಾರಿತನ ಎಂದಿದ್ದಾರೆ. ಆದರೆ ಯಾವುದು 'ತಪ್ಪು' ಎಂಬುದನ್ನು ಗುರುತಿಸುವುದು ಹೇಗೆ? ಮತ್ತು ಹಾಗೆ ಗುರುತಿಸುವವರು ಯಾರು?

**ವೈಭವೀಕರಣ**

ಚಂದ್ರಶೇಖರ ಆರಾಧ್ಯ (ಮೈಸೂರು)ರು 'ರೈತರ ಆತ್ಮಹತ್ಯೆ ಪ್ರಕರಣ:ವೈಭವೀಕರಣ ಬೇಡ- ಮುಖ್ಯಮಂತ್ರಿ ಮನವಿ' ಎಂದು ದೂರದರ್ಶನ ವಾರ್ತೆಯಲ್ಲಿ ತೋರಿಸಿದ್ದನ್ನು

ಗಮನಸಿ, ದುಃಖದ ಘಟನೆಗಳಿಗೆ 'ವೈಭವೀಕರಣ' ಪದಪ್ರಯೋಗ ಸೂಕ್ತವೇ ಎಂದು ಪ್ರಶ್ನಿಸಿದ್ದಾರೆ. ಸುದ್ದಿ ಬೇರೆ; ಆ ಸುದ್ದಿಯನ್ನು ನಮಗೆ ತಿಳಿಸಲು ಬಳಸುವ ನುಡಿಗಟ್ಟು ಬೇರೆ. ಕೆಲವೊಮ್ಮೆ ಹೀಗೆ ಸುದ್ದಿ ಹೇಳಲು ಬಳಸುವ ನುಡಿಗಟ್ಟು, ಸುದ್ದಿಯನ್ನು ನಾವು ಯಾವ ನಿಟ್ಟಿನಿಂದ ನೋಡುತ್ತಿದ್ದೇವೆ ಎಂಬುದನ್ನು ತಿಳಿಸುತ್ತಿರುತ್ತದೆ. ಸುದ್ದಿಗೆ ಬೇಡದ ಇಲ್ಲವೇ ಸಲ್ಲದ ಮನ್ನಣೆ ನೀಡುವುದನ್ನು ಈ ವಾರ್ತಾ ವಿವರಣೆಯಲ್ಲಿ 'ವೈಭವೀಕರಣ' ಎನ್ನಲಾಗಿದೆ. ಇದು ಇಂಗ್ಲಿಶಿನ ನುಡಿಗಟ್ಟನ್ನು ಅದು ಇರುವಂತೆಯೇ ಹೇಳಲು ಹೊರಟಾಗ ಆಗುವ ತೊಂದರೆ. 'ಗ್ಲೋರಿಫಿಕೇಶನ್' ಎಂಬ ಪದವನ್ನು ಕನ್ನಡದಲ್ಲಿ ಹೇಳಲು ಸಂಸ್ಕೃತದ 'ವೈಭವೀಕರಣ'ವನ್ನು ಬಳಸಿಕೊಳ್ಳಲಾಗಿದೆ. ಈ ವಾರ್ತೆಯಲ್ಲಿ ದುಃಖದ ಸನ್ನಿವೇಶವನ್ನು 'ವೈಭವಿಸಿ'ಲ್ಲ; ಹಾಗೆ 'ವೈಭವಿಸುವುದು' ಬೇಡ ಎನ್ನಲಾಗಿದೆ. ಆದರೆ ಸುದ್ದಿಯನ್ನು ನೀಡುವವರು ಹೀಗೆ ತಮಗೆ ಬೇಕಾದಂತೆ ಅದನ್ನು ಮಂಡಿಸುವ ನೆಲೆಯನ್ನು ಕಟ್ಟಿಕೊಳ್ಳುತ್ತಾರೆ; ಅದಕ್ಕೆ ತಕ್ಕ ನುಡಿಗಟ್ಟನ್ನೂ ಬಳಸಿಕೊಳ್ಳುತ್ತಾರೆ. **'ರಭಸದ ಮಳೆನೀರಿನಲ್ಲಿ ಮೂವರು ಕೊಚ್ಚಿಕೊಂಡು ಹೋದರು'** ಮತ್ತು **'ರಭಸದ ಮಳೆನೀರು ಮೂವರನ್ನು ಕೊಚ್ಚಿಕೊಂಡು ಹೋಯಿತು'** ಈ ಎರಡೂ ವಾಕ್ಯಗಳು ಒಂದೇ ಸುದ್ದಿಯನ್ನು ಹೇಳುತ್ತಿದ್ದರೂ ಅದನ್ನು ನಮಗೆ ತಿಳಿಸುವ ಬಗೆಯಲ್ಲಿ ಇರುವ ಬದಲಾವಣೆಯನ್ನು ನೋಡಿರಿ.

**ಕ್ಷ ಮತ್ತು ಜ್ಞ**

ವಿಶ್ವನಾಥ. ಎನ್ (ಚಾಮರಾಜನಗರ) 'ಕನ್ನಡ ಭಾಷೆಯ ಅಕ್ಷರ ಮಾಲೆಯಲ್ಲಿ ಕ್ಷ ಮತ್ತು ಜ್ಞ ಎಂಬ ಗುರುತುಗಳು ಏಕಿವೆ; ಅವು ಬೇಡ ಅಲ್ಲವೇ ಎಂದು ಕೇಳಿದ್ದಾರೆ. ಈ ಗುರುತುಗಳನ್ನು ಬೇರೆಯಾಗಿ ಕಲಿಸುವುದನ್ನು ಈಗಾಗಲೇ ಬಿಟ್ಟುಬಿಡಲಾಗಿದೆ. ಇನ್ನೂ ಯಾರಾದರೂ ಬಳಸುತ್ತಿದ್ದರೆ ಅವು ಗೋಡೆಯಲ್ಲಿ ನೇತುಹಾಕುವ ಪಟಗಳಲ್ಲಿರ ಬಹುದು. ಇವೆಲ್ಲವೂ ಹಿಂದೆ ಮಾಡಿಟ್ಟುಕೊಂಡ ಅಚ್ಚಿನ ಮಾದರಿಯನ್ನೆ ಮರಳಿ ಅಚ್ಚಿಸುವಂತಹವು. ಹೀಗಾಗಿ ಬದಲಾವಣೆಗಳು ಇವುಗಳಲ್ಲಿ ನೆಲೆಯೂರಲು ಹತ್ತಾರು ವರುಷಗಳೇ ಬೇಕು. ಅಲ್ಲದೆ ಇವು ಕೆಲವು, ಬೇರೆ ನಾಡುಗಳಲ್ಲಿ ಅಚ್ಚಾಗಿ ಬರುವುದರಿಂದಲೂ ಹೀಗಾಗುತ್ತದೆ. ಇಲ್ಲಿ ಆಗಿರುವ ಬದಲಾವಣೆ ಅಲ್ಲಿಯವರೆಗೆ ತಲುಪುವುದೂ ತಡವಾಗಿಯೇ ಸರಿ. ಸಂಸ್ಕೃತ ನುಡಿಯಲ್ಲಿ ಈ ಎರಡನ್ನು ಬೇರೆ ಲಿಪಿ ಚಿಹ್ನೆಯಿಂದ ಸೂಚಿಸುವುದಕ್ಕೆ ಕಾರಣಗಳಿವೆ. ಕನ್ನಡ ನುಡಿಗೆ ಆ ಒತ್ತಾಯಗಳಿಲ್ಲ.

**ಶುದ್ಧ/ಅಶುದ್ಧ ಹಾಗೂ ಸರಿ/ತಪ್ಪು ಬೇರೆ ಮಾದುವುದು ಹೇಗೆ?**

ಈ ಮಾತಿನ ಹೊತ್ತಿಗೆ ಸಿ.ಪಿ.ನಾಗರಾಜು(ಬೆಂಗಳೂರು) ಇವರು ಕೇಳಿರುವ ಪ್ರಶ್ನೆಯೊಂದನ್ನು ಕೈಗೆತ್ತಿಕೊಳ್ಳುತ್ತೇನೆ. ಭಾಷೆಯ ಬಳಕೆಯಲ್ಲಿ **ಶುದ್ಧ/ಅಶುದ್ಧ** ಹಾಗೂ **ಸರಿ/ತಪ್ಪು** ಎಂಬುದನ್ನು ಬೇರೆಮಾಡಿ ನೋಡುವುದು ಹೇಗೆ ಎಂದು ಅವರು ಕೇಳುತ್ತಾರೆ. ಯಾವುದೇ ನುಡಿಯ ಬಳಕೆಯಲ್ಲಿ ಕಟ್ಟುಗಳಿರುವಂತೆ ಒಲುವೆಗಳೂ ಇರುತ್ತವೆ. ಕಟ್ಟುಗಳನ್ನು ಮೀರುವುದಕ್ಕೆ ಆಗುವುದಿಲ್ಲ. ಆದರೆ ಒಲುವೆಗಳನ್ನು ಪಾಲಿಸಲೇ ಬೇಕೆಂದಿಲ್ಲ. ಕಟ್ಟುಗಳನ್ನು ಮೀರಿದರೆ ನುಡಿಯಲ್ಲಿ ತಪ್ಪಾಗುತ್ತದೆ. **' ಹೂಗಳು ಅರಳಿದಳು'** ಎಂದು ಹೇಳಿದರೆ ಆ ಮಾತು ಕಟ್ಟುಗಳನ್ನು ಮೀರಿದೆ. ಅದರಿಂದ ಅದು ತಪ್ಪಾಗುತ್ತದೆ. ಇದನ್ನು ಅಶುದ್ಧ

ಎಂದೂ ಹೇಳಬಹುದು. ಆದರೆ ಹೆಚ್ಚು ಜನರು ತಪ್ಪು ಮತ್ತು ಅಶುದ್ಧಗಳ ನಡುವೆ ಗೋಜಲನ್ನು ಮಾಡಿಕೊಳ್ಳುವುದುಂಟು. **'ನಾನು ಬೆಳಿಗ್ಗೆ ಊರಿಗೆ ಹೋಗುತ್ತೇನೆ'** ಎನ್ನುವುದು ಕಟ್ಟುಗಳ ಚೌಕಟ್ಟಿನಲ್ಲಿರುವ ಮಾತು. ಬದಲಿಗೆ **'ನಾನು ಒತ್ತಾರಿಕೆ ಊರ್‍ಗ ಓಯ್ತೀನಿ'** ಇಲ್ಲವೇ **'ನಾನು ನಸುಕಿನ್ಯಾಗ ಊರ್‍ಗ ಹೋಗ್ತೀನಿ'** ಎನ್ನುವುದು ಓಲುವೆಯ ನೆಲೆಯ ಮಾತು. ಇದು ತಪ್ಪಲ್ಲ. ಆದರೆ ಹೆಚ್ಚು ಜನ ಇದನ್ನು ಅಶುದ್ಧ ಎನ್ನುತ್ತಾರೆ. ಅಂದರೆ ಅಶುದ್ಧ ಎಂದು ನಾವು ಗುರುತಿಸುವುದೆಲ್ಲ ನುಡಿಯ ಕಟ್ಟುಗಳನ್ನೂ ಮೀರಿರುವುದಿಲ್ಲ; ಆದರೆ ಓಲುವೆಯ ನೆಲೆಯಲ್ಲಿ ರೂಪುಗೊಂಡಿರುತ್ತದೆ. ಅಂದರೆ ನಮ್ಮ ನುಡಿ ಕಟ್ಟುಗಳಿಗೆ ತಕ್ಕಂತೆ ಇದ್ದರೂ ಅದನ್ನು ಶುದ್ಧ ಎಂದು ತಿಳಿಯುವುದಿಲ್ಲ ಎಂದಾಯ್ತು. ಇದರಿಂದ ಗೊತ್ತಾಗುವುದಿಷ್ಟು. ಸರಿ/ತಪ್ಪು ಎನ್ನುವುದು ನುಡಿಯ ಕಟ್ಟುಗಳ ನೆಲೆಯ ಮಾತು; ಶುದ್ಧ/ಅಶುದ್ಧ ಎಂಬುದು ಓಲುವೆಯ ನೆಲೆಯ ಮಾತು. ನಮಗೆ ಓಲುವೆಯ ಬಗೆಗೆ ಮೆಚ್ಚುಗೆ, ಒಪ್ಪಿಗೆ ಇಲ್ಲದಿದ್ದರೆ ಆ ಓಲುವೆ ಇರುವ ಮಾತನ್ನು ಅಶುದ್ಧ ಎಂದುಬಿಡುತ್ತೇವೆ.

ಈ ಎಲ್ಲ ಮಾತುಗಳಿಂದ ತಿಳಿಯುವುದೇನು? 'ಜನ ಸಾಮಾನ್ಯರ ಪ್ರವೃತ್ತಿಗಳನ್ನು' ಗುರುತಿಸುವವರು ಹೊಣೆಗಾರಿಕೆಯನ್ನು ಹೊಂದಿರುತ್ತಾರೆ; ಆದರೆ ಆ ಹೊಣೆಗಾರಿಕೆ ಮತ್ತು ನಮ್ಮ ಬಯಕೆಗಳು ಎದುರುಬದುರಾದರೆ ಗೊಂದಲಗಳು ಹುಟ್ಟಿಕೊಳ್ಳುತ್ತವೆ. ಜನರ ಮಾತಿನ ಓಲುವೆಗಳನ್ನು ಮನ್ನಿಸಬೇಕು ಎಂದು ಹೇಳಿದರೆ ಅದು 'ತಪ್ಪು'ಗಳನ್ನು ಮನ್ನಿಸಿದಂತೆ ಆಗುವುದಿಲ್ಲ.

ಇನ್ನೂ ಒಂದು ಮಾತಿದೆ. ತಪ್ಪುಗಳು ಒಬ್ಬೊಬ್ಬರಲ್ಲಿ, ಯಾವಾಗಲೋ ಒಮ್ಮೆ ಆಗುತ್ತವೆ. ಅವು ಮತ್ತೆ ಮತ್ತೆ ಅವರಲ್ಲೇ ಆಗಲಿ ಬೇರೆಯವರಲ್ಲೇ ಆಗಲಿ ಕಾಣಿಸುವುದಿಲ್ಲ. ನಾನು ಮರೆವಿನಿಂದ **'ಹಸುಗಳು ಮೇವಿಗಾಗಿ ಕಾಡಿಗೆ ಹೋಯಿತು'** ಎನ್ನಬಹುದು. ಹಾಗೇ ಬರೆಯಲೂ ಬಹುದು. ಆದರೆ ಹೀಗೆ 'ತಪ್ಪು'ಗಳನ್ನು ನೂರಾರು ಜನರು ಒಂದೇ ಹೊತ್ತಿನಲ್ಲಿ ಬೇಕೆಂತಲೇ ಮಾಡುತ್ತಿರುವುದಿಲ್ಲ. ಏಕೆಂದರೆ ಅವರ ನುಡಿಯು, ಕಟ್ಟುಗಳ ಜೊತೆಯಲ್ಲಿ ಓಲುವೆಯನ್ನು ಒಗ್ಗೂಡಿಸಿಕೊಂಡಿರುವುದರಿಂದ ಬದಲಾದಂತೆ , ಬೇರೆಯಾದಂತೆ ತೋರುತ್ತದೆ. ಓಲುವೆಗಳನ್ನು ಮನ್ನಿಸದಿದ್ದರೆ ನುಡಿಗೆ ಉಳಿಗಾಲವಿಲ್ಲ. ಅದು 'ಪಂಡಿತರ' ಕೈಗೂಸಾಗಿ ಉಳಿದೀತು.

**ಘನ–ಘನವಂತ**

ಚಂದ್ರಶೇಖರ ಎಸ್. ಅವರಳ್ಳಿ (ಲಿಂಗಸೂಗೂರು) ಇವರು ಈ ಮುಂದಿನ ವಾಕ್ಯಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. 1. ಅಶೋಕನು **ಘನ** ಚಕ್ರವರ್ತಿಯಾಗಿದ್ದನು 2. ಅಶೋಕನು **ಘನವಂತ** ಚಕ್ರವರ್ತಿಯಾಗಿದ್ದನು. ಘನ ಎಂಬ ಪದಕ್ಕೆ ಮಹಿಮೆ ಎಂಬ ತಿರುಳಿದೆ. ಹಾಗಾಗಿ ಮೊದಲ ವಾಕ್ಯದಲ್ಲಿ ಬರಿಯ 'ಘನ' ಎಂದು ಬಳಸಿರುವುದು ಸರಿಯಾಗದು. ಮಹಿಮೆಯುಳ್ಳ ಎಂಬ ತಿರುಳು ದೊರಕಲು 'ಘನವಂತ' ಎಂದೇ ಬಳಸಬೇಕಾಗುತ್ತದೆ. ಬುದ್ಧಿ ಮತ್ತು ಬುದ್ಧಿವಂತ ಪದಗಳನ್ನು ಈ ವಾಕ್ಯಗಳಲ್ಲಿ ಬಳಸಿ ನೋಡಿ. ಏನೇ ಇರಲಿ. ಘನ ಎಂಬ ಪದಕ್ಕೆ ಈ

ತಿರುಳಿರುವುದು ಪದಕೋಶಗಳಿಂದಷ್ಟೆ ತಿಳಿಯುವುದು. ಜನಬಳಕೆಯಲ್ಲಿ ಘನಕಾರ್ಯ ಎಂದಾಗ ಕೊಂಚ ಗೇಲಿಯೂ ಇರುವುದಲ್ಲವೆ? ಹಾಗಾಗಿ ಕನ್ನಡದಲ್ಲಿ ಈ ಬಗೆಯ ವಾಕ್ಯಗಳನ್ನು ನಾವು ಬರೆಯಬೇಕೇ? ಶಾಲೆಗಳಲ್ಲಿ ಕಲಿಸಲು ನಿಗದಿಯಾಗುವ ಹೊತ್ತಿಗೆಗಳಲ್ಲಿ ಇಂತಹ ವಾಕ್ಯಗಳು ಕಾಣಸಿಗುತ್ತವೆ. ಇನ್ನಾದರೂ ಬಲ್ಲವರು ಕಣ್ಣುತೆರೆದಾರೆಯೇ?

ಗೆಳೆಯರೊಬ್ಬರು ಘನ, ಘನವಂತ ಎಂಬ ಪದಗಳ ಬದಲು ಘನತೆವಂತ ಎಂಬ ರೂಪವನ್ನು ಬಳಸುವುದು ಹೆಚ್ಚು ಸರಿಯಲ್ಲವೇ ಎಂದು ಕೇಳಿದರು. ಸರಿ ಕನ್ನಡದ ಪತ್ರಿಕೆಗಳು ಕಾಳಜಿವಂತ, ಜವಾಬ್ದಾರಿವಂತ ಎಂಬ ರೂಪಗಳನ್ನು ಈ ಹಿಂದೆ ಬಳಸಿವೆ. ಹೀಗಾಗಿ ಘನತೆವಂತ ಕೂಡ ಸರಿಯೆನಿಸೀತು. ಇವೆಲ್ಲಕ್ಕಿಂತಲೂ ಘನತೆವೆತ್ತ ಎಂಬುದು ಇನ್ನೂ ಹೆಚ್ಚು ಸರಿಯಾದೀತು. ಕಿವಿಗೆ ಕೊಂಚ ಹಿಡಿಸದ ಪದ, ಆದರೂ 'ಘನತೆವೆತ್ತ' ಎಂಬ ಗುಪದವನ್ನು ಅಲ್ಲಲ್ಲಿ (ಉದಾ: ಘನತೆವೆತ್ತ ರಾಜ್ಯಪಾಲರು) ಈಗಾಗಲೇ ಬಳಸುತ್ತಿದ್ದೇವೆ.

**ಡಿಸಿ**

ಅಬ್ದುಲ್ ವಹಾಬ್ ಅವರಿಗೆ **ಜಿಲ್ಲಾಧಿಕಾರಿ** ಎನ್ನುವ ಪದವನ್ನು ಪತ್ರಿಕೆಗಳು **ಡಿಸಿ** ಎಂದು ಬರೆಯುವುದು ಸರಿಯೆನಿಸುತ್ತಿಲ್ಲ. ಅಧಿಕಾರಿಗಳಿಗೆ ನಿಗದಿಯಾದ ಹುದ್ದೆಯ ಹೆಸರುಗಳನ್ನು ಜನರು ಹೇಗೆ ನುಡಿಯುತ್ತಾರೆ ಎನ್ನುವುದನ್ನು ನೋಡಬೇಕು. ಡಿಎಸ್‌ಪಿ, ಡಿವೈಎಸ್‌ಪಿ, ಎಸ್‌ಐ, ಪಿಸಿ, ಎಚ್‌ಎಮ್ ಇವೆಲ್ಲ ಬಳಕೆಯಲ್ಲಿವೆ ತಾನೆ? ಅಲ್ಲದೆ ಒಂದು ಪದ ತುಂಬ ಉದ್ದವಾಗಿದ್ದರೆ, ಅದರಲ್ಲೂ ನಾಲ್ಕಕ್ಕಿಂತ ಹೆಚ್ಚು ಸ್ವರಗಳನ್ನು ಹೊಂದಿದ್ದರೆ ಅದನ್ನು ಹೇಗಾದರೂ ಮಾಡಿ ಚಿಕ್ಕದು ಮಾಡುವುದು ಕನ್ನಡಿಗರಿಗೆ ಪರಿಪಾಟವಾಗಿ ಬಿಟ್ಟಿದೆ. ಊರುಗಳ ಹೆಸರು, ಬೀದಿಗಳ ಹೆಸರು ಏನಾಗುತ್ತದೆಂಬುದನ್ನು ನೋಡಿ, ಕೃಷ್ಣರಾಜನಗರ ಕೆ.ಆರ್.ನಗರ, ಜಯಚಾಮರಾಜ ರಸ್ತೆ ಜೆಸಿ ರೋಡ್, ಜಯಪ್ರಕಾಶ ನಗರ ಜೆಪಿ ನಗರ ಹೀಗೆ ಬದಲಾಗಿ ಹೋಗುತ್ತವೆ. ಇಡಿಯಾಗಿ ಹೇಳುವಾಗಲೂ ನಾಲ್ಕು ಸ್ವರಗಳಿಗೆ ಇಡೀ ಪದವನ್ನು ಇಳಿಸಿಕೊಳ್ಳುತ್ತಾರೆ. **ಚಿಕ್ಕನಾಯಕನ ಹಳ್ಳಿ** ಜನರ ಬಾಯಲ್ಲಿ **ಚಿಕ್ನಾಯ್ಕ್ನಳ್ಳಿ** ಆಗುವುದು. ದಿಟವಾದ ಹೆಸರಲ್ಲಿ ಎಂಟು ಸ್ವರಗಳಿದ್ದರೆ ಹೇಳುವ ಹೆಸರಲ್ಲಿ ನಾಲ್ಕೇ ಸ್ವರಗಳಿವೆ. ( ಹೀಗೆಯೇ **ಚನ್ನರಾಯಪಟ್ಟಣ** ಮಾತಿನಲ್ಲಿ **ಚನ್ರಾಯ್ಪಟ್ಣ** ಆಗುವುದು).ಹೀಗಾಗಿ ಜಿಲ್ಲಾಧಿಕಾರಿಗಳನ್ನು ಯಾರಾದರೂ ಡಿಸಿ ಎಂದು ಕರೆದು ಹಾಗೇ ಬರೆದರೆ ಕೋಪ ಮಾಡಿಕೊಳ್ಳುವುದು ಬೇಡ.

**ದ್ರಾಬೆ**

ಶ್ರೀನಿವಾಸ ಎಂ.ವಿ (ಚನ್ನಗಿರಿ) ಇವರು **ದ್ರಾಬೆ** ಎಂಬ ಪದ ದರ್ಭೆಯಿಂದ ಬಂದಿದೆಯೇ ಎಂದು ಕೇಳುತ್ತಾರೆ. ಇಲ್ಲ. ದ್ರಾಬೆಗೂ ದರ್ಭೆಗೂ ನಂಟಿಲ್ಲ. ಸಂಸ್ಕೃತದಲ್ಲಿರುವ ದ್ರಾಭೆ ಪದಕ್ಕೆ 'ಕೆಲಸಕ್ಕೆ ಬಾರದುದು' ಎಂಬ ತಿರುಳಿದೆ. ಇದು ಕನ್ನಡಕ್ಕೆ ಬಂದಾಗ ನುಡಿಯುವ ಬಗೆಯಲ್ಲಿ ಚಿಕ್ಕ ಬದಲಾವಣೆಯಾಗಿದೆ. **ದ್ರಾಭೆ** ಎನ್ನುವ ಬದಲಿಗೆ **ದ್ರಾಬೆ** ಎನ್ನುತ್ತಿದ್ದೇವೆ. ತಿರುಳು ಮಾತ್ರ ಹಾಗೇ ಇದೆ. ಹಾಗಾಗಿ

ಇದನ್ನು ತದ್ಭವವೆಂದು ಹೇಳಬಹುದು. ಸಂಸ್ಕೃತದ ಈ ವಿಶೇಷಣ ಪದವನ್ನು ಕನ್ನಡ ಎಂದಿನಂತೆ ನಾಮಪದವನ್ನಾಗಿ ಮಾಡಿಕೊಂಡಿದೆ; ನಾಮಪದವಾಗಿಯೂ ಬಳಸುತ್ತಿದ್ದೇವೆ.

**ಕಾರಣ**

ವಾಯುವ್ಯ ಕರ್ನಾಟಕದವರು, ಅಲ್ಲಿನ ಕನ್ನಡ ಬರವಣಿಗೆಯಲ್ಲಿ 'ಕಾರಣ' ಎನ್ನುವ ಪದವನ್ನು ಹೇಗೆ ಬಳಸುತ್ತಾರೆನ್ನುವುದನ್ನು ನೋಡೋಣ. ಉದಾ.ಗೆ ' ನಾನು ತುರ್ತಾಗಿ ಊರಿಗೆ ಹೋಗಬೇಕಾಗಿದೆ. ಕಾರಣ ಕಚೇರಿಗೆ ಬರಲಾಗುವುದಿಲ್ಲ. ಒಂದು ದಿನ ರಜೆ ನೀಡುವುದು.' ಹೆಚ್ಚಾಗಿ ಅಹವಾಲು ಪತ್ರಗಳಲ್ಲಿ ಕಾರಣ ಎಂಬ ಪದವನ್ನು ಹೀಗೆ ಬಳಸುವುದನ್ನು ನಾನು ಗಮನಿಸಿದ್ದೇನೆ. ಕಾರಣ ಪದಕ್ಕೆ ಇಲ್ಲಿ 'ಹಾಗಾಗಿ', 'ಆದ್ದರಿಂದ' ಎಂಬ ತಿರುಳಿದೆ. ಹೆಚ್ಚೆಂದರೆ ಈ ವಾಕ್ಯಗಳಲ್ಲಿ ' ಅದು ಕಾರಣವಾಗಿ' ,'ಆ ಕಾರಣದಿಂದ', 'ತತ್ಕಾರಣ' ಎಂದಿರಬೇಕೆಂದು ತಟ್ಟನೆ ತೋರುತ್ತದೆ. ಹೀಗೆ ಬರೆಯುತ್ತಿರುವುದು ತಪ್ಪೇನೂ ಅಲ್ಲವಾದರೂ ಮೊದಲಿಗೆ ಓದಿದವರು ಗೊತ್ತಿಲ್ಲದೆ ತಬ್ಬಿಬ್ಬಾಗುವುದುಂಟು.

**ಗಾಯಗೊಂಡಿರುತ್ತಿಲ್ಲವಾದರೆ**

ಈಚೆಗೆ ಟಿವಿ ಜಾಹಿರಾತೊಂದರಲ್ಲಿ ಕೇಳಿಬಂದ ವಾಕ್ಯ ಹೀಗಿದೆ. 'ಅಪ್ಪ, ನೀನು **ಗಾಯಗೊಂಡಿರುತ್ತಿಲ್ಲವಾದರೆ** ನೀನು ಗೆದ್ದು ಬಿಡುತ್ತಿದ್ದೆಯಲ್ಲವೇ?' ಮಗನ ಈ ಬಳಸುದಾರಿಯ ಕನ್ನಡ ವಾಕ್ಯಕ್ಕೆ ಅಪ್ಪ '**ಅಫ್ ಕೋರ್ಸ್** 'ಎಂದು ಇಂಗ್ಲಿಶಿನಲ್ಲಿ ಬದಲು ಹೇಳುತ್ತಾನೆ. ಮಗ ಕನ್ನಡದಲ್ಲಿ ಕೇಳಿದ್ದಕ್ಕೆ ಬೆಳೆದ ಅಪ್ಪ ಇಂಗ್ಲಿಶಿನಲ್ಲಿ ಬದಲು ಹೇಳುವ ಈ ಸೋಜಿಗ ಹಾಗಿರಲಿ. ಹುಡುಗ ಹೇಳಿದ ವಾಕ್ಯದ 'ಗಾಯಗೊಂಡಿರುತ್ತಿಲ್ಲವಾದರೆ' ಎಂಬುದು ಕೊಂಚ ಕಾಡಿಸುವ ಮಾತಾಗಿದೆ. ಇದು ಇಂಗ್ಲಿಶಿನಲ್ಲಿ ವಾಕ್ಯವನ್ನು ಜಾಹಿರಾತುದಾರರು ಕನ್ನಡಕ್ಕೆ ಅನುವಾದಿಸಲು ಹೊರಟದ್ದರಿಂದ ಮೈತಳೆದ ವಾಕ್ಯ. ಇಡಿ ವಾಕ್ಯವನ್ನು ನೇರ್ಪುಗೊಳಿಸುವುದು ಹೇಗೆ? 'ನಿನಗೆ ಗಾಯವಾಯಿತು' ಮತ್ತು 'ನೀನು ಗಾಯಗೊಂಡೆ' ಎಂಬ ಎರಡು ವಾಕ್ಯಗಳನ್ನು ನೋಡಿ. ಇಲ್ಲಿ ಮೊದಲನೆಯದು ಕನ್ನಡಕ್ಕೆ ಹೆಚ್ಚು ಸರಿಯಾದ ವಾಕ್ಯ. ಮಾದರಿಗಾಗಿ ಇನ್ನೊಂದೆರಡು ಜೋಡಿ ವಾಕ್ಯಗಳನ್ನು ಜೊತೆಯಾಗಿ ನೋಡೋಣ. 'ನನಗೆ ಕೋಪ ಬಂತು'/' ನಾನು ಕೋಪಗೊಂಡೆ'; ' ಸುದ್ದಿ ಕೇಳಿ ಜನರಿಗೆ ಹರ್ಷವಾಯಿತು'/ 'ಸುದ್ದಿ ಕೇಳಿ ಜನರು ಹರ್ಷಗೊಂಡರು'; 'ನನ್ನ ಮಾತಿನಿಂದ ಅವನಿಗೆ ನೋವಾಯಿತು'/ 'ನನ್ನ ಮಾತಿನಿಂದ ಅವನು ನೋವುಗೊಂಡನು'? (ಇವೆರಡರ ತಿರುಳು ಒಂದೇ ಅನ್ನಿಸಿದರೂ ಹಾಗಿಲ್ಲ. ತುಸು ಎಚ್ಚರದಿಂದ ವಾಕ್ಯಗಳನ್ನು ಓದಿದರೆ ಒಂದು ಇನ್ನೊಂದರಂತಿಲ್ಲ ಎನ್ನುವುದು ತಿಳಿಯುತ್ತದೆ. ಕೊನೆಯ ಜೋಡಿ ವಾಕ್ಯ ಬೇರೆಯಾಗಿಯೇ ಕೇಳಿಸುವುದಕ್ಕೆ ಬೇರೆಯೇ ಕಾರಣವಿದೆ. ) ಹಾಗಿದ್ದರೆ ಮಗನ ವಾಕ್ಯ ಹೀಗಿರಬೇಕಿತ್ತು. 'ನಿನಗೆ ಗಾಯವಾಗದಿದ್ದರೆ ನೀನು ಗೆದ್ದು ಬಿಡುತ್ತಿದ್ದೆಯಲ್ಲವೇ?' ಕೆಲವರು ಹೀಗೂ ಹೇಳಿಯಾರು. 'ನಿನಗೆ ಗಾಯವಾಗದಿರುತ್ತಿದ್ದಿದ್ದರೆ ನೀನು ಗೆದ್ದು ಬಿಡುತ್ತಿದ್ದೆಯಲ್ಲವೇ?' ಇದೂ ಬಳಸು ವಾಕ್ಯವೇ ಸರಿ. ಕನ್ನಡಕ್ಕೆ ಹೊಂದುವ ರಚನೆಗಳನ್ನು ಮಾತು, ಬರಹಗಳಲ್ಲಿ ಬಳಸಬೇಕಲ್ಲವೇ?

**ಮಾಡದ-ಮಾಡಿದ**

ಜಿ.ಟಿ.ನಾರಾಯಣ ರಾವ್(ಮೈಸೂರು) ಅವರು ಪತ್ರಿಕೆಯಲ್ಲಿ ಪ್ರಕಟವಾದ ವಾಕ್ಯವೊಂದರ ಕಡೆಗೆ ಗಮನ ಸೆಳೆದಿದ್ದಾರೆ. **'ಶವ ಪರೀಕ್ಷೆ ಮಾಡದ ಹೊರತು ದೇಹವನ್ನು ವಶಕ್ಕೆ ತೆಗೆದುಕೊಳ್ಳಲು ನಿರಾಕರಿಸಿದರು.'** ಸಂದರ್ಭ ಏನೇ ಇರಲಿ. ಈ ವಾಕ್ಯದಲ್ಲಿ **'ಮಾಡದ'** ಎಂಬ ರೂಪದ ಬಳಕೆ ಸರಿಯಲ್ಲ; ಅದು **'ಮಾಡಿದ'** ಎಂದಿರಬೇಕು ಎನ್ನುವುದು ನಾರಾಯಣರಾವ್ ಅವರ ನಿಲುವು. ಅವರು ಹೇಳುತ್ತಿರುವುದು ಸರಿ. ಈ ವಾಕ್ಯದ ಅರ್ಥ ಸರಿಯಾಗಿ ತಿಳಿಯಬೇಕಾದರೆ ಅದರಲ್ಲಿ ಮಾಡದ ಎಂಬ ರೂಪವನ್ನು ಬಳಸಬಾರದು. ಹೀಗೆ ಬಳಸುತ್ತಿರುವುದಕ್ಕೆ ಇಂಗ್ಲಿಶ್ ವಾಕ್ಯರಚನೆಯ ಪ್ರಭಾವ ಕಾರಣವೆಂದು ನಾರಾಯಣರಾವ್ ಹೇಳುತ್ತಾರೆ. ಇಂಗ್ಲಿಶಿನಲ್ಲೂ **ಹೊರತು** ಎಂಬ ಅರ್ಥ ನೀಡುವ **ಅನ್‌ಲೆಸ್** ಎಂಬ ಪದ ಬಳಸಿದರೆ ವಾಕ್ಯದಲ್ಲಿ ಇನ್ನೊಂದು ನಿಷೇಧದ ಬಳಕೆ ಆಗುವುದಿಲ್ಲ. ಹಾಗಾಗಿ ಈ ತಪ್ಪಿಗೆ **ಹೊರತು** ಎಂಬ ಪದದ ನಿಷೇಧಾರ್ಥದ ಶರತ್ತನ್ನು ತಿಳಿಯದಿರುವುದೇ ಕಾರಣವೆನ್ನೋಣ. ಹೊರತು ಪದದ ಹಿಂದೆ ಬಳಕೆಯಾಗುವ ಕ್ರಿಯಾಪದಕ್ಕೆ ನಿಷೇಧಾರ್ಥದ ಶರತ್ತಿರುವುದು ಸಾಧ್ಯವಿಲ್ಲ. ಸಾಮಾನ್ಯವಾಗಿ ಹೊರತು ಪದ ಸ್ವತಂತ್ರವಾಗಿ, ಅಂದರೆ ಬಿಡಿಯಾಗಿ, ಬಳಕೆಯಾದ ವಾಕ್ಯಗಳ ಕೊನೆಗೆ ಮತ್ತೊಂದು ನಿಷೇಧಾರ್ಥಕ ಪದ ಇಲ್ಲವೇ ಕ್ರಿಯೆ ಇರುತ್ತದೆ ಎಂಬುದನ್ನು ಗಮನಿಸಿ. ' ನಮ್ಮ ಜನರು ಓಟು ಮಾಡಿದ ಹೊರತು ನಾನು ಗೆಲ್ಲುವುದು ಸಾಧ್ಯವಿಲ್ಲ' ಈ ವಾಕ್ಯದಲ್ಲಿ ಮಾಡದ ಎಂಬ ಪದ ಬಳಕೆಯಾಗಲಾರದಷ್ಟೆ. ಆದರೆ ಹೊರತು ಪದ ಇನ್ನಿತರ ಪದರಚನೆಗಳಲ್ಲಿ ಭಾಗಿಯಾಗಿ ಬಳಕೆಯಾದಾಗ ಈ ನಿಯಮ ಅನ್ವಯವಾಗುವುದಿಲ್ಲ. ಹೊರತಾಗಿ, ಹೊರತುಪಡಿಸಿ ಮುಂತಾದ ಪದರಚನೆಗಳಿರುವ ವಾಕ್ಯಗಳನ್ನು ಉದಾಹರಣೆಯಾಗಿ ಗಮನಿಸಬಹುದು.

**ಯಪ್ಪ, ಯಣ್ಣ, ಯವ್ವ**

ಪರಮಣ್ಣ ಮಡಿವಾಳೆಪ್ಪ(ಕನ್ನಳ್ಳಿ, ಗುಲಬರ್ಗಾ) ಇವರು **ಅಪ್ಪ, ಅಣ್ಣ, ಅವ್ವ** ಮುಂತಾದ ಪದಗಳನ್ನು ಉಚ್ಚರಿಸುವಾಗ **ಎಪ್ಪ(ಯಪ್ಪ), ಎಣ್ಣ (ಯಣ್ಣ), ಎವ್ವ( ಯವ್ವ)** ಎಂದೇಕೇ ಹೇಳುತ್ತೇವೆ ಎಂದು ಕೇಳಿದ್ದಾರೆ. ಈ ಬಗೆಯ ಬದಲಾದ ಉಚ್ಚಾರಣೆ ಕನ್ನಡ ಮಾತಾಡುವ ಕೆಲವು ಪ್ರದೇಶಗಳಿಗೆ ಸೀಮಿತವಾಗಿದೆ. ಈ ಪದ ಪಟ್ಟಿಯನ್ನು ನೋಡದರೆ ಇವೆಲ್ಲವೂ ನಂಟನ್ನು ಹೇಳುವ ಪದಗಳೆಂಬುದು ಗೊತ್ತಾಗುವಂತಿದೆ. ನಂಟುತನ ಹೇಳುವ ಮತ್ತು ಅಕಾರದಿಂದ ಮೊದಲಾಗುವ ಪದಗಳ ಬಳಕೆಯಲ್ಲಿ ಅಕಾರವನ್ನು ಎ(ಯ)ಕಾರವನ್ನಾಗಿ ಮಾಡಿಕೊಳ್ಳುವುದು ಕಂಡುಬರುತ್ತಿದೆ. ಆದರೆ ಈ ನಂಟುತನದ ಪದಗಳಿಗೆ ಎರಡು ಬಗೆಯ ಬಳಕೆ ಇರುತ್ತದೆ. ನಂಟುಳ್ಳವರನ್ನು ಮಾತಾಡಿಸುವಾಗ ಆ ಪದಗಳನ್ನು ಬಳಸುವುದು ಒಂದು ಬಗೆಯ ಬಳಕೆ. ನಂಟುಳ್ಳ ವ್ಯಕ್ತಿಯನ್ನು ಕುರಿತು ಬೇರೆಯವರೊಡನೆ ಮಾತಾಡುವಾಗ ಆ ಪದಗಳನ್ನು ಬಳಸುವುದು ಇನ್ನೊಂದು ಬಗೆಯ ಬಳಕೆ. ಕೊಂಚ ಎಚ್ಚರದಿಂದ ಗಮನಿಸಿದರೆ ಪದದ ಮೊದಲಿನ ಅಕಾರ ಎ(ಯ)ಕಾರವಾಗುವುದು ಮೊದಲ ಬಗೆಯ ಬಳಕೆಗಳಲ್ಲಿ ಕಂಡು ಬರುತ್ತದೆಯೇ ಹೊರತು ಎರಡನೆಯ ಬಗೆಯ ಬಳಕೆಯಲ್ಲಲ್ಲ. ಅಂದರೆ ಅಕಾರದ ಬದಲಿಗೆ ಬರುತ್ತಿರುವ ಎ/ಯ ಎಂಬ ದನಿಗಳು ಎದುರಿರುವ

ನಂಟರನ್ನು ಉದ್ದೇಶಿಸಿ ಮಾತಾಡುವಾಗ ಬಳಸುವ ದನಿ ಇದ್ದೀತು. ಆ ದನಿಗಳು ನಂಟುತನ ಹೇಳುವ ಪದಗಳಿಗೆ ಸೇರಿಹೋಗಿರಬಹುದು.

ಆದರೆ ಪದಾದಿಯ **ಎಕಾರವನ್ನು ಯಕಾರವನ್ನಾಗಿ** ಮತ್ತು ಪದಾದಿಯ **ಒಕಾರವನ್ನು ವಕಾರವನ್ನಾಗಿ** ನುಡಿಯುವ ಬದಲಾವಣೆ ಹೆಚ್ಚುಕಡೆ ಕೇಳಬಹುದು. ಎಂಟು(ಯಂಟು), ಎತ್ತು (ಯತ್ತು) ಎಲ್ಲಿ (ಯಲ್ಲಿ) ಒಬ್ಬ(ವಬ್ಬ), ಒಬ್ಬಟ್ಟು(ವಬ್ಬಟ್ಟು) ಒಕ್ಕಲು(ವಕ್ಕಲು) ಹೀಗೆ. ಈ ಬದಲಾವಣೆ ಕೂಡ ಎಲ್ಲ ಕಡೆಯೂ ಒಂದೇ ರೀತಿಯಲ್ಲಿ ನಡೆದಿಲ್ಲ. ಪದದ ಎರಡನೆಯ ಸ್ವರ ಯಾವುದು ಎಂಬುದನ್ನು ಅವಲಂಬಿಸಿ ಈ ಬದಲಾವಣೆ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ರೀತಿ ನಡೆದಿದೆ. ಜನರು ನುಡಿಯುವಾಗ ಈ ನಿಯಮಗಳನ್ನು ಎಚ್ಚರದಿಂದ ಪಾಲಿಸುತ್ತಾರೆ. ಆದರೆ ಈ ನುಡಿಬದಲಾವಣೆಗಳು ಹೇಗೆ ನಡೆದಿವೆ ಎಂಬುದನ್ನು ತಿಳಿಯದಿರುವವರು ಎಲ್ಲ ಕಡೆಯೂ ಒಂದೇ ಬಗೆಯಲ್ಲಿ ಬದಲಾವಣೆಯಾಗಿದೆ ಎಂದು ತಿಳಿದು ಬಳಸುವುದುಂಟು. ನಮ್ಮ ಚಲನಚಿತ್ರಗಳಲ್ಲಿ ಜನರ ಆಡುನುಡಿಯನ್ನು ಮಾತಿನಲ್ಲಿ ಬಳಸಿಕೊಳ್ಳುವಾಗ ಹೀಗೆ ಸಾರಾಸಗಟಾಗಿ ನುಡಿ ಬದಲಾವಣೆಗಳನ್ನು ಅನ್ವಯಿಸಿಬಿಡುವುದನ್ನು ಗಮನಿಸಬಹುದು.

**ಕಲ್ಲಿ, ಕಿಲ್ಲಿ**

ಉಮೇಶ ತಾಳಿಕೋಟ(ಬಾದಾಮಿ)ಯವರು ಬಿಜಾಪುರ ಜಿಲ್ಲೆಯ ಸಿಂದಗಿ ಕಡೆ **ಅಲ್ಲಿ, ಇಲ್ಲಿ** ಎಂಬ ಪದಗಳನ್ನು **ಕಲ್ಲಿ ಕಿಲ್ಲಿ** ಎಂದೇಕೇ ಬಳಸುತ್ತಾರೆ ಎಂದು ಕೇಳುತ್ತಾರೆ. ಕೃಷ್ಣಾ ನದಿಯ ಉತ್ತರಕ್ಕೆ ಬಹುಮಟ್ಟಿಗೆ ಭೀಮಾನದಿಯ ದಕ್ಷಿಣಕ್ಕೆ ಇರುವ ಪ್ರದೇಶದಲ್ಲಿ ಈ ಉಚ್ಚಾರಣೆ ಕೇಳಿಬರುತ್ತದೆ. ಈ ನುಡಿ ಬದಲಾವಣೆಗಳು ಸರ್ವನಾಮಗಳಲ್ಲಿ ಮಾತ್ರ ಕಂಡು ಬರುತ್ತದೆ. ಬೇರೆ ಪದಗಳಲ್ಲಿ ಹೀಗೆ ಕಕಾರವನ್ನು ಸೇರಿಸುವುದು ಕಾಣದು. ಈ ಬದಲಾದ ನುಡಿಯುವಿಕೆ ಸಮುದಾಯದ ಎಲ್ಲ ಜನರ ಮಾತಿನಲ್ಲೂ ಕೇಳಿಸುವುದಿಲ್ಲ. ಕೆಲವು ಜಾತಿವರ್ಗಗಳ ಜನರಲ್ಲಿ ಈ ಬಗೆಯ ನುಡಿಯುವಿಕೆ ಇದೆ. ಗುಲಬರ್ಗಾ ಜಿಲ್ಲೆಯ ಕೆಲವು ಭಾಗಗಳಲ್ಲೂ ಈ ಬದಲಾದ ಉಚ್ಚಾರ ಕೇಳಿಸುತ್ತದೆ. ಇನ್ನೂ ಪೂರ್ವಕ್ಕೆ ಸಾಗಿದರೆ ಬರುವ ತೆಲಂಗಾಣ ಪ್ರದೇಶದ ತೆಲುಗಿನಲ್ಲಿ ಇದೇ ಸರ್ವನಾಮಗಳ ಮೊದಲಿಗೆ ಗಕಾರ ಸೇರಿಸುವುದನ್ನು ಕೇಳಬಹುದು. ಈ ಹೊಸದನಿಯ ಸೇರ್ಪಡೆಯನ್ನು ಗಮನಿಸಲಾಗಿದೆಯೇ ಹೊರತು ಏಕೆ ಈ ಬದಲಾವಣೆ ಆಗಿದೆ ಎಂಬುದನ್ನು ಹುಡುಕಿಲ್ಲ. ಕೆಲವರು ಅಕೋ(ಅಕಾ) ಎಂಬ ಪದವನ್ನು ಈ ಸರ್ವನಾಮಗಳ ಮೊದಲಿಗೆ ಸೇರಿಸುತ್ತಿದ್ದು ಅದರ ಪಳಯುಳಿಕೆಯಾಗಿ ಕಕಾರ ಉಳಿದಿದೆ ಎಂದು ಹೇಳುತ್ತಾರೆ. ಇದು ಎಷ್ಟು ಸರಿಯಾದ ವಿವರಣೆಯೋ ತಿಳಿಯದು. ಹೆಚ್ಚಿನ ಸಂಶೋಧನೆಗಳಿಂದ ಮಾತ್ರ ಖಚಿತ ವಿವರಣೆ ಸಾಧ್ಯವಾಗಬಲ್ಲುದು.

**ಸೊಪ್ಪು ಹಾಕುವುದಿಲ್ಲ**

ಲಕ್ಷ್ಮೀನಾರಾಯಣ (ಬೇಳೂರು, ಸಾಗರ) ಇವರು **ಸೊಪ್ಪು ಹಾಕುವುದಿಲ್ಲ** ಎಂಬ ಮಾತಿನ ಮೂಲವನ್ನು ಕೇಳಿದ್ದಾರೆ. 'ನಾನು ಅವರ ಬೆದರಿಕೆಗೆ ಸೊಪ್ಪು ಹಾಕುವುದಿಲ್ಲ/ಹಾಕಲಿಲ್ಲ' ಎಂಬುದು ಈ ಉಕ್ತಿ ಬಳಕೆಯಾಗಬಹುದಾದ ಒಂದು ವಾಕ್ಯ. ವಾಕ್ಯದ

ಅರ್ಥವನ್ನು ಗಮನಿಸಿದರೆ ಇಲ್ಲಿ ಸೊಪ್ಪು (ಗಿಡಮೂಲಿಕೆ) ಪದ ಬಳಕೆಗೆ ಕಾರಣವಿರುವಂತಿಲ್ಲ. ಅಲ್ಲಿ ಬೆಲ್ಲ, ಹುಲಲು, ಎಣ್ಣೆ ಎಂಬ ಯಾವ ಪದವನ್ನು ಬೇಕಾದರೂ ಬಳಸಬಹುದೆಂದು ತೋರುತ್ತದೆ. ಆದರೆ ಈ ಉಕ್ತಿಯೇ ತನ್ನ ಹಿಂದಿನ ಸರಿಯಾದ ರೂಪವನ್ನು ಬಿಟ್ಟುಕೊಟ್ಟು ಬೇರೊಂದು ರೂಪ ಪಡೆದುಕೊಂಡಿರುವಂತಿದೆ. ಸೊಪ್ಪಾಗು ಎಂದರೆ ಚೈತನ್ಯಗುಂದು, ಶಕ್ತಿಹೀನವಾಗು, ಕಳೆಗುಂದು ಎಂಬ ಅರ್ಥಗಳಿವೆ. **'ಸೋತು ಸೊಪ್ಪಾಗಿ'** ಹೋದರು (ಸೋತು ಸುಣ್ಣವಾದ ಎಂಬ ಇನ್ನೊಂದು ಮಾತಿದೆ. ಅದರ ಕತೆ ಬೇರೆ) ಎಂಬ ಮಾತನ್ನು ನೆನಪಿಸಿಕೊಳ್ಳಿ. ಹಾಗಾಗಿ ದಿಟದಲ್ಲಿ **ಸೊಪ್ಪಾಗುವುದಿಲ್ಲ** (ಸೊಪ್ಪು ಆಗುವುದಿಲ್ಲ) ಎಂದಿರಬೇಕಾದ ಮಾತು ಸೊಪ್ಪು ಹಾಕುವುದಿಲ್ಲ ಎಂದು ಬದಲಾಗಿಬಿಟ್ಟಿರುವಂತಿದೆ. 'ನಾನು ಯಾರ ಬೆದರಿಕೆಗೂ ಸೊಪ್ಪಾಗುವುದಿಲ್ಲ' ಎಂದರೆ ಯಾರಿಗೂ ಹೆದರುವುದಿಲ್ಲ ಎಂಬ ಅರ್ಥ ಬರುವುದಷ್ಟೆ? ಹಾಗಾಗಿ ಸೊಪ್ಪಾಗುವುದಿಲ್ಲ ಎನ್ನುವುದೇ ಸರಿಯಾದ ಮಾತು.

**ಸೊಪ್ಪು ಹಾಕುವುದಿಲ್ಲ** ಎಂಬ ಮಾತಿಗೆ ಕೊಟ್ಟ ವಿವರಣೆಯನ್ನು ಗಮನಿಸಿ ಎರಡು ಪ್ರತಿಕ್ರಿಯೆಗಳನ್ನು ಕೊಟ್ಟಿದ್ದಾರೆ. ಈಶ್ವರ ಶಾಸ್ತ್ರೀ ಮೋಟೆನವರ ಮತ್ತು ಪ್ರಭಾಕರ ಜೋಶಿ(ಮಂಗಳೂರು) ಇವರು ಕೆಲವು ಆಚರಣೆಗಳಲ್ಲಿ ಸೊಪ್ಪು ಹಾಕುವುದನ್ನು ಗಮನಕ್ಕೆ ತಂದಿದ್ದಾರೆ. ದಾರಿಯಲ್ಲಿ ದಾರಿಗರ ಹಾದಿ ತಪ್ಪಿಸುವ ಎಂದು ಪ್ರತೀತಿ ಇರುವೆಡೆಯಲ್ಲಿ ಅದರ ಉಪಶಮನಕ್ಕೆ ಸೊಪ್ಪನ್ನು ಹಾಕುವುದನ್ನು (ಹಾಗೆ ಸೊಪ್ಪನ್ನು ಹಾಕದೇ ಹೋದವರು ಹಾದಿ ತಪ್ಪುವುದು ಖಂಡಿತವೆಂಬ ನಂಬಿಕೆ ಇದೆಯಂತೆ)ಶಾಸ್ತ್ರಿಯವರು ಹೇಳಿದರೆ ಬಲಿ ನೇಮಗಳಲ್ಲಿ ದೇವರನ್ನು ಹೊತ್ತವರು ಒಂದು ಸುತ್ತು ಪೂರೈಸುತ್ತಿದ್ದಂತೆ 'ಸಾಂತ್ವನ'ಗೊಳಿಸಲು ಸೊಪ್ಪನ್ನು ಹಾಕುವ ಪದ್ಧತಿಯನ್ನು ಜೋಶಿಯವರು ಹೇಳುತ್ತಾರೆ. ಈ ಆಚರಣೆಗಳನ್ನು ಗಮನಿಸಿಯೂ ಇನ್ನೊಂದು ಭಾಷಿಕ ವಿವರಣೆ ಅಗತ್ಯವೆಂದು ತೋರುತ್ತದೆ. ಸಾಮಾನ್ಯವಾಗಿ ಮಾತಾಡುವಾಗ 'ಸೊಪ್ಪು ಹಾಕುವುದಿಲ್ಲ' ಎನ್ನುವುದು ನಿಷೇಧ ರೂಪದಲ್ಲೇ ಬಳಕೆಯಾಗುತ್ತದೆ. ಸೊಪ್ಪು ಹಾಕುತ್ತೇನೆ ಎಂದು ಬಳಸುವುದಿಲ್ಲ. ಇದೂ ಕೂಡ ಬೆದರಿಕೆ ಹಾಕುವವರ ಎದುರು ಹೇಳುವ ಮಾತು. ಮೇಲೆ ಹೇಳಿದ ಆಚರಣೆಗಳ ಸಂದರ್ಭದಲ್ಲಿ ಬೆದರಿಕೆಗಿಂತ ಹೆದರಿಕೆ ಇದೆ. ಹೆದರಿಕೆ ಮತ್ತು ಬೆದರಿಕೆ ಪದಗಳ ಅರ್ಥ ಮತ್ತು ಬಳಕೆಯ ವ್ಯತ್ಯಾಸಗಳ ಹಿನ್ನೆಲೆಯಲ್ಲೂ ಈ ಮಾತಿನ ವರಸೆಯನ್ನು ಪರಿಶೀಲಿಸುವುದಕ್ಕೆ ಅವಕಾಶವಿದೆ.

### ಕ್ರೋಡೀಕರಿಸು, ಕ್ರೋಢೀಕರಿಸು, ಕ್ರೊಢೀಕರಿಸು, ಕ್ರೊಡಿಕರಿಸು

ಪದಗಳಿಗೆ ದನಿಯ ನೆಲೆಯೊಂದು ಇರುವಂತೆ ತಿರುಳಿ(=ಅರ್ಥ)ನ ನೆಲೆಯೂ ಇರುತ್ತದಷ್ಟೆ. ದನಿಯ ನೆಲೆಯಲ್ಲಿ ತಪ್ಪುಗಳನ್ನು ಮಾಡಬಾರದು ಎನ್ನುವುದು ಹಲವರ ಕಾಳಜಿ. ತಿರುಳಿನ ನೆಲೆಯಲ್ಲಿ ತಪ್ಪುಗಳಾದರೂ ಅಷ್ಟು ತಲೆಕೆಡಿಸಿಕೊಳ್ಳಲು ಹೋಗುವುದಿಲ್ಲ. ಬೇರೊಂದು ಬಗೆಯಲ್ಲಿ ಹೇಳುವುದಾದರೆ ಒಂದು ಪದದ ತಿರುಳನ್ನು ಹೇಳಲು ಇನ್ನೊಂದು ಪದವಿದ್ದರೂ ಅದನ್ನು ಬಳಸದೆ ಈ ಪದದ ದನಿಯ ರೂಪವನ್ನು ಸರಿಯಾಗಿ ಬರಹದಲ್ಲಿ ಮೂಡಿಸುವ ಕಡೆಗೆ ನಮ್ಮ ಒಲುವೆ ಹೆಚ್ಚು. ಈಚೆಗೆ ಒಬ್ಬರು **ಕ್ರೋಡೀಕರಿಸು, ಕ್ರೋಢೀಕರಿಸು, ಕ್ರೊಢೀಕರಿಸು, ಕ್ರೊಡಿಕರಿಸು** ಈ ಬರಹ ರೂಪಗಳಲ್ಲಿ

ಯಾವುದು ಸರಿ ಎನ್ನುವುದನ್ನು ಹೇಳಿ ಎಂದು ಕೇಳಿ ಬರೆದಿದ್ದಾರೆ. ಸಂಸ್ಕೃತದ ರೂಪಕ್ಕೆ ಕಟ್ಟು ಬೀಳುವುದಾದರೆ ಕ್ರೋಡೀಕರಿಸು 'ಸರಿಯಾದ' ರೂಪ.( ಕನ್ನಡವನ್ನು ಚೆನ್ನಾಗಿ ಬಲ್ಲ ನನ್ನ ಪ್ರಾಧ್ಯಾಪಕ ಗೆಳೆಯರೊಬ್ಬರಿಗೆ ಇದೇ ಪ್ರಶ್ನೆಯನ್ನು ಒಬ್ಬರು ಕಾಗದದ ಮೂಲಕ ಮುಂದಿಟ್ಟರು. ಮಿತ್ರರು ತಮಗೆ ತಿಳಿದ ಮೇರೆಗೆ ಯಾವುದು ಸರಿಯಾದ ಬರಹದ ರೂಪ ಎನ್ನುವುದನ್ನು ಬರೆದು ತಿಳಿಸಿದರು. ಆದರೆ ಪ್ರಶ್ನೆ ಕೇಳಿದವರು ಸುಮ್ಮನಾಗಲಿಲ್ಲ. ಇದೇ ಸರಿಯಾದ ರೂಪವೆನ್ನುವುದನ್ನು ಯಾವ ನಿಟ್ಟಿನಿಂದ ಹೇಳುತ್ತಿದ್ದೀರಿ. ಆ ಮಾಹಿತಿ ನಿಮ್ಮಲ್ಲಿದೆ. ಅದನ್ನು ನನಗೆ ತಿಳಿಸಿ. ಇಲ್ಲದಿದ್ದರೆ ಮಾಹಿತಿ ಹಕ್ಕು ಕಾಯಿದೆಯಡಿ ನಿಮ್ಮ ಮೇಲೆ ಕ್ರಮ ತೆಗೆದುಕೊಳ್ಳಲು ಮುಂದಾಗುವೆನೆಂದು ಬರೆದರು. ಆ ಮಾತು ಹಾಗಿರಲಿ) ಮೇಲೆ ಬರೆದು ತೋರಿಸಿದ ನಾಲ್ಕು ರೂಪಗಳಲ್ಲಿ ಮೊದಲೆರಡು ಹೆಚ್ಚು ಬಳಕೆಯಲ್ಲಿವೆ. ಕೊನೆಯೆರಡು ಆಗಾಗ ಅಲ್ಲಲ್ಲಿ ಕಾಣಿಸಿಕೊಂಡಾವು. ಈ ಪದ ಸಂಸ್ಕೃತದಿಂದ ಕನ್ನಡಕ್ಕೆ ಬಂದಿದೆ. ಕನ್ನಡ ಬಳಕೆಯ ಕೆಲವು ಬದಲಾವಣೆಗಳು ಇಲ್ಲಿ ನಡೆದಿವೆ. ಇಸು ಎಂಬುದು ಕೊನೆಯಾಗಿರುವುದು ಅಂತಹ ಬದಲಾವಣೆಗಳಲ್ಲಿ ಒಂದು. ಈ ಪದದಲ್ಲಿ ಇರುವ ಎರಡನೆಯ ದನಿ ಅಲ್ಪಪ್ರಾಣವೋ ಮಹಾಪ್ರಾಣವೋ(ಬರವಣಿಗೆಯ ಮಾತಿನಲ್ಲಿ ಹೇಳುವುದಾದರೆ ಚಿಕ್ಕ ಡ ನೋ ದೊಡ್ಡ ಡ ನೋ) ಎನ್ನುವುದು ಗೊತ್ತಿಲ್ಲದೆ ಬರೆಯುವಾಗ ಗೊಂದಲ ಉಂಟಾಗುತ್ತಿದೆ. ಇಂತಹ ಗೊಂದಲಗಳು ಹಲವು ಕಡೆಗಳಲ್ಲಿ ನಡೆಯುತ್ತಲೇ ಇರುವುದು. ಬೇಡದ ಕಡೆಗಳಲ್ಲೂ ಮಹಾಪ್ರಾಣಗಳನ್ನು ಬರೆಯುವುದುಂಟು. ಇವುಗಳಲ್ಲಿ ಯಾವುದು ಸರಿ ಎಂದು ಈ ಅಂಕಣದಲ್ಲಿ ಬರೆದು ತಿಳಿಸಿದರೂ ತಪ್ಪಾಗಿ ಬರೆಯುವುದು ನಿಲ್ಲುವುದಿಲ್ಲ. ಇದಕ್ಕೆ ಎರಡು ಬಗೆಯ ಪರಿಹಾರಗಳು ಇರಬಹುದು. ಒಂದು: ಎರಡೂ ರೂಪಗಳನ್ನೂ ಸರಿಯೆಂದು ಒಪ್ಪಿಕೊಳ್ಳುವುದು. ಎರಡು: ಮಹಾಪ್ರಾಣಗಳ ಬರೆಹ ಗುರುತುಗಳನ್ನು ಬಿಟ್ಟುಬಿಡುವುದು. ಎರಡನೆಯ ಪರಿಹಾರಕ್ಕೆ ಮಂದಿ ಹೆದರುವಂತಿದೆ. ಆದ್ದರಿಂದ ಮೊದಲನೆಯ ಪರಿಹಾರವನ್ನು ಒಪ್ಪೋಣ.

ಪದದ ದನಿರೂಪ ನಮ್ಮನ್ನು ಕಾಡುವ ಹಾಗೆ ಅದರ ತಿರುಳು ಕಾಡುವುದಿಲ್ಲವೆಂದು ಮೊದಲಲ್ಲಿ ಹೇಳಿದೆ. ಈ ಕ್ರೋಡಿಕರಿಸು ಪದ ಏನು ಹೇಳುತ್ತದೆ ಎನ್ನುವುದು ನಮಗೆ ಕುರುಡು ಕುರುಡಾಗಿ ಗೊತ್ತು. ಆದರೆ ಅದರ ತಿರುಳನ್ನು ಕನ್ನಡದ ಒಂದು ಪದವನ್ನು ಬಳಸಿ ಹೇಳಲು ಆಗುವಂತಿದ್ದರೆ ನಾವು ಹಾಗೆ ಮಾಡುವುದಿಲ್ಲ. ಈ ಪದದ ಬದಲಾಗಿ ಒಗ್ಗೂಡಿಸಿ, ಒಟ್ಟಾಗಿಸಿ, ಜೋಡಿಸಿ, ಕೂಡಿಸಿ, ಸೇರಿಸಿ ಹೀಗೆ ಯಾವುದೇ ಕನ್ನಡ ಪದವನ್ನು ಬಳಸಬಹುದು. ಆದರೆ ನಾವು ಸಂಸ್ಕೃತ ಪದಕ್ಕೇ ಜೋತು ಬೀಳುತ್ತೇವೆ.

ಕನ್ನಡ ಪದದ ಬದಲು ಸಂಸ್ಕೃತ ಪದವನ್ನು ಬಳಸುವುದರಿಂದ ಕನ್ನಡದ ಸೊಗಸು ಹೆಚ್ಚುವುದೆಂದು ನಾವು ತಿಳಿದಿದ್ದೇವೆ. ಈ ಪದಗಳು ಸಂಸ್ಕೃತದಿಂದ ಬಂದು ಕನ್ನಡದಲ್ಲಿ ನೆಲೆಯೂರಿವೆ ಎನ್ನುವುದು ಕೂಡ ಓದುವ, ಕೇಳುವ ಹಲವರಿಗೆ ತಿಳಿಯುವುದಿಲ್ಲ.

ಇದರಿಂದ ಅವುಗಳ ಬದಲಿಗೆ ಕನ್ನಡದ ಪದಗಳನ್ನು ಗುರುತಿಸಿ ಬಳಸುವುದಕ್ಕೆ ಮುಂದಾಗುವುದಿಲ್ಲ. ಹೀಗೆ ಸಂಸ್ಕೃತ ಪದಗಳನ್ನು ಬಳಸಿದರೆ ತಪ್ಪೇನು ಎಂದು

ಕೆಲವರು ಹೇಳುತ್ತಾರೆ. ಇದು ತಪ್ಪು ಸರಿಯ ಮಾತಲ್ಲ. ಕನ್ನಡ ಬಲ್ಲವರು ಕನ್ನಡದ ಪದಗಳಿಗೆ ಹೊಂದಿಕೊಂಡ ಹಾಗೆ ಸಂಸ್ಕೃತ ಪದಗಳಿಗೆ, ಅವುಗಳ ದನಿ ರೂಪ ಮತ್ತು ತಿರುಳುಗಳಿಗೆ ಹೊಂದಿಕೊಂಡಿರುವುದಿಲ್ಲ. ಇವರು ಕನ್ನಡ ಬರವಣಿಗೆಯನ್ನು ಓದುವಾಗ/ ಕೇಳುವಾಗ ಈ ಸಂಸ್ಕೃತ ಪದಗಳು ಒಣಗಂಟಲಿನಲ್ಲಿ ನುಗ್ಗಿದ ಕಡುಬುಗಳಾಗುತ್ತವೆ. ಇಂತಹ ಇನ್ನೊಂದು ಬಳಕೆಯನ್ನು ಈಗ ನೋಡೋಣ.

ಕನ್ನಡ ಬರಹದಲ್ಲಿ, ಹೆಚ್ಚಾಗಿ ಮಾತಿನಲ್ಲಿ 'ಪ್ರಮೇಯ' ಎಂಬ ಪದವನ್ನು ಬಳಸುವುದುಂಟು. 'ಬಸ್ಸು ಬರದೇ ಹೋದದ್ದರಿಂದ ಬೆಂಗಳೂರಿಗೆ ಹೋಗುವ ಪ್ರಮೇಯವೇ ಬರಲಿಲ್ಲ.', 'ನೀನೀಗ ಅವರ ಮನೆಗೆ ಹೋಗುವ ಪ್ರಮೇಯ ಏನಿದೆ?' ಈ ಮಾತುಗಳನ್ನು ಆಡಿದವರು 'ಪ್ರಮೇಯ' ಎಂಬ ಪದವನ್ನೇಕೆ ಬಳಸಿದ್ದಾರೆ? ಅದರ ತಿರುಳೇನು ಎಂಬುದನ್ನು ಅವರು ತಿಳಿದಿರುತ್ತಾರೆಯೇ? ಹೆಚ್ಚಾಗಿ ಅದರ ತಿರುಳು ಅವರಿಗೆ ಗೊತ್ತಿರುವುದಿಲ್ಲ. ಅದರೂ ಬಳಸುತ್ತಾರೆ( ಕೆಲವರು ಈ ಪದದ ಬದಲು 'ಪ್ರಸಂಗ' ಎಂಬ ಬೇರೆ ಪದವನ್ನು ಬಳಸುವುದಂಟು) ಈ ಪದಗಳನ್ನು ಬಳಸದೆಯೇ ಈ ವಾಕ್ಯಗಳನ್ನು ಕಟ್ಟಬಹುದಾದರೂ ಆ ಕಡೆಗೆ ನಾವು ಓಲುವೆ ತೋರುವುದಿಲ್ಲ. 'ಬಸ್ಸು ಬರದೇ ಹೋದದ್ದರಿಂದ ಬೆಂಗಳೂರಿಗೆ ಹೋಗಬೇಕಾಗಿ ಬರಲಿಲ್ಲ.', 'ನೀನೀಗ ಅವರ ಮನೆಗೆ ಏಕೆ ಹೋಗಬೇಕಿದೆ?' ನಾವು ಓದಿಬರೆಯುವ/ ಆಡುವ/ಕೇಳುವ ಕನ್ನಡದಲ್ಲಿ ಹೆಚ್ಚು ಕನ್ನಡ ಪದಗಳು ಇರುವಂತೆ ಕಟ್ಟಬಹುದೇ ಎಂದು ನೋಡಲು ಮೊದಲು ಮಾಡಬೇಕಲ್ಲವೇ?

**ಕೇಸಿ**

ತುಂಗಭದ್ರೆಯ ಬಡಗಣ ನಾಡಿನ ಕನ್ನಡದಲ್ಲಿ ಬಳಕೆಯಾಗುವ ಪದರೂಪವನ್ನು ಕೆಲವು ಓದುಗರು ಬರೆದು ಅದರ ಬೇರುಗಳೆಲ್ಲಿವೆ ಎಂದು ಕೇಳಿದ್ದಾರೆ. **ಕೇಸಿ** ಎಂಬುದು ಆ ಪದ ರೂಪ.'ಊಟ ಮಾಡ್ಕೇಸಿ ಬರ್ತೀನಿ', 'ದಿಬ್ಬ ಹತ್ಕೇಸಿ ಗುಡಿಗೆ ಹೋಗ್ಬೇಕು' ಈ ವಾಕ್ಯಗಳಲ್ಲಿ ಎರಡು ಕೆಲಸಗಳಿವೆ. ಒಂದಾದ ಮೇಲೆ ಇನ್ನೊಂದನ್ನು ಮಾಡುವಂತೆ/ ಮಾಡಿರುವಂತೆ ವಾಕ್ಯದಲ್ಲಿ ಸೂಚನೆ ಇದೆ. ಈ ಕೇಸಿ ಪದರೂಪ ತೆಂಕಣ ನಾಡಿನ ಕನ್ನಡದಲ್ಲಿ ಬಳಕೆಯಲ್ಲಿರುವ 'ಬಿಟ್ಟು' ಎಂಬುದಕ್ಕೆ ತಿರುಳಿನಲ್ಲಿ ಹತ್ತಿರವಿರುವಂತಿದೆ.(ಕೇಸಿ ಬದಲಿಗೆ ಬಿಟ್ಟು ಬಳಸಿ ನೋಡಿ) ಬಿಟ್ಟು ಎಂದೇಕೆ ಹೇಳುತ್ತೇವೆ? ಇದರ ತಿರುಳೇನು? (ಕೆಲವರ ಮಾತಿನಲ್ಲಿ ಇದು ಬಿಟ್ಟೆ, ಬುಟ್ಟೆ ಬುಟ್ಟು ಎಂದೆಲ್ಲ ಬದಲಾಗುವುದಂಟು) ಪದದ ಬೇರು ರೂಪ ಬಿಡು. ಆದರೆ ಇದು ತಿರುಳಿನಲ್ಲಿ ಹಳಗನ್ನಡದಲ್ಲಿದ್ದ ಎಯ್/ ಎಸು ಗೆ ಹತ್ತಿರವಿದ್ದಂತಿದೆ. ತೆಲುಗು ನುಡಿಯಲ್ಲಿ ಈಗ ಬಳಕೆಯಲ್ಲಿರುವ ಏಸಿ ಎಂಬ ಪದರೂಪವನ್ನು ಗಮನಿಸಿ. ಚದುವೇಸಿ(ಓದಿಬಿಟ್ಟು), ಚಪ್ಪೇಸಿ( ಹೇಳಿಬಿಟ್ಟು), ತೀಸೇಸಿ (ತೆಗೆದುಬಿಟ್ಟು). ಈ ಏಸಿ ಎನ್ನುವುದೇ ತೆಲುಗು ನುಡಿಯನ್ನು ಆಡುವ ನಾಡಿಗೆ ಹತ್ತಿರವಿರುವ ಕನ್ನಡ ನಾಡಿನಲ್ಲಿ ಕೇಸಿ ಎಂದು ಮೈದಳೆದಿರಬಹುದೇ? ಹಾಗಿದ್ದಲ್ಲಿ ಈ ಪದರೂಪದ ಮೊದಲಲ್ಲಿ ಬರುವ ಕ್ ಎಲ್ಲಿಂದ ಬಂತು? ಇದನ್ನು ಅರಿಯಲು ಜನ ಬಳಸುವ ನುಡಿಯನ್ನು ಇನ್ನಷ್ಟು ಹತ್ತಿರದಿಂದ ಕೇಳಿಸಿ ಕೊಳ್ಳಬೇಕು. ಇದು ಕೊಳ್ ಎಂಬ ಪದದ ಸವಕಳಿಯಾಗಿ ಕ್ ಆಗಿರಲೂ ಬಹುದು. ತೆಂಕಣದ (ಮಂಡ್ಯ,

ಮದ್ದೂರು, ಮಳವಳ್ಳಿ) ಕಡೆ ಕೇಳುವ ತಕ್ಕಬುಟ್ಟು, ಹೇಳ್ಕಬುಟ್ಟು, ನೋಡ್ಕಬುಟ್ಟು ರೂಪಗಳನ್ನು ನೆನಪು ಮಾಡಿಕೊಳ್ಳಿ. ಇಲ್ಲಿರುವ ಕ್ ದನಿ ಕೊಳ್ ನ ಸವಕಳಿ ತಾನೆ?

ಒಂದೊಮ್ಮೆ ಎಯ್/ಎಸು/ಏಸಿ ಎಂಬುದು ಕೇಸಿಯ ಹಿಂದಿನ ರೂಪಗಳಲ್ಲ ಎನ್ನುವುದಾದರೆ ಇನ್ನೊಂದು ದಿಕ್ಕಿನಿಂದ ನೋಡಲು ಬರುತ್ತದೆ. ಹಳಗನ್ನಡದ ಕೆಯ್-ರೂಪ(ಗೆಯ್, ಗೆಯ್ಮೆ, ಕೇಮೆ, ಗೆಯ್ತ, ಗೆಯ್ಯು)ವೇ ಕೇಸಿ ಎಂದಾಗಿರಲೂಬಹುದು. ಮತ್ತೆ ತೆಲುಗಿನ ಮಾದರಿ ನೋಡೋಣ. ಈ ನುಡಿಯಲ್ಲಿ ಕೆಯ್ ಎಂಬುದು ಚೆಯ್ ಆಗುತ್ತದೆ. ಇದೇ ಚೇಸಿ ಎಂದು ಇಂದಿನ ತೆಲುಗು ಮಾತಿನಲ್ಲಿ ಬಳಕೆಯಲ್ಲಿದೆ. ಆದರೆ ಚೇಸಿ ಎಂಬುದು ನನ್ನ ತಿಳುವಳಿಕೆಯಂತೆ ನಾಮಪದಗಳ ತರುವಾಯ ಬರುತ್ತದೆ. (ಭೋಜನಂಚೇಸಿ, ದಾನಂಚೇಸಿ ಮುಂತಾಗಿ) ಕನ್ನಡದಲ್ಲಿ ಇದು ಮುಗಿಯದ ಕೆಲಸವನ್ನು ಸೂಚಿಸುವ ಪದಗಳ ಬಳಿಕ ಬರುವಂತಿದೆ. ಇದು ಬಿಡಿಸಬೇಕಾದ ಇನ್ನೊಂದು ಗಂಟು. ಬಲ್ಲವರು ಈ ನಿಟ್ಟಿನಲ್ಲಿ ತೊಡಗಬೇಕೆಂದು ಕೋರುತ್ತೇನೆ. ಈ ಕೇಸಿಯಂತೆಯೇ ಕೇರಿ ಎಂಬ ಇನ್ನೊಂದು ಪದ ರೂಪ ಹೀಗೆಯೇ ಕನ್ನಡ ನುಡಿ ಬಳಕೆಯಲ್ಲಿರುವ ಬಡಗಣ ನಾಡಿನ ಕೆಲವು ಕಡೆ ಕೇಳಿಬರುತ್ತದೆ. ಇದರ ಬೇರುಗಳನ್ನೂ ತಡಕಬೇಕಿದೆ.

ನಾಡಿನ ಬಡಗು ಕಡೆ ಕನ್ನಡ ಮಾತನಾಡುವ ಕೆಲವರು ಕೇಸಿ ಎಂಬ ಪದವನ್ನು ಬಳಸುವುದೇಕೆ ಬರೆದಿದ್ದೆ. ಈಶ್ವರಶಾಸ್ತ್ರಿ ಮೋಟಿನಸರ (ಬಿಜಾಪುರ) ಅವರು ಈ 'ಕೇಸಿ' ಪದ ಉರ್ದು ನುಡಿಯ ಒಡನಾಟದಿಂದಾಗಿ ಕನ್ನಡದಲ್ಲಿ ಬಂದು ಸೇರಿರಬಹುದೇ ಎಂದು ಕೇಳುತ್ತಾರೆ. 'ಕೇಸಿ' ಎಂಬುದನ್ನು ಹೆಚ್ಚಾಗಿ ಬಳಸುವವರು ಉರ್ದು ನುಡಿಯೊಡನೆ ಒಡನಾಟ ಹೊಂದಿರುವವರೆಂಬುದನ್ನು ಗಟ್ಟಿಯಾಗಿ ಹೇಳಲು ಬರುವುದಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಈವರೆಗೆ ಈ 'ಕೇಸಿ' ಪದದ ಬಗೆಗೆ ತಲೆಕೆಡಿಸಿಕೊಂಡಿರುವ ನಾವೆಲ್ಲರೂ ಅದು ಒಂದು ಇಡಿ ಪದವೆಂದು ತಿಳಿದುಬಿಟ್ಟಿದ್ದೇವೆ. ಒಂದು ವೇಳೆ ಅದರ ಮೊದಲಲ್ಲಿ ಬರುವ ಕ್ ದನಿಯು, ವಾಕ್ಯದಲ್ಲಿ ಕೇಸಿಯ ಹಿಂದೆ ಇರುವ ಕೆಲಸ ಹೇಳುವ ಪದಕ್ಕೇ ಸೇರಿದ್ದರೆ ಆಗ 'ಏಸಿ'ಯಷ್ಟೆ ಹೊರತಾಗಿ ಉಳಿಯುವುದು. 'ನಾ ನಾಳೆ ಹೋಗ್ಕೇಸಿ ಅವರನ್ ನೋಡತೀನಿ' ಎನ್ನುವಲ್ಲಿ ಹೋಗ್+ಕೇಸಿ ಎಂದು ಒಡೆಯುತ್ತಿದ್ದೇವೆ. ಅದು ಹೋಗ್ಕ್+ ಏಸಿ ಆಗಿರಬಾರದೇಕೆ? ಆಗ ನಾವು ನೋಡುವ ಬಗೆಯೇ ಬದಲಾಗುತ್ತದೆ. ಕ್ ಎಂಬುದು ಕೊಳ್(>ಕೊಂಡ್>ಕೊ>ಕ್) ನ ಸವಕಳಿಯಾಗಿ ಮತ್ತು ಏಸಿ (ಹಿಂದೆ ಹೇಳಿದಂತೆ ಎಯ್ ಎಂಬ ಕೆಲಸ ಹೇಳುವ ಪದದಿಂದ ಬಂದದ್ದು) ಬಿಟ್ಟು ಎನ್ನುವ ತಿರುಳಿನಲ್ಲಿ ಬಳಕೆಯಾಗುತ್ತಿರಬಹುದಷ್ಟೆ? ಬಲ್ಲವರು ಏನು ಹೇಳುತ್ತಾರೋ ಎಂದು ಕಾಯ್ದು ನೋಡೋಣ.

**ಮತ್ತು, ಹಾಗೂ ಇನ್ನಷ್ಟು ವಿವರಗಳು**

** ಕನ್ನಡ ಬರವಣಿಗೆಯಲ್ಲಿ **'ಮತ್ತು'** ,**'ಹಾಗೂ'** ಎಂಬ ಎರಡು ಪದಗಳನ್ನು ಎಲ್ಲಿ, ಹೇಗೆ ಮತ್ತು ಏಕೆ ಬಳಸಬೇಕೆಂಬುದು ಗೊಂದಲಕ್ಕೆ ಎಡೆ ಮಾಡಿಕೊಟ್ಟಿದೆ.( ಅಮಲು ಎಂಬ ತಿರುಳುಳ್ಳ **ಮತ್ತು** ಎಂಬ ಇನ್ನೊಂದು ಪದವಿದೆ. ಇವನ್ನು ನಾವು ನುಡಿಯುವ ಬಗೆ ಬೇರೆ. **ವ್** ಆದ ಮೇಲೆ ಬರುವ **ಅಕಾರ** ಎರಡರಲ್ಲೂ

ಬೇರೆಬೇರೆಯಾಗಿದೆ. ಎರಡೂ ಪದಗಳನ್ನು ಒಟ್ಟಾಗಿ ನುಡಿದು ನೋಡಿ) **ಮತ್ತು** ಬದಲು **ಹಾಗೂ** ಪದವನ್ನು ಸಲೀಸಾಗಿ ಬಳಸುತ್ತೇವೆ.( ಮೊದಲ ವಾಕ್ಯದಲ್ಲೇ ನಾನು **ಮತ್ತು** ಬಳಸಿರುವ ಕಡೆ **ಹಾಗೂ** ಬಳಸಬಹುದೇ?) ಹಾಗೆ ನೋಡಿದರೆ ಮಾತುಕತೆಗಳಲ್ಲಿ ಈ ಪದಗಳನ್ನು ಬಳಸುವುದು ಕಡಿಮೆ. ವೇದಿಕೆಯ ಭಾಷಣಗಳಲ್ಲಿ ನೀವು ಈ ಪದಗಳನ್ನು ಕೇಳಿಸಿಕೊಳ್ಳಬಹುದು ಅಷ್ಟೆ. ಕೆಲವರು, ಬರೆದ ಹಾಗೆ ಮಾತನಾಡುವವರು ತಮ್ಮ ಮಾತಿನಲ್ಲಿ ಈ ಪದಗಳನ್ನು ಬಳಸುತ್ತಿರುತ್ತಾರೆ. ಈ ಪದಗಳು ಎರಡು ನಾಮಪದಗಳ ನಡುವೆ( ಇಲ್ಲವೇ ನಾಮಪದಗಳನ್ನುಳ್ಳ ಪದಕಟ್ಟುಗಳ ನಡುವೆ) ಬಳಕೆಯಾಗುತ್ತವೆ. ಹೆಚ್ಚಾಗಿ ವಾಕ್ಯದ ಮೊದಲಲ್ಲಿ **'ಮತ್ತು'** ಪದವನ್ನು ಬಳಸಲು ಆಗುವುದಿಲ್ಲ. ಆದರೆ **'ಹಾಗೂ'** ಎಂಬ ಪದವನ್ನು ವಾಕ್ಯದ ಮೊದಲಲ್ಲಿ ಬಳಸುವುದುಂಟು. ಅಲ್ಲಿ ಬಳಕೆಯಾಗುವ 'ಹಾಗೂ' ಮತ್ತು ವಾಕ್ಯದ ನಡುವೆ ಬಳಕೆಯಾಗುವ **'ಹಾಗೂ'** ಇವೆರಡೂ ತಿರುಳಿನಲ್ಲಿ ಬೇರೆಬೇರೆ ಯಾಗುತ್ತವೆ. **'ಹಾಗೂ ನೀನು ಹೋದರೆ ಆಮೇಲೆ ಇಲ್ಲಿ ಎಲ್ಲ ತಲೆ ಕೆಳಗಾಗುವುದಂತೂ ದಿಟ.'** ಈ ವಾಕ್ಯದಲ್ಲಿ **'ಹಾಗೂ'** ಎಂಬುದು ಹಿಂದೆ ನಡೆದ ಏನೋ ಒಂದನ್ನು ನಾವು ಗುರುತಿಸಿಕೊಳ್ಳುವಂತೆ ಮಾಡುತ್ತದೆ. ಈ ವಾಕ್ಯದ ಹಿನ್ನೆಲೆಯಾಗಿ ಯಾರಿಗೋ ಹೋಗಬಾರದೆಂಬ ಸೂಚನೆ ಇದೆ. (**ಹಾಗೂ** ಎಂಬುದನ್ನು ಕೆಲವರು **ಹಾಗು** ಎಂದು ಬರೆಯುವುದುಂಟು. ಇದು ಸರಿಯಲ್ಲ.)

ಇದರಂತೆಯೇ **'ಮತ್ತು'** , **'ಮತ್ತೂ'** ಬೇರೆ ಬೇರೆ. ವಾಕ್ಯದ ಮೊದಲಲ್ಲಿ 'ಮತ್ತೂ' ಬಳಕೆಯಾಗ ಬಹುದು. 'ಮತ್ತೂ ಕರೆಯುತ್ತಿವೆ ಗಾಳಿ ದರಬಾರಿಗರವತ್ತು ಕರೆಯೋಲೆಗಳು' ಎಂಬ ಅಡಿಗರ 'ಭೂಮಿಗೀತ' ಸಾಲು ನೆನಪಿಸಿಕೊಳ್ಳಿ. ಇಲ್ಲೆಲ್ಲಾ 'ಮತ್ತೂ' ಎಂದರೆ 'ಇನ್ನೂ' ಎಂದು ತಿಳಿಯುತ್ತೇವೆ. ಉದಾ.ಗೆ ' **ಹೋಗುವುದು ಬೇಡ ಎಂದು ಹೇಳಿದ್ದೇನೆ. ಮತ್ತೂ ಹೋದರೆ ಅದು ಅವನ ಹಣೆಬರಹ'** ಎಂಬ ವಾಕ್ಯವನ್ನು ನೋಡಿ.

ವಾಕ್ಯದಲ್ಲಿರುವ ಎರಡು ನಾಮಪದಗಳು ಬೇರ ಬೇರೆಯಾಗಿದ್ದರೆ ಅವುಗಳ ನಡುವೆ 'ಮತ್ತು' ಬಳಸುವುದು ಸರಿ. ಒಂದುವೇಳೆ ಆ ಎರಡೂ ನಾಮಪದಗಳ ನಡುವೆ ಯಾವುದಾದರೊಂದು ಬಗೆಯ ನಂಟು ಇದ್ದರೆ ಆಗ ಅವುಗಳ ನಡುವೆ 'ಹಾಗೂ' ಎಂಬ ಪದ ಬಳಸುವುದು ಸರಿ. ಈ ನಂಟು ಯಾವ ಬಗೆಯದು? **'ಕಿಟಕಿ ಮತ್ತು ಬಾಗಿಲು ಮಚ್ಚಿದರೆ ಮನೆಯೊಳಗೆ ಗಾಳಿ ಬರುವುದು ಹೇಗೆ?'** ಈ ವಾಕ್ಯದ ಕಿಟಕಿ ಮತ್ತು ಬಾಗಿಲು ಬೇರೆಬೇರೆ ನಾಮಪದಗಳು. ಅವರೆಡೂ ಮನೆಯಲ್ಲೇ ಇವೆಯಾದರೂ ಅವು ಒಂದರಿಂದ ಇನ್ನೊಂದು ಬೇರೆ. ಆದರೆ ಈ ವಾಕ್ಯವನ್ನು ನೋಡಿ. **'ಮುದುಕ ಹಾಗೂ ಅವನ ಮಕ್ಕಳು ಹೆದರಿ ಕಂಗಾಲಾಗಿದ್ದಾರೆ'** ಇಲ್ಲಿ ಮುದುಕ, ಅವನ ಮಕ್ಕಳು ಈ ಎರಡು ನಾಮಪದಗಳ ನಡುವೆ ಮುಂದುವರಿಕೆ ಇದೆ. ಅಂದರೆ ಅವನ ಎಂಬ ಪದದ ನೆರವಿನಿಂದ ಮಕ್ಕಳು ಪದವನ್ನು ಮುದುಕನ ಮಕ್ಕಳು ಎಂದು ಸೂಚಿಸಲಾಗಿದೆ. ಇದೇ ವಾಕ್ಯವನ್ನು 'ಮುದುಕ ಮತ್ತು ಮಕ್ಕಳು ಹೆದರಿ..." ಎಂದು ಬರೆದಾಗ ಆ ಮಕ್ಕಳು ಮುದುಕನ ಮುಕ್ಕಳು ಎಂದು ಗಟ್ಟಿಯಾಗಿ ಹೇಳಲು ಬರುವುದಿಲ್ಲ. ಹಾಗಾಗಿ ಎರಡು ನಾಮಪದಗಳಲ್ಲಿ ಒಂದು ಇನ್ನೊಂದರ ಮುಂದುವರಿಕೆಯಾಗಿದ್ದರೆ ಆಗ ಅವುಗಳ ನಡುವೆ 'ಹಾಗೂ' ಪದವನ್ನು ಬಳಸಬೇಕು. ಉಳಿದ ಕಡೆ 'ಮತ್ತು' ಪದವನ್ನು ಬಳಸಲು ಅಡ್ಡಿಯಿಲ್ಲ. ಇನ್ನೂ ಒಂದೆರಡು ಉದಾಹರಣೆಗಳನ್ನು ನೋಡಿ. **ನಾಯಕರು**

**ಹಾಗೂ ಅವರ ಹಿಂಬಾಲಕರು ಗೆಲುವಿನ ಮುದದಲ್ಲಿ ತೇಲಾಡುತ್ತಿದ್ದಾರೆ.' 'ಈ ರಸ್ತೆಯಲ್ಲಿ ಸ್ಕೂಟರ್ ಮತ್ತು ಕಾರುಗಳು ಬರಲು ಅನುಮತಿ ಇದೆ; ಆದರೆ ಬಸ್ಸುಗಳು ಬರುವಂತಿಲ್ಲ'** ಇಷ್ಟಾದರೂ ಹೀಗೆ ಬರೆಯಬೇಕೆಂದು ಕಟ್ಟು ಮಾಡಬಹುದೇ ಎಂದು ಕೇಳಿದರೆ ನನ್ನ ಬಳಿ ಅದಕ್ಕೆ ಉತ್ತರವಿಲ್ಲ. ಈಗಿರುವ ಗೊಂದಲವನ್ನು ಕಡಿಮೆ ಮಾಡುವುದಕ್ಕೆ ನಾವೇ ಈ ಕಟ್ಟುಗಳನ್ನು ಪಾಲಿಸಿದರೆ ಅದರಿಂದ ಏನಾದರೂ ನೆರವಾದೀತೇನೋ ಎಂದು ತಿಳಿದು ಈ ಮಾತುಗಳನ್ನು ಬರೆದಿದ್ದೇನೆ.

ಎಷ್ಟೋ ವಾಕ್ಯಗಳಲ್ಲಿ ಈ ಎರಡೂ ಪದಗಳನ್ನು ಬಳಸದಿದ್ದರೂ ಯಾವ ತೊಂದರೆಯೂ ಆಗುವುದಿಲ್ಲ. ಆ ವಾಕ್ಯಗಳನ್ನು ಓದಿಕೊಳ್ಳುವ ಬಗೆಯಲ್ಲಿ ನಮಗೆ ಬೇಕಾದ ತಿರುಳು ತಿಳಿಯುತ್ತದೆ. ಅಲ್ಲದೆ ಕನ್ನಡ ವಾಕ್ಯರಚನೆಯ ನಿಯಮಗಳಲ್ಲೇ ಈ ಪದಗಳ ತಿರುಳನ್ನು ತಿಳಿಸುವ ಬೇರೆ ಬಗೆಯೊಂದು ಸೇರಿಕೊಂಡಿದೆ. ಹಿಂದೆ ಬಳಸಿದ ವಾಕ್ಯವನ್ನು ಮತ್ತೆ ನೋಡಿ: 'ಮುದುಕ, ಅವನ ಮಕ್ಕಳು ಹೆದರಿ ಕಂಗಾಲಾಗಿದ್ದಾರೆ' ಇಲ್ಲಿ ಕೆಲಸ ಹೇಳುವ 'ಕಂಗಾಲಾಗಿದ್ದಾರೆ' ಎಂಬ ಪದ ಹೆದರಿದ್ದು ಒಬ್ಬರಲ್ಲ ಒಬ್ಬರಿಗಿಂತ ಹೆಚ್ಚು ಜನರು ಎಂಬುದನ್ನು ನಮಗೆ ಹೇಳುತ್ತಿದೆ. ವಾಕ್ಯದಲ್ಲಿ ಮುದುಕ ಪದವಷ್ಟೇ ಇದ್ದಿದ್ದರೆ ಆಗ ಅದರ ಕೊನೆಗೆ 'ಕಂಗಾಲಾಗಿದ್ದಾನೆ' ಎಂದಿರುತ್ತಿತ್ತು. ಹಾಗಾಗಿ ಕೊನೆಗೆ ಬರುವ ಕೆಲಸ ಹೇಳುವ ಪದವೇ ನಮಗೆ ವಾಕ್ಯದಲ್ಲಿ ಒಂದಕ್ಕಿಂತ ಹೆಚ್ಚು ನಾಮಪದಗಳು ಬಳಕೆಯಾಗಿವೆ ಎನ್ನುವುದನ್ನು ತಿಳಿಸುತ್ತದೆ.

**ಬರವಣಿಗೆಯಲ್ಲಿ ತಪ್ಪುಗಳು**

ಚಿಕ್ಕವರು ಕನ್ನಡ ಮಾತಾಡುವಾಗ 'ತಪ್ಪು'ಗಳನ್ನು ಮಾಡುತ್ತಿದ್ದಾರೆ ಎನ್ನುವ ದೂರನ್ನು ಎದುರಿಗಿಟ್ಟುಕೊಂಡು ಒಂದು ಚರ್ಚೆಯನ್ನು ಮಾಡಿದ್ದೆ. ಈ ದೂರು ಕನ್ನಡ ಬರಹದ ಬಗೆಗೂ ಇದೆ. ಶಾಲೆ ಕಾಲೇಜುಗಳಲ್ಲಿ ಕನ್ನಡಪಾಠ ಹೇಳುವ ನನ್ನ ಹಲವು ಪರಿಚಿತರು 'ಈಗಿನ' ಮಕ್ಕಳ ಕನ್ನಡ ಬರವಣಿಗೆಯು ಹಾಳಾಗಿ ಹೋಗಿದೆ ಎಂದು ಗೊಣಗುತ್ತಾರೆ. 'ಸರಿಯಾಗಿ ಒಂದು ವಾಕ್ಯವನ್ನು ಕೂಡ ಕನ್ನಡದಲ್ಲಿ ಬರೆಯಲಾರರು' ಎಂದು ಹಲುಬುತ್ತಾರೆ. ಅವರ ಈ ಆತಂಕ ದಿಟವೇ ಇದ್ದೀತು. ಆದರೆ ನಮ್ಮ ಚಿಕ್ಕವರು ಬರವಣಿಗೆಯಲ್ಲಿ ಯಾವ ಬಗೆಯ ತಪ್ಪುಗಳನ್ನು ಮಾಡುತ್ತಿದ್ದಾರೆ ಎಂಬ ಪ್ರಶ್ನೆಯನ್ನು ಕಲಿಸುವವರ ಮುಂದಿಟ್ಟರೆ ಅವರು ಹೇಳುವ ಉತ್ತರ ಹೆಚ್ಚೂ ಕಡಿಮೆ ಹೀಗಿರುತ್ತದೆ. 1. ಕಾಗುಣಿತದ ತಪ್ಪುಗಳನ್ನು ಮಾಡುತ್ತಾರೆ. 2. ಸರಿಯಾದ ಪದಗಳನ್ನು ಆಯ್ಕೆ ಮಾಡುವುದಿಲ್ಲ. ಮತ್ತು 3. ವಾಕ್ಯ ರಚನೆಯಲ್ಲಿ ತಪ್ಪುಗಳಿರುತ್ತವೆ. ಈ ಮೂರು ನೆಲೆಗಳಲ್ಲಿ ಮೊದಲನೆಯದನ್ನು ಬಿಟ್ಟರೆ ಉಳಿದ ನೆಲೆಗಳಲ್ಲಿ ಯಾವ ಬಗೆಯ ತಪ್ಪುಗಳು ಆಗುತ್ತಿವೆ ಎನ್ನುವುದನ್ನು ಹಲವು ಹಂತಗಳಲ್ಲಿ ಅಧ್ಯಯನ ಮಾಡಬೇಕಿದೆ. ಹಾಗಾಗಿ ಅವುಗಳನ್ನಿಲ್ಲಿ ಚರ್ಚೆಗೆ ತೆಗೆದುಕೊಳ್ಳುವುದಿಲ್ಲ. ಈಗ ಕಾಗುಣಿತದ ತಪ್ಪುಗಳನ್ನಷ್ಟೆ ಗಮನಿಸೋಣ

ಈ ತಪ್ಪುಗಳನ್ನೆಲ್ಲ ಕೂಡಿಸಿ ಈವರೆಗೆ ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಆದರೂ ಒಂದು ಸಂಗತಿ ಗಮನಿಸುವಂತಿದೆ. ಅದೆಂದರೆ **ಕೆಲವು ಬಗೆಯ ತಪ್ಪುಗಳನ್ನು ಮತ್ತೆ**

**ಮತ್ತೆ ಹಲವರು ಮಾಡುತ್ತಿರುತ್ತಾರೆ**. ಅದು ಯಾರೋ ಒಬ್ಬರು ಮಾಡುತ್ತಿರುವ ತಪ್ಪಾಗಿರುವುದಿಲ್ಲ. ಹಲವರು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಸಮಯಗಳಲ್ಲಿ ಅದೇ ಬಗೆಯ ತಪ್ಪುಗಳನ್ನು ಮಾಡುತ್ತಿರುತ್ತಾರೆ. ಇಂತಹ ತಪ್ಪುಗಳನ್ನು ನಾವು ಎಚ್ಚರಿಕೆಯಿಂದ ನೋಡಬೇಕು. ಉದಾಹರಣೆಗೆ ಸ್ವರಗಳ ಕಾಗುಣಿತ ಚಿಹ್ನೆಗಳನ್ನು, ಅದರಲ್ಲೂ ಎ/ಏ ಮತ್ತು ಒ/ಓ ಕಾರಗಳ ಚಿಹ್ನೆಗಳನ್ನು ಬಳಸುವಾಗ ಆಗುವ ತಪ್ಪುಗಳು. ನೋಡು ಬದಲು ನೊಡು, ಕೋರು ಬದಲು ಕೊರು, ಬೇರು ಬದಲು ಬೆರು, ನೆಡು ಬದಲು ನೇಡು ಬರೆಯವುದು ಇಂತಹ ತಪ್ಪುಗಳು. ಹೀಗೆ ಸ್ವರ ಚಿಹ್ನೆಗಳನ್ನು ತಪ್ಪಾಗಿ ಬರೆಯವುದು, ಆ ಸ್ವರ ಪದದಲ್ಲಿ ಎರಡು, ಮೂರು ಇಲ್ಲವೆ ನಾಲ್ಕನೆಯ ಸ್ವರವಾಗಿದ್ದರಂತೂ ಇನ್ನೂ ಹೆಚ್ಚಾಗಿ ಕಾಣಿಸಿಕೊಳ್ಳುತ್ತದೆ. ಬರುತ್ತೇನೆ ಬದಲು ಬರುತ್ತೆನೆ ಎಂದು ಬರೆಯುವುದು ಈ ಬಗೆಯ ತಪ್ಪು. ವ್ಯಂಜನಗಳನ್ನು ಬರೆಯುವಾಗ ಮಹಾಪ್ರಾಣಗಳ ಬಳಕೆಯಲ್ಲಿ, ಒತ್ತಕ್ಷರಗಳನ್ನು ಕೂಡಿಸುವಲ್ಲಿ ತಪ್ಪುಗಳು ನಡೆಯುತ್ತವೆ.

ಈ ಬಗೆಯ ತಪ್ಪುಗಳಿಗೆ ವ್ಯಕ್ತಿ ಮಾತ್ರ ಕಾರಣರಲ್ಲ. ಹಲವರಲ್ಲಿ ಈ ತಪ್ಪುಗಳು ನಡೆಯುವುದರಿಂದ ಇದಕ್ಕೆ ಕಾರಣಗಳು ಬೇರೆ ಎಲ್ಲೋ ಇರಬೇಕು. ಅಂತಹ ಕೆಲವು ಕಾರಣಗಳು ಹೀಗಿವೆ. ಕಾರಣ 1. ಕನ್ನಡವನ್ನು ಮಾತಾಡುವ ಬಗೆಗೂ ಅದರ ಬರಹದ ರೂಪಕ್ಕೂ ಹೆಚ್ಚಿನ ವ್ಯತ್ಯಾಸಗಳಿವೆ. ಬರುತ್ತೇನೆ ಎಂದು ಬರೆದರೂ ನುಡಿಯುವಾಗ ಬರ್ತೇನೆ, ಬರ್ತೀನಿ, ಬತ್ತೀನಿ, ಬತ್ತೆ ಹೀಗೆ ಹಲವು ರೂಪಗಳು ಮೈದಳೆಯುತ್ತವೆ. **ಕನ್ನಡ ಕಲಿಸುವವರು ಬರುತ್ತೇನೆ ಎಂಬ ರೂಪವನ್ನೇ ಬರ್ತೇನೆ ಎಂದು ನುಡಿಯಲಾಗುತ್ತದೆ ಎಂದು ತಿಳಿಯುವರೇ ಹೊರತು ಬರ್ತೇನೆ ಎಂಬ ಆಡು ರೂಪವನ್ನೇ ಬರುತ್ತೇನೆ ಎಂದು ಬರೆಯಲಾಗುತ್ತದೆ ಎಂದು ತಿಳಿಯುವುದಿಲ್ಲ**. ಇವೆರಡೂ ಗ್ರಹಿಕೆಗಳೂ ಒಂದೇ ಅಲ್ಲ. ಮೊದಲ ಗ್ರಹಿಕೆ ಸರಿಯಾಗಿದ್ದರೆ ಬರೆಹರೂಪದಿಂದ ಆಡುರೂಪವನ್ನು ಪಡೆಯುವ ನಿಯಮಗಳನ್ನು ಕಲಿಯಬೇಕಾಗುತ್ತದೆ. ಎರಡನೆಯ ಗ್ರಹಿಕೆ ಸರಿಯಿದ್ದರೆ ಆಡುರೂಪದಿಂದ ಬರಹ ರೂಪವನ್ನು ಪಡೆಯುವ ನಿಯಮಗಳನ್ನು ಕಲಿಯಬೇಕಾಗುತ್ತದೆ. ನಮ್ಮ ಕನ್ನಡ ಕಲಿಕೆಯಲ್ಲಿ ಆಡು ರೂಪಗಳನ್ನು ದೂರವಿರಿಸಿರುವುದರಿಂದ ಈ ನೆಲೆಯಲ್ಲಿ ಗೊಂದಲಗಳು ಮುಂದುವರೆಯುತ್ತಲೇ ಹೋಗುತ್ತಿವೆ.

2. ಕನ್ನಡ ಕಲಿತು ಬರೆಯುತ್ತಿರುವ ಹಲವರಿಗೆ ಕನ್ನಡ ಮೊದಲ ನುಡಿಯಲ್ಲ. ಶಾಲೆಗೆ ಬರುವ ಹೊತ್ತಿಗೆ ಬೇರೆ ಒಂದು ನುಡಿಯನ್ನು ಚೆನ್ನಾಗಿ ಆಡಲು ಬಲ್ಲವರಾಗಿರುತ್ತಾರೆ. ಇವರಲ್ಲಿರುವ ಮೊದಲಭಾಷೆಯ ನಿಯಮಗಳು ಕನ್ನಡ ಕಲಿಕೆಯ ಮೇಲೆ ನೆರಳನ್ನು ಬೀರುತ್ತವೆ. ಇದು ಬರವಣಿಗಯ ಹಂತದಲ್ಲಿ ಇನ್ನಷ್ಟು ದಟ್ಟವಾಗುತ್ತದೆ. ಹೀಗೆ ಇನ್ನೊಂದು ಭಾಷೆಯನ್ನು ಮೊದಲ ನುಡಿಯಾಗಿ ಹೊಂದಿಲ್ಲದಿರುವ, ಕನ್ನಡವನ್ನೇ ಮೊದಲ ನುಡಿಯನ್ನಾಗಿ ಹೊಂದಿರುವ ಮಕ್ಕಳಲ್ಲೂ ಹಲವರು ಕನ್ನಡ ಓದಿ ಬರೆಯುವ ಹೊತ್ತಿಗೆ ಇಂಗ್ಲಿಶ್ ಓದುಬರಹವನ್ನು ಕಲಿತಿರುವುದುಂಟು. ಇದೂ ಕೂಡ ಅವರ ಕನ್ನಡ ಬರವಣಿಗೆಯ ತಪ್ಪುಗಳಿಗೆ ಕಾರಣವಾಗುತ್ತದೆ. ಇಂಗ್ಲಿಶ್ ಓದುಬರೆಹ ಕಲಿತು ಬಳಿಕವೇ ಕನ್ನಡ ಬರವಣಿಗೆ ಕಲಿಯುವ ಮಕ್ಕಳೇ ಈ ಮೊದಲಲ್ಲಿ ಹೇಳಿದ ಹ್ರಸ್ವ ಮತ್ತು ದೀರ್ಘ ಸ್ವರ ಚಿಹ್ನೆಗಳನ್ನು ಬರೆಯುವಾಗ ಗೊಂದಲಕ್ಕೆ ಒಳಗಾಗುವುದು ಕಂಡು ಬರುತ್ತದೆ. ನಾವೀಗ ಕನ್ನಡ

ಕಲಿಸುತ್ತಿರುವ ಬಗೆಯಲ್ಲಿ ಮಕ್ಕಳು ಇನ್ನೊಂದು ನುಡಿಯನ್ನೂ ಈಗಾಗಲೇ ಕಲಿತಿರಬಹುದೆಂಬ ಅಂಶವನ್ನು ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಹಾಗಾಗಿ ಈ ನೆಲೆಯ ಬರವಣಿಗೆಯ ತಪ್ಪುಗಳು ಕೂಡ ಮುಂದುವರೆಯುತ್ತಲೇ ಇರುತ್ತವೆ.

3. ಕನ್ನಡ ಕಲಿಯವ ಮಕ್ಕಳಿಗೆ ಕನ್ನಡದ ನೂರಾರು ಪದಗಳನ್ನು ಕಿವಿಯಿಂದ ಕೇಳಿ ಗೊತ್ತಿರುವುದೇ ಹೊರತು ಅವುಗಳ ಬರೆಹರೂಪ ಗೊತ್ತಿರುವುದಿಲ್ಲ. ಅವುಗಳನ್ನು ಅವರು ನೋಡಿರುವುದೂ ಇಲ್ಲ. ಅಂದರೆ ಓದಿನ ಮೂಲಕ ಕಣ್ಣಿನ ರೂಪಗಳನ್ನು ಮನದಟ್ಟು ಮಾಡಿಕೊಂಡಿರುವುದಿಲ್ಲ. ಕಿವಿಯ ಮೂಲಕ ನೆಲೆಗೊಂಡ ಪದರೂಪಗಳನ್ನು ಕೈಬರಹದಿಂದ ಕಣ್ಣಿನ ರೂಪವನ್ನಾಗಿ ಬದಲಿಸುವುದನ್ನು ಮಕ್ಕಳು ಕಲಿಯಬೇಕಾಗುತ್ತದೆ. ಆದರೆ ಕಣ್ಣಿನ ರೂಪಗಳು ಪರಿಚಿತವೇ ಅಲ್ಲದಿದ್ದರೆ ಆಗ ಇಂತಹ ಕಡೆಗಳಲ್ಲಿ ಗೊಂದಲಗಳು ಮೊದಲಾಗುತ್ತವೆ. ಇದಕ್ಕೆ ಪರಿಹಾರಗಳನ್ನು ಕಂಡುಕೊಳ್ಳಬೇಕು. ಮಕ್ಕಳು ಹೆಚ್ಚು ಓದುವಂತೆ ಮಾಡುವುದು; ಓದುವಾಗ ಗಟ್ಟಿಯಾಗಿ ಕಿವಿಗೆ ಬೀಳುವಂತೆ ಮಾಡುವುದು ಒಂದು ದಾರಿ. ಇದರಿಂದ ಕಣ್ಣಿನ ರೂಪಗಳು ಕಿವಿಯ ರೂಪಗಳಾಗಿ ಬದಲಾಗುವುದು ಸಾಧ್ಯ ಆಗ ಬರವಣಿಗೆಯಲ್ಲಿ ತಪ್ಪುಗಳು ಕಡಿಮೆಯಾಗಲೂಬಹುದು.

4. ಕೆಲವು ಬಗೆಯ ಬರವಣಿಗೆಯ ತಪ್ಪುಗಳು ಕನ್ನಡ ನುಡಿಯಲ್ಲಿ ಆಗುತ್ತಿರುವ ಬದಲಾವಣೆಗಳ ಮುನ್ಸೂಚನೆಯೂ ಆಗಿರುವುದುಂಟು. ಕೆಲವು ಧ್ವನಿಗಳನ್ನು ಇಲ್ಲವೇ ಧ್ವನಿಗಳ ಗುಂಪನ್ನು ಈಗ ನಾವು ನುಡಿಯುತ್ತಿರುವ ಬಗೆಯು ಬದಲಾಗುತ್ತಿದ್ದರೆ ಈ ಬದಲಾವಣೆ ಹೆಚ್ಚು ಹರಡಿ ನೆಲೆಗೊಳ್ಳುವವರೆಗೆ ಬರವಣಿಗೆಯಲ್ಲಿ ಗೊಂದಲಗಳು ಇರುತ್ತವೆ. ಹಿಂದೆ ಕೂಡ ಇಂತಹ ಗೊಂದಲಗಳು ಬರವಣಿಗೆಯಲ್ಲಿ ಕಾಣಿಸಿಕೊಳ್ಳುತ್ತಿದ್ದವು ಎನ್ನುವುದಕ್ಕೆ ನಮ್ಮ ಕಲ್ಬರಹಗಳಲ್ಲಿ ಉದಾಹರಣೆಗಳಿವೆ. ನುಡಿ ಬದಲಾವಣೆಗಳು ಎಲ್ಲೋ ಮೊದಲಾಗಿ ಹರಡಿ ನೆಲೆಗೊಳ್ಳಲು ಒಂದೆರಡು ನೂರು ವರ್ಷಗಳೇ ಹಿಡಿಯುವುದುಂಟು. ಈ ಅವಧಿಯಲ್ಲಿ ಬರವಣಿಗೆಯ ಪದರೂಪಗಳಲ್ಲಿ ಯಾವುದು ಸರಿಯಾದುದು ಎನ್ನುವ ಗೋಜಲು ಇದ್ದೇ ಇರುತ್ತದೆ. ಉದಾ.ಗೆ ಈಗ ಪದಗಳ ನಡುವೆ ಬರುವ ಕೆಲವು ವ್ಯಂಜನಗಳನ್ನು ನಾವು ನುಡಿಯುತ್ತಿರುವ ಬಗೆಯಲ್ಲಿ ಬದಲಾವಣೆ ನಡೆಯುತ್ತಿರುವಂತಿದೆ. ಸುಮ್ಮನೆ **ಅಪಘಾತ** ಮತ್ತು **ವಿಫುಲ** ಎಂಬ ಪದಗಳಲ್ಲಿ ಪ/ಫಕಾರವನ್ನು ಜನರು ಹೇಗೆ ನುಡಿಯುತ್ತಾರೆ ಎನ್ನುವುದನ್ನು ಗಮನಿಸಿ. ಹಲವರು ಈ ಪ/ಫಕಾರಗಳನ್ನು ನುಡಿಯುವಾಗ ಎರಡೂ ತುಟಿಗಳನ್ನು ಹತ್ತಿರ ತಂದು ಮುಚ್ಚಿ ನುಡಿಯುವ ಬದಲು ಗಾಳಿ ತುಟಿಗಳ ನಡುವಿನ ಕಿರು ಸಂದಿಯಲ್ಲಿ ಹೆಚ್ಚು ಒತ್ತಡದಿಂದ ಹೊರಹೋಗುವ ಹಾಗೆ ಮಾಡುತ್ತಾರೆನ್ನುವುದು ಗೊತ್ತಾಗುತ್ತದೆ. ಇದು ಎಲ್ಲೋ ಒಬ್ಬಿಬ್ಬರು ಮಾಡಿಕೊಂಡಿರುವ ಬದಲಾವಣೆಯಲ್ಲ. ಪದದ ನಡುವೆ ಹೀಗೆ ವ್ಯಂಜನಗಳನ್ನು ನುಡಿಯುವ ಬಗೆಯಲ್ಲಿ ಬದಲಾವಣೆಗಳು ಮೊದಲಾಗಿದ್ದು ಅವುಳಲ್ಲಿ ಯಾವುವು ಹೇಗೆ ಕೊನೆಯಾಗುತ್ತವೆಂಬುದು 'ತಿಳಿಯುವ' ವರೆಗೂ ಬರವಣಿಗೆಯಲ್ಲಿ ತಪ್ಪುಗಳು ನಡೆಯುತ್ತಲೇ ಇರುತ್ತವೆ.

ಈ ಕಾರಣಗಳನ್ನು ನೀಡಿ ವಿವರಿಸಿದ್ದೇಕೆ? ಬರವಣಿಗೆಯ ತಪ್ಪುಗಳನ್ನು ನಾವು ಪರಿಗಣಿಸಬೇಕಾದ ಬಗೆಯಲ್ಲಿ ಬದಲಾವಣೆಯಾಗಬೇಕಿದೆ. ಈ ತಪ್ಪುಗಳಲ್ಲಿ ಕೆಲವನ್ನು

ಸರಿಪಡಿಸಬೇಕಾದರೆ ಕನ್ನಡ ಕಲಿಸುವ ನೆಲೆಯಲ್ಲಿ ಬದಲಾವಣೆಗಳು ನಡೆಯ ಬೇಕಿದೆ. ಮತ್ತೆ ಕೆಲವು ತಪ್ಪುಗಳನ್ನು ಕೆಲಕಾಲ ಸಹಿಸಿಕೊಳ್ಳಬೇಕಾಗುತ್ತದೆ. ಕನ್ನಡ ಬರೆಯುವಾಗ ತಪ್ಪು ಮಾಡುವ ಚಿಕ್ಕವರು, ಮಾತಾಡುವಾಗ ಮತ್ತು ಮಾತಾಡಿದ್ದನ್ನು ಕೇಳಿ ಅರಿತುಕೊಳ್ಳುವಾಗ ತಪ್ಪುಗಳನ್ನು ಮಾಡುವುದಿಲ್ಲ ಎನ್ನುವುದನ್ನು ಗುರುತಿಟ್ಟುಕೊಳ್ಳುವುದು ಒಳಿತು. ಆಗ ನಾವು ಈ ತಪ್ಪುಗಳನ್ನು ನೋಡುವ ನೆಲೆಯಲ್ಲೇ ಬದಲಾವಣೆಗಳಾಗುತ್ತವೆ.

### ಅಕಸ್ಮಾತ್-ಅಪಘಾತ

ಬಡಕಪ್ಪನವರ.ಆರ್.ಎಂ (ಕು.ಮಲ್ಲೂರ,ಹಾವೇರಿ) ಇವರು ಚಲನಚಿತ್ರವೊಂದರಲ್ಲಿ ತಾವು ಕೇಳಿದ ವಾಕ್ಯವೊಂದನ್ನು ಬರೆದು 'ಈ ವಾಕ್ಯ ಸರಿಯಾದ ಅರ್ಥ ನೀಡುವುದೇ?' ಎಂದು ಕೇಳಿದ್ದಾರೆ. ಅವರು ಕೇಳಿಸಿಕೊಂಡ ವಾಕ್ಯ ಹೀಗಿದೆ. **'ವಂಚಕ ಅಪಘಾತದಲ್ಲಿ ಪೋಲಿಸರಿಗೆ ಸಿಕ್ಕುಬಿದ್ದಿದ್ದಾನೆ'** ಈ ವಾಕ್ಯವನ್ನು ಚಲನಚಿತ್ರದಲ್ಲಿ ವಾರ್ತಾವಾಚಕಿಯೊಬ್ಬರು ಓದಿ ಹೇಳುತ್ತಾರಂತೆ. ವಂಚಕ **ಅಕಸ್ಮಾತ್ತಾಗಿ** ಪೋಲಿಸರಿಗೆ ಸಿಕ್ಕಿದ್ದಾನೆ ಎಂಬುದು ವಾಕ್ಯದ ತಿರುಳು ಇದ್ದೀತು. (**ಪೋಲಿಸರಿಗೆ ಸಿಕ್ಕು ಬೀಳುತ್ತಾರೋ** ಇಲ್ಲವೇ **ಪೋಲಿಸರ ಕೈಗೆ ಸಿಕ್ಕುಬೀಳುತ್ತಾರೊ** ಎಂಬುದು ಇನ್ನೊಂದು ಗೋಜಲು. ಅದು ಹಾಗಿರಲಿ) **ಅಕಸ್ಮಾತ್** ಎಂದು ಹೇಳುವ ಬದಲು **ಅಪಘಾತ** ಎಂದು ಹೇಳಿದ್ದೇಕೆ? ಇವೆರಡೂ ಪದಗಳ ತಿರುಳು ಒಂದೇ ಅಲ್ಲ. **ಆಕ್ಸಿಡೆಂಟಲಿ** ಎಂದು ಇಂಗ್ಲಿಶಿನಲ್ಲಿ ಹೇಳುವಾಗ ಅದನ್ನು **ಅಕಸ್ಮಾತ್ತಾಗಿ** ಎಂದು ಅನುವಾದಿಸಬೇಕೇ ಹೊರತು **ಅಪಘಾತದಲ್ಲಿ** ಎಂದಲ್ಲ. ಆಕ್ಸಿಡೆಂಟ್ ಪದಕ್ಕೆ ಅಪಘಾತ ಎಂಬ ರೂಪ ಕನ್ನಡದಲ್ಲಿ ಬಳಕೆಯಲ್ಲಿ ಇದೆಯಾದರೂ ಈ ಸಂದರ್ಭದಲ್ಲಿ ಅದು ತಕ್ಕ ಪದವಲ್ಲ; ಅಕಸ್ಮಾತ್ ಎಂದೇ ಬಳಸಬೇಕು.

### ನೋಂದಣಿ ಮತ್ತು ನೊಂದಣಿ

**ಕುಮಾರಸ್ವಾಮಿ.ಸಿ.ಎಚ್** (ಕೊಂಡಜ್ಜಿ, ತುಮಕೂರು ಜಿಲ್ಲೆ) ಇವರು **ನೋಂದಣಿ** ಮತ್ತು **ನೊಂದಣಿ** ಇವುಗಳಲ್ಲಿ ಯಾವುದು ಸರಿಯಾದ ಬರೆಹರೂಪ ಎಂದು ಕೇಳಿದ್ದಾರೆ. ಈ ಪದ ಕನ್ನಡದ್ದಲ್ಲ. ಪರ್ಸೋ-ಅರಾಬಿಕ್ ಮೂಲದ ಪದ. ಮರಾಠಿ ಇಲ್ಲವೇ ಉರ್ದು ಮೂಲಕ ಕನ್ನಡಕ್ಕೆ ಬಂದು ಸೇರಿದೆ. ಹೀಗೆ ಬೇರೆ ಭಾಷೆಗಳಿಂದ ಬಂದು ಸೇರಿದ ಪದಗಳ ಬರೆಹರೂಪವನ್ನು ಕನ್ನಡದ ಆಡುನುಡಿಯ ಮಾದರಿಗೆ ತಕ್ಕಂತೆ ಅಳವಡಿಸಿಕೊಳ್ಳಲಾಗುತ್ತದೆ. ಮೂಲಭಾಷೆಯಲ್ಲಿ ಯಾವ ರೀತಿ ನುಡಿಯುತ್ತಾರೆ ಎಂಬುದನ್ನು ತಿಳಿಯಲು ಎಷ್ಟೋವೇಳೆ ಸಾಧ್ಯವಾಗುವುದಿಲ್ಲ. ಅದರಲ್ಲೂ ಸ್ವರಗಳಲ್ಲಿ ಹ್ರಸ್ವ ಮತ್ತು ದೀರ್ಘ ಎಂಬ ವ್ಯತ್ಯಾಸವಿಲ್ಲದ ಭಾಷೆಗಳಿಂದ ಪದಗಳನ್ನು ಪಡೆದುಕೊಂಡಿದ್ದರಂತೂ ಈ ಗೋಜಲು ಇನ್ನಷ್ಟು ಜಟಿಲವಾಗುತ್ತದೆ. ಇಂತಹ ಕಡೆಗಳಲ್ಲಿ ಒಂದು ನಿಯಮವನ್ನು ಪಾಲಿಸುವುದು ಸರಿ. ಬೇರೆ ಭಾಷೆಯಿಂದ ಬಂದು ಸೇರಿದ ಪದಗಳಲ್ಲಿ ಯಾವುದಾದರೂ ಒಂದು ಸ್ವರ ದೀರ್ಘವೋ ಹ್ರಸ್ವವೋ ಎಂಬ ಅನುಮಾನವಿದ್ದರೆ ಮೊದಲ ಸ್ವರವನ್ನು ಮಾತ್ರ ದೀರ್ಘವೆಂದು ಪರಿಗಣಿಸಬೇಕು. ಮುಂದೆ ಬರುವ ಎಲ್ಲ ಸ್ವರಗಳನ್ನೂ ಹ್ರಸ್ವವಾಗಿಯೇ ಬರೆಯಬೇಕು. ಹೀಗಾಗಿ 'ನೋಂದಣಿ' ಎಂಬ ರೂಪ ಬರಹದಲ್ಲಿ ಸರಿಯಾದುದು. ಹೀಗೆಯೇ 'ಪೋಲಿಸ್(ಪೋಲೀಸ್ ಅಲ್ಲ)

ಕಾಲೆಜ್ (ಕಾಲೇಜ್ ಅಲ್ಲ) ಇಂಗ್ಲಿಶ್ (ಇಂಗ್ಲೀಶ್ ಅಲ್ಲ) ರೂಪಗಳನ್ನೂ ಬರಹದಲ್ಲಿ ಅಳವಡಿಸಿಕೊಳ್ಳುವುದು ಸರಿಯಾದೀತು.

**ಕಳೆದ ಎರಡು ತಿಂಗಳ ಹಿಂದೆ**

ರಂಗಕರ್ಮಿ ಗೆಳೆಯ ರಘುನಂದನ್ (ಬೆಂಗಳೂರು) ಕನ್ನಡ ಬರವಣಿಗೆಯಲ್ಲಿರುವ ಕೆಲವು ಗೋಜಲುಗಳನ್ನು ನನ್ನ ಗಮನಕ್ಕೆ ತಂದಿದ್ದಾರೆ. **'ಕಳೆದ ಎರಡು ತಿಂಗಳ ಹಿಂದೆ ನಾನು ಅವರನ್ನು ಭೇಟಿಯಾಗಿದ್ದೆ.'** ಈ ವಾಕ್ಯದಲ್ಲಿ **ಕಳೆದ ಎರಡು ತಿಂಗಳ ಹಿಂದೆ** ಎನ್ನುವ ರಚನೆ ಸರಿಯೇ ಎನ್ನುವುದು ಅವರ ಪ್ರಶ್ನೆ. ಈ ಬಗೆಯ ವಾಕ್ಯಗಳು ಕನ್ನಡ ಓದುವವರಿಗೆ ಪರಿಚಿತವೇ ಆಗಿರುತ್ತವೆ. ಇಂತಹ ಕಡೆಗಳಲ್ಲಿ **ಎರಡು ತಿಂಗಳ ಹಿಂದೆ** ಎಂದು ಹೇಳಿದರೆ ಸಾಕು. **ಕಳೆದ ವಾರವೆಲ್ಲ ಬಿಡದೆ ಮಳೆ ಸುರಿಯಿತು** ಮತ್ತು **ಕಳೆದ ವಾರದ ಹಿಂದೆ ಮಳೆ ಸುರಿಯಿತು** ಎಂಬ ವಾಕ್ಯಗಳನ್ನು ಗಮನಿಸಿ. **ಕಳೆದ** ಎಂಬುದು ಮೊದಲ ವಾಕ್ಯದಲ್ಲಿ ಬೇಕು. ಮಳೆ ಇಡೀ ವಾರ ಸುರಿಯಿತು ಎನ್ನುವುದನ್ನು ಅಲ್ಲಿ ಸೂಚಿಸಲಾಗಿದೆ. ಆದರೆ ಎರಡನೆಯ ವಾಕ್ಯದಲ್ಲಿ **ಕಳೆದ** ಬೇಡ. ಏಕೆಂದರೆ ವಾರವಿಡೀ ಮಳೆ ಸುರಿದ ಬಗೆಗೆ ಅಲ್ಲಿ ಹೇಳುತ್ತಿಲ್ಲ.

ಹೀಗಿದ್ದರೂ ಕಳೆದ ಎರಡು ತಿಂಗಳ ಹಿಂದೆ ಮಾದರಿಯ ರಚನೆಗಳು ಏಕೆ ಕನ್ನಡದಲ್ಲಿ ಕಾಣಿಸಿಕೊಳ್ಳುತ್ತಿವೆ? ಕನ್ನಡ ಬರವಣಿಗೆಯಲ್ಲಿ ಇಂಗ್ಲಿಶ್ ಭಾಷೆಯ ರಚನೆಯ ಪ್ರಭಾವ ಆಗುತ್ತಿರುವುದನ್ನು ಗಮನಿಸಿ ಕೆಲವು ಮಾತುಗಳನ್ನು ಬರೆದಿದ್ದೇನೆ. ಈ ಮೇಲಿನ ರಚನೆಯಲ್ಲೂ ಕೂಡ ಹೀಗೆ ಇಂಗ್ಲಿಶ್ ರಚನೆಯನ್ನು ಕನ್ನಡದಲ್ಲಿ ಅನುವಾದಿಸಿದಾಗ ಆಗುವ ಪರಿಣಾಮ.(ಕೊನೆಯ ಪಕ್ಷ ಭಾರತೀಯ ಇಂಗ್ಲಿಶ್ ರಚನೆಗಳ ಪರಿಣಾಮ ಎನ್ನೋಣ) **ಲಾಸ್ಟ್** ಎಂಬ ಇಂಗ್ಲಿಶ್ ಪದವನ್ನು ಕಳೆದ ಎಂದು ಕನ್ನಡದಲ್ಲಿ ಹೇಳುವುದೇನೋ ಸರಿ. ಆದರೆ ಅದನ್ನು ಹೇಗೆ ಕನ್ನಡದಲ್ಲಿ ಬಳಸಬೇಕು ಎನ್ನುವಾಗ ಮಾತ್ರ ಕನ್ನಡ ವಾಕ್ಯರಚನೆಯ ಕಟ್ಟುಗಳನ್ನು ಅನುಸರಿಸುವುದು ಸರಿಯಾದ ಹಾದಿ.

**ಎನ್ನುತ್ತೇವೆ–ಎನ್ನಬಹುದು**

ನಾಗೇಂದ್ರಪ್ಪ.ಬಿ (ಬಳ್ಳಾರಿ) ಇವರು ಕನ್ನಡ ಬರವಣಿಗೆಯಲ್ಲಿ ಕಾಣಸಿಗುವ ವಾಕ್ಯರಚನೆಯ ಬಗೆಯೊಂದನ್ನು ಕುರಿತು ಪ್ರಶ್ನೆ ಕೇಳಿದ್ದಾರೆ. ' ಬೆನ್ನುಮೂಳೆ ಇರುವ ಪ್ರಾಣಿಗಳನ್ನು ಕಶೇರುಕಗಳು **ಎನ್ನುತ್ತೇವೆ'** ಮತ್ತು 'ಬೆನ್ನು ಮೂಳೆ ಇರುವ ಪ್ರಾಣಿಗಳನ್ನು ಕಶೇರುಕಗಳು **ಎನ್ನಬಹುದು'** ಇಲ್ಲಿ **ಎನ್ನುತ್ತೇವೆ/ ಎನ್ನಬಹುದು** ಎಂಬ ಪದಗಳನ್ನು ಬಳಸಲಾಗಿದೆ. ಇವುಗಳಲ್ಲಿ ಯಾವುದು ಸರಿ ಎನ್ನುವುದು ಪ್ರಶ್ನೆ. ಈ ವಾಕ್ಯಗಳನ್ನು ಹೀಗೂ ಬರೆಯುವುದುಂಟು. 'ಬೆನ್ನುಮೂಳೆ ಇರುವ ಪ್ರಾಣಿಗಳಿಗೆ ಕಶೇರುಕಗಳು **ಎಂದು ಹೆಸರು'** ಮತ್ತು 'ಬೆನ್ನುಮೂಳೆ ಇರುವ ಪ್ರಾಣಿಗಳನ್ನು ಕಶೇರುಕಗಳು **ಎಂದು ಕರೆಯುತ್ತೇವೆ'** ಈ ಎಲ್ಲ ವಾಕ್ಯಗಳೂ ಹೇಳುತ್ತಿರುವ ತಿರುಳು ಒಂದೇ ಆದರೂ ಹೇಳುವ ಬಗೆಯಲ್ಲಿ ಬದಲಾವಣೆ ಇದೆ. ಹಾಗೆ ನೋಡಿದರೆ **'ಬೆನ್ನುಮೂಳೆ ಇರುವ ಪ್ರಾಣಿಗಳೇ ಕಶೇರುಕಗಳು'**ಎನ್ನುವುದೇ ಸರಿಯಾದ ರಚನೆ. ಆದರೆ ಕನ್ನಡ ಬರವಣಿಗೆಯಲ್ಲಿ ಕೆಲವೊಮ್ಮೆ

'ವಿಷಯ ಪ್ರಸ್ತಾಪ' ಮಾಡುವ ವಾಕ್ಯಗಳ ಕೊನೆಗೆ ಹೀಗೆ ಹೆಚ್ಚಿನ ಪದಗಳನ್ನು ಸೇರಿಸುವುದುಂಟು. ಇದು ಎಲ್ಲ ಕಡೆಯೂ ಬೇಕಿಲ್ಲ. ಕೆಲವೊಮ್ಮೆ ನಾವು ಪ್ರಸ್ತಾಪಿಸುತ್ತಿರುವ ವಿಷಯದ ಬಗೆಗೆ ಸಂದೇಹ, ಪೂರ್ಣ ಖಚಿತತೆ ಇಲ್ಲದಿದ್ದಾಗ ಹೀಗೆ ಹೆಚ್ಚಿನ ಪದಗಳನ್ನು ಸೇರಿಸಿ ಹೇಳಬೇಕಾಗುತ್ತದೆ.'ಶ್ರೀಯುತರಿಗೆ ಚುನಾವಣೆಯಲ್ಲಿ ಗೆಲುವು ಖಚಿತ' ಎನ್ನುವುದಕ್ಕೂ 'ಶ್ರೀಯುತರಿಗೆ ಚುನಾವಣೆಯಲ್ಲಿ ಗೆಲುವು ಖಚಿತ ಎನ್ನಬಹುದು' ಎನ್ನುವುದಕ್ಕೂ ಇರುವ ವ್ಯತ್ಯಾಸವನ್ನು ನೋಡಿ. ಕನ್ನಡ ಬರವಣಿಗೆಯನ್ನು ತಿದ್ದಿಕೊಳ್ಳುವವರು ಈ ಸಂಗತಿಯನ್ನು ಗಮನಿಸುವುದು ಒಳ್ಳೆಯದು.

### ನಿಷಿದ್ಧ-ನಿಷೇಧ

**ನಿಷಿದ್ಧ** ಮತ್ತು **ನಿಷೇಧ** ಎಂಬ ಪದಗಳ ಬಳಕೆಯಲ್ಲಿ ಇರುವ ವ್ಯತ್ಯಾಸವನ್ನು ತಿಳಿಸಲು ಗೆಳೆಯರೊಬ್ಬರು ಕೇಳಿದ್ದಾರೆ. ಇವೆರಡೂ ಸಂಸ್ಕೃತದಿಂದ ಬಂದು ಕನ್ನಡದಲ್ಲಿ ಸೇರಿಕೊಂಡಿರುವ ಪದಗಳು. ಮೊದಲನೆಯದು ಗುಣಪದ. ಎರಡನೆಯದು ನಾಮಪದವಾಗಿ ಬಳಕೆಯಲ್ಲಿದೆ. ಸಂಸ್ಕೃತದಿಂದ ಬಂದು ಸೇರಿರುವ ಗುಣಪದಗಳು ಕನ್ನಡದಲ್ಲಿ ಕೆಲವೊಮ್ಮೆ ನಾಮಪದದಂತೆಯೂ ಕೆಲಸ ಮಾಡುತ್ತವೆ. ಈ ಪದಗಳ ಬಳಕೆಯಲ್ಲಿ ಇದರಿಂದಾಗಿ ಗೊಂದಲವಿದೆ. **ನಿಷಿದ್ಧಕ್ಕೆ** ಬದಲು **ನಿಷೇಧಿತ** ಎಂಬ ರೂಪವನ್ನೂ ಅಲ್ಲಲ್ಲಿ ಬಳಸುವುದನ್ನು ಕಾಣುತ್ತೇವೆ. ಉದಾ. ನಿಷಿದ್ಧ ಸಂಘಟನೆ/ನಿಷೇಧಿತ ಸಂಘಟನೆ. ಆದರೆ ನಿಷಿದ್ಧ ಮತ್ತು ನಿಷೇಧ ಪದಗಳನ್ನು ಅದಲು ಬದಲು ಮಾಡಲು ಬರುವುದಿಲ್ಲ. **ಪ್ರವೇಶ ನಿಷಿದ್ಧ** ಎನ್ನಬಹುದೇ ಹೊರತು **ಪ್ರವೇಶ ನಿಷೇಧ** ಎಂದು ಹೇಳಲಾಗದು. ಎರಡನೆಯ ರಚನೆ ಪೂರ್ಣವಾಗಿಲ್ಲ. ಪ್ರವೇಶ ನಿಷೇಧ ಎಂದಷ್ಟೇ ಹೇಳಿದರೆ ಏನೂ ತಿಳಿಯುವುದಿಲ್ಲ. ನಿಷೇಧಿಸಲಾಗಿದೆ ಎಂದು ಹೇಳಿದರೆ ಸರಿಯಾಗುವುದು. ಇಲ್ಲಿ ನಿಷೇಧ ಪದಕ್ಕೆ ಇಸು ಪ್ರತ್ಯಯವನ್ನು ಸೇರಿಸಿ ಕ್ರಿಯಾಪದ ರೂಪವನ್ನು ಪಡೆಯಲಾಗಿದೆ. ಕನ್ನಡದಲ್ಲಿ ಇಂತಹ ಹಲವು ರಚನೆಗಳನ್ನು ನೋಡುತ್ತೇವೆ. ಉದಾ. ಆನಂದಿಸು, ಸುಃಖಿಸು, ಹರ್ಷಿಸು, ಚಿತ್ರಿಸು, ರೂಪಿಸು, ಧ್ಯಾನಿಸು ಮುಂತಾದವು. ಈಚೆಗೆ ಕನ್ನಡದಲ್ಲಿ ನಿಷಿದ್ಧಗೊಳ್ಳು (ನಿಷೇಧಗೊಳ್ಳು ಎಂಬುದರ ಬದಲಿಗೆ) ಎಂಬ ರಚನೆ ಬಳಕೆಯಲ್ಲಿ ಕಾಣುತ್ತಿದೆ. ಇದು ಸರಿಯಾದುದಲ್ಲ. ಆದರೆ ಸಂಸ್ಕೃತದಿಂದ ಬಂದ ಈ ಗುಣಪದಗಳು ನಾಮಪದಗಳಾಗಿಯೂ ಬಳಕೆಯಾಗುತ್ತಿರುವುದರಿಂದ ಹೀಗೆ ನಿಷಿದ್ಧಗೊಳ್ಳು, ಸ್ವೀಕೃತಗೊಳ್ಳು(ಸ್ವೀಕಾರಗೊಳ್ಳು ಎಂಬುದರ ಬದಲು), ಚಿತ್ರಿತಗೊಳ್ಳು (ಚಿತ್ರಣಗೊಳ್ಳು ಎಂಬುದರ ಬದಲು) ಮಾದರಿಯ ರಚನೆಗಳು ಕನ್ನಡ ಬರವಣಿಗೆಯಲ್ಲಿ ನೆಲೆ ಪಡೆಯುತ್ತಿವೆ.

### ಡ್ರಾನತ್ತ-ಡ್ರಾದತ್ತ

ದಿನಪತ್ರಿಕೆಯೊಂದರ ಕ್ರಿಡಾಪುಟದಲ್ಲಿ ಕಂಡ ತಲೆಬರಹ : **'ನೀರಸ ಡ್ರಾನತ್ತ ದೆಹಲಿ ಟೆಸ್ಟ್'** ಡ್ರಾ ಎಂಬುದು ಇಂಗ್ಲಿಶಿನಿಂದ ಕನ್ನಡಕ್ಕೆ ಬಂದು ಸೇರಿರುವ ಪದ. ಇದು ಆ ಎಂಬ ಸ್ವರದಿಂದ ಕೊನೆಯಾಗುತ್ತಿದೆ. ಹೀಗೆ ಆ ಸ್ವರದಿಂದ ಕೊನೆಯಾಗುವ ಪದಗಳು ಕನ್ನಡದಲ್ಲಿ ಇಲ್ಲ(ಇಂಗ್ಲಿಶಿನಲ್ಲೂ ಕಡಿಮೆ). ಇಂತಹ ಪದಗಳಿಗೆ ಸ್ವರದಿಂದ ಮೊದಲಾಗುವ

ಪದಗಳನ್ನು ಸೇರಿಸುವಾಗ ಯಾವ ಬಗೆಯ ದನಿ ಬದಲಾವಣೆಗಳು ನಡೆಯುತ್ತವೆ ಎನ್ನುವುದಕ್ಕೆ ನಮ್ಮ ವ್ಯಾಕರಣಗಳಲ್ಲಿ ಪರಿಹಾರಗಳಿಲ್ಲ. ಈಗ ಮಾತಿನಲ್ಲಿ ಮತ್ತು ಬರಹದಲ್ಲಿ ಇಂತಹ ಪದಗಳನ್ನು ಹೇಗೆ ಬಳಸುತ್ತಿದ್ದೇವೆ ಎಂಬುದನ್ನು ನೋಡೋಣ. **ಸಿನಿಮಾದಲ್ಲಿ, ಕ್ಯಾಮೆರಾದಲ್ಲಿ, ಅಮೆರಿಕಾದಲ್ಲಿ, ಪ್ಲಾಜಾದಿಂದ, ಗಯಾದಿಂದ, ಕೋಮಾದಲ್ಲಿ** ಮುಂತಾದ ರಚನೆಗಳನ್ನು ನೋಡಿದರೆ ಆಕಾರದಿಂದ ಕೊನೆಯಾಗುವ ಪದಗಳಿಗೆ ಸ್ವರದಿಂದ ಮೊದಲಾಗುವ ಪದಗಳು ಸೇರಿದಾಗ ಯಾವ ಬಗೆಯ ದನಿ ಬದಲಾವಣೆಯಾಗುವುದೆಂದು ಗೊತ್ತಾಗುತ್ತಿದೆ. ಇಲ್ಲೆಲ್ಲಾ ಮೊದಲು ಆಕಾರಾಂತ ಪದಗಳಿಗೆ ದ್ ದನಿ ಸೇರಿ ಬಳಿಕ ಸ್ವರದಿಂದ ಮೊದಲಾಗುವ ಪದಗಳು ಸೇರುತ್ತಿವೆ. ಹಾಗಾಗಿ ಮೇಲೆ ಹೇಳಿದ ತಲೆಬರಹದಲ್ಲಿ ಡ್ರಾದತ್ತ ಎಂಬ ರೂಪ ಇರಬೇಕೇ ಹೊರತು ಡ್ರಾನತ್ತ ಅಲ್ಲ. ಒಂದು ವೇಳೆ ಡ್ರಾ ಎಂಬುದು ಪುಲ್ಲಿಂಗ ರೂಪವೆಂದು ತಿಳಿದಿದ್ದರೆ ಮಾತ್ರ ಆಗ ಡ್ರಾನತ್ತ ಎಂಬುದು ಸರಿಯಾಗುತ್ತದೆ. ಉದಾ.ಗೆ ನೋಡಿ: ಒಸಾಮಾನಲ್ಲಿ, ಒಬಾಮಾನಿಂದ, ರಾಣಾನತ್ತ ಮುಂತಾದ ರೂಪಗಳು. ಈ ರಚನೆಗಳಲ್ಲಿ ಮೊದಲ ಪದಗಳು ಆಕಾರಾಂತ ಮಾತ್ರವಲ್ಲದೆ ಅವೆಲ್ಲವೂ ಪುಲ್ಲಿಂಗ ರೂಪಗಳು. ಆದರೆ ಡ್ರಾ ಹಾಗಲ್ಲ ತಾನೇ?

**ಶಕಟರೇಫೆ ಮತ್ತು ರಳ**

ಪಂಚಪ್ಪ.ಡಿ.( ಬೆಂಗಳೂರು) ಹಳಗನ್ನಡದಲ್ಲಿ ಬಳಕೆಯಲ್ಲಿದ್ದ ಶಕಟರೇಫೆ ಮತ್ತು ರಳ ಎಂಬ ದನಿಗಳ ಬಗೆಗೆ ಒಂದು ಸಂದೇಹವನ್ನು ಮುಂದಿಟ್ಟಿದ್ದಾರೆ. ಇವು ಯಾವಾಗ ಕನ್ನಡದ ಬಳಕೆಯಿಂದ ಮರೆಯಾದವು ಎನ್ನುವುದು ಅವರ ಪ್ರಶ್ನೆ. ಜನರು ಕನ್ನಡವನ್ನು ಹೇಗೆ ಮಾತಾಡುತ್ತಿದ್ದರು ಎಂಬುದಕ್ಕೆ ನಮ್ಮಲ್ಲಿ ನೇರ ದಾಖಲಾತಿಗಳಿಲ್ಲ. ಬರಹ ರೂಪದ ದಾಖಲೆಗಳನ್ನು ನೋಡಿ ಕೆಲವು ಊಹೆಗಳನ್ನು ಮಾಡಬೇಕಾಗುತ್ತದೆ. ನಡುಗನ್ನಡ ಎಂದು ಗುರುತಿಸಲಾಗುವ ಕನ್ನಡದ ಪ್ರಭೇದ ನೆಲೆಗೊಳ್ಳುವ ಹೊತ್ತಿಗೆ ಜನರ ಉಚ್ಚಾರಣೆಯಿಂದ ಈ ಎರಡೂ ದನಿಗಳು ಕಳೆದುಹೋಗಿದ್ದವು. ಏಕೆಂದರೆ ಆ ಬಳಿಕ ಮೈದಳೆದ ಕನ್ನಡ ಬರಹರೂಪಗಳಲ್ಲಿ ಈ ಎರಡೂ ದನಿಗಳು ಇಲ್ಲವಾಗುವುದನ್ನು ಗಮನಿಸಬಹುದು. ಆದರೆ ಕೆಲವು ಬರೆಹಗಾರರು, ಜನರು ತಮ್ಮ ನುಡಿಯುವ ಬಗೆಯಿಂದ ಕೈಬಿಟ್ಟಿದ್ದ ಈ ಎರಡೂ ದನಿಗಳನ್ನು ಬರೆವಣಿಗೆಯಲ್ಲಿ ಉಳಿಸಿಕೊಳ್ಳಲು ಮುಂದಾಗಿದ್ದಾರೆ, ಅವರ ಬರೆಹಗಳಲ್ಲಿ (ಕಾವ್ಯ ಮತ್ತು ಕಾವ್ಯದ ಹಸ್ತಪ್ರತಿಗಳಲ್ಲಿ) ಈ ಎರಡೂ ದನಿಗಳು ಅಲ್ಲಲ್ಲಿ ದಾಖಲಾಗುತ್ತಲೇ ಇದ್ದವು. ಆದರೆ ಹತ್ತೊಂಬತ್ತನೆಯ ಶತಮಾನದ ಹೊತ್ತಿಗೆ ಬರೆಹಗಾರರು ಕೂಡ ತಮ್ಮ ಹಠವನ್ನು ಬಿಟ್ಟುಕೊಟ್ಟರು. ಈಗ ಈ ದನಿಗಳನ್ನು ತಮ್ಮ ಬರೆಹಗಳಲ್ಲಿ ಯಾರೂ ಬಳಸುವುದಿಲ್ಲ. ಆದರೆ ಹಳೆಯ ಕಾವ್ಯಗಳನ್ನು ಮುದ್ರಿಸುವಾಗ ಅವುಗಳಲ್ಲಿ ಈ ದನಿಗಳಿದ್ದ ಪದಗಳನ್ನು ಹಾಗೆಯೇ ಮುದ್ರಿಸುವ ಪರಿಪಾಟವಿದೆ. ಅದಕ್ಕಾಗಿ ಕಂಪ್ಯೂಟರ್‌ಗಳ ಕೀಲಿಮಣೆಗಳಲ್ಲೂ ಈ ಎರಡೂ ದನಿಗಳನ್ನು ಅಚ್ಚಿಸಲು ಅನುಕೂಲ ಮಾಡಿಕೊಡಲಾಗಿದೆ. ಆದ್ದರಿಂದ ಜನರ ಮಾತಿನಿಂದ ಈ ಎರಡೂ ದನಿಗಳು ಹನ್ನೆರಡನೆಯ ಶತಮಾನದ ಹೊತ್ತಿಗೆ ಕಳೆದುಹೋಗಿದ್ದವಾದರೂ ಬರಹರೂಪಗಳಲ್ಲಿ ಅಲ್ಲಿ ಕಾಣಿಸಿಕೊಳ್ಳುವುದು ಹತ್ತೊಂಬತ್ತನೆಯ ಶತಮಾನದವರೆಗೂ ಮುಂದುವರೆಯಿತು.

**ಭಾಷೆಯ ಬಗೆಗೆ ತಿಳುವಳಿಕೆಯನ್ನು ಪರೀಕ್ಷಿಸುವಾಗ ತೊಂದರೆಗಳು**

ಭಾಷೆಯ ಬಗೆಗೆ ತಿಳುವಳಿಕೆ ಕೊಡುವ ಆಕರಗಳಲ್ಲಿ ಸಿಗುವ ಮಾಹಿತಿಯನ್ನು ಓದಿದವರು ಸರಿ ಎಂದು ತಿಳಿಯುತ್ತಾರೆ. ಒಂದು ಪದದ ತಿರುಳೇನು ಎಂಬುದನ್ನು ತಿಳಿಯಲು ಪದಕೋಶವನ್ನು ನೋಡುತ್ತೇವೆ. ಅದರಲ್ಲಿ ಕೊಟ್ಟಿರುವ ಮಾಹಿತಿಯನ್ನು ಒಪ್ಪುತ್ತೇವೆ. ಹಾಗೆಯೇ ಅದನ್ನು ಬಳಸುತ್ತೇವೆ. ಹೀಗೆ ತಿಳುವಳಿಕೆಯನ್ನು ಕೊಡುವ ಮತ್ತು ಅಂತಹ ತಿಳುವಳಿಕೆಯನ್ನು ಪರೀಕ್ಷಿಸುವ ಆಕರಗಳಲ್ಲಿ ಗೊಂದಲಗಳಿದ್ದರೆ ಓದುವವರ ಸಮಸ್ಯೆ ಹೆಚ್ಚಾಗುತ್ತದೆ. ಉದಾಹರಣೆಗೆ ಕನ್ನಡ ಭಾಷೆಯ ತಿಳುವಳಿಕೆಯನ್ನು ಪರೀಕ್ಷಿಸುವ ಸರಕಾರದ ಪರೀಕ್ಷೆಗಳನ್ನು ಗಮನಿಸಿ. ಇವು ಭಾಷೆಯ ಯಾವ ನೆಲೆಯ ತಿಳುವಳಿಕೆಯನ್ನು ಪರೀಕ್ಷಿಸುತ್ತಿವೆ ಎನ್ನುವುದೇ ಗೊತ್ತಾಗುವಂತಿಲ್ಲ. ರಾಮೇಗೌಡ (ಕಗ್ಗಲಿ) ಇವರು ಕೇಳಿರುವ ಪ್ರಶ್ನೆಯೊಂದು ಇಂತಹ ಗೊಂದಲಕ್ಕೆ ಸಂಬಂಧಿಸಿದೆ. **ಗಿಡಗಂಟಿ** ಎನ್ನುವ ಪದರಚನೆಯಲ್ಲಿ **ಗಂಟಿ** ಎನ್ನುವುದು ಏನು ಎಂದು ಪ್ರಶ್ನೆ ಕೇಳಲಾಗಿದೆ. ಪರೀಕ್ಷಕರು ಬಯಸುತ್ತಿರುವ ಉತ್ತರ ಇದೊಂದು 'ವಿಶಿಷ್ಟಾಕೃತಿವಾ' ಎಂಬುದಾಗಿದೆಯಂತೆ. ಹೌದೇ ಎಂದು ಶ್ರೀಯುತರು ಕೇಳಿದ್ದಾರೆ. ಭಾಷಾಶಾಸ್ತ್ರವನ್ನು ವಿಶೇಷವಾಗಿ ಓದಿದವರೂ ಕೂಡ ಈಗ ಈ ವಿಶಿಷ್ಟಾಕೃತಿಮಾ ಎನ್ನುವ ಪರಿಭಾಷೆಯನ್ನು ಬಳಸುತ್ತಿಲ್ಲ. ಇನ್ನು ಪ್ರಾಥಮಿಕಶಾಲೆಯ ಉಪಾಧ್ಯಾಯರಿಂದ ಈ ಪರಿಭಾಷೆಯ ತಿಳುವಳಿಕೆಯನ್ನು ನಿರೀಕ್ಷಿಸುವುದು ಸರಿಯೇ? ಇಷ್ಟಕ್ಕೂ ಗಿಡಗಂಟಿ ಎನ್ನುವುದು ಒಂದು ಜೋಡಿಪದ. ಇದನ್ನು ಭಾಷಿಕರು ಇಡಿಯಾಗಿಯೇ ಕಲಿತಿರುತ್ತಾರೆ. ಇಂತಹ ಜೋಡುನುಡಿಗಳಲ್ಲಿರುವ ಎರಡನೆಯ ಪದಕ್ಕೆ ಕೆಲವೊಮ್ಮೆ ಬಿಡಿಯಾದ ಬಳಕೆ ಇರುವುದಿಲ್ಲ; ಹಾಗೆ ಬಿಡಿಯಾಗಿ ಬಳಸಿದರೂ ಅದು ಬೇರೆಯದೇ ತಿರುಳನ್ನು ಹೊಂದಿರುತ್ತದೆ. **ಸಾಲಸೋಲ, ಮನೆಮಾರು** ಇಂತಹ ರಚನೆಗಳನ್ನು ಗಮನಿಸಿ. ಗಿಡಗಂಟಿ(**ಗಿಡಗಂಟೆ** ಇದರ ಇನ್ನೊಂದು ರೂಪ) ರಚನೆಯಲ್ಲಿರುವ ಗಂಟಿ(ಗಂಟೆ) ಪದಕ್ಕೆ ಬೇರೆ ಬಳಕೆ ಇದೆ. ಗಂಟಿ ಎಂದರೆ ಕರಾವಳಿಯ ಕನ್ನಡದ ಒಂದು ಬಗೆಯಲ್ಲಿ ಕರೆಯುವ ಹಸು, ಗಂಟೆ ಎಂದರಂತೂ ಗೊತ್ತೇ ಇದೆ. ಆದರೆ ಗಿಡಗಂಟಿ ಎಂಬ ರಚನೆಯಲ್ಲಿ ಈ ತಿರುಳುಗಳು ಇಲ್ಲ. ಈ ತಿಳುವಳಿಕೆ ಭಾಷಿಕರಿಗೆ ಇರಬೇಕಾದ್ದು ಅಗತ್ಯವೇ ಹೊರತು ಪಾರಿಭಾಷಿಕ ಪದದ ಪರಿಚಯವಲ್ಲ.

**ದನಿಗಳನ್ನು ನುಡಿಯುವ ಬಗೆ/ಬರೆಯುವ ಬಗೆ**

ಕನ್ನಡ ಬರವಣಿಗೆಯಲ್ಲಿ ಕೆಲವೊಮ್ಮೆ ನಾವು ದನಿಗಳನ್ನು ನುಡಿಯುವ ಬಗೆಗೂ ಆ ದನಿಗಳನ್ನು ಬರೆಯುವ ಬಗೆಗೂ ತಾಳೆಯಾಗುವುದಿಲ್ಲ. ಸ್ವರಗಳ ಬಳಿಕ ಬರುವ **ರ್** ವ್ಯಂಜನವನ್ನು ನೋಡಿ. ನುಡಿಯುವಾಗ ಆ ಸ್ವರದ ಬಳಿಕ ನುಡಿದರೂ ಬರೆಯುವಾಗ ಆ ಸ್ವರದ ಬಳಿಕ ಬರುವ ವ್ಯಂಜನ ಮತ್ತು ಇನ್ನೊಂದು ಸ್ವರ ಬರೆದ ಮೇಲೆ ಬರೆಯುತ್ತೇವೆ. ಕರ್ತವ್ಯ ಎಂಬ ಪದವನ್ನು ನೋಡಿ. ಕಕಾರದ ಸ್ವರದ ಬಳಿಕ ರ್ ನುಡಿಯುತ್ತೇವೆ. ಆದರೆ ಬರೆಯುವಾಗ ಆ ಬಳಿಕ ಬರುವ ತಕಾರದ ಸ್ವರ ಆದಮೇಲೆ ಆ ರ್ ಕಾರದ ಗುರುತನ್ನು (ೠ) ಬರೆಯುತ್ತೇವೆ. ಬೇರೆ ಭಾಷೆಯನ್ನಾಡುವವರು ಕನ್ನಡವನ್ನು ಹೊಸದಾಗಿ ಕಲಿತು ಬರೆಯುವಾಗ ಅವರಿಗೆ ಇದು ಗೊಂದಲವನ್ನು

ತರುತ್ತದೆ. ಅವರು ಬರೆಯುವಾಗ ರ್ಕತವ್ಯ, ರ್ಸವೀಸ್ ಮುಂತಾಗಿ ಬರೆಯುವುದನ್ನು ನೋಡುತ್ತೇವೆ. ಎಂ.ಎನ್.ರೆಡ್ಡಿ( ಗಂಗಾನಗರ, ಬೆಂಗಳೂರು) ಇವರು ತಮ್ಮ ಕಂಪನಿಯ ಹೆಸರನ್ನು ನಿರ್ಸಗ ಎಂಟರ್ ಪ್ರೈಸಸ್ ಎಂದು ಇರಿಸುವುದರ ಜೊತೆಗೆ ಇದೇ ಸರಿಯಾದ ರೂಪ ಇರಬಹುದೆಂದೂ ತಿಳಿಯುತ್ತಾರೆ. ಹಾಗೆಂದು ಅವರ ಕಾಗದದಲ್ಲಿ ಬರೆದಿದ್ದಾರೆ. ಈ ಗೊಂದಲವನ್ನು ನಿವಾರಿಸಲು ರ್ ಕಾರದ ಗುರುತನ್ನು ಬರೆಯುವ ಇನ್ನೊಂದು ಬಗೆಯನ್ನು ಅನುಸರಿಸುವುದೇ ಸರಿಯಾದ ಹಾದಿ. ಆಗ ನಿಸರ್ಗ ಎಂದು ಬರೆಯಬೇಕಾಗುತ್ತದೆ.

**ಹೆಸರನ್ನು ವ್ಯಂಜನದಿಂದ ಕೊನೆಗೊಳಿಸಿ ನುಡಿಯುವುದೇಕೆ?**

ಚೆನ್ನಮಲ್ಲಪ್ಪಗೋಳ ಎಂ.ಎಸ್(ಚಾಂಗಲೇರ, ಬೀದರ್) ಇವರು 'ಹೆಸರು ಹೇಳುವ ಪದಗಳನ್ನು ನುಡಿಯುವಾಗ ವ್ಯಂಜನದಿಂದ ಕೊನೆಗೊಳಿಸಿ ನುಡಿಯುವುದೇಕೆ' ಎಂದು ಕೇಳಿದ್ದಾರೆ. ತರುಣ್, ಪ್ರಕಾಶ್, ವಿಕಾಸ್, ಈಶ್ವರ್ ಇಂತಹ ಹೆಸರುಗಳನ್ನು ಅವರು ಗಮನದಲ್ಲಿಟ್ಟುಕೊಂಡಿದ್ದಾರೆ. ಹೆಸರುಗಳನ್ನು ಹೀಗೆ ಹೇಳುವ ಮತ್ತು ಬರೆಯುವ ಬಗೆ ನೆಲೆಗೊಳ್ಳುತ್ತಿರುವುದನ್ನು ಸುಮ್ಮನೆ 'ಫ್ಯಾಶನ್' ಎಂದು ಗುರುತಿಸಿದರೆ ಸಾಲದು. ಹೀಗೆ ಮಾಡುತ್ತಿರುವುದರಲ್ಲಿ ಒಂದು ಅಚ್ಚುಕಟ್ಟಾದ ನಿಯಮವಿರುವಂತಿದೆ. ಹೆಸರುಗಳ ಕೊನೆಯ ಸ್ವರ ಅಕಾರವಾಗಿದ್ದರೆ ಮತ್ತು ಆ ಅಕಾರದ ಹಿಂದೆ ಒಂದೇ ವ್ಯಂಜನವಿದ್ದರೆ ಆಗ ಮಾತ್ರ ಆ ಹೆಸರನ್ನು ವ್ಯಂಜನದಿಂದ ಕೊನೆಗೊಳಿಸಿ ನುಡಿಯುವಂತಿದೆ. ರಾಮ ಎನ್ನುವುದು ರಾಮ್ ಎಂದಾಗಬಹುದು. ಆದರೆ ರಘು ಮತ್ತು ಚಂದ್ರ ಎಂಬ ಹೆಸರುಗಳು ರಘ್ ಮತ್ತು ಚಂದ್ರ್ ಎಂದಾಗುವುದಿಲ್ಲ. ಒಂದು ದಶಕದ ಹಿಂದಿನವರೆಗೂ ಗಂಡು ಮಕ್ಕಳ ಹೆಸರುಗಳನ್ನು ಮಾತ್ರ ಹೀಗೆ ವ್ಯಂಜನದಿಂದ ಕೊನೆಗೊಳಿಸುವುದನ್ನು ನೋಡುತ್ತಿದ್ದೆವು. ಈಗ ಎಲ್ಲ ಹೆಸರುಗಳಿಗೂ ಈ ನಿಯಮ ಹೊಂದುವಂತಿದೆ. ಹೆಸರಿನಲ್ಲಿ ಎರಡು ಭಾಗಗಳಿದ್ದರೆ ಆಗ ಎರಡೂ ಭಾಗಗಳನ್ನು ವ್ಯಂಜನದಿಂದ ಕೊನೆಗೊಳಿಸುತ್ತಾರೆ. ಅಲ್ಲಿಯೂ ಇದೇ ನಿಯಮ ಬಳಕೆಯಾಗುತ್ತದೆ. ಯಶ್‌ರಾಜ್, ಆನಂದ್‌ಕುಮಾರ್, ಮನ್‌ಮೋಹನ್ ಮುಂತಾದ ಹೆಸರುಗಳನ್ನು ನೋಡಿದರೆ ಆ ಹೆಸರುಗಳನ್ನು ಹೇಳುವಲ್ಲಿ ಈ ನಿಯಮ ಬಳಕೆಯಾಗಿರುವುದು ಗೊತ್ತಾಗುತ್ತದೆ. ಈ ನಿಯಮ ಊರಿನ ಹೆಸರುಗಳನ್ನು ಹೇಳುವಲ್ಲಿಯೂ ಬಳಕೆಯಾಗುತ್ತದೆ. ಬೀದರ್, ಮೈಸೂರ್, ಹಾಸನ್ ಸರಿ. ಆದರೆ ಮಂಡ್ಯ, ಶಿವಮೊಗ್ಗ (ಎರಡೂ ಹೆಸರುಗಳ ಕೊನೆಯಲ್ಲಿ ವ್ಯಂಜನದ್ವಿತ್ವವಿದೆ) ಕಲಬುರ್ಗಿ, ಉಡುಪಿಗಳನ್ನು (ಈ ಹೆಸರುಗಳ ಕೊನೆಯಲ್ಲಿ ಅಕಾರವಿಲ್ಲ) ವ್ಯಂಜನದಿಂದ ಕೊನೆಗೊಳಿಸಿ ನುಡಿಯುವುದಿಲ್ಲ.

**ಇದಿರು**

ಬ್ಯಾಕೋಡ್ ಆರ್.ಜಿ (ಬಿಜಾಪುರ) ಇವರು ಬಸವಣ್ಣನವರ ಒಂದು ವಚನದಲ್ಲಿ ಬರುವ 'ಇದಿರ ಹಳಿಯಲು ಬೇಡ' ಎನ್ನುವ ಸಾಲಿನ **ಇದಿರು** ಪದದ ತಿರುಳೇನು ಎಂದು ಕೇಳಿದ್ದಾರೆ. ಅವರು ನೋಡಿದ ಒಂದು ಪಠ್ಯಪುಸ್ತಕದಲ್ಲಿ ಇದಿರು ಎಂದರೆ ಸಮ್ಮುಖ, ಮುಂದೆ ಎಂಬ ಅರ್ಥವನ್ನು ನೀಡಿದ್ದಾರಂತೆ. ಇದು ಸರಿಯಾದರೆ

ಯಾರನ್ನಾದರೂ ಮುಂದೆ ಇರುವಾಗ ತೆಗಳಬಾರದು; ಆದರೆ ಅವರು ಎದುರಿಗೆ ಇಲ್ಲದಿದ್ದಾಗ ತೆಗಳಬಹುದು ಎಂದಾಗುವುದಿಲ್ಲವೇ ಎಂಬುದು ಇವರ ಅನಿಸಿಕೆ. ವಚನದ ಸಾಲಿನಲ್ಲಿ **ಇದಿರ** ಎಂಬ ರೂಪವನ್ನು **ಇದಿರನ್ನು** ಎಂದು ಪರಿಗಣಿಸಬೇಕು; **ಇದಿರಲ್ಲಿ** ಎಂದಲ್ಲ. ಈ ಸಾಲಿನಲ್ಲಿ ಬರುವ **ಇದಿರು** ಪದಕ್ಕೆ ಆಗದವರು ಎಂಬ ತಿರುಳಿದೆ. (**ಎದುರಾಳಿ** ಎಂಬ ಇಂದು ಬಳಕೆಯಲ್ಲಿರುವ ಪದವನ್ನು ನೆನಪು ಮಾಡಿಕೊಳ್ಳಿ. ಪದದ ಮೊದಲಿನ ಇಕಾರ ಎಕಾರವಾಗಿ ಬದಲಾವಣೆಯಾಗಿದ್ದು ತುಂಬಾ ಹಿಂದೆ. ಕನ್ನಡದಲ್ಲಿ ಕೆಲವು ರೂಪಗಳಲ್ಲಿ ಎರಡೂ ಸ್ವರಗಳು ಇರುವುದನ್ನು ನೋಡಬಹುದು. ಎರಡು ಮತ್ತು ಇಬ್ಬರು ಎಂಬೀ ಪದಗಳನ್ನು ನೋಡಿರಿ.) ವಚನದ ಆ ಸಾಲಿಗೆ 'ನಮಗೆ ಆಗದವರನ್ನು ಎಂದೂ ಹಳಿಯಬಾರದು' ಎಂಬ ತಿರುಳು ಸರಿ ಹೊಂದುವುದಲ್ಲವೇ?

### ಕಡೆ–ಕೊನೆ

ಗೆಳೆಯರೊಬ್ಬರು ಕನ್ನಡದಲ್ಲಿ ಬಳಕೆಯಾಗುವ **ಕಡೆ** ಮತ್ತು **ಕೊನೆ** ಪದಗಳ ತಿರುಳಿನಲ್ಲಿ ಏನಾದರೂ ವ್ಯತ್ಯಾಸವಿದೆಯೇ ಎಂದು ಕೇಳಿದರು. ಈ ಎರಡೂ ಪದಗಳು ಸಮಯ (ಉದಾ. ಕಡೆಗಾಲ. ಕೊನೆಗಾಲ) ಮತ್ತು ಜಾಗ (ಉದಾ. ಒಳಗಡೆ, ಕೊನೆಮನೆ) ಎಂಬ ಎರಡೂ ನೆಲೆಗಳಲ್ಲಿ ಬಳಕೆಯಾಗುತ್ತವೆ. ಒಂದರ ಬದಲು ಇನ್ನೊಂದನ್ನು ಬಳಸಿದರೆ ಹೆಚ್ಚುಕಡೆಗಳಲ್ಲಿ ತಿರುಳಿನಲ್ಲಿ ಬದಲಾವಣೆ ಆಗುವುದಿಲ್ಲ. ಎಣಿಸಿದರೂ ದಿಟವಾಗಿ ಕೆಲವು ಕಡೆ ಹಾಗಾಗದು. ಕಡೆ ಎನ್ನುವುದು ಕೆಲವೊಮ್ಮೆ ಬದಿ ಎನ್ನುವ ತಿರುಳನ್ನೂ ಪಡೆದುಕೊಳ್ಳುತ್ತದೆ. ಮನೆಯ ಬಲಗಡೆ ಎಂದಾಗ ಬಲಬದಿ ಎಂದು ತಿಳಿಯುತ್ತೇವೆ. ಆದರೆ ಮನೆಯ ಬಲಕೊನೆ ಎಂದು ಇಲ್ಲಿ ಹೇಳಲು ಬರುವುದಿಲ್ಲ. ಏಕೆಂದರೆ ಕೊನೆ ಎಂಬುದು ಹೆಚ್ಚಾಗಿ ತುದಿ ಎನ್ನುವ ತಿರುಳನ್ನು ಪಡದುಕೊಂಡೇ ಬಳಕೆಯಾಗುವ ಪದ. ಸಮಯ ಇಲ್ಲವೇ ಜಾಗದ ನಿರಂತರತೆಯಲ್ಲಿ **ಕೊನೆ** ಎನ್ನುವುದು ಒಂದು ತುದಿಯನ್ನು ಹೇಳುತ್ತದೆ. ಅಲ್ಲಿ **ಕಡೆ** ಎನ್ನುವ ತಿರುಳು ಹೊಂದಿಕೆಯಾಗದು. ಈ ಪದಗಳನ್ನು ಇಲ್ಲಿ ಚರ್ಚೆಗೆ ತೆಗೆದುಕೊಂಡದ್ದೇಕೆ? ಯಾವುದೇ ಪದಕ್ಕೆ ಬಳಕೆಯಿಂದ ತಿರುಳು ಇಂತಹುದೆಂದು ಗೊತ್ತಾಗುವುದೇ ಹೊರತು ಅದಕ್ಕೆ ಪದಕೋಶಗಳು ಕೊಡುವ ಅರ್ಥದಿಂದ ಇದು ತಿಳಿಯುವುದಿಲ್ಲ ಎನ್ನುವುದನ್ನು ನಾವು ಗಮನಿಸಬೇಕು.

### ತಾಳಿಕೊಳ್ಳುವ ಹಾದಿ

ಸೊಲ್ಲಾಪುರೆ, ಬಿ.ಎನ್( ಕಮಲನಗರ, ಬೀದರ್ ಜಿಲ್ಲೆ) ಇವರು 1941ರ 26ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರೊ.ಎ.ಆರ್.ಕೃಷ್ಣಶಾಸ್ತ್ರಿಗಳು ಹೇಳಿದ ಮಾತೊಂದನ್ನು ನೆನಪಿಸಿದ್ದಾರೆ. ಎಆರ್‌ಕೃ ಅವರು ತಮ್ಮ ಉಪನ್ಯಾಸದಲ್ಲಿ ಇಂಗ್ಲಿಶ್ ವಾಕ್ಯವೊಂದನ್ನು ನೀಡಿದ್ದಾರೆ. 58 ಪದಗಳಿರುವ ಆ ವಾಕ್ಯದಲ್ಲಿ ಅವರೇ ಹೇಳುವಂತೆ ಇಂಗ್ಲಿಶ್ ಅಲ್ಲದೆ 24 ಬೇರೆಬೇರೆ ಭಾಷೆಗಳಿಂದ ಇಂಗ್ಲಿಶ್‌ಗೆ ಬಂದು ಸೇರಿಕೊಂಡ ಪದಗಳಿವೆ. ಆ ವಾಕ್ಯವನ್ನು ಅವರು ಉದ್ಧರಿಸಿದ್ದರ ಗುರಿಯಿಷ್ಟೆ: ಇಂಗ್ಲಿಶ್ ತನ್ನೊಳಗೆ ಬಂದು ಸೇರಿದ ಬೇರೆ ನುಡಿಯ ಪದಗಳನ್ನು ಬೇಕಾದರೂ ತಾಳಿಕೊಳ್ಳುವ ಹಾದಿಯನ್ನು ಹಿಡಿದಿದೆ.

ಕನ್ನಡವೂ ಹಾಗೆ ಮಾಡಬೇಕೆಂದು ಹೇಳುವುದು. ಇದು ಸರಿಯೇ ಸರಿ. ಆದರೆ ಇಂಗ್ಲಿಶ್ ತಾನು ಹೀಗೆ ಪಡೆದುಕೊಂಡ ಪದಗಳನ್ನು ಬರೆಯುವಾಗ ಮತ್ತು ನುಡಿಯುವಾಗ ತನಗೆ ಸರಿಯಾದ ಹಾದಿಯನ್ನು ಹಿಡಿದಿದೆ. ಅಲ್ಲಿ ಯಾವ ರಾಜಿಯನ್ನೂ ಅದು ಮಾಡಿಕೊಂಡಿಲ್ಲ. ಕನ್ನಡವೂ ಹಾಗೇ ಮಾಡಬೇಕೆಂಬ ಬಗೆಗೆ ತಕರಾರುಗಳೇನೂ ಇರಲಾರವು. ಕನ್ನಡದಲ್ಲೂ ಬೇರೆಬೇರೆ ನುಡಿಗಳಿಂದ ಬಂದ ಪದಗಳನ್ನು ಕನ್ನಡಕ್ಕೆ ಹೊಂದಿಸಿಕೊಳ್ಳಲು ಹೆಚ್ಚಿನ ತೊಂದರೆಗಳಿಲ್ಲವಾದರೂ ಸಂಸ್ಕೃತದಿಂದ ಬಂದ ಪದಗಳನ್ನು ಮಾತ್ರ ಕೂದಲೆಳೆಯಷ್ಟು ಬದಲಾಯಿಸಿದರೂ ಭಾಷೆ ಕುಲಗೆಟ್ಟುಹೋಯಿತೆಂದು ತಿಳಿಯುವುದೇ ಹೆಚ್ಚು. ಹೀಗೆ ಯೋಚಿಸುವುದು ಬದಲಾಗಬೇಕು.

**ಮೂಗರ್ಜಿ**

ಗೋವಿಂದರಾಜ್.ಪಿ (ಶಿವಮೊಗ್ಗ) ಇವರು ಮೂಗರ್ಜಿ ಬರೆಯುವುದು ಎಂದರೇನು ಎಂದು ಕೇಳಿದ್ದಾರೆ. ಯಾರು ಬರೆದರೆಂಬ ವಿವರವನ್ನು ಮುಚ್ಚಿಟ್ಟು ಬರೆಯುವ ಅರ್ಜಿಗಳನ್ನು ಮೂಗರ್ಜಿಗಳೆಂದು ಹೇಳುವ ಬಗೆಯಿದೆ. ಅರ್ಜಿಗಳು ಮಾತಾಡುವುದಿಲ್ಲವಾದರೂ ಅದನ್ನು ಬರೆದವರ ಸಹಿ ಇಲ್ಲದಿರುವಾಗ ಆ ಅರ್ಜಿದಾರರ ವಿವರಗಳು ಗೊತ್ತಾಗುವಂತಿರುವುದಿಲ್ಲ. ಟೆಲಿಫೋನ್ ಮಾತುಕತೆಗಳಲ್ಲಿ ಇನ್ನೊಂದು ಕಡೆಯಿಂದ ಮಾತಾಡುವವರ ಗುರುತು ಗೊತ್ತಾಗದೇ ಹೋಗುವಂತಿದ್ದರೆ ಅಂತಹ ಕರೆಗಳನ್ನು ಬ್ಲ್ಯಾಂಕ್‌ಕಾಲ್ ಗಳೆಂದು ಹೇಳುವುದುಂಟು. ಇನ್ನೊಂದು ತುದಿಯಲ್ಲಿರುವವರು ಒಂದೋ ಮಾತಾಡುವುದಿಲ್ಲ ಇಲ್ಲವೇ ಮಾತಾಡಿದರೂ ತಾವು ಯಾರೆಂಬುದನ್ನು ಹೇಳುವುದಿಲ್ಲ. ಇವೂ ಮೂಗರ್ಜಿಯ ಹೊಸ ಅವತಾರಗಳು. ಮೂಗರ್ಜಿಗಳನ್ನು ಬರೆಯುವವರು ಕೆಲವೊಮ್ಮೆ ತಮ್ಮ ಚಹರೆಯನ್ನು ತೋರಿದರೆ ತಮಗೆ ತೊಂದರೆಯಾಗುವುದೆಂದು, ಅದನ್ನು ಬಚ್ಚಿಟ್ಟರೆ ಮತ್ತೆ ಕೆಲವೊಮ್ಮೆ ಬೇಜವಾಬ್ದಾರಿಗಳಾಗಿ, ಬೇಕೆಂದವರಿಗೆ ಮಸಿ ಬಳಿಯಲೆಂದೇ ಹಾಗೆ ಮಾಡುತ್ತಿರುತ್ತಾರೆ.

ನನಗೆ ಇದೇ ಮಾದರಿಯ ಎಸ್‌ಎಂಎಸ್ ಒಂದು ಬಂದಿತ್ತು. ಇದನ್ನು ಕಳುಹಿಸಿದವರ ಚರವಾಣಿ ಸಂಖ್ಯೆ ಮಾತ್ರ ಗೊತ್ತಾಗುವಂತಿದೆ. ಹೆಸರು ತಿಳಿಯದು.( ಅಂದಹಾಗೆ ಚರವಾಣಿಯನ್ನು ಕೆಲವರು ಜಂಗಮವಾಣಿ ಎನ್ನುವುದು ನಿಮಗೆ ತಿಳಿದಿರಬಹುದು. ಆದರೆ ಮುಧೋಳದ ಸಂಗಮೇಶ ಕಲ್ಯಾಣಿ ಎನ್ನುವವರು ಇದನ್ನು 'ಕೊಂಕಳದಾಗಿನ ಕೂಸು' ಎಂದು ಕರೆಯುತ್ತಾರೆಂಬುದು ಅವರ ಗುರುತಿನ ಕಾರ್ಡಿನಿಂದ ಗೊತ್ತಾಯಿತು) ಈ ಎಸ್‌ಎಂಎಸ್ ನಲ್ಲಿ 'ಗುಂಡುಹಾಕು' ಎಂಬ ಮಾತಿನ ಬಗ್ಗೆ ಬರೆಯಲು ಸೂಚಿಸಿದ್ದಾರೆ. ಈ ನುಡಿಯ ತಿರುಳನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಆದರೆ ಇಲ್ಲಿ ಬಳಕೆಯಾದ ಕ್ರಿಯಾಪದ ಹಾಕು ಎಂಬುದು ಕುತೂಹಲಕಾರಿಯಾಗಿದೆ. ಇದೇ ತಿರುಳನ್ನು ಹೊಂದಿದ ತಮಿಳು ಮತ್ತು ತೆಲುಗಿನ ನುಡಿಗಳಲ್ಲೂ ಗುಂಡು ಬದಲು ತಣ್ಣಿ(ನೀರು),ಮಂದು(ಔಷಧ) ಇದ್ದರೂ ಎರಡನೆಯ ಪದ ಮಾತ್ರ ಹಾಕು ಎನ್ನುವ ತಿರುಳನ್ನೇ ಹೊಂದಿದೆ. ಹಾಕು ಎಂಬುದು ಹೊಡೆ, ಕೊಡು, ಬಡಿ ಮಾದರಿಯ ಕ್ರಿಯಾಪದ. **ಈ ಕ್ರಿಯಾಪದಗಳಿಗೆ ಕೆಲಸ ಮಾಡುವವರು ಒಬ್ಬರಿದ್ದರೆ ಅದರ ಪರಿಣಾಮ ಉಂಟಾಗುವವರು** ಇನ್ನೊಬ್ಬರಿರುತ್ತಾರೆ. ಕೆಲಸ ಮಾಡುವವರ ಮೇಲೆಯೇ ಅದರ

ಪರಿಣಾಮವೂ ಆಗಬೇಕಿದ್ದರೆ ಆಗ ಈ ಕ್ರಿಯಾಪದಗಳಿಗೆ **ಕೊಳ್ಳು** ಎಂಬ ಪ್ರತ್ಯಯವನ್ನು ಹಚ್ಚಬೇಕು. ಗುಂಡುಹಾಕು ಎನ್ನುವಾಗ ಕೆಲಸ ಮಾಡುವ ವ್ಯಕ್ತಿ ಮತ್ತು ಅದರ ಪರಿಣಾಮವನ್ನು ಪಡೆಯುವ ವ್ಯಕ್ತಿ ಒಬ್ಬರೇ ಆಗದಿದ್ದರೂ ಅಲ್ಲಿ **ಹಾಕಿಕೊಳ್ಳು** ಎಂದು ಬಳಸಿಲ್ಲ ಎನ್ನುವುದನ್ನು ಗಮನಿಸಬೇಕು.

**ರಚನೆಯ ನಿಯಮಗಳು ಮತ್ತು ಬಳಕೆಯ ನಿಯಮಗಳು ಬೇರೆ ಬೇರೆ**

ಬರೆಯುವ ಕಾಗದಗಳನ್ನು ಓದುವಾಗ ಹಲವು ಕನ್ನಡ ಭಾಷಿಕರಲ್ಲಿ ಇರುವ ಒಂದು ಗೊಂದಲದ ಚಹರೆಗಳು ಕಾಣಿಸುತ್ತವೆ. ಒಂದು ನುಡಿಗೆ ಇರುವ ರಚನೆಯ ನಿಯಮಗಳು ಮತ್ತು ಬಳಕೆಯ ನಿಯಮಗಳು ಬೇರೆ ಬೇರೆ ಎನ್ನುವುದನ್ನು ಮೊದಲು ಗುರುತಿಸಿಕೊಳ್ಳಬೇಕು. ಸೊಲ್ಲರಿಮೆ (=ವ್ಯಾಕರಣ) ಎಂದು ನಾವು ತಿಳಿಯುವ ಕಟ್ಟುಗಳು ನುಡಿಯ ರಚನೆಗೆ ಸಂಬಂಧಿಸಿವೆ. ಕನ್ನಡವನ್ನು ಮೊದಲ ನುಡಿಯಾಗಿ ಬಳಸುತ್ತಿರುವವರು ಈ ಕಟ್ಟುಗಳನ್ನು ಬೇರೆಯಾಗಿ ಕಲಿಯಬೇಕಾಗಿಲ್ಲ. ಅವರು ಈ ಕಟ್ಟುಗಳ ಪಾಲನೆಯಲ್ಲಿ ತಪ್ಪುಗಳನ್ನು ಮಾಡುವುದೂ ಇಲ್ಲ. **ಹಳೆಯ ಮನೆ** ಎಂಬ ಒಂದು ರಚನೆಯನ್ನು ನೋಡಿ. ಇಲ್ಲಿ **ಹಳೆಯ** ಎಂಬುದು ಗುಣಪದ. ಇದು **ಮನೆ** ಎಂಬ ನಾಮಪದಕ್ಕಿಂತ ಮೊದಲು ಬರಬೇಕು ಎನ್ನುವುದು ಒಂದು ಕಟ್ಟು. **ಮನೆ** ಪದದ ಬಳಿಕ ಬರುವುದಾದರೆ ಆಗ **ಹಳೆಯ** ಎಂಬ ರೂಪ **ಹಳೆಯದು** (=ನಾಮಪದ)ಎಂದು ಬದಲಾಗಬೇಕು ಎನ್ನುವುದು ಇನ್ನೊಂದು ಕಟ್ಟು. ಕನ್ನಡವನ್ನು ಮೊದಲ ಭಾಷೆಯಾಗಿ ಕಲಿತವರು ಈ ರಚನೆಗಳನ್ನು ರೂಪಿಸಿ ಬಳಸುವಾಗ ತಪ್ಪುಗಳನ್ನು ಮಾಡುವುದಿಲ್ಲ. ಆದರೆ ಬಳಕೆಯ ಕಟ್ಟುಗಳು ಹಾಗಲ್ಲ. ಈ ಕಟ್ಟುಗಳನ್ನು ಹೊಸದಾಗಿ ಕಲಿಯಲೇಬೇಕು. ಅಲ್ಲದೆ ಇವು ಆಗಾಗ ಬದಲಾಗುತ್ತಲೂ ಇರುತ್ತವೆ. ಇವು ಬದಲಾಗಲು ಭಾಷೆಗೆ ತಳುಕು ಹಾಕಿಕೊಂಡ ಕಾರಣಗಳಷ್ಟೇ ಇರುವುದಿಲ್ಲ; ಬೇರೆ ಸಾಮಾಜಿಕವಾದ ಕಾರಣಗಳೂ ಇರುತ್ತವೆ. ಈ ಕಟ್ಟುಗಳನ್ನು ಒಮ್ಮೆ ಕಲಿತರೆ ಸಾಕು ಮತ್ತೆ ಹೊಸ ಕಟ್ಟುಗಳನ್ನು ಕಲಿಯಬೇಕಿಲ್ಲ ಎಂದು ಹಟ ಮಾಡುವಂತಿಲ್ಲ.

ಬಳಕೆಯ ಕಟ್ಟುಗಳ ಬಗೆಯನ್ನು ನೋಡೋಣ. ಉದಾ.ಗೆ 'ಒಂದು ಕಾಫಿ,ಡಬಲ್ ಸ್ಟ್ರಾಂಗ್' ಎನ್ನುವ ವಾಕ್ಯವನ್ನು ಹೋಟೆಲಿಗೆ ಹೋಗಿ ಕುಳಿತಾಗ ಬಳಸಬಹುದು. ಆದರೆ ಯಾರದೋ ಹೆಚ್ಚು ಪರಿಚಿತರಲ್ಲದವರ ಮನೆಗೆ ಹೋದಾಗ ಅವರು 'ಏನು ತೆಗೆದುಕೊಳ್ಳುತ್ತೀರಿ?' ಎಂದು ಉಪಚಾರಕ್ಕೆ ಕೇಳಿದಾಗ 'ಒಂದು ಕಾಫಿ, ಡಬಲ್ ಸ್ಟ್ರಾಂಗ್' ಎನ್ನಲು ಬರುವುದಿಲ್ಲ. ಇದು ಒಂದು ಸರಳ ಉದಾಹರಣೆ. ಕನ್ನಡ ಭಾಷೆಯ ಬಳಕೆಗೆ ಸಂಬಂಧಿಸಿದ ಇಂತಹ ನೂರಾರು ಕಟ್ಟುಗಳಿವೆ.

ಬಳಕೆಯ ಕಟ್ಟುಗಳು ಮಾತು ಮತ್ತು ಬರೆಹಗಳಿಗೆ ಒಂದೇ ಬಗೆಯಾಗಿ ಇರುವುದಿಲ್ಲ. ಬರೆಹದ ಕಟ್ಟುಗಳಿಗೆ ತಕ್ಕಂತಿರುವ ರಚನೆಗಳನ್ನು ಮಾತಿನಲ್ಲಿ ಹೇಳಹೊರಟರೆ ಆಗ ಮಾತಿನ ಕಟ್ಟುಗಳನ್ನು ಮೀರಿದಂತಾಗುತ್ತದೆ. ಈಗ ಕನ್ನಡದಲ್ಲಿ ಈ ಬಗೆಯ ಗೊಂದಲಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿವೆ. ಟಿವಿ ವರದಿಗಾರರು ಘಟನೆ ನಡೆದ ಜಾಗದಿಂದ ಮತ್ತು ಘಟನೆ ನಡೆದ ಹೊತ್ತಿನಲ್ಲಿ ಮಾತಾಡಿದಂತೆ ವರದಿಗಳನ್ನು ನೀಡುವುದನ್ನು ನಾವು

ಕೇಳುತ್ತಿದ್ದೇವೆ. ಆದರೆ ಹೆಚ್ಚು ವೇಳೆ ಅವರ ಮಾತುಗಳು ಮಾತಿನಂತೆ ಇರದೆ ಬರಹದಲ್ಲಿದ್ದುದನ್ನು ಮಾತಾಡಿದಂತೆ ಇರುತ್ತದೆ. ಕನ್ನಡ ಹೊಸಬಗೆಯ ಬಳಕೆಗೆ ಸಿದ್ಧವಾಗಬೇಕಾದರೆ ಆ ಹೊಸಬಗೆಯ ಬಳಕೆಗೆ ತಕ್ಕ ಕಟ್ಟುಗಳೇನು ಎಂಬುದನ್ನು ತಿಳಿದುಕೊಂಡು ಅದಕ್ಕೆ ಹೊಂದುವ ರಚನೆಗಳನ್ನು ರೂಪುಗೊಳಿಸಿ ಬಳಸಬೇಕು.

## ಉತ್ತೀರ್ಣ

ಕೂ.ಗಿ. ಗಿರಿಯಪ್ಪ (ಕೂನಮುದ್ದನಹಳ್ಳಿ, ರಾಮನಗರ) ಇವರು **ಉತ್ತೀರ್ಣ** ಎಂಬ ಪದವನ್ನು ಬಳಸುವ ಬಗೆಗೆ ಒಂದು ಪ್ರಶ್ನೆಯನ್ನು ಕೇಳಿದ್ದಾರೆ. ಇವರು ತಿಳಿದಿರುವಂತೆ ಉತ್ತೀರ್ಣ ಎಂಬುದು ಗಂಡಸರಿಗೆ (=ಪುಲ್ಲಿಂಗ) ಹೊಂದುವ ರೂಪ. ಹಾಗಾಗಿ ಹೆಂಗಸರಿಗೆ (=ಸ್ತ್ರೀಲಿಂಗ)ಅದನ್ನು **ಉತ್ತೀರ್ಣೆ** ಎಂದು ಬದಲಿಸಬೇಕಲ್ಲವೇ ಎಂದು ಕೇಳಿದ್ದಾರೆ. ಸಂಸ್ಕೃತ ಪದಗಳನ್ನು ಕನ್ನಡದಲ್ಲಿ ಬಳಸುವಾಗ ಎದುರಾಗುವ ಹಲವು ಗೊಂದಲಗಳಲ್ಲಿ ಇದೂ ಒಂದು. ಆ ಪದಗಳಿಗೆ ಮೂಲ ಭಾಷೆಯಲ್ಲಿ ಹೊಂದುವ ಎಲ್ಲ ವ್ಯಾಕರಣ ನಿಯಮಗಳನ್ನೂ ಕನ್ನಡದಲ್ಲೂ ಹೊಂದಿಸಿಕೊಳ್ಳುವುದು ಆಗದ ಮಾತು. ಉತ್ತೀರ್ಣ ಎಂಬ ಪದವನ್ನು ಕನ್ನಡದಲ್ಲಿ ಗುಣಪದವನ್ನಾಗಿ ಬಳಸುತ್ತಿರುವುದಾದರೆ ಆಗ ಅದರಲ್ಲಿ ಗಂಡು ಹೆಣ್ಣು ಎಂಬ ವ್ಯತ್ಯಾಸವಿರುವುದಿಲ್ಲ. ಆ ಪದಕ್ಕೆ **ನ್** ಸೇರಿಸಿದಾಗ (ಉದಾ. ಉತ್ತೀರ್ಣನಾಗು) ಗಂಡಸನ್ನು, **ಳ್** ಸೇರಿಸಿದಾಗ (ಉದಾ. ಉತ್ತೀರ್ಣಳಾಗು) ಹೆಂಗಸನ್ನು ಹೇಳುತ್ತದೆ. ಹಾಗಾಗಿ ಉತ್ತೀರ್ಣೆ ಎಂಬ ರಚನೆ ಬೇಕಿಲ್ಲ. ಗುಣಪದವನ್ನು ನಾಮಪದವನ್ನಾಗಿ ಬದಲಿಸಿಕೊಂಡು ಬಳಸಲು ಹೊರಟಾಗ ಮಾತ್ರ ಎಕಾರವನ್ನು ಸೇರಿಸಿಕೊಳ್ಳಬೇಕಾಗುತ್ತದೆ. ಕನ್ನಡದಲ್ಲಿ ಹಾಗೆ ಬಳಸುವ ನೆಲೆಯೂ ಕಂಡುಬರುತ್ತದೆ. ಸಂಜಾತೆ, ಕೋಮಲೆ, ಶ್ರೀಮಂತೆ, ಸಾಮಾನ್ಯೆ ಮುಂತಾದ ರಚನೆಗಳನ್ನು ಕೆಲವರು ಅಲ್ಲಲ್ಲಿ ಬಳಸಿರುವುದನ್ನು ಕಾಣುತ್ತೇವೆ.

## ಪಲ್ಲಿಲಿ

ನಾಗರಾಜು (ಸಬ್ಬನಹಳ್ಳಿ, ಮದ್ದೂರು) ಇವರು ಯಾವುದೋ ಪರೀಕ್ಷೆಯಲ್ಲಿ ಎದುರಾದ 'ಪಲ್ಲಿಲಿ' ಎಂಬ ಪದದ ಸಮಾಸವನ್ನು ಕುರಿತು ಕೇಳಿದ್ದಾರೆ. ಪರೀಕ್ಷಕರು ಬಯಸುವ ಬದಲನ್ನು ಇಲ್ಲಿ ನಾನು ನೀಡಬೇಕಿಲ್ಲ ಎಂದುಕೊಳ್ಳುತ್ತೇನೆ. ಆದರೆ 'ಇಲ್'ಎಂಬ ರೂಪದಿಂದ ಪಡೆದ **ಇಲಿ** ಎನ್ನುವ ರೂಪದ ಬಳಕೆಯನ್ನು ಕನ್ನಡದಲ್ಲಿ ಅಲ್ಲಲ್ಲಿ ನೋಡಬಹುದು. **ಇಲಿ** ಎಂಬ ರೂಪಕ್ಕೆ ಇಲ್ಲದ್ದು, ಇಲ್ಲದಿರುವುದು ಎಂಬ ತಿರುಳನ್ನು ನೀಡಲಾಗಿದೆ. ಸದ್ದಿಲಿಗತ್ತಲು ಎಂಬ ಬಳಕೆ ಕುವೆಂಪು ಅವರ ಕಥನ ಕವನವೊಂದರಲ್ಲಿ ಕಾಣಸಿಗುತ್ತದೆ. ಕೊಂಚವೂ ಸದ್ದು ಕೇಳಿಸದ ಕತ್ತಲು ಎಂಬ ತಿರುಳು ಆ ರಚನೆಗೆ ಇದೆ. ಪಲ್ಲಿಲಿ ಎಂಬ ರಚನೆಯಲ್ಲೂ ಪಲ್+ಇಲಿ ಎಂಬ ರೂಪಗಳಿವೆ. ಈ ರಚನೆಗೆ ಪಲ್(>ಹಲ್ಲು) ಇಲ್ಲದಿರುವುದು, ಇಲ್ಲದ್ದು ಎಂಬ ತಿರುಳಿದೆ. ಈ ತಿರುಳನ್ನು ಹೊಂದಿದ ಯಾವುದಾದರೂ ಬಳಕೆ ಇದ್ದರೆ ಅದು ನನಗೆ ತಿಳಿಯದು. ಆದರೆ ಇಲ್ಲಿ ಮೊದಲನೆಯದು (ಪಲ್) ನಾಮಪದ; ಎರಡನೆಯದು ಕ್ರಿಯಾಪದದಿಂದ ಪಡೆದುಕೊಂಡ ನಾಮಪದ. ಹಾಗಾಗಿ ಇಲ್ಲಿ ಎರಡು ನಾಮಪದಗಳು ಸೇರಿ ಆಗಿರುವ ಕನ್ನಡ ಸಮಾಸ

ಪದವಿದೆಯೆಂದು ಹೇಳುವುದು ಸರಿ. ಆದರೆ ಇದನ್ನು ಹೊರತುಮಾಡಿ ಇನ್ನೊಂದು ಸಂಗತಿಯನ್ನು ಈ ರಚನೆಯಲ್ಲಿ ನೋಡಬೇಕಿದೆ. ಪಲ್+ಇಲಿ ಎಂಬ ಜೋಡಣೆಯಾದಾಗ ಲಕಾರ ದ್ವಿತ್ವ ಏಕಾಗುತ್ತದೆ? (ಪಲ್ಲಿಲಿಯಲ್ಲಿರುವ ಲ್ಲಿ) ಇಂತಹ ಇನ್ನೂ ಕೆಲವು ರಚನೆಗಳನ್ನು ನೋಡಿ. ಕಲ್ಲೇಟು (ಕಲ್+ಏಟು), ಕಣ್ಣಾಲಿ (ಕಣ್+ಆಲಿ), ಹೊನ್ನಾರು (ಹೊನ್+ಆರು), ಹತ್ತಾರು( ಹತ್+ಆರು). ನಮ್ಮ ಶಾಲಾ ವ್ಯಾಕರಣಗಳು ಈ ರಚನೆಗಳನ್ನು ವಿವರಿಸುವ ಬಗೆಯೇ ಬೇರೆ. ಅವುಗಳನ್ನು ಪಲ್ಲು+ಇಲಿ, ಕಲ್ಲು+ಏಟು, ಹೊನ್ನು+ಆರು, ಹತ್ತು+ಆರು ಎಂದು ಹೇಳಿ ಅಲ್ಲೆಲ್ಲಾ ಸಂಧಿಯಾಗುವಾಗ ಮೊದಲ ಪದದ ಕೊನೆಯ ಸ್ವರ ಉಕಾರವು ಲೋಪವಾಗಿದೆ ಎಂದು ಹೇಳುತ್ತೇವೆ. ಲೋಪಸಂಧಿಗೆ ಈ ರಚನೆಗಳನ್ನು ಉದಾಹರಣೆಯಾಗಿ ಕೊಡುವುದನ್ನು ನೋಡುತ್ತೇವೆ. ಆದರೆ ಕನ್ನಡದ ಧ್ವನಿ ರಚನೆಯ ನಿಯಮಗಳು ಬೇರೆಯೇ ನೆಲೆಯನ್ನು ಹೇಳುತ್ತಿವೆ. ಅದರಂತೆ **ಪಲ್ಲ್, ಕಣ್ಣ್, ಹೊನ್ನ್, ಹತ್ತ್** ಎಂಬುವುಗಳೇ ಒಳರೂಪಗಳಾಗಿರುತ್ತವೆ. ಈ ರೂಪಗಳಿಗೆ ಸ್ವರದಿಂದ ಮೊದಲಾಗುವ ಪದಗಳು ಸೇರಿದಾಗ ಯಾವ ಧ್ವನಿಯೂ ಲೋಪವಾಗುವುದಾಗಲೀ ಸೇರುವುದಾಗಲೀ ಆಗುವುದೇ ಇಲ್ಲ. ಈ ಒಳರಚನೆಯ ಬಗೆಯನ್ನು ನಾವು ಒಪ್ಪದೇ ಹೋದಲ್ಲಿ ಬೇರೆ ನುಡಿಗಳಿಂದ ನಾವು ತೆಗೆದುಕೊಂಡ ಬಸ್ಸು, ಪೆನ್ನು, ಪಿನ್ನು, ಕಿಟ್ಟು ಮುಂತಾದ ರೂಪಗಳನ್ನು ವಿವರಿಸಲು ಆಗುವುದಿಲ್ಲ. ಏಕೆಂದರೆ ಈ ಪದಗಳು ಮೂಲನುಡಿಯಲ್ಲಿ ಉಕಾರಾಂತವಾಗಿರುವುದಿಲ್ಲ; ನುಡಿಯಲು ಅನುಕೂಲವಾಗುವಂತೆ ಉಕಾರವನ್ನು ಸೇರಿಸಿಕೊಂಡಿದ್ದೇವೆ ಎನ್ನುವುದಾದರೆ ಇವು ಬಸು, ಪೆನು, ಪಿನು, ಕಿಟು ಎಂದಾಗ ಬೇಕಿತ್ತು. ಅಂದರೆ ಕನ್ನಡದಲ್ಲಿ ಮೊದಲ ಸ್ವರ ಹ್ರಸ್ವವಾಗಿರುವ (ಮತ್ತು ಒಂದೇ ಸ್ವರವಿರುವ ) ಪದಗಳಿದ್ದರೆ ಅವುಗಳಲ್ಲಿ ಸ್ವರದ ಬಳಿಕ ಬರುವ ವ್ಯಂಜನವು ದ್ವಿತ್ವವೇ ಆಗಿರುವುದೆಂಬ ಧ್ವನಿ ನಿಯಮವೊಂದು ಇದೆ. ಇದನ್ನು ನಮ್ಮ ಶಾಲಾ ವ್ಯಾಕರಣಗಳು ಗಮನಿಸುತ್ತಿಲ್ಲ.

### ಮಾಹಿತಿ ಬೇರೆ ಭಾಷೆಯ ಬಳಕೆ ಬೇರೆ

ಕನ್ನಡ ಅಧ್ಯಾಪಕರನ್ನು ಆಯ್ಕೆ ಮಾಡಲೆಂದು ನಡೆದ ಪರೀಕ್ಷೆಯಲ್ಲಿ ಕೇಳಲಾದ ಪ್ರಶ್ನೆಯೊಂದು ಹೀಗಿತ್ತು. 'ಪ್ರಸ್ತಾವನೆ' ಕೃತಿಯನ್ನು ರಚಿಸಿದವರು ಯಾರು? ಇದಕ್ಕೆ ನೀಡಲಾದ ನಾಲ್ಕು ಉತ್ತರಗಳಲ್ಲಿ ಒಂದನ್ನು ಅಭ್ಯರ್ಥಿಗಳು ಆಯ್ಕೆ ಮಾಡಬೇಕಿತ್ತು. ಸರಿ ಉತ್ತರ ಯಾವುದು ಎನ್ನುವುದನ್ನು ಗೊತ್ತುಮಾಡಿಕೊಳ್ಳಲು ಈ ಪ್ರಶ್ನೆಯಲ್ಲಿ ಹೆಸರಿಸಲಾದ ಕೃತಿಯು ಇಂಗ್ಲಿಶ್ ಭಾಷೆಯಲ್ಲಿದೆ ಎಂಬುದನ್ನು ತಿಳಿದಿರ ಬೇಕಿತ್ತು. (ಇದು ವಿಲಿಯಮ್ ವರ್ಡ್ಸ್‌ವರ್ತ್ ಬರೆದ 'ಪ್ರಿಫೇಸ್ ಟು ಲಿರಿಕಲ್ ಬ್ಯಾಲೆಡ್ಸ್' ಲೇಖನವನ್ನು ಉದ್ದೇಶಿಸಿದೆ) ಹೀಗೆ ಕನ್ನಡ ಬರಣಿಗೆಯಲ್ಲಿ ಹೆಸರಿಸುವ ಇಂಗ್ಲಿಶ್ ಇಲ್ಲವೇ ಬೇರೆ ಭಾಷೆಯ ಬರೆಹಗಳ ಹೆಸರುಗಳನ್ನು ,ಅಂದರೆ ಅವುಗಳ ತಲೆಬರೆಹಗಳನ್ನು ಕನ್ನಡಕ್ಕೆ ಅನುವಾದಿಸುವುದು ಸರಿಯೇ ಎಂಬುದು ಈಗ ಒಂದು ಪ್ರಶ್ನೆ. ಮೂಲ ಬರೆಹ ಕನ್ನಡಕ್ಕೆ ಅನುವಾದವಾಗಿ ಅದರ ತಲೆಬರೆಹವೂ ಕನ್ನಡ ನುಡಿಯಲ್ಲಿ ಪರಿಚಿತವಾಗಿದ್ದರೆ ಆಗ ಆ ಕನ್ನಡ ಹೆಸರನ್ನು ಉಲ್ಲೇಖಿಸುವುದು ತಪ್ಪಾಗಲಾರದು. 'ದ ಬೈಬಲ್' ಎಂಬುದನ್ನು 'ಸತ್ಯವೇದ' ಎಂದು ಅನುವಾದಿಸಲಾಗಿದೆ. ಹಾಗೆಯೇ ಫಣೀಶ್ವರನಾಥ ರೇಣು ಅವರ 'ಮೈಲಾ ಆಂಚಲ್' ಎಂಬ ಕಾದಂಬರಿ 'ಮಾಸಿದ

ಸೆರಗು' ಎಂದು ಅನುವಾದಗೊಂಡಿದೆ. ಆಗ 'ಸತ್ಯವೇದ', 'ಮಾಸಿದ ಸೆರಗು' ಎಂದು ಕನ್ನಡ ಬರವಣಿಗೆಯಲ್ಲಿ ಹೆಸರಿಸುವುದು ಸರಿ. ಹಾಗಿಲ್ಲದಿದ್ದರೆ, ಅಂದರೆ ಕನ್ನಡದಲ್ಲಿ ಮೂಲಬರಹ ಅನುವಾದಗೊಂಡು ಪರಿಚಿತವಾಗಿಲ್ಲದಿದ್ದರೆ ಆಗ ಮೂಲ ತಲೆಬರಹವನ್ನೇ ಕನ್ನಡ ಲಿಪಿಯಲ್ಲಿ ಬರೆಯಬೇಕು. ಆಗ ಗೊಂದಲಗಳು ಇರುವುದಿಲ್ಲ.

**ದಸರೆಯೂರು**

ದಿನಪತ್ರಿಕೆಯೊಂದರಲ್ಲಿ ಓದಿದ ತಲೆಬರಹ ಹೀಗಿತ್ತು: ' **ದಸರೆಯೂರು ಬೆಳಕು ಕಂಡು ಆಯಿತು ವರುಷ ನೂರು**'. ಇದನ್ನು ಬರೆದವರು, **ಮೈಸೂರಿಗೆ ವಿದ್ಯುತ್ ದೀಪಗಳು ಬಂದು ನೂರು ವರುಷಗಳು ಕಳೆದವು** ಎಂಬ ತಿರುಳನ್ನು ಹೇಳಲು ಬಯಸಿದ್ದಾರೆ. ಓದುವವರಿಗೆ ಚೆನ್ನಾಗಿ 'ಕೇಳಿಸಲೆಂದು' ವಾಕ್ಯ ರಚನೆಯಲ್ಲಿ ಪ್ರಾಸ ಮತ್ತು ಪದಗಳ ಜೋಡಣೆಯಲ್ಲಿ ಏರುಪೇರು ಮಾಡಿದ್ದಾರೆ; ಸರಿ. ಆದರೆ ಇನ್ನೊಮ್ಮೆ ವಾಕ್ಯವನ್ನು ಓದಿ ನೋಡಿ. ಕನ್ನಡದ ಮಾತಿನ ವರಸೆಯಲ್ಲಿ ಈ ವಾಕ್ಯಕ್ಕೆ ಇನ್ನೊಂದು ತಿರುಳು ಇರುವುದು ಗೊತ್ತಾಗುತ್ತದೆ. **ಮೈಸೂರಿನಲ್ಲಿ ನೂರು ವರುಷಗಳಿಂದ ಬೆಳಕೇ ಇಲ್ಲ** ಎನ್ನುವ ತಿರುಳೂ ಇದೆಯಲ್ಲವೇ? (ಇದು ಸುಳ್ಳೋ ದಿಟವೋ ಎಂಬುದು ನಮಗೆ ಬೇಕಿಲ್ಲ; ವಾಕ್ಯ ರಚನೆಯಿಂದ ಈ ತಿರುಳು ಹೊರಬೀಳುವುದೋ ಇಲ್ಲವೋ ಎಂಬುದನ್ನು ಮಾತ್ರ ನೋಡೋಣ.) ಉದಾ.ಗೆ **ನಾನು ಅನ್ನ ಕಂಡು ಮೂರು ದಿನಗಳಾದವು** ಎಂಬ ವಾಕ್ಯದ ತಿರುಳೇನು? ಮೂರು ದಿನಗಳಿಂದ ಅನ್ನದ ಮುಖವನ್ನು ನೋಡಿಲ್ಲ; ಅದನ್ನು ತಿಂದಿಲ್ಲ ಎಂದಲ್ಲವೇ? ಇಂತಹ ರಚನೆಗಳು ಕನ್ನಡದಲ್ಲಿ ಸಾಕಷ್ಟಿವೆ. **ನಿನ್ನ ಕಾಗದ ಬಂದು ಮೂರು ತಿಂಗಳಾದವು**. ಎಂದರೆ ಮೂರು ತಿಂಗಳಿಂದ ನಿನ್ನ ಕಾಗದ ಬಂದಿಲ್ಲ ಎಂದೂ ಆಗುತ್ತದೆ. ಮುಂದೆ ಬರೆದ ಎರಡು ವಾಕ್ಯಗಳನ್ನು ಓದಿ: **ಮಳೆ ಬಂದು ಒಂದು ತಿಂಗಳಾಯಿತು/ ಮಳೆ ಬರದೇ ಒಂದು ತಿಂಗಳಾಯಿತು**. ಎರಡೂ ವಾಕ್ಯಗಳಲ್ಲೂ ಮಳೆ ಒಂದು ತಿಂಗಳ ಹಿಂದೆ ಬಿದ್ದಿದ್ದು ತಿಳಿಯುತ್ತದೆ; ಅಲ್ಲದೆ ಒಂದು ತಿಂಗಳಿನಿಂದ ಈಚೆಗೆ ಮಳೆ ಬಿದ್ದಿಲ್ಲವೆಂಬುದೂ ತಿಳಿಯುವಂತಿದೆ. ಎರಡನೆಯ ವಾಕ್ಯದಲ್ಲಿ ನಿಷೇಧವನ್ನು ಹೇಳುವ ರೂಪವಿದೆ(ಬರದೇ). ಮೊದಲನೇ ವಾಕ್ಯದಲ್ಲಿ ಅದು ಇಲ್ಲ. ಹೀಗಿದ್ದರೂ ಎರಡೂ ವಾಕ್ಯಗಳಲ್ಲೂ ಮಳೆ ಒಂದು ತಿಂಗಳಿಂದ ಬಿದ್ದಿಲ್ಲವೆಂಬ ತಿರುಳಿದೆ. ಕನ್ನಡದ ಕ್ರಿಯಾಪದಗಳ ಇಂತಹ ರೂಪಗಳು (ಬಂದು, ಕಂಡು, ತಿಂದು, ನೋಡಿ, ಕುಡಿದು ಮುಂ) ಹೀಗೆ ಒಂದು ಘಟನೆ ಯಾವಾಗ ನಡೆಯಿತೆಂಬುದನ್ನು ಹೇಳುತ್ತಿದ್ದರೂ ಆ ಬಳಿಕ ಏನಾಯಿತೆಂಬುದರ ಬಗೆಗೆ ಏನೂ ಹೇಳುವುದಿಲ್ಲ. ಹಾಗಾಗಿ ಒಂದಕ್ಕಿಂತ ಹೆಚ್ಚು ತಿರುಳುಗಳು ವಾಕ್ಯಗಳಿಗೆ ದೊರಕುತ್ತವೆ. ಇವೆಲ್ಲವೂ ಮಾತಿನಲ್ಲಿ ಬಳಕೆಯಾಗುವಾಗ ಗೋಜಲನ್ನು ತರುವುದಿಲ್ಲವಾದರೂ ವಾಕ್ಯ ರಚನೆಯಲ್ಲಿರುವ ಇಂತಹ ಇಕ್ಕಟ್ಟುಗಳನ್ನು ನಾವು ತಿಳಿದಿರಬೇಕು.

**ಶೋಚನೀಯ–ಯೋಚನೀಯ**

"ಅವರ ಪರಿಸ್ಥಿತಿ ಶೋಚನೀಯವಾಗಿದೆ ಮಾತ್ರವಲ್ಲ; ಯೋಚನೀಯವೂ ಆಗಿದೆ" ಈ ವಾಕ್ಯ ಕೆಲವು ದಿನಗಳ ಹಿಂದೆ ಪತ್ರಿಕೆಯೊಂದರಲ್ಲಿ ಓದಲು ಸಿಕ್ಕಿತು. ಈ ವಾಕ್ಯವಲ್ಲಿರುವ "ಯೋಚನೀಯ" ಎನ್ನುವ ಪದ ಸಾಮಾನ್ಯವಾಗಿ ಕನ್ನಡದಲ್ಲಿ ಈ ಹಿಂದೆ ಬಳಕೆಯಾಗಿಲ್ಲ.

ಈ ಪದರೂಪದ ಅರ್ಥವನ್ನು ಸಂದರ್ಭವನ್ನು ಅನುಸರಿಸಿ ಹೇಳಬಹುದಾದರೂ ಆ ಪದದ ಹಿಂದಿರುವ ರಚನೆಯ ನಿಯಮಗಳನ್ನು ವಿವರಿಸಲು ಆಗುವುದಿಲ್ಲ. ಏಕೆಂದರೆ ಅಲ್ಲಿ ಯಾವ ನಿಯಮವೂ ಇಲ್ಲ. "ಶೋಚನೀಯ" ಎಂಬ ಪದರೂಪದ ಮಾದರಿಯಲ್ಲಿ "ಯೋಚನೀಯ" (=ಯೋಚಿಸಲು ತಕ್ಕುದಾದ) ಎಂಬ ಪದರೂಪವನ್ನು ರೂಪಿಸಿ ಬಳಸಲಾಗಿದೆ. ಬಳಕೆಯಲ್ಲಿರುವ ಪದರೂಪದ ಮಾದರಿಗೆ ಹೊಂದಿಕೊಂಡಂತೆ ಇನ್ನೊಂದು ಅಂತಹುದೇ ರಚನೆಯನ್ನು ರೂಪಿಸಿ ಬಳಸುವುದು ಕನ್ನಡದಲ್ಲಿ ಈಗ ಹೆಚ್ಚಾಗಿದೆ.

ಶೋಚನಿಯ, ದಯನೀಯ, ಗಮನೀಯ, ಸಮರ್ಥನೀಯ, ಖಂಡನೀಯ ಇವೇ ಮೊದಲಾದ ರಚನೆಗಳನ್ನು ನೋಡಿ. ಇವುಗಳಲ್ಲಿ ಕೆಲವು ರೂಪಗಳಿಗೆ ಪರ್ಯಾಯ ರೂಪಗಳಿವೆ. ಖಂಡನೀಯ ಮತ್ತು ಖಂಡನಾರ್ಹ; ಗಮನೀಯ ಮತ್ತು ಗಮನಾರ್ಹ ಎಂಬ ಜೋಡಿರೂಪಗಳ ಅರ್ಥದಲ್ಲಿ ಬದಲಾವಣೆ ಏನೂ ಇಲ್ಲ. ಎರಡು ರೂಪಗಳಲ್ಲಿ ಒಂದರ ಬದಲು ಇನ್ನೊಂದನ್ನು ಬಳಸಲು ಅಡ್ಡಿಯೇನೂ ಇಲ್ಲ. ಆದರೆ ಯಾವಾಗಲೂ ಹೀಗೆ ಜೋಡಿರೂಪಗಳನ್ನು ರಚಿಸುವುದಕ್ಕೆ ಆಗುವುದಿಲ್ಲ. ಉದಾಹರಣೆಗೆ ಚರಿತ್ರಾರ್ಹ ಎಂಬ ರೂಪಕ್ಕೆ ಪರ್ಯಾಯ ರೂಪವನ್ನು (ಚರಿತ್ರನೀಯ?) ರಚಿಸುವುದಾಗದು. ಹಾಗೆಯೇ ರಂಜನೀಯ ಎಂಬ ರೂಪಕ್ಕೆ ಪರ್ಯಾಯವಾಗಿ ರೂಪ ( ರಂಜನಾರ್ಹ?) ಕೂಡ ಇಲ್ಲ. ಈ ಮಾತಿನ ತಿರುಳು ಇಷ್ಟೆ: ಒಂದು ಪದರೂಪವನ್ನು ಅನುಸರಿಸಿ ಇನ್ನೊಂದು ಪದರೂಪವನ್ನು ರಚಿಸಲು ಹೊರಡುವುದು ಯಾವಾಗಲೂ ಸರಿಯಾಗದು. ಪದಗಳಿಗೆ ಒಳರಚನೆ ಇರುವಾಗಲಂತೂ ಈ ಮಾತು ಇನ್ನಷ್ಟು ದಿಟ.

ಕಲಿಕಾರ್ಥಿ, ನಂಬಿಕಾರ್ಹ ಎಂಬಂತಹ ರಚನೆಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಈ ರೂಪಗಳಲ್ಲಿ ಮೊದಲ ಭಾಗ ಕನ್ನಡವಾದರೆ (ಕಲಿಕೆ, ನಂಬಿಕೆ) ಎರಡನೆಯ ಭಾಗ ಸಂಸ್ಕೃತ (ಅರ್ಥಿ, ಅರ್ಹ) ಈ ಪದಜೋಡಣೆಯಲ್ಲಿ ಅರ್ಥದ ಗೊಂದಲವಿಲ್ಲದಿದ್ದರೂ ರಚನೆಯ ನಿಯಮಗಳ ಗೊಂದಲ ಇದ್ದೇ ಇದೆ. ಕನ್ನಡದ ಮೂಲಪದಗಳು ಎ ಎಂಬ ಸ್ವರದಿಂದ ಕೊನೆಗೊಂಡಿದ್ದರೂ ರಚನೆಗೊಂಡ ಹೊಸ ರೂಪಗಳಲ್ಲಿ ಅವುಗಳ ಕೊನೆಯಲ್ಲಿರುವ ಎಕಾರವನ್ನು ಆ ಎಂದು ಬದಲಾಯಿಸಿದ್ದೇಕೆ?(ಕಲಿಕಾ, ನಂಬಿಕಾ) ಇದಕ್ಕೆ ಉತ್ತರವಿಲ್ಲ. ಇಂತಹ ಗೋಜಲುಗಳು ಕನ್ನಡದಲ್ಲಿ ದಿನವೂ ನಡೆಯುತ್ತಿವೆ.

### 'ಬಲ' ಪದ ದ್ರಾವಿಡ ಮೂಲದ್ದೋ ಇಲ್ಲವೇ ಸಂಸ್ಕೃತದಿಂದ ಬಂದದ್ದೋ

ರಾಜಣ್ಣ ಬಿ. (ಬೆಂಗಳೂರು) ಇವರು ಬಲ ಪದ ದ್ರಾವಿಡ ಮೂಲದ್ದೋ ಇಲ್ಲವೇ ಸಂಸ್ಕೃತದಿಂದ ಬಂದದ್ದೋ ಎಂದು ಕೇಳಿದ್ದಾರೆ. ಈ ಪದ ಸಂಸ್ಕೃತದಲ್ಲಿರುವಂತೆ ದ್ರಾವಿಡ ನುಡಿಗಳಲ್ಲಿಯೂ ಇದೆ. ಆದರೆ ದ್ರಾವಿಡ ನುಡಿಗಳಿಗೆ ಸಂಸ್ಕೃತದಿಂದ ಬಂದು ಸೇರಿದ್ದು ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಬಲಿತ ಎಂಬ ಪದವನ್ನೇ ನೋಡೋಣ. ಇದರಲ್ಲಿ **ಬಲಿ** ಎಂಬ ಕೆಲಸಪದವಿದೆ. ಇದು ಹಲವು ದ್ರಾವಿಡ ನುಡಿಗಳಲ್ಲಿ ಕೆಲಸ ಪದವಾಗಿಯೇ ಬಳಕೆಯಾಗುವುದನ್ನು ನೋಡುತ್ತೇವೆ. ಕಸುವು ಪಡೆಯುವುದು, ಮಾಗುವುದು, ಹಣ್ಣಾಗುವುದು ಮುಂತಾದ ತಿರುಳುಗಳೊಡನೆ ಬಲಿ ಪದ ಬಳಕೆಯಾಗುತ್ತಿದೆ. **ಬಲ** ಎಂಬುದು ಹೆಸರು ಪದವಾಗಿ ಇನ್ನೊಂದು ತಿರುಳನ್ನೂ

ಪಡೆದಿದೆ. ಇದು ಬದಿ ಇಲ್ಲವೆ ಪಕ್ಕವನ್ನು ಹೇಳುವ ತಿರುಳು. ಎಡ ಮತ್ತು ಬಲ ಪದಗಳು ಹೀಗೆ ಬಳಕೆಯಾಗುತ್ತವೆ. ಇದೂ ಕೂಡ ಹಲವು ದ್ರಾವಿಡ ನುಡಿಗಳಲ್ಲಿ ಬಳಕೆಯಲ್ಲಿದೆ. ಸುತ್ತ ತಿರುಗುವುದು ಎಂಬ ತಿರುಳನ್ನು ಹೇಳುವ **ಬಲವಂದು**( ಬಲ+ಬಂದು) ಎಂಬ ಕೆಲಸಪದ ಕನ್ನಡದಲ್ಲಿಯೇ ಬಳಕೆಯಾಗಿದೆ. ಇದು ಸಂಸ್ಕೃತದ ಪ್ರದಕ್ಷಿಣೆಗೆ ಹೊಂದುವ ಪದ. ಒಟ್ಟಾರೆ ಬಲ ಎಂಬ ದ್ರಾವಿಡ ಮೂಲದ ಪದ ಕನ್ನಡದಲ್ಲಿ ಹೆಸರುಪದ ಮತ್ತು ಕೆಲಸಪದವಾಗಿ ಬಳಕೆಯಲ್ಲಿರುವಂತೆ ಸಂಸ್ಕೃತದಿಂದ ಪಡೆದು ಕೊಂಡ ಕೆಲವು ಪದಗಳಲ್ಲಿಯೂ (ಉದಾ.ಬಲಶಾಲಿ, ದುರ್ಬಲ, ಸಬಲ ಮುಂತಾದವು ಬಳಕೆಯಲ್ಲಿದೆ.

**ಕಾಲೋಚಿತ**

ಕೌಟಿ ವೀರಣ್ಣ (ಗುಲ್ಬರ್ಗಾ) ಇವರು 'ಮಾಹಿತಿಯನ್ನು ಕಾಲೋಚಿತವಾಗಿ ಕೂಡಲೇ ಈ ಕಚೇರಿಗೆ ಸಲ್ಲಿಸಲು ಕೋರಿದೆ 'ಎಂಬ ವಾಕ್ಯದಲ್ಲಿ **ಕಾಲೋಚಿತ**ವಾಗಿ ಎಂದರೆ ಏನು ಎಂದು ಕೇಳಿದ್ದಾರೆ. ಕಾಲೋಚಿತ ಎಂಬ ಪದಕ್ಕೆ ಹೊತ್ತಿಗೆ ತಕ್ಕ ಹಾಗೆ ಎಂಬ ತಿರುಳಿದೆ. ಈ ಮೇಲಿನ ವಾಕ್ಯದಲ್ಲಿ ಈ ತಿರುಳನ್ನು ಹೊಂದಿಸುವುದಕ್ಕೆ ಬರುವುದಿಲ್ಲ. ಏಕೆಂದರೆ ಮಾಹಿತಿಯನ್ನು ಕೂಡಲೇ ಒದಗಿಸಲು ಹೇಳಿರುವುದರಿಂದ ಕಾಲೋಚಿತವಾಗಿ ಎಂಬುದು ಕೆಲಸಕ್ಕೆ ಬಾರದ ಪದಬಳಕೆಯಾಗಿ ತೋರುತ್ತದೆ. ಸರಿಯಾದ ಸಮಯಕ್ಕೆ ಎಂದು ಹೇಳವುದು ಈ ವಾಕ್ಯ ಬರೆದವರ ಗುರಿ ಇದ್ದೀತು. ಅಂದರೆ ಮಾಹಿತಿಯನ್ನು ತಡಮಾಡದೆ ಕೂಡಲೇ ಸಲ್ಲಿಸಬೇಕೆಂದು ಹೇಳಿದಂತಾಯ್ತು. ಆದರೆ ಆಗ ಕಾಲೋಚಿತ ಎನ್ನುವದಕ್ಕಿಂದ ಸಕಾಲ, ಕಾಲಬದ್ಧ ಮುಂತಾದ ಪದಗಳನ್ನು ಬಳಸುವುದು ಸರಿಯಾದೀತು. ಆಡಳಿತದಲ್ಲಿ ಬಳಸುವ ಕನ್ನಡದಲ್ಲಿ 'ನಿಖರತೆ' ಇರಬೇಕೆಂದು ಹೇಳುತ್ತಿರುವಾಗಲೇ ಈ ಬಗೆಯ ಹೊಂದಿಕೆಯಾಗದ ಪದಬಳಕೆಗಳು ನಡೆಯುತ್ತಲೇ ಇರುತ್ತವೆ. ಇದು ಸರಿಯಲ್ಲ.

ಬಸವಮೂರ್ತಿ ತ.ಶಿ. (ಹುಳಿಯಾರು) ಇವರು **ಕಾಲೋಚಿತವಾಗಿ** ಎಂಬ ಪದರಚನೆಯ ಬಳಕೆಯ ಬಗೆಗೆ ಬರೆದಿದ್ದ ಮಾತುಗಳನ್ನು ಓದಿ ತಮ್ಮದೇ ಆದ ಬೇರೊಂದು ವಿವರಣೆಯನ್ನು ಮುಂದಿಟ್ಟದ್ದಾರೆ. ಅವರು ಹೇಳುವಂತೆ ಕೆಲವು ಕಚೇರಿಗಳಿಂದ ಮಾಹಿತಿಯು **ಕಾಲಕಾಲಕ್ಕೆ** ಮೇಲಿನ ಕಚೇರಿಗಳಿಗೆ ಹೋಗಬೇಕಿರುತ್ತದೆ. ಹೀಗಿರುವಾಗ ಮಾಹಿತಿಯನ್ನು ಯಾವ ಯಾವ ಕಾಲಕ್ಕೆ ಕಳುಹಿಸಬೇಕೋ ಆಯಾ ಕಾಲಕ್ಕೆ ಸರಿಯಾಗಿ ಕಳುಹಿಸಿ ಎಂದು ತಿಳಿಸಲು ಕಾಲೋಚಿತವಾಗಿ ಎಂದು ಬಳಸಬಹುದು ಎಂದಿದ್ದಾರೆ. ಸರಿಯೇ ಆದರೂ ಆಗಲೂ 'ಸರಿಯಾದ ಕಾಲಕ್ಕೆ ಕಳುಹಿಸಿ' ಎಂದು ಗೊತ್ತಾಗುವ ಬಗೆಯಲ್ಲಿ ಬರೆಯಬಹುದಲ್ಲವೇ?

**ಕಃಪದಾರ್ಥ**

ನಾಗೇಂದ್ರ ಪ್ರಸಾದ್ ಚ.ರಾ.(ಕಾಮನೂರು, ಕೊಪ್ಪಳ) ಇವರು **ಕಃಪದಾರ್ಥ** ಎಂಬ ಪದವನ್ನು ಬೇಂದ್ರೆಯವರು ಬಳಸಿದ್ದನ್ನು ಗಮನಿಸಿ, ಹೀಗಂದರೇನು ಎಂದು ಕೇಳಿದ್ದಾರೆ. ಕೆಲಸಕ್ಕೆ ಬಾರದ ವಸ್ತು ಎಂಬ ತಿರುಳಿನಲ್ಲಿ ಕಃ ಎಂಬ ರೂಪವನ್ನು ಅಲ್ಲಿ

ಬಳಸಲಾಗಿದೆ. ಇದು ಮೇಲು ನೋಟಕ್ಕೆ ಗೊತ್ತಾಗುವಂತೆಯೇ ಸಂಸ್ಕೃತದ ರೂಪ. ಕನ್ನಡದಲ್ಲಿ ಇದು ಬಿಡಿಯಾಗಿ ಹೆಚ್ಚು ಬಳಕೆಯಾದ ಹಾಗಿಲ್ಲ.

**ಹಣಸುಲಿತ ಇಲ್ಲವೇ ಬೆದರು ಸುಲಿತ**

ಇಂದಿರಾ ಶ್ರೀಧರ್ (ದಾವಣಗೆರೆ) ಇವರು **'ಬ್ಲಾಕ್‌ಮೇಲ್'** ಎಂಬ ಇಂಗ್ಲಿಶ್ ಪದಕ್ಕೆ ತಕ್ಕ ಕನ್ನಡದ ಸಮರ್ಪಕ ಪದವೊಂದನ್ನು ಕೇಳಿದ್ದಾರೆ. ಇದು ಇಂಗ್ಲಿಶಿನಿಂದ ಬಂದು ಸೇರಿರುವ ಪದ. ಬರೆಯುವಾಗ ಒಂದೇ ಪದದಂತೆ ಬರೆಯಲಾಗುತ್ತದೆ. ಒತ್ತಾಯದಿಂದ ಹೆದರಿಸಿ ಹಣಕೀಳುವುದು ಇಲ್ಲವೇ ಅಪರಾಧ ಮಾಡುವಂತೆ ಒತ್ತಾಯಿಸುವುದು ಈ ಪದದ ತಿರುಳು. ಇದು ಹೆಸರುಪದವಾಗಿ ಮತ್ತು ಕೆಲಸಪದವಾಗಿ ಬಳಕೆಯಾಗುತ್ತದೆ. ಮೊದಲಿಗೆ ಇಂಗ್ಲೆಂಡಿನ ಗಡಿಯಲ್ಲಿರುವ ಸ್ಕಾಟ್ಲೆಂಡ್ ದೇಶದ ಪಾಳೆಯಗಾರರು ಕಳ್ಳತನ ಮುಂತಾದ ತೊಂದರೆಗಳಿಂದ ಕಾವಲು ನೀಡಲು ಗಡಿಯ ಇಂಗ್ಲಿಶ್ ಜನರಿಂದ ಹಣ ಪಡೆಯುವುದನ್ನು ಈ ಪದ ಸೂಚಿಸುತ್ತಿತ್ತೆಂದು ನಿಘಂಟುಗಳು ಹೇಳುತ್ತವೆ. ಯಾರನ್ನಾದರೂ ಹೆದರಿಸಿ ಹಣಕೀಳುವುದನ್ನು ಇಲ್ಲವೇ ಅವರು ಯಾವುದಾದರೊಂದು ಅಪರಾಧವನ್ನು ಮಾಡುವಂತೆ ಒತ್ತಾಯಿಸುವುದನ್ನು ಹೇಳಲು ಈ ಪದವನ್ನು ಕನ್ನಡದಲ್ಲಿ ಬಳಸಲಾಗುತ್ತಿದೆ. ಹೀಗೆ ಹೆದರುವವರ ಯಾವುದೋ ಒಂದು ತಪ್ಪನ್ನು ಹೆದರಿಸುವವರು ತಿಳಿದುಕೊಂಡು ಅದನ್ನು ಬಳಸಿ ಹೆದರಿಸುತ್ತಿರುತ್ತಾರೆ. ಇದೆಲ್ಲ ತಿರುಳಿನ ಮಾತು. ಇನ್ನು ಕನ್ನಡದಲ್ಲಿ ಇದಕ್ಕೆ ಬೇರೆ ಪದವನ್ನು ಬಳಸಬೇಕೇ (ಕಪ್ಪುಅಂಚೆ ಎಂದು ಬಳಸದಿದ್ದರೆ ಸಾಕು) ಎಂಬ ಮಾತು. ಇಂಗ್ಲಿಶ್ ಪದವನ್ನೇ ಈಗಿರುವಂತೆಯೇ ಬಳಸಿಕೊಳ್ಳುವುದು ಒಂದು ಹಾದಿ. ಹೀಗಲ್ಲದೆ **ಹಣಸುಲಿತ** ಇಲ್ಲವೇ **ಬೆದರು ಸುಲಿತ** ಎಂದು ಹೇಳಬಹುದೇ? ಆಡು ಮಾತಿನಲ್ಲಿ **ಹಫ್ತಾ, ರೋಲ್ ಕಾಲ್** ಎಂಬ ಇನ್ನೆರಡು ಪದಗಳಿವೆ. ಇವೂ ಕೂಡ ಹಣಸುಲಿತವನ್ನೇ ಹೇಳುತ್ತವೆ. ಇವು ಪರ್ಸೋ ಅರಾಬಿಕ್ ಮೂಲದ ಪದಗಳು.

**ಆಗರ್ಭ**

'ಭಾರತದ ಆಗರ್ಭ ಶ್ರೀಮಂತರ ಪಟ್ಟಿಯಲ್ಲಿ ಮೊದಲಿಗ ಲಕ್ಷ್ಮಿ ಮಿತ್ತಲ್' ಎಂಬ ಸುದ್ದಿಯನ್ನು ನೀವು ಓದಿದ್ದೀರಿ. ಇಲ್ಲಿ 'ಆಗರ್ಭ' ಎಂದರೇನು? ಈ ಪದದ ದಿಟವಾದ ಅರ್ಥ 'ಹುಟ್ಟಿನಿಂದಲೇ' ಎಂದು ತಾನೇ. ಆಗರ್ಭ ಶ್ರೀಮಂತ ಎಂದರೆ ಹುಟ್ಟುವಾಗಲೇ ಶ್ರೀಮಂತ ಮನೆತನದಲ್ಲಿ ಹುಟ್ಟಿದ ವ್ಯಕ್ತಿ ಎಂದು ಅರ್ಥವಾಗುತ್ತದೆ. ಆದರೆ ಈ ಮೇಲಿನ ಸುದ್ದಿಯಲ್ಲಿ ನಮೂದಾದ ವ್ಯಕ್ತಿ ಹುಟ್ಟಿನಿಂದಲೇ ಶ್ರೀಮಂತ ಎಂದು ಸೂಚಿಸುವ ಉದ್ದೇಶವಿದ್ದಂತಿಲ್ಲ. ತುಂಬಾ ಶ್ರೀಮಂತ ಎಂದು ಸೂಚಿಸುವ ಉದ್ದೇಶದಿಂದ 'ಆಗರ್ಭ' ಎಂಬ ಪದವನ್ನು ಬಳಸಲಾಗಿದೆ. ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ ಬೆಳೆದು ಯಾವುದೋ ಒಂದು ಹಂತದಲ್ಲಿ ಶ್ರೀಮಂತರಾಗಿರುವವರಿಗೆ 'ಆಗರ್ಭ ಶ್ರೀಮಂತ' ಎಂದು ಕರೆಯುವುದಿಲ್ಲ. ಕನ್ನಡದಲ್ಲಿ ಬಳಕೆಯಲ್ಲಿರುವ ಈ ಮಾದರಿಯ ಕೆಲವು ಪದಗಳನ್ನು ಗಮನಿಸಿ: ಆಬಾಲವೃದ್ಧರಾದಿಯಾಗಿ( ಮಕ್ಕಳಿಂದ ಮುದುಕರವರೆಗೆ ಎಲ್ಲರೂ), ಆಚಂದ್ರಾರ್ಕ( ಚಂದ್ರ ಸೂರ್ಯರಿರುವವರೆಗೆ), ಆಜನ್ಮಸಿದ್ಧ(ಹುಟ್ಟಿನಿಂದಲೇ ದೊರಕಿದ),

ಆಸೇತುಹಿಮಾಚಲ ಪರ್ಯಂತ(ರಾಮಸೇತುವಿನಿಂದ ಹಿಮಾಚಲದವರೆಗೆ), ಆಮರಣಾಂತ (ಸಾವುಬರುವವರೆಗೆ). ಕನ್ನಡದಲ್ಲಿ ಈ ಪದಗಳನ್ನು ಬಳಸುವಾಗ ಪದಗಳ ರೂಪದ ಬಗೆಗೆ ಗಮನಹರಿಸುವಷ್ಟು ಅವುಗಳ ಅರ್ಥದ ಕಡೆಗೆ ಗಮನವಿಡುವುದಿಲ್ಲ. 'ಅಹೋರಾತ್ರಿ' ಎಂಬ ಪದವನ್ನು ಎಡೆಬಿಡದ, ನಿಲುಗಡೆ ಇಲ್ಲದೆ ಎಂಬ ಅರ್ಥದಲ್ಲಿ ಈಚೆಗೆ ಬಳಸುತ್ತಿದ್ದಾರೆ. ಆ ಪದದ ದಿಟವಾದ ಅರ್ಥ 'ಹಗಲೂ ಇರುಳೂ' ಎಂದಾಗಿದೆ.

## ಭಾಷೆಯ ಕಟ್ಟುಗಳನ್ನು ಹೊಂದಿರದ ರಚನೆಗಳ ಮಾತು

'ಈ ಕಾರ್ಯಕ್ರಮದ ಪ್ರಾಯೋಜಿಸಿದವರು...' ಎಂಬ ವಾಕ್ಯವನ್ನು ಟಿವಿ ಚಾನೆಲ್‌ನಲ್ಲಿ ನೀವು ಆಗಾಗ ಕೇಳಿರುತ್ತೀರಿ. ನಾವು ನಿರೀಕ್ಷಿಸುವ ವಾಕ್ಯ 'ಈ ಕಾರ್ಯಕ್ರಮವನ್ನು ಪ್ರಾಯೋಜಿಸಿದವರು' ಇಲ್ಲವೇ 'ಈ ಕಾರ್ಯಕ್ರಮದ ಪ್ರಾಯೋಜಕರು'. ಆದರೆ ಈಗ ಕೇಳಿಸಿಕೊಳ್ಳುತ್ತಿರುವ ವಾಕ್ಯರಚನೆ ಸರಿಯಾಗಿಲ್ಲ. ಹಾಗಿದ್ದಲ್ಲಿ ಇಲ್ಲಿನ ಗೊಂದಲಕ್ಕೆ ಕಾರಣವೇನು? 'ಪ್ರಾಯೋಜಕರು' ಮತ್ತು 'ಪ್ರಾಯೋಜಿಸಿದವರು' ಎಂಬ ರಚನೆಗಳನ್ನು ಒಂದೇ ಅರ್ಥವುಳ್ಳವುಗಳೆಂದು ಪರಿಗಣಿಸಿದ್ದರಲ್ಲಿ ಅಷ್ಟೇನೂ ತಪ್ಪಿಲ್ಲ. ಆದರೆ ಅವೆರಡರ ಒಳರಚನೆ ಬೇರೆ ಬೇರೆ. 'ಪ್ರಾಯೋಜಕರು' ಒಂದು ನಾಮಪದ. ಅದರ ಕೊನೆಯಲ್ಲಿರುವ 'ರು' ಪ್ರತ್ಯಯ ಬಹುವಚನ ಇಲ್ಲವೇ ಗೌರವ ಸೂಚಕ ಪ್ರತ್ಯಯವಾಗಿದೆ. ಆದರೆ 'ಪ್ರಾಯೋಜಿಸಿದವರು' ರೂಪದಲ್ಲಿ 'ಪ್ರಾಯೋಜಿಸಿದ+ ಅವರು' ಎಂಬ ರೂಪಗಳಿವೆ. ಇದು ಒಂದು ಕ್ರಿಯಾಪದಗುಚ್ಛದ ಪರಿವರ್ತಿತ ರೂಪ. ಒಂದು ಉದಾಹರಣೆಯ ಮೂಲಕ ಇದನ್ನು ಅರಿಯೋಣ. 'ಜನರು ಬಸ್ಸನ್ನು ಸುಟ್ಟರು' ಎಂಬ ವಾಕ್ಯದಲ್ಲಿ 'ಬಸ್ಸನ್ನು ಸುಟ್ಟರು' ಎಂಬುದು ಕ್ರಿಯಾಪದಗುಚ್ಛ. ಈ ವಾಕ್ಯವನ್ನು ಪರಿವರ್ತಿಸಿ ಒಂದು ಪ್ರಶ್ನೆಯನ್ನಾಗಿ ಮಾಡೋಣ. ಆಗ ಸಿಗುವ ವಾಕ್ಯ ಹೀಗಿರುತ್ತದೆಯಷ್ಟೆ. 'ಬಸ್ಸನ್ನು ಸುಟ್ಟವರು ಯಾರು?' ಇಲ್ಲಿ 'ಬಸ್ಸನ್ನು ಸುಟ್ಟರು' ಎಂಬ ಕ್ರಿಯಾಪದಗುಚ್ಛವೇ 'ಬಸ್ಸನ್ನು ಸುಟ್ಟವರು' ಎಂದು ಬದಲಾಗಿದೆ. ನಾವು ಗಮನಿಸುತ್ತಿರುವ ಉದಾಹರಣೆಯಲ್ಲೂ "ಪ್ರಾಯೋಜಿಸಿದವರು' ಹೀಗೆ ಒಂದು ಕ್ರಿಯಾಪದಗುಚ್ಛ. ಆದ್ದರಿಂದ ಅದನ್ನು ನಾಮಪದದ ಗುಚ್ಛದಂತೆ ಬಳಸಲು ಸಾಧ್ಯವಿಲ್ಲ. ಹಾಗಾಗಿ 'ಈ ಕಾರ್ಯಕ್ರಮದ ಪ್ರಾಯೋಜಿಸಿದವರು...' ಸರಿಯಾದ ರಚನೆಯಲ್ಲ. ಏಕೆಂದರೆ ಈ ರಚನೆಯಲ್ಲಿ ಎರಡು ಪದಗುಚ್ಛಗಳನ್ನು ನಾಮಪದಗಳೆಂದು ತಿಳಿಯುವಂತೆ ಮಾಡುವ ಷಷ್ಠೀ ವಿಭಕ್ತಿ ಪ್ರತ್ಯಯವಿದೆ. (ಕಾರ್ಯಕ್ರಮ+ಅ= ಕಾರ್ಯಕ್ರಮದ). ಇದೇ ಮಾದರಿಯಲ್ಲಿ 'ನಿರ್ದೇಶಕರು' ಮತ್ತು 'ನಿರ್ದೇಶಿಸಿದವರು' ಎಂಬ ರಚನೆಗಳನ್ನು ವಾಕ್ಯದಲ್ಲಿ ಬಳಸಿ ನೋಡಿ. ಅವರೆಡರ ಅರ್ಥದಲ್ಲಿ ಅಷ್ಟು ವ್ಯತ್ಯಾಸಗಳಿಲ್ಲವಾದರೂ ಅವರೆಡರ ವ್ಯಾಕರಣ ಗುಣಗಳು ಬೇರೆ ಬೇರೆ ಎನ್ನುವುದು ಗೊತ್ತಾಗುತ್ತದೆ.

ಶ್ರೀನಿವಾಸ ಕಾರ್ಕಳ (ಮಂಗಳೂರು) ಇವರು ಟಿವಿ ವಾರ್ತೆಯಲ್ಲಿ ಕಂಡ ವಾಕ್ಯವೊಂದನ್ನು ಬರೆದು ಇದು ಸರಿಯೇ ಎಂದು ಕೇಳಿದ್ದಾರೆ. ಆ ವಾಕ್ಯ ಹೀಗಿದೆ:' ನೂರಾರು **ಕುಟುಂಬಗಳಿಗೆ** ಸುರಕ್ಷಿತ ಸ್ಥಳಗಳಿಗೆ ಸ್ಥಳಾಂತರಿಸಲಾಗಿದೆ' ಇದು ಕನ್ನಡ ವ್ಯಾಕರಣದ ಕಟ್ಟುಗಳನ್ನು ಮೀರಿದೆ. ಹಾಗಾಗಿ ಸರಿಯಲ್ಲ. **ಕುಟುಂಬಗಳನ್ನು** ಎಂದು ಬರೆಯಬೇಕಾದ ಕಡೆಯಲ್ಲಿ **ಕುಟುಂಬಗಳಿಗೆ** ಎಂದು ಬರೆಯಲಾಗಿದೆ. ಇಂತಹ ತಪ್ಪುಗಳು

ಹೆಚ್ಚು ಕಡೆ ನಡೆಯುತ್ತಿವೆ ಎಂಬುದನ್ನೂ ಶ್ರೀಯುತರು ಉದಾಹರಣೆಗಳ ಜತೆ ಬರೆದಿದ್ದಾರೆ. ಇಂತಹುದೇ ಬಗೆಯ ತಪ್ಪು ಬರವಣಿಗೆಯನ್ನು ಎಚ್.ಎಸ್.ಪಾಟೀಲ (ಕೊಪ್ಪಳ) ಇವರು ತಮ್ಮ ಕಾಗದದ ಮೂಲಕ ಬರೆದು ತಿಳಿಸಿದ್ದಾರೆ. ಹಲವು ಬಾರಿ ಒಂದು ಮಾತನ್ನು ಹೇಳುತ್ತಿರುತ್ತೇನೆ. ಅದೆಂದರೆ ಭಾಷೆಯಲ್ಲಿ ಒಂದೇ ಬಗೆಯ ತಪ್ಪುಗಳನ್ನು ಹಲವರು ಹಲವು ಬಾರಿ ಮಾಡುತ್ತಿದ್ದರೆ ಆಗ ಆ ತಪ್ಪು ಭಾಷೆಯಲ್ಲಿ ನಡೆಯುತ್ತಿರುವ ಯಾವುದೋ ಒಂದು ಬದಲಾವಣೆಯನ್ನು ಸೂಚಿಸುತ್ತಿರಬಹುದೆಂಬುದು. ಮೇಲಿನ ವಾಕ್ಯದಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯವಾದ –ಅನ್ನು ಬದಲಾಗಿ ಚತುರ್ಥಿ ವಿಭಕ್ತಿ ಪ್ರತ್ಯಯವಾದ –ಗೆ ಎಂಬುದನ್ನು ಬಳಸಲಾಗಿದೆ. ಈ ಬಗೆಯ ತಪ್ಪುಗಳಲ್ಲಿ ಹೆಚ್ಚಾಗಿ ಅನ್ನು ಬದಲಾಗಿ ಗೆ ಬಳಸಲಾಗುವುದೇ ಹೊರತು –ಗೆ ಪ್ರತ್ಯಯ ಬರಬೇಕಾದ ಕಡೆಗಳಲ್ಲಿ ಅನ್ನು ಪ್ರತ್ಯಯವನ್ನು ಬಳಸುವುದಿಲ್ಲ. ಅಂದರೆ ಅವನು ಊರಿಗೆ ಹೋದ ಎಂಬ ವಾಕ್ಯವನ್ನು ಅವನು ಊರನ್ನು ಹೋದ ಎಂದು ಬರೆಯುವುದಿಲ್ಲ. ಆದ್ದರಿಂದ ಈ ಎರಡು ಪ್ರತ್ಯಯಗಳು ಒಂದರ ಬದಲಾಗಿ ಒಂದು ಬಳಕೆಯಾಗುತ್ತಿಲ್ಲ. ಚತುರ್ಥಿ ವಿಭಕ್ತಿ ಪ್ರತ್ಯಯವು ದ್ವಿತೀಯೆಯ ಕೆಲಸವನ್ನೂ ಮಾಡತೊಡಗುವ ಬದಲಾವಣೆ ಕನ್ನಡದಲ್ಲಿ ಮೊದಲಾಗಿದೆಯೇ?

ಕೆಲವರು ಇದು ಹೊಸ ಇಂಡೋ ಆರ್ಯನ್ ಭಾಷೆಗಳ (ಹಿಂದಿ, ಉರ್ದು ಮುಂತಾದವು) ಪ್ರಭಾವ ಎಂದು ಹೇಳುತ್ತಾರೆ. ಏಕೆಂದರೆ ಆ ಭಾಷೆಗಳಲ್ಲಿ ಈ ಎರಡೂ ವಿಭಕ್ತಿಗಳಿಗೆ ಒಂದೇ ಪ್ರತ್ಯಯವನ್ನು ಬಳಸುವುದುಂಟು. (ಉದಾ.ಗೆ ರಾಮ್ ಕೋ ಬುಲಾವೋ/ರಾಮನನ್ನು ಕರೆ, ರಾಮ್ ಕೋ ಮಾರೋ/ರಾಮನಿಗೆ ಹೊಡೆ) ಆದರೆ ಇದು ಕನ್ನಡದಲ್ಲಿ ಆಗುತ್ತಿರುವ ಬದಲಾವಣೆಯನ್ನು ಇಡಿಯಾಗಿ ಹೇಳುವಂತೆ ತೋರುತ್ತಿಲ್ಲ. ಅನ್ನು ವಿಭಕ್ತಿ ಪ್ರತ್ಯಯ ಬಳಕೆಯಾಗುವ ವಾಕ್ಯದ ಕ್ರಿಯಾಪದಕ್ಕೆ ಗೊತ್ತಾದ ಲಕ್ಷಣಗಳಿರುತ್ತವೆ. ಅಂತಹ ಕ್ರಿಯಾಪದಗಳು ತಾವು ಸೂಚಿಸುವ ಕೆಲಸದ ಪರಿಣಾಮ ಯಾರ ಮೇಲೆ ಆಗುತ್ತಿದೆ ಎಂಬುದನ್ನು ಸೂಚಿಸಬಲ್ಲವು. ಹುಡುಗ ಹಣ್ಣನ್ನು ತಿಂದನು ಎಂಬ ವಾಕ್ಯದ ಕ್ರಿಯಾಪದ ತಿನ್ನು. ತಿನ್ನುವ ಕ್ರಿಯೆಯಲ್ಲಿ ತಿನ್ನುವ ವ್ಯಕ್ತಿ ಇರುವಂತೆ ತಿನ್ನುವುದೇನನ್ನು ಎಂಬುದೂ ಸೂಚಿತವಾಗಬಹುದು. ಆದರೆ ಎಲ್ಲ ಕ್ರಿಯಾಪದಗಳೂ ಹೀಗಿರುವುದಿಲ್ಲ. ಉದಾ.ಗೆ. ಅಳು, ನಗು, ಓಡು ಮುಂತಾದವು. ಈ ಕ್ರಿಯಾಪದಗಳು ಕ್ರಿಯೆಯನ್ನು ಮಾಡುವವರು ಯಾರು ಎಂಬುದನ್ನು ಮಾತ್ರ ಹೇಳಬಲ್ಲವು. ಕನ್ನಡದಲ್ಲಿ ಇರುವ ಕ್ರಿಯಾಪದಗಳ ಈ ವಿಂಗಡಣೆಯು ಕಳೆದು ಹೋಗುತ್ತಿರುವುದೇ ನಾವೀಗ ನೊಡುತ್ತಿರುವ ತಪ್ಪು ಪ್ರಯೋಗಗಳಿಗೆ ಕಾರಣವಾಗಿರಬಹುದೇ? ಹೆಚ್ಚಿನ ಶೋಧಗಳು ನಮಗೆ ಏನಾಗುತ್ತಿದೆ ಎಂಬುದನ್ನು ಹೇಳಬಹುದು. ಇಲ್ಲವೇ ಈ ಬದಲಾವಣೆ ಮುಗಿಯುವವರೆಗೂ ಕಾಯಬೇಕು. ಕೊನೆಯದಾಗಿ ಈ ಬಗೆಯ ತಪ್ಪುಗಳು ಹೆಚ್ಚಾಗಿ ಬರವಣಿಗೆಯಲ್ಲಿ ಕಾಣುತ್ತಿವೆ. ಮಾತಿನಲ್ಲಿ ಕಡಿಮೆ ಎಂದು ತೋರುತ್ತದೆ.

**ಅರಿಹಂತ**

ಶೇಷಾದ್ರಿ ಎಸ್. (ಬೆಂಗಳೂರು) ಇವರು **ಅರಿಹಂತ** ಎಂಬ ಪದವನ್ನು ಬಳಸುವುದು ಸರಿಯೇ ಎಂದು ಕೇಳಿದ್ದಾರೆ. ಈಚೆಗೆ ಸುದ್ದಿಯಲ್ಲಿದ್ದ ಪದವಿದು. ಅರ್ಹತ್> ಅರ್ಹಂತ

ಪದದ ಪ್ರಾಕೃತ ರೂಪ ಅರಿಹಂತ. ಕನ್ನಡದಲ್ಲೂ ಇದು ಬಳಕೆಯಲ್ಲಿದೆ. ಸಂಸ್ಕೃತದಿಂದ ಪದಗಳನ್ನು ಪಡೆದುಕೊಳ್ಳುವಾಗ ಮೂಲಪದದಲ್ಲಿ ಎರಡು ವ್ಯಂಜನಗಳು ಒಟ್ಟಾಗಿ ಬರುತ್ತಿದ್ದರೆ ಅವುಗಳ ನಡುವೆ ಉಕಾರ (ಉದಾ. ದರುಶನ, ಭಕುತಿ, ರಕುತ)ಇಲ್ಲವೇ ಇಕಾರ (ಉದಾ.ಗೆ ಕಾರಿಯ, ಮರಿಯಾದೆ)ವನ್ನು ಸೇರಿಸುವುದು ಕನ್ನಡದಲ್ಲಿ ಕಾಣುವ ಬಗೆ. ಇದು ಕನ್ನಡದ ಕಟ್ಟೋ ಇಲ್ಲವೇ ಪ್ರಾಕೃತದ ನೆಲೆಯೋ ಹೇಳಲಾಗುವುದಿಲ್ಲ. ಈ ಪದ ಮೂಲ ಸಂಸ್ಕೃತದಲ್ಲಿ ಬೌದ್ಧಧರ್ಮದ ಪರಿಭಾಷೆಯಗಿದ್ದು ನಿರ್ವಾಣ ಪಡೆದವರನ್ನು ಸೂಚಿಸುತ್ತಿತ್ತು. ಕನ್ನಡದಲ್ಲಿ ಜೈನ ಪರಿಭಾಷೆಯಾಗಿ ಬಳಕೆಯಾಗಿದೆ.

ಮಂಜಪ್ಪ ಎಚ್. (ಹೊನ್ನಾಳಿ) ಇವರು ಊರೂರು ಪದವನ್ನು ಸವರ್ಣದೀರ್ಘ ಸಂಧಿಗೆ ಉದಾಹರಣೆಯಾಗಿ ನೀಡುವುದು ಸರಿಯೇ ಎಂದು ಕೇಳಿದ್ದಾರೆ. ಹಾಗೆಂದು ಕಾರ್ಯಾಗಾರವೊಂದರಲ್ಲಿ ಭಾಗವಹಿಸಿದವರಿಗೆ ತಿಳಿಸಕೊಡಲಾಯಿತಂತೆ. ಶಾಲೆಗಳಲ್ಲಿ ಕನ್ನಡ ಕಲಿಸುವವರನ್ನು ಎಷ್ಟು ಗೊಂದಲಕ್ಕೆ ತಳ್ಳಲಾಗಿದೆ ಎಂದರೆ ಅದಕ್ಕೆ ಇದೊಂದು ಉದಾಹರಣೆಯಾಗಿದೆ. ಎರಡು ಕನ್ನಡ ಪದಗಳು ಸೇರಿದಾಗ ಆಗುವ ಧ್ವನಿ ಬದಲಾವಣೆಗಳನ್ನು ವಿವರಿಸಲು ಸಂಸ್ಕೃತ ಸಂಧಿಯ ನಿಯಮಗಳನ್ನು ತರುವ ಬಗೆ ಇನ್ನೂ ಜಾರಿಯಲ್ಲಿದೆ. ಯಾರಿಗಾದರೂ ಊರೂರು ಪದರಚನೆಯಲ್ಲಿರುವುದು ಲೋಪ ಸಂಧಿ ಎಂಬುದು ಗೊತ್ತಾಗುವಂತಿದೆ. ಮೊದಲಿಗೆ ಬರುವ ಊರು ಉಕಾರವನ್ನು ಕಳೆದುಕೊಳ್ಳುವುದೇ ಇದಕ್ಕೆ ಕಾರಣ.

### ಪಾಶ್ಚಾತ್ಯ ಮತ್ತು ಪಾಶ್ಚಿಮಾತ್ಯ

ರಘುನಾಥ್.ಎಂ.ಎಸ್ (ಬೆಂಗಳೂರು) ಇವರು ಪಾಶ್ಚಾತ್ಯ ಮತ್ತು ಪಾಶ್ಚಿಮಾತ್ಯ ಎಂಬ ರೂಪಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಸಂಸ್ಕೃತ ನುಡಿಯ ಕಟ್ಟುಗಳನ್ನು ಪಾಲಿಸುವವರಾದರೆ ಪಾಶ್ಚಾತ್ಯ ರೂಪ ಸರಿ. ಪಾಶ್ಚಿಮಾತ್ಯ ರೂಪ ಸರಿಯಲ್ಲ. ಕನ್ನಡದಲ್ಲಿ ಎರಡೂ ರೂಪಗಳೂ ಬಳಕೆಯಲ್ಲಿವೆ. ಪಶ್ಚಿಮಕ್ಕೆ ಸಂಬಂಧಿಸಿದ್ದು ಎಂಬ ತಿರುಳಿನಲ್ಲಿ ಪಾಶ್ಚಿಮಾತ್ಯ ಎಂಬ ರಚನೆಯನ್ನು ಕನ್ನಡದಲ್ಲಿ ಬಳಸಲಾಗುತ್ತಿದೆ. ಇದೇ ಮಾದರಿಯಲ್ಲಿ ಪೂರ್ವಕ್ಕೆ ಸಂಬಂಧಿಸಿದ್ದು ಎನ್ನುವ ತಿರುಳುಳ್ಳ ಪೌರ್ವಾತ್ಯ ಎಂಬ ರಚನೆಯೂ ಕನ್ನಡದಲ್ಲಿ ಬಳಕೆಯಲ್ಲಿದೆ. ಆದರೆ ಸಂಸ್ಕೃತ ನುಡಿಯ ಕಟ್ಟುಗಳನ್ನು ಒಪ್ಪುವವರಿಗೆ ಪೌರಸ್ತ್ಯ ರೂಪ ಸರಿ. ಇದೆಲ್ಲ ಗೋಜಲೇಕೇ? ಕನ್ನಡದ್ದೇ ಆದ ಪಡುವಣ ಮತ್ತು ಮೂಡಣ ಎಂಬ ಪದಗಳನ್ನು ಬಳಸಬಹುದಲ್ಲವೇ? ಅಂದಹಾಗೆ ಪಾಶ್ಚಾತ್ಯ ರೂಪಕ್ಕೂ ಪಶ್ಚಾತ್ ಎಂಬ ರೂಪಕ್ಕೂ ನಂಟಿದೆ. ಕನ್ನಡದಲ್ಲಿ ಪಶ್ಚಾತ್, ಪಶ್ಚಾತ್ತಾಪ ರೂಪಗಳು ಬಳಕೆಯಲ್ಲಿವೆ. ಪಶ್ಚಾತ್ ಎಂದರೆ ಬಳಿಕ ಎಂದಾಗುತ್ತದೆ. ಪಶ್ಚಾತ್ತಾಪ ಎಂದಾಗ 'ಎಲ್ಲ ಆಗಿ ಹೋದ ಮೇಲೆ ಕೊರಗುವುದು, ಬೇಯುವುದು' ಎಂಬ ತಿರುಳಿದೆಯಷ್ಟೆ.

### ಪೋಲೀಸ್-ಪೊಲೀಸ್

ಮನೋರಮಾ.ಎಂ.ಭಟ್ (ಮಂಗಳೂರು) ಇವರು ಕನ್ನಡ ಬರವಣಿಗೆಯಲ್ಲಿ ಇಂಗ್ಲಿಶ್ ಪದಗಳನ್ನು ಬರೆಯುವಾಗ ಆಗುತ್ತಿರುವ ತಪ್ಪುಗಳ ಬಗ್ಗೆ ಕೇಳಿದ್ದಾರೆ. ಅವರ

ಪ್ರಕಾರ 'ಪೋಲೀಸ್' ಎಂದು ಬರೆಯುವ ಬದಲು 'ಪೊಲೀಸ್'ಎಂದು ಬರೆಯುವುದು ಸರಿಯಲ್ಲ. ಇದು ಒಂದೆರಡು ಪದಗಳಿಗೆ ಮೀಸಲಾದ ತೊಂದರೆಯಲ್ಲ. ಇಂಗ್ಲಿಶ್ ನುಡಿಯ ಪದಗಳನ್ನು ಕನ್ನಡದಲ್ಲಿ ಹೇಗೆ ಬರೆಯಬೇಕು? ಆ ಪದಗಳನ್ನು ಇಂಗ್ಲಿಶ್ ಬಲ್ಲವರು ಹೇಗೆ ನುಡಿಯುತ್ತಾರೋ ಅದಕ್ಕೆ ತಕ್ಕಂತೆ ಬರೆಯಬೇಕೋ ಅಥವಾ ಕನ್ನಡ ಮಾತಾಡುವವರು ಆ ಪದಗಳನ್ನು ಹೇಗೆ ನುಡಿಯುತ್ತಾರೋ ಹಾಗೆ ಬರೆಯ ಬೇಕೋ? ಇವೆರಡು ಹಾದಿಗಳಲ್ಲಿ ಯಾವುದನ್ನು ಆಯ್ದುಕೊಂಡರೂ ಗೊಂದಲ ತಪ್ಪಿದ್ದಲ್ಲ. ಏಕೆಂದರೆ ಇಂಗ್ಲಿಶ್ ಪದಗಳನ್ನು ಆ ನುಡಿ ಬಲ್ಲವರು ಹೇಗೆ ನುಡಿಯುತ್ತಾರೆ ಎಂಬುದನ್ನು ಕೇಳಿ ತಾಳೆ ನೋಡುವುದು ಎಲ್ಲ ಹೊತ್ತಿನಲ್ಲೂ ಆಗದ ಮಾತು. ಅದರಲ್ಲೂ ನೂರಾರು ಪದಗಳು ಕೇವಲ ಬರೆಹ ರೂಪದಲ್ಲಿ ಪರಿಚಯವಾಗುತ್ತಿರುವ ಇಂದಿನ ದಿನಗಳಲ್ಲಿ ಇದು ಇನ್ನಷ್ಟು ಕಷ್ಟಗಳನ್ನು ತಂದೊಡ್ಡಲಿದೆ. ಎರಡನೆಯ ಹಾದಿಯಲ್ಲೂ ತೊಂದರೆಗಳಿವೆ. ಏಕೆಂದರೆ ಕನ್ನಡ ಮಾತಾಡುವ ಬೇರೆ ಬೇರೆ ಪ್ರದೇಶಗಳಲ್ಲಿ ಒಂದೇ ಇಂಗ್ಲಿಶ್ ಪದವನ್ನು ಬೇರೆ ಬೇರೆ ಬಗೆಯಲ್ಲಿ ನುಡಿಯುವುದನ್ನು ಕೇಳಿದ್ದೇವೆ.ಎಲೆಕ್ಷನ್/ಇಲೆಕ್ಷನ್, ಆಕ್ಸೈಡ್/ ಓಕ್ಸೈಡ್, ಥಿಯೇಟರ್/ಥೇಟರ್, ಟಾಕೀಸ್/ಟಾಕೀಜ ,ಮೋಟಾರ್/ಮೋಟರ್ ಮುಂತಾದ ಉದಾಹರಣೆಗಳನ್ನು ಗಮನಿಸಬಹುದು.

ಕನ್ನಡದಲ್ಲಿ ಇರುವ ಉದ್ದ ಮತ್ತು ಗಿಡ್ಡ ಸ್ವರಗಳ ವ್ಯತ್ಯಾಸ ಇಂಗ್ಲಿಶ್ ನುಡಿಯಲ್ಲಿಲ್ಲ. ಅದರಲ್ಲಿ ಒತ್ತುಳ್ಳ (ಘಾತವಿರುವ) ಸ್ವರ ಮತ್ತು ಒತ್ತಿರದ (ಘಾತವಿರದ) ಸ್ವರ ಎಂಬ ವ್ಯತ್ಯಾಸವಿದೆ. ಅಲ್ಲದೆ ಕನ್ನಡಲ್ಲಿ ಇರುವುದಕ್ಕಿಂತ ಬೇರೆಯವೇ ಆದ ಸಂಯುಕ್ತ ಸ್ವರಗಳು ಇಂಗ್ಲಿಶಿನಲ್ಲಿವೆ. ಹಾಗೆಯೇ ಇಂಗ್ಲಿಶಿನ ಕೆಲವು ವ್ಯಂಜನಗಳು ಕನ್ನಡದಲ್ಲಿ ಇಲ್ಲ. ಇದರಿಂದಾಗಿ ಇಂಗ್ಲಿಶ್ ಪದಗಳನ್ನು ಅವುಗಳನ್ನು ನುಡಿಯುವಂತೆಯೇ ಕನ್ನಡದಲ್ಲಿ ಬರೆಯುವುದು ಆಗದ ಮಾತು. ಹಾಗಾದರೆ ಬೇರೆ ದಾರಿ ಯಾವುದು? ಇಂಗ್ಲಿಶಿನ ಒಂದಕ್ಕಿಂತ ಹೆಚ್ಚು ಸ್ವರಗಳಿರುವ ಪದಗಳನ್ನು ಕನ್ನಡದಲ್ಲಿ ಬರೆಯುವಾಗ ಆ ಪದಗಳ ಒತ್ತುಳ್ಳ ಸ್ವರಗಳನ್ನು ಉದ್ದ ಸ್ವರಗಳಾಗಿ ಬರೆಯುವುದು ಮತ್ತು ಉಳಿದೆಲ್ಲ ಸ್ವರಗಳನ್ನು ಗಿಡ್ಡ ಸ್ವರಗಳಾಗಿ ಬರೆಯುವುದು ಒಂದು ದಾರಿ. ಈ ಕಟ್ಟನ್ನು ಪಾಲಿಸಿದರೆ ಪೊಲೀಸ್ ಎಂದು ಬರೆಯುವುದು ಸರಿಯೆಂದೇ ಹೇಳಬೇಕಾಗುತ್ತದೆ. ಏಕೆಂದರೆ ಆ ಪದಕ್ಕೆ ಇಂಗ್ಲಿಶಿನಲ್ಲಿ ಎರಡನೆಯ ಸ್ವರದ ಮೇಲೆ ಒತ್ತಿದೆ. ಒಂದೇ ಸ್ವರವುಳ್ಳ ಪದಗಳನ್ನು ಬರೆಯುವಾಗ ಮಾತ್ರ ನಾವು ಆ ಪದಗಳನ್ನು ನುಡಿಯುವ ಬಗೆಯಲ್ಲೇ ಬರೆಯುವುದು ಸರಿ. ಬಸ್ ಮತ್ತು ಕಾರ್ ಎಂಬ ಪದಗಳನ್ನು ನೋಡಿ. ಆ ಪದಗಳಲ್ಲಿ ಇರುವ ಗಿಡ್ಡ ಮತ್ತು ಉದ್ದ ಸ್ವರಗಳ ವ್ಯತ್ಯಾಸ ಇಂಗ್ಲಿಶಿಗೆ ಸಂಬಂಧಿಸಿದ್ದಲ್ಲ. ನಾವು ಆ ಸ್ವರಗಳನ್ನು ನುಡಿಯುತ್ತಿರುವ ಬಗೆಯೇ ಹಾಗಿದೆ.

## ಮೂಗಿನ ನೇರಕ್ಕೆ

ಕೊಟ್ರೇಶ್ ಬಿ (ಹರಪನಹಳ್ಳಿ) ಇವರು 'ಮೂಗಿನ ನೇರಕ್ಕೆ' ಎಂದರೇನು ಎಂದು ಕೇಳಿದ್ದಾರೆ. ಇದು ಕನ್ನಡ ಒಂದು ಮಾತಿನ ವರಸೆ. ಕಣ್ಣುಗಳನ್ನು ಅತ್ತಿತ್ತ ಅಲುಗಿಸದೆ ಮೂಗಿನ ತುದಿ ಯಾವ ದಿಕ್ಕಿನಲ್ಲಿ ಇರುವುದೋ ಆ ಕಡೆಗೆ ನಡೆಯುವುದನ್ನು ಮೂಗಿನ ನೇರಕ್ಕೆ ನಡೆಯುವುದು ಎನ್ನುತ್ತಾರೆ. ಆದರೆ ಇದು ಬಳಕೆಯಾಗುವ ಸಂದರ್ಭ

ಬೇರೆ. ಹೆಚ್ಚಾಗಿ, ತಾನು ಹಿಡಿದ ಹಟವನ್ನು ಬಿಡದೆ ತನ್ನದೇ ಸರಿ ಎಂದು ವಾದಿಸುವವರನ್ನು ನೋಡಿದಾಗ 'ಎಲ್ಲವೂ ಅವರ ಮೂಗಿನ ನೇರಕ್ಕೇ ಆಗಬೇಕೆಂದು ಕೂತಿದ್ದಾರೆ' ಎನ್ನುವುದುಂಟು. ತಾನೇ ಸರಿ; ಉಳಿದವರೆಲ್ಲ ತಪ್ಪು ಎಂದು ತಿಳಿಯುವವರನ್ನು ಕುರಿತು ಈ ಮಾತನ್ನು ಹೆಚ್ಚಾಗಿ ಬಳಸುತ್ತೇವೆ. ಅಂದರೆ ಇದು ಜನರಲ್ಲಿ ಇರಬಾರದ ಒಂದು ಗುಣವನ್ನು ಕುರಿತು ಮಾಡುವ ಟೀಕೆಯಾಗಿದೆ.

**ಲಾಂಗ್–ಪರೋಲ್**

ಹಿರಿಯರೊಬ್ಬರು ಕನ್ನಡದಲ್ಲಿ ಲಾಂಗ್ವೆಜ್ ಎಂಬುದಕ್ಕೆ ಹೊಂದುವ ಪದ ಯಾವುದು ಎಂದು ಕೇಳಿದ್ದಾರೆ. **ಲಾಂಗ್ವೆಜ್** ಎಂಬುದಕ್ಕೆ ಎರಡು ನೆಲೆಗಳಿರುತ್ತವೆ ಒಂದು ಒಳ ನೆಲೆ. ಇದು ನಮ್ಮ ಅರಿವಿಗೆ ಬಾರದಂತೆ ನಮ್ಮ ಎಲ್ಲ ನುಡಿಚಹರೆಗಳನ್ನು ತನ್ನ ಹಿಡಿತದಲ್ಲಿರಿಸಿಕೊಂಡಿರುತ್ತದೆ. ಇದನ್ನು **ಲಾಂಗ್** ಎನ್ನುತ್ತಾರೆ. ಇನ್ನೊಂದು ಹೊರ ನೆಲೆ. ಇದು ಎಲ್ಲ ನುಡಿ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ. ಇದನ್ನು **ಪರೊಲ್** ಎನ್ನುತ್ತಾರೆ. ಲಾಂಗ್ ಮತ್ತು ಪರೊಲ್ ಫ್ರೆಂಚ್ ನುಡಿಯ ಪದಗಳು; ಇಂಗ್ಲಿಶಿನಲ್ಲಿಯೂ ಹಾಗೆ ಬಳಕೆಯಾಗುತ್ತವೆ. ಸಂಸ್ಕೃತದಲ್ಲಿ ಪರಾ ಮತ್ತು ವಾಕ್ ಎಂಬ ಪದಗಳನ್ನು ಬಳಸಬಹುದು. ಕನ್ನಡದಲ್ಲಿ **ಮಾತು** ಮತ್ತು **ನುಡಿ** ಎಂಬ ಪದಗಳು ಇವೆರಡಕ್ಕೂ ಹೊಂದಬಲ್ಲವೆಂದು ತೋರುತ್ತದೆ. ನುಡಿ ಎಂಬುದು ಕನ್ನಡದಲ್ಲಿ ಹೆಸರು ಪದವಾಗಿರುವಂತೆ ಕೆಲಸಪದವೂ ಆಗಿದೆ. ಹಾಗಾಗಿ ಅದು ಪರೊಲ್‌ಗೆ ಹೊಂದುವ ಪದವಾಗುತ್ತದೆ. ಕನ್ನಡ ನುಡಿವರಸೆಗಳಲ್ಲಿ ಮಾತು ಮತ್ತು ನಾಲಗೆ ಎಂಬ ಪದಗಳನ್ನು ಒಂದೇ ತಿರುಳಿನೊಡನೆ ಬಳಸುತ್ತಾರೆ. **ಮಾತು ನಿಂತು ಹೋಯಿತು / ನಾಲಗೆ ಬಿದ್ದು ಹೋಯಿತು** ಎಂಬ ವಾಕ್ಯಗಳನ್ನು ನೋಡಿ. ಈ ವಾಕ್ಯಗಳು ಹೇಳುವ ತಿರುಳು ಒಂದೇ. ಅಲ್ಲದೆ ಹೀಗೆ ನಾಲಗೆ ಬಿದ್ದುಹೋದಾಗ ಕೇಳಿದ್ದನ್ನು ತಿಳಿದುಕೊಳ್ಳಲು ಆಗುತ್ತದೆ. ಅಂದರೆ ಒಳನೆಲೆ ಇನ್ನೂ ಎಚ್ಚರವಾಗಿರುತ್ತದೆ. ಹೊರನೆಲೆಯಲ್ಲಿ ನುಡಿಯುವ ಕಸುವು ಇಲ್ಲವಾಗಿರುತ್ತದೆ. ಅಂದರೆ ಮಾತು ಮತ್ತು ನುಡಿಗಳು ಎರಡು ಬೇರೆ ಬೇರೆ ನೆಲೆಗಳನ್ನು ಹೇಳುತ್ತಿವೆ ಎನ್ನಲಡ್ಡಿಯಿಲ್ಲ.

**ದಿವಂಗತ–ಭುವಂಗತ**

ನಾಗೇಂದ್ರ ಅವರು **ದಿವಂಗತ** ಪದದ ಬಗೆಗೆ ಬರೆದ ಟಿಪ್ಪಣಿಯನ್ನು ಗಮನಿಸಿ **ಭುವಂಗತ** ಎನ್ನುವುದು ದಿವಂಗತಕ್ಕೆ ವಿರುದ್ಧ ಪದವೆಂದು ಹೇಳಿದ್ದಾರೆ. ಕಾಳಿದಾಸ–ಭೋಜರಾಜನ ಕತೆ ಬಲ್ಲವರು ಈ ಎರಡು ಪದಗಳನ್ನೂ ಬಳಸಿ ಚಮತ್ಕಾರವನ್ನು ಮಾಡಿರುವುದನ್ನು ಬಲ್ಲರು. ಅದಿರಲಿ. ಎರಡು ಪದಗಳನ್ನು ಒಂದು ಇನ್ನೊಂದಕ್ಕೆ ವಿರುದ್ಧವಾದುದು ಎಂದು ತಿಳಿಯುವ ಬಗೆಯನ್ನು ನಾನು ಒಪ್ಪುವುದಿಲ್ಲ. ಎರಡೂ ಬೇರೆಬೇರೆ ತಿರುಳುಳ್ಳ ಪದಗಳು ಎಂದಷ್ಟೇ ತಿಳಿಯ ಬೇಕು. ಹಿಂದೆಯೇ ಹೇಳಿದಂತೆ ನಿಷೇಧ ಪದಗಳ ಮಾತು ಬೇರೆ. ಏಕೆಂದರೆ ಅವು ನುಡಿಯ ರಚನೆಯಲ್ಲಿ ಹುಟ್ಟಿಕೊಳ್ಳುವಂತಹವು. ಅದಕ್ಕಾಗಿ ನಿಷೇಧ ಪ್ರತ್ಯಯಗಳು ಇರುತ್ತವೆ. ಈ ಕುರಿತು ಬಲ್ಲವರು ಚಿಂತಿಸಬೇಕೆಂದು ಕೋರುತ್ತೇನೆ.

**ವಾಹಿನಿ–ವಾಹನಿ**

ಲೋಕೇಶ್ (ಹುಬ್ಬಳ್ಳಿ) ಇವರು ವಾಹಿನಿ, ವಾಹನಿ ಎಂಬ ಪದಗಳಲ್ಲಿ ಯಾವುದು ಸರಿಯಾದುದು ಎಂದು ಕೇಳಿದ್ದಾರೆ. ವಾಹಿನಿ ಎಂಬುದಕ್ಕೆ ಹರಿವು, ದಳ, ಸೈನ್ಯದ ತುಕಡಿ ಎಂಬೆಲ್ಲ ತಿರುಳುಗಳಿವೆ. ಪಶ್ಚಿಮವಾಹಿನಿ ಎಂದರೆ ಪಶ್ಚಿಮ ದಿಕ್ಕಿಗೆ ಹರಿಯುವ ನದಿ ಎಂದು ತಿಳಿಯುತ್ತೇವೆಯಷ್ಟೆ. ಇನ್ನು ಸಿಂಹವಾಹಿನಿ ಎಂಬ ಪದದಲ್ಲಿ ಸಿಂಹವನ್ನು ವಾಹನವಾಗಿ ಉಳ್ಳವಳು ಎಂಬ ತಿರುಳಿದೆ. ಕನ್ನಡದಲ್ಲಿ **ವಾಹಿನಿ** ಮತ್ತು **ವಾಹನೆ** ಎಂಬ ಎರಡು ಪದಗಳು ಈ ತಿರುಳಿನಲ್ಲಿ ಬಹು ಹಿಂದಿನಿಂದಲೂ ಬಳಕೆಯಾಗುತ್ತ ಬಂದಿವೆ. ಸಂಸ್ಕೃತ ಪದಗಳನ್ನು ದೇಶೀಯ ನುಡಿಗಳು ಪಡೆದುಕೊಂಡಾಗ ತಿರುಳು ಮತ್ತು ರೂಪಗಳನ್ನು ತಮಗೆ ಬೇಕಾದಂತೆ ಬದಲಿಸಿಕೊಳ್ಳುತ್ತವೆ. ಕನ್ನಡ ಬಲ್ಲ ತೆಲುಗರು ಕನ್ನಡದಲ್ಲಿ ಬಳಕೆಯಾಗುವ ಎಷ್ಟೋ ಸಂಸ್ಕೃತ ಪದಗಳ ರೂಪ ಮತ್ತು ತಿರುಳುಗಳನ್ನು ಒಪ್ಪಲಾರರು. ಏಕೆಂದರೆ ಅವೇ ಸಂಸ್ಕೃತ ಪದಗಳನ್ನು ತೆಲುಗು ನುಡಿಯಲ್ಲಿ ಬಳಸುವ ಬಗೆ ಬೇರೆಯಾಗಿರುತ್ತದೆ. ಹೀಗಾಗಿ ವಾಹಿನಿ ಎಂಬ ರೂಪ ಬೇರೆ ನುಡಿಯವರಿಗೆ ಸರಿ ಎನ್ನಿಸದೇ ಹೋಗುತ್ತದೆ. ಒಂದು ವೇಳೆ ಆ ನುಡಿಯಲ್ಲಿ ವಾಹನಿ ಎಂಬ ರೂಪ ಬಳಕೆಯಲ್ಲಿದ್ದರೆ ಅದೆ ಕನ್ನಡದಲ್ಲೂ ಇರಬೇಕೆಂದು ಬಯಸುತ್ತಾರೆ. ಕನ್ನಡ ಮತ್ತು ತೆಲುಗು ನುಡಿಗಳು **'ಅವಸರ'**( ಕನ್ನಡದಲ್ಲಿ ತುರ್ತು , ತೆಲುಗಿನಲ್ಲಿ ಅಗತ್ಯ ಎಂಬ ತಿರುಳುಗಳಿವೆ) ಎಂಬ ಸಂಸ್ಕೃತ ಪದವನ್ನು ಬಳಸುವ ಬಗೆಯನ್ನು ನೋಡಿದರೆ ಮೇಲಿನ ಮಾತು ಸರಿಯೆಂದು ತಿಳಿಯುತ್ತದೆ.

**ಕೂಡ್ರಿಸು–ಕೂರಿಸು**

ನವೀನ್.ಎನ್ (ಅರಸಿಕೆರೆ,ಹರಪನಹಳ್ಳಿ ತಾ) ಇವರು **ಕೂಡ್ರಿಸು** ಮತ್ತು **ಕೂಡಿಸು** ಈ ಎರಡರಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಎರಡೂ ರೂಪಗಳೂ ಬಳಕೆಯಲ್ಲಿವೆ. ಎರಡೂ ಸರಿಯಾಗಿಯೇ ಇವೆ. ಆದರೆ ಇವೆರಡರಲ್ಲೂ –ಇಸು ಎಂಬ ಪ್ರತ್ಯಯವಿದೆ. ಅದನ್ನು ಬಿಟ್ಟರೆ ಕೂಡ್ರು ಮತ್ತು ಕೂಡು ಎಂಬ ಪದಭಾಗಗಳು ಉಳಿಯುತ್ತವಷ್ಟೆ. ಇವೆರಡರಲ್ಲಿ ಕೂಡು ಎಂಬುದನ್ನು ಸೇರಿಸು (ಅಂಕಗಣಿತದಲ್ಲಿ ಬಳಸುವುದನ್ನು ಗಮನಿಸಿ) ಎಂಬ ತಿರುಳಿನೊಡನೆ ಬಳಕೆಯಾಗುತ್ತದೆ. ಆದರೆ ಕೂಡ್ರು ಎಂಬ ಪದದ ತಿರುಳನ್ನೇ ಹೊಂದಿರುವ ಹಲವು ರೂಪಗಳು ಕನ್ನಡ ಮಾತಾಡುವ ಹಲವು ಭಾಗಗಳಲ್ಲಿ ಬಳಕೆಯಾಗುತ್ತಿವೆ. **ಕೂರು, ಕುಂಡ್ರು, ಕೂತುಕೋ, ಕುಂತುಕೋ, ಕುಳ್ಳಿರು, ಕುಂದ್ರು, ಕುಂದಿರು, ಕುಳ್ತಿರು, ಕೂತಿರು, ಕೂಡು, ಕುಂದುರು, ಕುಳಿತುಕೋ** ಹೀಗೆ ಇನ್ನೂ ಹಲವು ಇದ್ದಾವು. ಈ ಎಲ್ಲ ರೂಪಗಳು ನೆಲೆ ನಿಂತಿರುವುದಕ್ಕೆ ಕನ್ನಡ ನುಡಿಯು ಬೆಳೆದು ಬಂದ ಬಗೆಯಲ್ಲಿ ಕಾರಣಗಳಿವೆ. ಈಗಿರುವ ಪದಗಳಲ್ಲಿ ಮೊದಲ ಸ್ವರ ಗಿಡ್ಡ(ಹ್ರಸ್ವ) ಅಗಿರುವಂತಹವು ಒಂದು ಗುಂಪು. ಮೊದಲ ಸ್ವರ ಉದ್ದ (ದೀರ್ಘ) ಅಗಿರುವಂತಹವು ಇನ್ನೊಂದು ಗುಂಪು. ಹೀಗೆ ಗುಂಪು ಮಾಡಿ ನೋಡಿದರೆ ಗಿಡ್ಡ ಸ್ವರಗಳಿರುವ ಪದಗಳಲ್ಲಿ ಆ ಸ್ವರದ ಮುಂದೆ ವ್ಯಂಜನ ದ್ವಿತ್ವ(ಒತ್ತಕ್ಷರ) ಬರುವುದನ್ನು ಗಮನಿಸಿ. ಆದರೆ ಉದ್ದ ಸ್ವರವಿರುವ ಪದಗಳಲ್ಲಿ ಆ ಸ್ವರದ ಬಳಿಕ ಒತ್ತಕ್ಷರ ಬರುವುದಿಲ್ಲ. ಇದು ಕನ್ನಡ ನುಡಿಯ ಒಂದು ಜಾಯಮಾನ.

**ಸ್ಥಿತಿವಂತ–ಸ್ಥಿತಿವಂತೆ**

ನಟರಾಜ್ ವಿ (ಕೊಳ್ಳೆಗಾಲ) ಇವರು ಗುಣವಂತ, ಸ್ಥಿತಿವಂತ ಮುಂತಾದ ಗುಣಪದಗಳನ್ನು ಹೆಂಗಸರಿಗೆ ಹೊಂದುವಂತೆ ಬಳಸುವಾಗ ಅವುಗಳನ್ನು ಗುಣವಂತೆ, ಸ್ಥಿತಿವಂತೆ ಎಂದು ಬದಲಿಸಬೇಕೇ ಎಂದು ಕೇಳಿದ್ದಾರೆ. ಗುಣಪದಗಳು ನಾಮಪದಗಳ ಲಿಂಗ ವಚನಗಳಿಗೆ ತಕ್ಕಂತೆ ಬದಲಾಗಬೇಕೆಂಬ ಕಟ್ಟು ಕನ್ನಡ ನುಡಿಯಲ್ಲಿ ಇಲ್ಲ. ಅಂತಹ ಕಟ್ಟುಗಳಿರುವ ನುಡಿಗಳು ಬೇರೆ ಇವೆ. ಸಂಸ್ಕೃತ ಕೂಡ ಅಂತಹ ಭಾಷೆ. ಕನ್ನಡದಲ್ಲಿ ಗುಣಪದಗಳನ್ನು ನಾಮಪದಗಳ ಮೊದಲಿಗೆ ಇರಿಸಿದರೆ ಸಾಕು. ಇದು ಕನ್ನಡದ ಗುಣಪದಗಳಿಗೆ ಅನ್ವಯಿಸುವಂತೆ ಬೇರೆ ಭಾಷೆಗಳಿಂದ ಬಂದ ಗುಣಪದಗಳಿಗೂ ಅನ್ವಯಿಸುತ್ತದೆ. **ಕಳ್ಳ ಹುಡುಗಿ** ಎಂದರೆ ಸಾಕು. **ಕಳ್ಳಿ ಹುಡುಗಿ** ಎಂದು ಹೇಳಬೇಕಾಗಿಲ್ಲ. ಆದರೆ ಕನ್ನಡದಲ್ಲಿ ಗುಣಪದಗಳನ್ನು ಕೆಲವೊಮ್ಮೆ ಬಿಡಿಯಾಗಿ ನಾಮಪದಗಳಂತೆಯೂ ಬಳಸಬಹುದು. ಆಗ ಮಾತ್ರ ಅವುಗಳನ್ನು ಲಿಂಗ, ವಚನ ಸೂಚಿಸುವಂತೆ ಬದಲಿಸಬೇಕಾಗುತ್ತದೆ. ಉದಾ: ಅವಳು ಗುಣವಂತೆ ಇಲ್ಲವೇ ಅವಳು ಗುಣವಂತಳು ಎಂದು ಹೇಳುತ್ತೇವೆ.

**ಬಿಮ್ಮನ್ಸೆ**

ಸತೀಶ್ (ಮೈಸೂರು) ಇವರು ಬಿಮ್ಮನ್ಸೆ ರೂಪದ ಮೂಲವನ್ನು ಕುರಿತು ಕೇಳಿದ್ದಾರೆ. ಬಸಿರಿ ಹೆಂಗಸನ್ನು ಕನ್ನಡ ಮಾತಾಡುವ ಕೆಲವು ಕಡೆಗಳಲ್ಲಿ ಬಿಮ್ಮನ್ಸಿ, ಬಿಮ್ಮನ್ಸೆ ಎಂದು ಹೇಳುವುದುಂಟು. ದಪ್ಪಗಿರುವ ಹೆಂಗಸು ಎಂಬುದು ಈ ಪದದ ಒಟ್ಟು ತಿರುಳು. ಬಿಮ್ ಎಂಬ ಪದಭಾಗ ಮೊದಲಲ್ಲಿ ಇದೆಯಷ್ಟೆ. ಇದರಿಂದ ಹುಟ್ಟಿದ ಹಲವು ಪದಗಳು (ಉದಾ:ಬಿಮ್ಮಗೆ, ಬಿಮ್ಮಂತ) ಕನ್ನಡದಲ್ಲಿ ಬಳಕೆಯಲ್ಲಿವೆ. ಇಲ್ಲಿ ದಪ್ಪ ಎನ್ನುವ ಜೊತೆಗೆ ಬಿಗಿದುಕೊಂಡಿರುವ ಎಂಬ ತಿರುಳೂ ಸೇರಿದಂತಿದೆ.

**ಒಂದು ಮಗುವಿನ ಚಂದ್ರಿಕಾ?**

ಈಚೆಗೆ ನಾನು ಓದಿದ ಬರಹವೊಂದರಲ್ಲಿ ಬಳಕೆಯಾದ ಕೆಲವು ಪದಕಂತೆಗಳು ಹೀಗಿದ್ದವು. 'ನಾಲ್ಕು ವರ್ಷದ ವಿವಾಹಿತೆ', 'ಆರು ತಿಂಗಳ ವಿವಾಹಿತೆ' 'ಒಂದು ಮಗುವಿನ ಚಂದ್ರಿಕಾ' ಹೀಗೆ. ಓದುವಾಗಲೇ ಕೊಂಚ ಹಿಡಿದಂತಾಗುತ್ತದೆ. ಬರೆದವರು ಏನು ಹೇಳುತ್ತಿದ್ದಾರೆ ಎಂಬುದನ್ನು ಒಟ್ಟು ಬರಹದ ಚೌಕಟ್ಟಿನಲ್ಲಿ ತಿಳಿದುಕೊಳ್ಳಬಹುದು. ಆದರೂ ಈ ಬಗೆಯ ರಚನೆಗಳು ಏಕೆ ಕಾಣಿಸಿಕೊಳ್ಳುತ್ತವೆ ಎನ್ನುವುದು ಕುತೂಹಲ ಹುಟ್ಟಿಸುತ್ತದೆ. ಕನ್ನಡದಲ್ಲಿ ಒಂದು ವಾಕ್ಯವನ್ನು ನಾಮಪದಕಂತೆಯನ್ನಾಗಿ ಬದಲಿಸುವ ಬಗೆಯೊಂದು ಬಳಕೆಯಲ್ಲಿದೆ. **'ಕಾವೇರಿ ವಿವಾಹವಾಗಿ ನಾಲ್ಕು ವರ್ಷಗಳಾದವು'** ಎಂಬ ವಾಕ್ಯವನ್ನು **'ವಿವಾಹವಾಗಿ ನಾಲ್ಕು ವರ್ಷಗಳಾಗಿರುವ ಕಾವೇರಿ'** ಎಂಬ ನಾಮಪದ ಕಂತೆಯನ್ನಾಗಿ ಬದಲಿಸಿ ಅದನ್ನು ಬೇರೊಂದು ವಾಕ್ಯದ ಭಾಗವನ್ನಾಗಿ ಮಾಡಬಹುದು.**'ಭವನವನ್ನು ಉದ್ಘಾಟಿಸಿದರು. ಭಾಷಣಮಾಡಿದರು'** ಎಂಬ ಎರಡು ವಾಕ್ಯಗಳನ್ನು ಸೇರಿಸಿ ಭವನವನ್ನು ಉದ್ಘಾಟಿಸಿ ಭಾಷಣ ಮಾಡಿದರು ಎಂದು ಒಂದೇ ವಾಕ್ಯವಾಗಿ ಬರೆಯುವಾಗಲೂ ಇದೇ ಕ್ರಮವನ್ನು ಬಳಸಿದೆ. ಆದರೆ ಹೀಗೆ ನಾಮಪದ

ಕಂತೆಯನ್ನಾಗಿ ಬದಲಿಸುವ ಇನ್ನೂ ಒಂದು ಬಗೆಯಿದೆ. **ಕಾವೇರಿ ನಾಲ್ಕು ವರ್ಷಗಳಿಂದ ವಿವಾಹಿತೆ** ಎಂಬ ವಾಕ್ಯದಲ್ಲಿ ಈ ಬಗೆ ಬಳಕೆಯಾಗಿದೆ. ಆದರೆ ಕಾವೇರಿ ಎಂಬ ನಾಮಪದಕ್ಕಿಂತ ಮೊದಲು **ನಾಲ್ಕು ವರ್ಷಗಳ ವಿವಾಹಿತೆ** ಎಂಬ ಪದಕಂತೆಯನ್ನು ಬಳಸಲು ಕನ್ನಡದ ವಾಕ್ಯ ರಚನೆಯ ಕಟ್ಟುಗಳು ಒಪ್ಪಿಗೆ ನೀಡುವುದಿಲ್ಲ. ಇದೇ ಬಗೆಯಲ್ಲಿ 'ಚಂದ್ರಿಕಾ ಒಂದು ಮಗುವಿನ ತಾಯಿ' ಎಂಬ ವಾಕ್ಯವನ್ನು **ಒಂದು ಮಗುವಿನ ತಾಯಿ ಚಂದ್ರಿಕಾ** ಎಂದು ಬದಲಿಸಬಹುದೇ ಹೊರತು, **ಒಂದು ಮಗುವಿನ ಚಂದ್ರಿಕಾ** ಎಂದಲ್ಲ.

**ಕುಮಾರಿ–ಶ್ರೀಮತಿ**

ರಮೇಶ್.ಎಸ್.ಸಿ (ಮೈಸೂರು) ಇವರು ಹೆಂಗಸರ ಹೆಸರಿನ ಹಿಂದೆ **ಕುಮಾರಿ** ಇಲ್ಲವೇ **ಶ್ರೀಮತಿ** ಪದಗಳನ್ನು ಬಳಸಲು ಏನಾದರೂ ಕಟ್ಟುಗಳಿವೆಯೇ ಎಂದು ಕೇಳಿದ್ದಾರೆ. ಭಾಷೆಯ ಬಳಕೆಯಲ್ಲಿ ಎರಡು ಬಗೆಯ ಕಟ್ಟುಗಳಿರುತ್ತವೆ. ಒಂದು ನುಡಿ ರಚನೆಯ ಕಟ್ಟುಗಳು. ಉದಾ.ಗೆ **ಕುದುರೆ ಓಡುತ್ತದೆ** ಎನ್ನಬೇಕೆ ಹೊರತು **ಕುದುರೆ ಓಡುತ್ತಾರೆ** ಎನ್ನುವಂತಿಲ್ಲ. ಇದು ರಚನೆಯ ಕಟ್ಟುಪಾಡು. ಹೀಗಲ್ಲದೆ ಬಳಸುವ ಸಮಾಜ ಕೆಲವು ಕಟ್ಟುಗಳನ್ನು ಹೇರುತ್ತದೆ. ಉದಾ.ಗೆ ನಾವು ನಮಗಿಂತ ಹಿರಿಯರೊಡನೆ ಮಾತಾಡುವಾಗ ಬಳಸುವ ವಾಕ್ಯಗಳ ಕೆಲಸಪದಗಳಿಗೆ ಬಹುವಚನದ ಪ್ರತ್ಯಯಗಳನ್ನು ಸೇರಿಸುತ್ತೇವೆ. ಉದಾ.ಗೆ ಹಿರಿಯರಿಗೆ ಏನನ್ನಾದರೂ ಕೊಡುವಾಗ **'ಇದನ್ನು ತೆಗೆದುಕೊಳ್ಳಿ'** ಎನ್ನಬಹುದೇ ಹೊರತು **'ಇದನ್ನು ತೆಗೆದುಕೋ'** ಎನ್ನುವಂತಿಲ್ಲ. ಆದರೆ ಈ ಕಟ್ಟನ್ನು ಯಾವಾಗ ಮೀರಬಹುದು ಎಂಬುದನ್ನೂ ಸಾಮಾಜಿಕ ಸಂಬಂಧಗಳೇ ನಮಗೆ ತಿಳಿಸಿಕೊಡುತ್ತವೆ. ಉದಾ.ಗೆ ತುಂಬ ಹತ್ತಿರದ ನಂಟರಾದರೆ, ಇಲ್ಲವೇ ಸಾಮಾಜಿಕವಾಗಿ ಕೆಳ ಹಂತದವರಾಗಿದ್ದರೆ ಆಗ ಹಿರಿಯರಿಗೂ ಏಕವಚನದ ರೂಪವನ್ನು ಬಳಸಬಹುದು. ಇದಕ್ಕೆ ನುಡಿರಚನೆಯ ಕಟ್ಟುಗಳು ಅಡ್ಡಿಮಾಡುವುದಿಲ್ಲ. ಹೆಂಗಸರ ಹೆಸರಿನ ಮೊದಲಿಗೆ ಶ್ರೀಮತಿ ಇಲ್ಲವೇ ಕುಮಾರಿ ಪದಗಳನ್ನು ಸೇರಿಸುವ ಕಟ್ಟು ಕೂಡ ಹೀಗೆ ಸಾಮಾಜಿಕ ನೆಲೆಯದ್ದು. ಕನ್ನಡ ನುಡಿರಚನೆಗೂ ಅದಕ್ಕೂ ಸಂಬಂಧವಿಲ್ಲ. (ಮದುವೆಯ ಕರೆಯೋಲೆಗಳಲ್ಲಿ ಹುಡುಗಿಯ ಹೆಸರಿನ ಮೊದಲು ಬರುವ ಚಿ.ಸೌ/ ಚಿ.ಕು.ಹ.ಕುಂ.ಶೋ ಮುಂತಾದವು ಕೂಡ ಹೀಗೆ ಸಾಮಾಜಿಕ ನೆಲೆಯವು) ಶ್ರೀಮತಿ ಎಂಬುದನ್ನು ಮದುವೆಯಾದ ಹೆಂಗಸಿಗೂ ಕುಮಾರಿ ಎಂಬುದನ್ನು ಮದುವೆಯಾಗದ ಹುಡುಗಿಗೂ ಬಳಸಬೇಕೆಂಬ ಸಡಿಲವಾದ ಕಟ್ಟನ್ನು ಹೇಳುವುದುಂಟು. (ಶ್ರೀಮತಿ ಇಲ್ಲವೇ ಕುಮಾರಿ ಎಂಬ ಹೆಸರನ್ನು ಹೊಂದಿದ ಹೆಂಗಸರು ಈ ಕಟ್ಟಿನಿಂದ ಪಡಿಪಾಟಲು ಪಡುತ್ತಾರೆ. ಅದು ಹಾಗಿರಲಿ) ಎಲ್ಲಕ್ಕಿಂತ ಹೆಚ್ಚಿನದಾಗಿ ಹೆಂಗಸು ಮದುವೆಯಾಗಿದ್ದಾಳೋ ಇಲ್ಲವೋ ಎಂಬುದನ್ನು ಗುರುತಿಸಲು ಈ ಕಟ್ಟನ್ನು ಬಳಸುವವರು ಗಂಡಸಿನ ಹೆಸರಿನ ಮುಂದೆ (ಮದುವೆಯಾಗಿರಲಿ ಇಲ್ಲದಿರಲಿ) ಶ್ರೀ ಎಂದಷ್ಟೇ ಬಳಸುತ್ತಾರೆ. ಸಾಮಾಜಿಕ ನೆಲೆಯ ಬಳಕೆಯಲ್ಲಿ ಅಡ್ಡ ಹೆಸರು/ಕುಟುಂಬದ ಹೆಸರನ್ನು ಮಾತ್ರ ಬಳಸುವ ಯುರೋಪಿನ ಕೆಲವು ಸಮಾಜಗಳಲ್ಲಿ ಹೆಸರು ಹೆಂಗಸಿನದ್ದೋ ಇಲ್ಲವೇ ಗಂಡಸಿನದ್ದೋ ಎಂದು ಗುರುತಿಸಲು ಅದರ ಹಿಂದೆ ಮಿ. ಇಲ್ಲವೇ ಮಿಸೆಸ್ ಎಂಬ ಪದಗಳು ಬೇಕಿದ್ದಿರಬಹುದು. ಕ್ಲಿಂಟನ್ ಎಂದರೆ ಸಾಲದು; ಮಿ. ಇಲ್ಲವೇ **ಮಿಸೆಸ್**. ಎಂದು ಸೇರಿಸಿದ ಹೊರತು

ಅದು ಯಾರನ್ನು ಕುರಿತ ಹೆಸರು ಎನ್ನುವುದು ಆ ಸಮಾಜಗಳಲ್ಲಿ ಗೊತ್ತಾಗುವುದಿಲ್ಲ. ಕನ್ನಡ ಸಮಾಜವೂ ಇದೇ ಮಾದರಿಯನ್ನು ಕುರುಡಾಗಿ ಹಿಂಬಾಲಿಸಿ ಅದಕ್ಕೆ ತಕ್ಕಂತೆ ಸಂಸ್ಕೃತದ ಪದಗಳಾದ ಶ್ರೀಮತಿ/ಕುಮಾರಿಗಳನ್ನು ಬಳಸುತ್ತಿದೆ. ಯುರೋಪಿನ ಸಮಾಜಗಳಲ್ಲಿ ಈಗ ಈ ಬಗೆಯ ಬಳಕೆಗಳನ್ನು ಒಪ್ಪುತ್ತಿಲ್ಲ. ಹೆಂಗಸಿನ ಹೆಸರಿನ ಮೊದಲಿಗೆ **ಮಿಜ್** ಎಂಬ (ಮದುವೆ ಆಗಿದೆಯೋ ಇಲ್ಲವೋ ಎಂಬುದನ್ನು ತಿಳಿಸದ) ಪದವನ್ನು ಬಳಸುವ ಒತ್ತಾಯವಿದೆ. ಅಂದರೆ ರಚನೆಯ ಕಟ್ಟುಗಳು ಬದಲಾಗಿ ಉಳಿದರೆ ಸಾಮಾಜಿಕ ನೆಲೆಯ ಬಳಕೆಯ ಕಟ್ಟುಗಳು ಸಾಮಾಜಿಕ ಬದಲಾವಣೆಗಳ ಜೊತೆಗೆ ತಾವು ಬದಲಾಗುತ್ತವೆ. ಬರುವ ದಿನಗಳಲ್ಲಿ ಶ್ರೀಮತಿ/ ಕುಮಾರಿ ಪದಗಳು ಬಳಕೆಯಿಂದ ಜಾರಿ ಹೋದರೆ ಅಚ್ಚರಿ ಪಡಬೇಕಿಲ್ಲ.

**ಮಹಾಶಯ, ಸಾಹೇಬ**

ನಟರಾಜ್ ವಿ (ಕೊಳ್ಳೇಗಾಲ) ಇವರು ವಿದೇಶೀ ವಿದ್ವಾಂಸರ ಹೆಸರಿನೊಂದಿಗೆ **'ಮಹಾಶಯ'.' ಸಾಹೇಬ'** ಎಂಬ ಪದಗಳನ್ನು ಬಳಸುವುದೇಕೆ ಎಂದು ಕೇಳಿದ್ದಾರೆ. ಇದೂ ಕೂಡ ಮೇಲೆ ಹೇಳಿದ ಬಗೆಯಲ್ಲಿ ನುಡಿಯ ಬಳಕೆಯ ಮೇಲೆ ಹೇರಲಾದ ಸಾಮಾಜಿಕ ನೆಲೆಯ ಕಟ್ಟುಪಾಡಿಗೆ ಒಂದು ಉದಾಹರಣೆ. ಗೌರವವನ್ನು ಸೂಚಿಸಲು ಈ ಪದಗಳನ್ನು ಬಳಸುತ್ತಾರೆ. ಆದರೆ ಇವೇ ಪದಗಳನ್ನು ಬಳಸಬೇಕೆಂಬ ಕಟ್ಟುಪಾಡು ಯಾವುದೋ ಒಂದು ಕಾಲಮಾನದಲ್ಲಿ ಬಳಕೆಗೆ ಬಂದಿದೆ. ಮಹಾಶಯ ಪದ ಬಂಗಾಳಿ ಭಾಷೆಯಿಂದ ಕನ್ನಡಕ್ಕೆ ಅನುವಾದವಾಗಿ ಬಂದ ಕಾದಂಬರಿಗಳಲ್ಲಿ ಕಾಣಸಿಗಲು ಮೊದಲಾಯಿತು. ಆ ಬಳಿಕ ಅದನ್ನು ಕನ್ನಡದ ಸಂದರ್ಭದಲ್ಲೂ ಬಳಸಲು ಮೊದಲು ಮಾಡಿದಂತೆ ತೋರುತ್ತದೆ. ಪರ್ಸೋ-ಅರಾಬಿಕ್ ಮೂಲದ ಸಾಹೇಬ ಪದವೂ ಕೂಡ ಇದೇ ಬಗೆಯುದ್ದು. ಈ ಮೊದಲೇ ಹೇಳಿದಂತೆ ಸಾಮಾಜಿಕ ನೆಲೆಯುಲ್ಲಿ ಬದಲಾವಣೆಗಳಾಗುತ್ತ ಹೋದಂತೆ ಇಂತಹ ಪದಗಳು ಬಳಕೆಯಿಂದ ಮರೆಯಾಗುತ್ತವೆ. ಇಲ್ಲವೆ ಗೇಲಿ ಮಾಡಲು ಬಳಕೆಯಾಗತೊಡಗುತ್ತವೆ.

**ಸಕ್ಕರೆ ಓದಿಸುವುದು**

ಗುರುಮೂರ್ತಿ ಪೆಂಡಕೂರು (ಹಗರಿಬೊಮ್ಮನಹಳ್ಳಿ) ಅವರು ಮೊಹರಂ ಹಬ್ಬದ ಸಮಯದಲ್ಲಿ ಪೀರಲು ದೇವರಿಗೆ ನೈವೇದ್ಯ ನೀಡುವಾಗ ಬಳಸುವ 'ಸಕ್ಕರೆ ಓದಿಸುವುದು' ಎಂಬ ಮಾತಿನ ವರಸೆಯ ಮೂಲವನ್ನು ಕೇಳಿದ್ದಾರೆ. ಇದು ತೆಲುಗಿನಲ್ಲಿ ಬಳಕೆಯಾಗುವ 'ಚದುವಿಂಚೇದಿ' ಎಂಬ ಪ್ರಯೋಗದಿಂದ ಬಂದದ್ದಿರಬಹುದೇ ಎಂದೂ ಕೇಳಿದ್ದಾರೆ. ಈ ಮಾತು ಕನ್ನಡದ್ದೋ ಇಲ್ಲವೇ ತೆಲುಗಿನದೋ ಎಂಬ ಪ್ರಶ್ನೆ ಬಳ್ಳಾರಿಯಂತ ಪ್ರದೇಶದಲ್ಲಿ ಹೆಚ್ಚು ಮಹತ್ವದ್ದಾಗುವುದಿಲ್ಲ. ಏಕೆಂದರೆ ಕನ್ನಡ-ತೆಲುಗು ದ್ವಿಭಾಷಿಕ ಪ್ರದೇಶಗಳಲ್ಲಿ ಒಂದು ನುಡಿಯ ಮಾತನ್ನು ಇನ್ನೊಂದು ನುಡಿಗೆ ಅನುವಾದಿಸಿಕೊಂಡು ಬಳಸುವುದು ಅಲ್ಲೆಲ್ಲ ರೂಢಿಯಲ್ಲಿದೆ. ಊರಿನ ಹೆಸರುಗಳನ್ನೂ ಅನುವಾದಿಸಿಕೊಳ್ಳುವುದುಂಟು. ಇನ್ನು 'ಓದಿಸುವುದು' ಎಂಬ ಮಾತು. ಮೊಹರಂ ಸಂದರ್ಭದಲ್ಲಿ ಮಾತ್ರವಲ್ಲದೆ ಮದುವೆಗಳಲ್ಲೂ 'ಮುಯ್ಯಿ ಓದಿಸುವುದು' ಎಂಬ ಮಾತು ಬಳಕೆಯಲ್ಲಿದೆ. ಮದುವೆಗೆ ಬಂದವರು ನೀಡಿದ ಉಡುಗೊರೆಯನ್ನು 'ಇಂತವರು ನೀಡಿದ ಉಡುಗೊರೆ' ಎಂದು

ಕೂಗಿ ಹೇಳುವುದುಂಟು. ಸೂಫಿ ದರ್ಗಾಗಳಲ್ಲಿ ಸಂತರಿಗೆ 'ಸಕ್ಕರೆ ಊದಿಸುವುದು' ಎಂಬ ಮಾತು ತುಂಗಭದ್ರೆಯ ಉತ್ತರದಲ್ಲಿ ಬಳಕೆಯಲ್ಲಿದೆಯೆಂದು ಕೆಲವು ಗೆಳೆಯರು ನನ್ನ ಗಮನಕ್ಕೆ ತಂದರು. ಇದು ಆಚರಣೆಗೆ ಸಂಬಂಧಿಸಿದ ಸಂಗತಿ. ಹೀಗೆ 'ಊದಿಸುವುದು' ಇನ್ನೂ ಹಲವು ಕಡೆಗಳಲ್ಲಿ ಬಳಕೆಯಲ್ಲಿದೆ. ಮಕ್ಕಳಿಗೆ ಆರೋಗ್ಯ ತಪ್ಪಿದರೆ ಮಂತ್ರತಂತ್ರ ಬಲ್ಲವರಿಂದ ಬೂದಿ 'ಊದಿಸಿಕೊಂಡು' ಬರುವುದುಂಟು. ಈ 'ಊದು' ಎಂಬ ಕ್ರಿಯಾಪದರೂಪ ಎರಡು ಅರ್ಥಗಳಲ್ಲಿ ಬಳಕೆಯಾಗುತ್ತದೆ. ಗಾತ್ರ ಹೆಚ್ಚುವುದು/ಉಬ್ಬು ಎಂಬುದು ಒಂದು ಅರ್ಥವಾದರೆ ಬಾಯಿಂದ ಗಾಳಿಯನ್ನು ವೇಗವಾಗಿ ಹೊರಹಾಕುವುದು ಎನ್ನುವುದು ಇನ್ನೊಂದು ಅರ್ಥ. ಎರಡನೆಯ ಅರ್ಥ ನೀಡುವ ಉರುಬು ಎನ್ನುವ ಕ್ರಿಯಾಪದವೂ ಕನ್ನಡದಲ್ಲಿ ಬಳಕೆಯಲ್ಲಿದೆ. ಇದೇ ಕೆಲವು ಕಡೆ ಊಬು ಮತ್ತೆ ಕೆಲವು ಕಡೆ ಊದು ಎಂದು ಬದಲಾಗಿದೆಂದು ತೋರುತ್ತದೆ. ಎರಡನೆಯ ಅರ್ಥ ನೀಡುವ 'ಊದು' ಎನ್ನುವುದನ್ನೇ 'ಓದು' ಎಂದು ಬದಲಿಸಿಕೊಂಡಿರುವಂತಿದೆ. ಬಾಗಲಕೋಟೆ ಪ್ರದೇಶದಲ್ಲಿ 'ಓದಿಸು' ಮತ್ತು 'ಊದಿಸು' ಎಂಬ ಎರಡೂ ರೂಪಗಳನ್ನೂ ಬಳಸುವುಂಟಂತೆ.

**ಕಕ್ಕಾಬಿಕ್ಕಿ, ಇರಸುಮುರುಸು**

ಮುದ್ಗಲ್ ವೆಂಕಟೇಶ್(ರಾಯಚೂರು) ಇವರು ಕೆಲವು ಪದಗಳನ್ನು ನೀಡಿ ಅವುಗಳ ಅರ್ಥವನ್ನು ಕೇಳಿದ್ದಾರೆ. ಅವುಗಳಲ್ಲಿ ಕೆಲವು ಕಕ್ಕಾಬಿಕ್ಕಿ ಮತ್ತು ಇರಸುಮುರುಸು ಎಂಬ ಪದಗಳನ್ನು ಗಮನಿಸೋಣ. ಕಕ್ಕಾಬಿಕ್ಕಿ ಎಂದರೆ ದಿಕ್ಕು ತೋಚದಿರುವ ಅವಸ್ಥೆ. ಕೆಲವು ನಿಘಂಟುಗಳಲ್ಲಿ ಈ ಪದಕ್ಕೆ ಗೊಂದಲ ಎಂಬ ಅರ್ಥ ನೀಡಲಾಗಿದೆ. ಆದರೆ ಇದು ಗೊಂದಲ ಮಾತ್ರವಲ್ಲ. ಗಾಬರಿಯೂ ಇರುತ್ತದೆ. ಗೊಂದಲವುಂಟಾದಾಗಲೆಲ್ಲ ಗಾಬರಿಯಾಗಬೇಕಿಲ್ಲ. ಆದರೆ ಗಾಬರಿಯಾದಾಗಲೆಲ್ಲ ಗೊಂದಲವಿದ್ದೇ ಇರುವುದಷ್ಟೆ. ಇರಲಿ. ಕೆಲವರು ಈ ಪದವನ್ನು ಕಕ್ಕಾಬಿಕ್ಕಿ ಎಂದೂ ಮತ್ತೆ ಕೆಲವರು ಕಕ್ಕುಬಿಕು ಎಂದೂ ಬಳಸಿರುವುದುಂಟು. ಸಂಸ್ಕೃತದ ಕಾಕಪಿಕ ಎಂಬ ಪದ ಇದಕ್ಕೆ ಮೂಲವಿರಬಹುದೇ ಎಂಬ ಸೂಚನೆಯನ್ನು ಪ್ರಶ್ನಾರ್ಥಕ ಚಿಹ್ನೆಯೊಡನೆ ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ನೀಡಿದೆ. ಇದು ಪ್ರಶ್ನೆಯೇ ಸರಿ. ಇದೇ ಅರ್ಥವನ್ನು ನೀಡುವ ಕಕರುಮಕರು ಎಂಬ ಪದವೂ ಬಳಕೆಯಲ್ಲಿದೆ ಎನ್ನುವುದನ್ನು ಗಮನಿಸಬೇಕು.

ಇರಸುಮುರಸು ಪದಕ್ಕೆ ಇರಿಸುಮುರಿಸು, ಇರುಸುಮುರುಸು, ಇರ್ಸುಮುರ್ಸು ಎಂಬ ನುಡಿಭೇದಗಳಿವೆ. ಮುಜುಗರ ಉಂಟಾಗುವುದು ಎಂಬುದು ಇದರ ರೂಢಿಯ ಅರ್ಥ. ಹೆಚ್ಚಾಗಿ ದೈಹಿಕ ಅವಸ್ಥೆಯಲ್ಲಿ ಉಂಟಾಗುವ ಏರುಪೇರನ್ನು ಗಮನಿಸಿ ಈ ಮಾತನ್ನು ಬಳಸುವುದುಂಟು. ಆದರೂ ಮನಸ್ಸಿಗೆ ಸಂಬಂಧಿಸಿದಂತೆ ಉಂಟಾಗುವ ಗೊಂದಲಗಳನ್ನು ಹೇಳುವಾಗಲೂ ಈ ಪದದ ಬಳಕೆಯಾಗುತ್ತದೆ.

ಇಂತಹ ಪದಗಳನ್ನು ಜೋಡುನುಡಿಗಳೆಂದು ಕರೆಯುವ ವಾಡಿಕೆಯುಂಟು. ಇವು ಮನೆಗಿನೆ, ತಲೆಗಿಲೆ, ಊಟಗೀಟ ಎಂಬ ಮಾದರಿಯ ಪದಗಳಿಗಿಂತ ಬೇರೆ. ಎರಡನೆಯ ಬಗೆಯ ಪದಗಳನ್ನು ಪಡಿನುಡಿ (ಪ್ರತಿಧ್ವನಿ ಪದಗಳು) ಎನ್ನುವುದುಂಟು.

ಈ ಎರಡೂ ಗುಂಪಿನ ಪದಗಳ ರಚನೆಯಲ್ಲಿ ವ್ಯತ್ಯಾಸವಿದೆ. ಅಲ್ಲದೆ ಅವುಗಳ ಅರ್ಥ ಮತ್ತು ಬಳಕೆಯಲ್ಲೂ ವ್ಯತ್ಯಾಗಳಿವೆ. ಜೋಡುನುಡಿಗಳಲ್ಲಿ ಮೊದಲ ಪದ ತಂತಾನೇ ಕೆಲವೊಮ್ಮೆ ಬಿಡಿಯಾಗಿಯೂ ಬಳಕೆಯಾಗಲು ಸಾಧ್ಯವಿದೆ. ಆದರೆ ಅದೇ ಜೋಡುನುಡಿಯ ಎರಡನೆಯ ಭಾಗವಾಗಿರುವ ಪದ ಬಿಡಿಯಾಗಿ ಬಳಕೆಯಾಗುವ ಸಂದರ್ಭ ಅಪರೂಪ. ಸಾಲಸೋಲ, ಮನೆಮಾರು, ಗುಡಿಗುಂಡಾರ ಮುಂತಾದ ಪದಗಳನ್ನು ಗಮನಿಸಿ. ಈ ಜೋಡುನುಡಿಗಳು ಭಾಷೆಯ ಪದಕೋಶದಲ್ಲಿ ಈಗಾಗಲೇ ಸಿದ್ಧಗೊಂಡು ಸೇರಿಹೋಗಿರುತ್ತವೆ. ಹೊಸದಾಗಿ ರಚನೆಯಾಗುವುದಿಲ್ಲ. ಅಂದರೆ ಈ ನುಡಿಗಳ ಹಿಂದಿನ ಪದರಚನೆಯ ನಿಯಮಗಳನ್ನು ಹೊಸಪದರಚನೆಗಾಗಿ ನಾವು ಬಳಸುವುದಿಲ್ಲ. ಆದರೆ ಪಡಿನುಡಿಗಳನ್ನು ನಾವು ಹೊಸದಾಗಿಯೂ ರಚಿಸಬಹುದು. ಬುಶ್‌ಗಿಶ್, ಸಚಿನ್‌ಗಿಚಿನ್ ಎಂಬಂತೆ. ಜೋಡುನುಡಿಗಳನ್ನು ಬರೆಯುವಾಗ ಮೊದಲ ಪದ ಮತ್ತು ಎರಡನೆಯ ಪದಗಳ ನಡುವೆ ಚಿಕ್ಕ ಅಡ್ಡಗೆರೆ ಸೇರಿಸಿ ಕೆಲವರು ಬರೆಯುತ್ತಾರೆ. ಮೂಲೆ-ಮುಡುಕು, ಭೂಮಿ-ಕಾಣಿ ಹೀಗೆ. ಆದರೆ ಈ ಗೆರೆ ಬೇಕಾಗಿಲ್ಲ. ಜೋಡುನುಡಿಯ ಎರಡು ಪದಗಳ ನಡುವೆ ಜಾಗಬಿಟ್ಟು ಬರೆಯಬೇಕೇ ಎನ್ನುವುದು ಇನ್ನೊಂದು ಪ್ರಶ್ನೆ. ಜಾಗಬೇಡವೆಂದೇ ತೋರುತ್ತದೆ. ಒಂದೆ ಪದದಂತೆ ಬರೆಯುವುದು ಸರಿಯಾದುದು.

### ಕಾರ್ಯ ಎಂಬ ಪದದ ಕಾಗುಣಿತ

ಅಧ್ಯಾಪಕಿಯೊಬ್ಬರು ಇನ್ನೊಂದು ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಮಕ್ಕಳಿಗೆ ಕಾಗುಣಿತ ಹೇಳಿಕೊಡುವಾಗ ಎದುರಾಗುವ ಸಮಸ್ಯೆ ಇದು. ಕಾರ್ಯ ಎಂಬ ಪದದ ಕಾಗುಣಿತವನ್ನು ಹೇಗೆ ಹೇಳಿಕೊಡಬೇಕು? 'ಕಕ್ಕೆ ದೀರ್ಘ ಕಾ, ಯ ಅರ್ಕಾವೊತ್ತು' (ಅಕಾರೊತ್ತು?) ಎಂದೋ ಅಥವಾ 'ಕಕ್ಕೆ ದೀರ್ಘ ಕಾ, ಅರ್ಕಾವೊತ್ತು, ಯ' ಎಂದೋ?. ನಮ್ಮ ಶಾಲೆಗಳಲ್ಲಿ ಕಾಗುಣಿತವನ್ನು ಹೇಳಿಕೊಡುವುದು ಕಣ್ಣನ್ನು ಗಮನದಲ್ಲಿಟ್ಟುಕೊಂಡೇ ಹೊರತು ಕಿವಿಯನ್ನಲ್ಲ ಎಂಬುದನ್ನು ಗಮನಿಸಬೇಕು. ಅಂದರೆ ಲಿಪಿಚಿಹ್ನೆಗಳು ಬರವಣಿಗೆಯಲ್ಲಿ ಎಲ್ಲಿ ಬರಬೇಕು ಎಂಬುದನ್ನು ಗುರುತಿಸಲು ಮಕ್ಕಳಿಗೆ ಹೇಳಿಕೊಡುತ್ತಿರುತ್ತೇವೆ. ಆ ಪದಗಳನ್ನು ಹೇಗೆ ಉಚ್ಚರಿಸಬೇಕು; ಹಾಗೆ ಉಚ್ಚರಿಸುವಾಗ ಧ್ವನಿಗಳ ಅನುಕ್ರಮ ಹೇಗಿರುತ್ತದೆ ಎನ್ನುವುದನ್ನು ಕಾಗುಣಿತ ಗಮನಕ್ಕೆ ತಂದುಕೊಳ್ಳುವುದಿಲ್ಲ. ಹಾಗಾಗಿ ಅರ್ಕಾವೊತ್ತನ್ನು ಯಾವ ಲಿಪಿಚಿಹ್ನೆಯನ್ನು ಬರೆದಾದ ಮೇಲೆ ಸೇರಿಸುತ್ತೇವೋ ಅದರ ಬಳಿಕವೇ ಹೇಳುವುದು ಸರಿ. ಉದಾಹರಣೆಗೆ ಸೂರ್ಯ ಪದದ ಕಾಗುಣಿತ ಹೀಗಿರುತ್ತದೆ. 'ಸಕ್ಕೆ ಕೊಂಬಿನ ಇಳಿ ಸೂ, ಯಕ್ಕೆ ಅರ್ಕಾವೊತ್ತು.' ಇದೇ ಪದವನ್ನು ಸೂರ್‍ಯ ಎಂದು ಬರೆಯುವಾಗ ಕಾಗುಣಿತ ಹೇಳುವುದೂ ಬದಲಾಗುತ್ತದೆ. ಈ ಟಿಪ್ಪಣಿಯನ್ನು ನಾನು 'ಬರೆಯು'ವಾಗಲೂ ಯ ಅಕ್ಷರ ಚಿಹ್ನೆ ಮೂಡಿಸಿಯೇ ಅರ್ಕಾವೊತ್ತನ್ನು ಮೂಡಿಸಿದ್ದೇನೆ.

### ಮುಸ್ಸಂಜೆ

ಮುಸ್ಸಂಜೆ ಎಂದರೆ ಸಂಜೆಯ ಮುಂದು(=ಶಾಲಾ ವ್ಯಾಕರಣಗಳು ಇದನ್ನು ಅಂಶಿ ಸಮಾಸವೆಂದು ಬಣ್ಣಿಸಿವೆ) ಇಲ್ಲವೇ ಮುತ್ (=ಮಾಗಿದ ) ಸಂಜೆ ಎಂಬ

ವಿವರಣೆಯೇ ಸರಿ ಎಂದು ಹಲವರು ಬರೆದಿದ್ದಾರೆ. ಇವೆರಡೂ ವಿವರಣೆಗಳಲ್ಲಿ ಇರುವ ಏರುಪೇರು ಮೇಲುನೋಟಕ್ಕೆ ಗೊತ್ತಾಗುವಂತಿದೆ. ಮೊದಲನೆಯದು ಸಂಜೆಯ ಮೊದಲನ್ನು ಹೇಳಿದರೆ ಎರಡನೆಯದು ಸಂಜೆಯ ಕೊನೆಯನ್ನು ಹೇಳುತ್ತದೆ. ಆದರೆ ಮುಸ್ಸಂಜೆಗೆ ಕನ್ನಡದ ಒಳನುಡಿಗಳಲ್ಲಿ ಮೂರುಸಂಜೆ ಎಂಬ ಬದಲಿ ಪದ ಬಳಕೆಯಲ್ಲಿದೆ. ಅದರಿಂದ  ಇದು ತ್ರಿಸಂಧ್ಯಾ ಎಂಬುದರ ತದ್ಭವವೇ ಆಗಿರಬೇಕು. ಮೂವಿಟ್ಟಿ ಎಂಬ ಪದವನ್ನೂ ಹೇಳಿದ್ದೆ. ಇದು ಮೂರು ಬಗೆಯ ಬಿಟ್ಟಿ ಚಾಕರಿಗಳನ್ನು ಹೇಳುವ ಪದ. ಹಳಗನ್ನಡದಲ್ಲಿ ಬಳಕೆಯಲ್ಲಿತ್ತು. ಕಳದಲ್ಲಿ ಸೆರೆ ಸಿಕ್ಕವರಿಂದ ಪಡೆದುಕೊಳ್ಳುತ್ತಿದ್ದ ಮೂರು ಬಗೆಯ ಬಿಟ್ಟಿ ಕೆಲಸಗಳನ್ನು ಮೂವಿಟ್ಟಿ ಪದ ಹೇಳುತ್ತದೆ. ಮೂ(=ಮೂರು) ಎಂಬುದರ ಸ್ವರ ಗಿಡ್ಡವಾದಾಗ (=ಮು) ಅದರ ಮುಂದೆ ಬರುವ ವ್ಯಂಜನ ಒತ್ತಕ್ಷರವಾಗುತ್ತದೆ. ಉದಾ.ಗೆ  ಮೂವತ್ತು>ಮುವ್ವತ್ತು

### ಪೂರ್ವಗ್ರಹ–ಪೂರ್ವಾಗ್ರಹ

ಕೃ. ನಾಗೇಶ್ (ಅರಸೀಕೆರೆ) ಇವರು ಪೂರ್ವಗ್ರಹ ಮತ್ತು ಪೂರ್ವಾಗ್ರಹ ಎಂಬ ರೂಪಗಳಲ್ಲಿ ಮೊದಲನೆಯದು ಸರಿ; ಎರಡನೆಯದು ತಪ್ಪು ಅಲ್ಲವೇ ಎಂದು ಕೇಳಿದ್ದಾರೆ. ಸಂಸ್ಕೃತ ನುಡಿಯ ಕಟ್ಟುಗಳನ್ನು ನೋಡಿದಾಗ ಪೂರ್ವಗ್ರಹ ಸರಿ. ಆದರೆ ಕನ್ನಡದಲ್ಲಿ ಈ ಪದರಚನೆಯನ್ನು ಎರಡೂ ರೂಪಗಳಲ್ಲಿ, ಆದರೆ ಒಂದೇ ತಿರುಳಿನೊಡನೆ,ಬಳಸುವುದು ವಾಡಿಕೆ. ಈ ಬಗೆಯ ಗೊಂದಲ ಹಲವು ಪದಗಳಲ್ಲಿ ಇದೆ. ಉದಾ.ಗೆ ಕೋಟ್ಯಂತರ/ ಕೋಟ್ಯಾಂತರ, ಮಧ್ಯಾಂತರ/ ಮಧ್ಯಂತರ, ನಾಗರಿಕ/ ನಾಗರೀಕ, ಅವಶ್ಯಕ/ ಆವಶ್ಯಕ, ಪ್ರಕೃತಿ/ಪ್ರಕರ್ತಿ (ನುಡಿಯುವಾಗ) ಮುಂತಾದವು. ಈ ಗೋಜಲು ನಿವಾರಣೆಯಾಗಬೇಕಾದರೆ ಮಾಧ್ಯಮಗಳು ಮತ್ತು ಪಠ್ಯಪುಸ್ತಕಗಳು  'ಸರಿಯಾದ' ರೂಪವನ್ನು ಬಿಡದೆ ಬಳಸುವುದೇ ಇರುವ ದಾರಿ.

### ಅಶ್ಲೀಲ–ಅಶೀಲ

ನಾಗೇಂದ್ರ ಪ್ರಸಾದ್.ಚ.ರಾ( ಕಾಮನೂರು,ಕೊಪ್ಪಳ ಜಿ) ಇವರು ಅಶ್ಲೀಲ ಪದ ದಿಟವಾಗಿ ಅಶೀಲ ಆಗಿರಬೇಕಲ್ಲವೇ ಎಂದು ಕೇಳುತ್ತಾರೆ. ಶೀಲ ಎಂಬ ಪದದ ನಿಷೇಧ ರೂಪವೇ ಅಶ್ಲೀಲ ಎಂದು ತಿಳಿದಿರುವುದೇ ಇದಕ್ಕೆ ಕಾರಣ. ಮೇಲುನೋಟಕ್ಕೆ ಈ ವಿವರಣೆ ಸರಿ ಎನಿಸುತ್ತದೆ. ಆದರೆ ಶ್ಲೀಲ ಎಂಬ ಪದಕ್ಕೆ ಅ ಎಂಬ ನಿಷೇದ ಪ್ರತ್ಯಯ ಸೇರಿ ಅಶ್ಲೀಲ ಪದ ರಚನೆಯಾಗಿದೆ.  ಶ್ಲೀಲ ಎಂಬ ಪದ ಕನ್ನಡದಲ್ಲಿ ಹೆಚ್ಚು ಬಳಕೆಯಲ್ಲಿಲ್ಲ. ಶ್ಲೀಲಾಶ್ಲೀಲ ಎಂಬ ರಚನೆಯೊಂದನ್ನು ಬಿಟ್ಟರೆ ಬೇರೆ ಕಡೆ ಅದರ ಸುಳಿವು ಸಿಗದು. ಹೀಗಾಗಿ ಈ ಗೊಂದಲ.

### ಕಲ್ಮಶ–ಕಶ್ಮಲ

ಶ್ರೀಶೈಲ ಮೇತ್ರಿ (ಕರಡ್ಯಾಳ, ಬೀದರ್ ಜಿ) ಇವರು ಕಲ್ಮಶ ಮತ್ತು ಕಶ್ಮಲ ಪದಗಳಲ್ಲಿ ಯಾವ ರೂಪ ಸರಿ ಎಂದು ಕೇಳಿದ್ದಾರೆ. ಇವೆರಡೂ ಒಂದೇ ತಿರುಳಿನಲ್ಲಿ ಕನ್ನಡದಲ್ಲಿ ಬಳಕೆಯಲ್ಲಿವೆ. ಇವುಗಳ ಜೊತೆಗೆ ಕಷ್ಮಲ, ಕಲ್ಮಷ ಎಂಬ ರೂಪಗಳೂ ಕಾಣಿಸಿಕೊಳ್ಳುತ್ತವೆ. ಕಲ್ಮಶ ಮತ್ತು ಕಷ್ಮಲ ಈ ಎರಡೂ 'ಸರಿಯಾದ' ರೂಪಗಳೆಂದು

ಸಂಸ್ಕೃತ ಕೋಶಗಳು ಹೇಳುತ್ತವೆ. ಆ ನುಡಿಯಲ್ಲಿ ಈ ಎರಡು ಪದಗಳಿಗೆ ಇರುವ ಹಲವು ತಿರುಳುಗಳಲ್ಲಿ 'ಕೊಳೆ' ಎಂಬ ತಿರುಳನ್ನು ಮಾತ್ರ ಕನ್ನಡದಲ್ಲಿ ಬಳಸಿಕೊಂಡಂತೆ ತೋರುತ್ತದೆ.

**ಕೊಂಗಭಾಷೆ**

ಶೈಲಜ ಪವಾಡಶೆಟ್ರ (ಹಂಪಿ) ಇವರು ರಾಣಿಬೆನ್ನೂರ ತಾಲೂಕಿನ ದೇವರ ಗುಡ್ಡದಲ್ಲಿ ಮೈಲಾರನ ಭಕ್ತರಾದ ಗೊರವರು ಅವರದ್ದೇ ಆದ ಭಾಷೆಯೊಂದನ್ನು ಮಾತನಾಡುತ್ತಾರೆಂದು ಅದನ್ನು ಅವರು ಕೊಂಗಭಾಷೆ ಎನ್ನುತ್ತಾರೆಂದು ಹೇಳಿ ಆ ನುಡಿಯ ಬಗೆಗೆ ಮಾಹಿತಿ ಕೇಳಿದ್ದಾರೆ. ಈ ಗೊರವರು ಬಳಸುವ ಕೆಲವು ಪದಗಳ ಪಟ್ಟಿಯೊಂದನ್ನೂ ನೀಡಿದ್ದಾರೆ. ಕಪುಗ(=ದುಡ್ಡು), ಚಿರುವ(=ಹುಡುಗ) ಸಂಗ (=ಸಾರಾಯಿ), ಗೊದ್ದು (=ಕುಡಿ) ಮುಂತಾದವು ಈ ಪದಪಟ್ಟಿಯಲ್ಲಿವೆ. ಒಂದು ವಾಕ್ಯವನ್ನೂ ಉದಾಹರಣೆಯಾಗಿ ನೀಡಿದ್ದಾರೆ 'ಅವನು ಸಂಗ್ಯಾನ ಗೊದ್ಯಾನ' (=ಅವನು ಸಾರಾಯಿಯನ್ನು ಕುಡಿದಿದ್ದಾನೆ.) ಈ ವಾಕ್ಯವನ್ನು ನೋಡಿದರೆ ಗೊರವರು ಬೇರೆ ನುಡಿಯನ್ನು ಮಾತನಾಡುತ್ತಿಲ್ಲ; ಕನ್ನಡದ ಕಟ್ಟುಗಳನ್ನು ಬಳಸಿಯೇ ಮಾತನಾಡುವಂತಿದೆ. ಅವರ ವಾಕ್ಯಗಳು ಮತ್ತು ಅದರ ಒಳರಚನೆಗಳು ಕನ್ನಡದ್ದವೇ ಆಗಿವೆ. ಆದರೆ ಅವರದ್ದೇ ಆದ ಪದಕೋಶವೊಂದನ್ನು ಅವರು ಕಟ್ಟಿಕೊಂಡಂತಿದೆ. ಹೀಗೆ ಒಂದು ನುಡಿಯನ್ನಾಡುವ ಒಳಗುಂಪುಗಳು ಬೇರೆಬೇರೆ ಕಾರಣಗಳಿಗಾಗಿ ತನ್ನದೇ ಆದ ಹೊಸ ಪದಕೋಶವೊಂದನ್ನು ಕಟ್ಟಿಕೊಳ್ಳುವುದುಂಟು. ಈ ಪದಕೋಶವು, ಆ ಗುಂಪಿಗೆ ಸೇರಿದವರ ಒಳನಂಟನ್ನು ಗಟ್ಟಿಮಾಡುವ ಜೊತೆಗೆ ತಂತಮ್ಮ ನಡುವೆ ನಡೆಯುವ ಮಾತುಕತೆ ಬೇರೆಯವರಿಗೆ ತಿಳಿಯದ ಹಾಗೆ ಮಾಡುವ ಗುರಿಯನ್ನು ಹೊಂದಿರುತ್ತದೆ. ಈ ಬಗೆಯ ಗುಟ್ಟಿನ ಪದಕೋಶವನ್ನು ಬಳಸಿ ಮಾತನಾಡುವಾಗ ಬೇರೆಯವರಿಗೆ ತಾವು ಯಾವುದೋ ತಮಗೆ ಗೊತ್ತಿಲ್ಲದ ನುಡಿಯನ್ನು ಕೇಳಿದಂತೆ ಆಗುತ್ತದೆ. ಅದರೆ ಈ 'ಹೊಸ ಪದ'ಗಳನ್ನು ಹೇಗೆ ಕಟ್ಟಿಕೊಳ್ಳುತ್ತಾರೆ ಎನ್ನುವುದನ್ನು ತಿಳಿಯಲು ಇನ್ನೂ ಹತ್ತಿರದಿಂದ ಈ ನುಡಿಬಳಕೆಯನ್ನು ನೋಡಬೇಕಿದೆ.

**ಐಕ್ಯಮತ ಮತ್ತು ಐಕಮತ್ಯ**

ಜಯಂತಿ ಎಚ್.ವಿ. (ಬೆಂಗಳೂರು) ಇವರಿಗೆ **ಐಕ್ಯಮತ** ಮತ್ತು **ಐಕಮತ್ಯ** ಇವೆರೆಡರಲ್ಲಿ ಯಾವುದು ಸರಿಯಾದ ರೂಪವೆಂದು ತಿಳಿಯಬೇಕಾಗಿದೆ. **ಐಕಮತ್ಯ** ಎಂಬುದೇ ಸರಿಯಾದ ರೂಪ. ಏಕಮತ ಎಂಬ ಪದದಿಂದ ಐಕಮತ್ಯ ಎಂಬುದು ಸಾಧಿತವಾಗುವುದು. ಒಂದೇ ಅಭಿಪ್ರಾಯವುಳ್ಳ ಸಂದರ್ಭಗಳನ್ನು ಹೇಳುವಾಗ ಐಕಮತ್ಯ ಎಂಬ ರೂಪವನ್ನು ಬಳಸಲಾಗುತ್ತಿದೆ.

**ವಾಚಾಮಗೋಚರ**

ಮಂಜಯ್ಯ ದೇವರಮನಿ (ರಾಣೇಬೆನ್ನೂರು) ಇವರು **ವಾಚಾಮಗೋಚರ** ಎಂಬ ರೂಪವನ್ನು ಕುರಿತು ಕೇಳಿದ್ದಾರೆ. ಹೇಳಲು, ನುಡಿಯಲು ಆಗದಿರುವುದು ವಾಚಾಮಗೋಚರ. ಹೆಚ್ಚಾಗಿ ಯಾರಾನ್ನಾದರೂ ಬೈದಾಗ ಈ ಪದರಚನೆಯನ್ನು

ಬಳಸುವುದುಂಟು. ಬೈಗಳುಗಳು ನುಡಿಯಲು, ಹೇಳಲು ಆಗದಿರುವಂತಹವು ಎನ್ನುವ ನೆಲೆಯಲ್ಲಿ ಈ ಬಳಕೆ ಇದೆ. ( ಹಾಗೆ ನೋಡಿದರೆ ನುಡಿಯಲು, ಹೇಳಲು ಆಗದಿರುವ ಬೈಗುಳ ಎನ್ನುವ ಮಾತಿಗೆ ಅರ್ಥವೇ ಇಲ್ಲ. ಬೈಗುಳ ಇರುವುದೇ ಹೇಳಲಿಕ್ಕೆ ಅಲ್ಲವೇ? ಆದರೆ ಹೇಳಲು ಹಿಂಜರಿಕೆ ಆಗಬಹುದು ಅಷ್ಟೆ.) ಆದರೆ ಕೆಲವರು ಯಾರನ್ನಾದರೂ ಹೊಗಳಿದ್ದನ್ನು ಹೇಳುವಾಗಲೂ ವಾಚಾಮಗೋಚರವಾಗಿ ಹೊಗಳಿದರು ಎನ್ನುವುದುಂಟು. ಅಷ್ಟೊಂದು ಹೊಗಳಿಕೆ ಬೇಕಿರಲಿಲ್ಲ ಎಂಬುದು ಅವರ ಮಾತಿನ ಉದ್ದೇಶವಿರಬೇಕು.

**ಆಗಿಹೋದ ಸಂಗತಿಗಳನ್ನು ನಡೆಯಬೇಕಾಗಿರುವಂತೆ ಬಣ್ಣಿಸುವ ಬಗೆ**

ಏಕನಾಥ್ ಬೊಂಗಾಳೆ (ಕಮ್ಮಚ್ಚಿ, ಶಿವಮೊಗ್ಗ ) ಇವರು ಕನ್ನಡ ನಿರೂಪಣೆಗಳಲ್ಲಿ ಕಂಡುಬರುವ ಒಂದು ಬಗೆಯನ್ನು ಕುರಿತು ಕೇಳಿದ್ದಾರೆ. ಆಗಿಹೋದ ಸಂಗತಿಗಳನ್ನು ನಿರೂಪಿಸುವಾಗ ಆ ಸಂಗತಿ ಮುಂದೆ ನಡೆಯಬೇಕಾಗಿರುವಂತೆ ಬಣ್ಣಿಸುವ ಬಗೆ ಕನ್ನಡದಲ್ಲಿ ಇದೆ. ಉದಾ.ಗೆ ಯಾರನ್ನಾದರೂ ನೀವು ಒಂದು ಸಿನಿಮಾದ ಕತೆಯನ್ನು ಹೇಳಲು ಕೇಳಿ. ಅವರು ಆ ಸಿನಿಮಾವನ್ನು ಎಂದೋ ನೋಡಿದ್ದರೂ ಅಲ್ಲಿನ ಘಟನೆಗಳನ್ನು ನಿರೂಪಿಸುವಾಗ ಅವು ಈಗ ನಡೆಯುತ್ತಿರುವಂತೆ ಇಲ್ಲವೇ ಇನ್ನೂ ನಡೆಯಬೇಕಾಗಿರುವಂತೆ ಬಣ್ಣಿಸುವುದನ್ನು ಗುರುತಿಸುತ್ತೀರಿ.'ಹೀರೋ ಕಾರಲ್ಲಿ ಹೋಗ್ತಿರ್ತಾನೆ. ಆಗ ಹಿಂದ್ನಿಂದ ಯಾರೋ ಚೇಸ್ ಮಾಡ್ಕೊಂಡು ಬರ್ತಿರೋದು ಅವನಿಗೆ ಗೊತ್ತಾಗುತ್ತೆ' ಹೀಗೆ ಹೇಳುತ್ತಿರುತ್ತಾರೆ. ಇದು ಘಟನೆ ಮುಂದೆ ನಡೆಯಬೇಕಾಗಿರುವಂತೆ ಹೇಳುವ ಬಗೆ. ಆದರೆ ನಿರೂಪಣೆಯಲ್ಲಿ ಹಾಗೆ ಹೇಳುವುದಿಲ್ಲ. ಇದಕ್ಕೆ ಎರಡು ಕಾರಣಗಳಿವೆ. ಒಂದು: ಘಟನೆಯನ್ನು ಚಿತ್ರವತ್ತಾಗಿ ಹೇಳಬೇಕೆಂಬ ನಿರೂಪಕರ ಬಯಕೆ. ಎರಡು: ಚಲನಚಿತ್ರದಲ್ಲಿ ಆ ಘಟನೆ ಹಾಗೆ ನಡೆಯುವುದನ್ನು, ಈಗ ಕೇಳಿಸಿಕೊಳ್ಳುವವರು ಇನ್ನೂ ನೋಡಬೇಕಾಗಿದೆಯಷ್ಟೆ. ಅವರ ಪಾಲಿಗೆ ಅದಿನ್ನೂ ನಡೆಯಬೇಕಾಗಿರುವ ಘಟನೆ. ಇದಲ್ಲದೆ ಜನಪದ ಕತೆಗಳನ್ನು ಹೇಳುವಾಗಲೂ ಇದೆ ಮಾದರಿಯನ್ನು ನೋಡುತ್ತೇವೆ. 'ಒಂದೂರ್ನಲ್ಲಿ ಒಬ್ರಾಜ ಇರ್ತಾನೆ. ಅವನ್ಗೆ ಇಬ್ಬರು ಮಕ್ಕಳಿರ್ತಾರೆ' ಹೀಗೆ ಹೇಳುವುದುಂಟು. ಹಿಂದೆ ಯಾವಾಗಲೋ ಆಗಿ ಹೋದ ಸಂಗತಿಗಳನ್ನು ಈಗ ನೆನಪಿನಿಂದ ಹೇಳುವಾಗಲೂ ಹೀಗೆ ಕಾಲವನ್ನು ಪಲ್ಲಟ ಮಾಡಿಕೊಳ್ಳುವ ನಿರೂಪಣೆ ಕನ್ನಡದಲ್ಲಿ ಇದೆ. ಇದು ಮಾತಿನಲ್ಲಿ ಕಾಣುವ ಹಾಗೆ ಬರಹದಲ್ಲಿ ಕಾಣುವುದಿಲ್ಲ.(ಮುದ್ರಿತ ನಾಟಕಗಳಲ್ಲಿ ಮಾತ್ರ ನಾಟಕಕಾರರೇ ಕೊಡುವ ಸೂಚನೆಗಳ ವಾಕ್ಯ ರಚನೆ ಹೀಗೆ ಪಲ್ಲಟಗೊಂಡ ಕಾಲದಲ್ಲಿ ಇರುವುದುಂಟು.) ಹೀಗೆ ನಿರೂಪಿಸುವುದರಲ್ಲಿ ವ್ಯಾಕರಣದ ಕಟ್ಟುಗಳನ್ನು ಮೀರಿದಂತೆ ಆಗುವುದಿಲ್ಲ. ಹಾಗಾಗಿ ಇದು ಸರಿ.

**ಹೆಸರಿನ ಕಾಳಜಿ**

ಈ ಹೆಸರಿನ ತಿರುಳು ಏನು? ಆ ಹೆಸರಿನ ಕಾಗುಣಿತ ಸರಿಯೇ? ಹೆಸರಿನ ಕಾಳಜಿ ಬೆಳೆಯುತ್ತಿರುವುದನ್ನು ಗಮನಿಸಿ ಈ ಮುಂದಿನ ಕೆಲವು ಮಾತುಗಳನ್ನು ಬರೆಯುವುದು ಸರಿ ಎನಿಸಿದೆ. ಹೆಸರುಗಳು ನಾಮಪದಗಳು. ಇವು ಈಗಾಗಲೇ ನಮ್ಮ ನುಡಿಯ ಪದಕೋಶದಲ್ಲಿ ಇದ್ದಿರಬಹುದು;ಇಲ್ಲವೇ ಹೊಸದಾಗಿ ಬಂದು ಸೇರಲೂ ಬಹುದು. ಹೆಸರಿಗೆ ಒಂದು ದನಿಯ ಮೈ ಇರುವಂತೆ ತಿರುಳಿನ ನೆಲೆಯೂ ಇರುತ್ತದೆ.

ಹೆಸರಿಡುವಾಗ ಮತ್ತು ಬಳಕೆಯಾಗುವಾಗ ಈ ಎರಡೂ ಅಂಶಗಳು ಮುಂಚೂಣಿಗೆ ಬರುತ್ತವೆ. ಇಟ್ಟ ಹೆಸರುಗಳಲ್ಲಿ ಎಷ್ಟೇ ಸ್ವರಗಳಿದ್ದರೂ ಆ ಹೆಸರುಗಳನ್ನು ಕರೆಯುವಾಗ ಸ್ವರಗಳ ಸಂಖ್ಯೆ ಮೂರನ್ನು ದಾಟದಂತೆ ಮಾಡಿರುತ್ತೇವೆ.ಅದಕ್ಕಾಗಿ ಹೆಸರುಗಳನ್ನು ಮೊಟಕುಗೊಳಿಸುವುದುಂಟು. ಹೆಚ್ಚಾಗಿ ಗಂಡುಮಕ್ಕಳ ಹೆಸರುಗಳನ್ನು ವ್ಯಂಜನದಿಂದ ಕೊನೆಗೊಳಿಸುತ್ತಾರೆ. ಆದರೆ ಈಚೆಗೆ ಹೆಣ್ಣು ಮಕ್ಕಳ ಹೆಸರುಗಳನ್ನೂ ಅವರವರೇ ಕರೆದುಕೊಳ್ಳುವಾಗ ವ್ಯಂಜನದಿಂದ ಕೊನೆಗೊಳಿಸುವುದನ್ನು ಗಮನಿಸಬಹುದು.

ಇನ್ನು ತಿರುಳಿಗೆ ಬರೋಣ. ಹೆಸರು ಏನನ್ನೋ ಸೂಚಿಸುತ್ತದೆ. ಹಿಂದೆ ಹೆಸರುಗಳ ತಿರುಳುಗಳು ವ್ಯಕ್ತಿಯನ್ನು ಸೂಚಿಸುವಂತೆ ಇರುತ್ತಿದ್ದವು. ಆ ವ್ಯಕ್ತಿ ನಿಜವಾಗಿಯೂ ಇದ್ದವರೋ ಇಲ್ಲವೇ ಪುರಾಣ ಕತೆಗಳಲ್ಲಿ ಕಂಡುಬರುವವರೋ ಆಗಿರುತ್ತಿದ್ದರು. ಈಗ ಗುಣ ಪದಗಳನ್ನು ಹೆಸರುಗಳನ್ನಾಗಿ ಇರಿಸಲಾಗುತ್ತಿದೆ. ವೈಭವ್, ವಿನೂತನ್, ಆಕಾಂಕ್ಷಾ ಮುಂತಾದ ಹೆಸರು ಇಂತಹವು. ಹೆಸರಿಗೆ ಒಂದು ತಿರುಳು ಇರಲೇ ಬೇಕೆಂಬ ಬಯಕೆ ಹೆಸರಿಡುವವರಿಗೆ ಏಕಿದೆಯೋ ಕಾಣೆ. ಏಕೆಂದರೆ ಹೆಸರು ಸೂಚಕಗಳೇ ಹೊರತು ಅವು ವ್ಯಕ್ತಿಯನ್ನು ಬಣ್ಣಿಸುವುದಿಲ್ಲ. ಸೂರ್ಯ ಎಂಬ ಹೆಸರಿನ ವ್ಯಕ್ತಿ ಸೂರ್ಯನ ಚಹರೆಗಳನ್ನು ಹೊಂದುವುದು ಸಾಧ್ಯವಿಲ್ಲವಷ್ಟೆ. ಅಲ್ಲದೆ ಇಟ್ಟ ಹೆಸರುಗಳು ಕರೆಯುವ ಹೆಸರುಗಳಾದಾಗ ಅವುಗಳ ತಿರುಳುಗಳನ್ನು ಯಾರು ಗಮನದಲ್ಲಿಡುತ್ತಾರೆ? ಕುಕಿ,ಬನ್ನಿ,ರಕ್ಕಿ,ವಿಪೂ ಮುತಾದ ಕರೆಯುವ ಹೆಸರುಗಳನ್ನು ಕೇಳಿದ್ದೇವೆ. ಇವುಗಳಿಗೆ ತಿರುಳುಗಳಿರುವುದಿಲ್ಲ. ಆದರೆ ಯಾರೂ ಎಲ್ಲೂ ಇಡದಿರುವ ಹೆಸರನ್ನು ತಮ್ಮ ಮಗುವಿಗೆ ಇಡಬೇಕೆಂಬ ಬಯಕೆ ಇಂದಿನ ತಂದೆತಾಯಿಗಳಿಗೆ ಇರುವುದು ದಿಟ. ಇದೇನೂ ಅಷ್ಟು ಮೆಚ್ಚಿಕೊಳ್ಳಬೇಕಾದ ನೆಲೆಯಾಗಿ ತೋರುವುದಿಲ್ಲ. 'ಎಲ್ಲರೊಳಗೊಂದಾಗದಂತೆ' ನಮ್ಮ ಮಕ್ಕಳನ್ನು ಬೆಳೆಸುವ ಬಯಕೆ ಸರಿಯಲ್ಲ. ಅಲ್ಲವೇ?

ಈಗ ಹೆಸರುಗಳನ್ನು ಇಡುವಾಗ ಸ್ವರಗಳಿಂದ ಕೊನೆಯಾಗುವ (ಅದರಲ್ಲೂ ಆ ಮತ್ತು ಈ ಎಂಬ ದೀರ್ಘಸ್ವರಗಳಿಂದ ಕೊನೆಯಾಗುವ ಹೆಸರುಗಳಿಗೆ ಹೆಚ್ಚು ಬೇಡಿಕೆ ಇದ್ದಹಾಗಿದೆ) ಹೆಸರುಗಳನ್ನು ಹೆಣ್ಣುಮಕ್ಕಳಿಗೂ ವ್ಯಂಜನಗಳಿಂದ ಕೊನೆಯಾಗುವ ಹೆಸರುಗಳನ್ನು ಗಂಡು ಮಕ್ಕಳಿಗೂ ಆಯ್ದುಕೊಳ್ಳುತ್ತಾರೆ. ಈ ಹೆಸರುಗಳು ಬರೆಹಗಳಲ್ಲಿ ತಳೆಯುವ ರೂಪಗಳು ಬೇರೆಯೇ ಆಗಿಬಿಡುತ್ತವೆ. ಇಂಗ್ಲಿಷಿನಲ್ಲಿ ಬರೆದಾಗ ಮೂಲದ ದನಿಗಳೇ ಬೇರೆಯಾಗುವುದುಂಟು. ಆದರೆ ಈ ಹೆಸರುಗಳನ್ನು ಬಳಸುವವರು ಮಾತ್ರ ಇನ್ನೊಂದು ಹಾದಿಯನ್ನು ಹಿಡಿಯುತ್ತಿದ್ದಾರೆ. ಹದಿವಯಸ್ಸಿನ ಹೆಣ್ಣುಮಕ್ಕಳಲ್ಲಿ ಸ್ವರದಿಂದ ಕೊನೆಯಾಗುವ ಹುಡುಗಿಯರ ಹೆಸರುಗಳನ್ನು ವ್ಯಂಜನದಿಂದ ಕೊನೆಗೊಳಿಸಿ ಕರೆಯುವ ಬಗೆಯಿದೆ. ಅದರಲ್ಲೂ ಒಂದು ಇಲ್ಲವೇ ಎರಡು ಸ್ವರಗಳಿರುವ ಹೆಸರುಗಳನ್ನಾಗಿ ಬದಲಿಸುತ್ತಾರೆ.

ತುಂಗಭದ್ರೆಯ ಉತ್ತರದ ಕನ್ನಡ ನಾಡಿನಲ್ಲಿ ಮಕ್ಕಳ ಹೆಸರುಗಳಲ್ಲಿ ಇದೇ ಬದಲಾವಣೆ ಇದ್ದರೂ ಕುಟುಂಬದ ಹೆಸರುಗಳು ಇನ್ನೂ ಅಂಟಿಕೊಂಡಿವೆ. ಸಾಮಾಜಿಕವಾದ ಮತ್ತು ಕೌಟುಂಬಿಕವಾದ ಚಹರೆಗಳನ್ನು ಮುಚ್ಚಿಡಲು ಮತ್ತು ತಮ್ಮ ಮಕ್ಕಳು ಇತರ ಮಕ್ಕಳಿಗಿಂತ ಕೊಂಚವಾದರೂ ಬೇರೆಯಾಗಿರಲೇಬೇಕೆಂಬ ನೆಲೆಗಳಿಂದ ಹೀಗೆ ಹೊಸ ಹೆಸರುಗಳ

ಹುಡುಕಾಟ ಮುಂದುವರೆದಿರುವಂತೆ ತೋರುತ್ತದೆ. ಆದರೂ ಕೇಳಲು ಎಷ್ಟೇ ಚೆನ್ನಾಗಿದ್ದರೂ ಕೆಲವು ಪೌರಾಣಿಕ ಹೆಸರುಗಳು ಮತ್ತು ಬೇರೆ ಧರ್ಮದ ನಂಟಿರುವಂತೆ ತೋರುವ ಹೆಸರುಗಳು ಮಾತ್ರ ಈಗಲೂ ಬೇಡದಿರುವ ಹೆಸರುಗಳೇ ಆಗಿವೆ.

**ಪೂರ್ವಗ್ರಹ ಪೀಡಿತರು**

ಪದ್ಮಾ ಕೃಷ್ಣಮೂರ್ತಿ (ತುಮಕೂರು) ಇವರು 'ಪೂರ್ವಾಗ್ರಹ ಪೀಡಿತರು' ಎಂದರೇನು ಎಂದು ಕೇಳಿದ್ದಾರೆ. ಯಾರಾದರೂ ಒಂದು ವಿಷಯ ಇಲ್ಲವೇ ಒಬ್ಬರು ವ್ಯಕ್ತಿಯ ಬಗೆಗೆ ತಾವು ಏನು ತಿಳಿದಿರುತ್ತಾರೋ ಅದನ್ನು ಹೊಸ ಪುರಾವೆಗಳು ದೊರೆತರೂ ಬದಲಾಯಿಸಿಕೊಳ್ಳಲು ಸಿದ್ಧರಿಲ್ಲದಿದ್ದರೆ ಅಂತಹವರನ್ನು ಪೂರ್ವಾಗ್ರಹ ಪೀಡಿತರು ಎನ್ನುವುದಂಟು. (ಹಾಗೆ ನೋಡಿದರೆ ನಾವೆಲ್ಲರೂ ಅಂತಹವರೇ ಆಗಿರುತ್ತೇವೆಯಲ್ಲವೇ?) ಪೂರ್ವಾಗ್ರಹ ಎಂದರೆ ಮೊದಲೇ ಮಾಡಿಕೊಂಡ ತೀರ್ಮಾನ. ಅದಕ್ಕೆ ಕಟ್ಟು ಬೀಳುವವರು ಪೂರ್ವಾಗ್ರಹ ಪೀಡಿತರು. ಹೀಗೆ ಪೀಡಿತ ಎಂಬ ಗುಣಪದವನ್ನು ಸೇರಿಸಿ ಕನ್ನಡದಲ್ಲಿ ಹೊಸ ರಚನೆಗಳನ್ನು ಮಾಡುವುದು ಕಂಡು ಬರುತ್ತಿದೆ. ನೆರೆಪೀಡಿತ, ಬರಪೀಡಿತ, ಮಳೆಪೀಡಿತ ಮುಂತಾದವು ಇಂತಹ ರಚನೆಗಳು. ಮೊದಲಿನ ಪದಗಳು ಕನ್ನಡ. ಪೀಡಿತ(<ಪೀಡನೆ) ಸಂಸ್ಕೃತದಿಂದ ಬಂದಿದೆ. ಇಂಗ್ಲಿಶಿನ ಅಫೆಕ್ಟೆಡ್ ಎಂಬ ಪದಭಾಗವುಳ್ಳ ರಚನೆಗಳನ್ನು ಕನ್ನಡಕ್ಕೆ ತರುವಾಗ ಪೀಡಿತ ಪದದ ಮೊರೆಹೋಗುತ್ತಿರುವಂತೆ ಕಾಣುತ್ತಿದೆ. ಪೀಡೆ, ಪೀಡನೆ ಎಂಬ ಪದಗಳನ್ನು ನಾವು ಬಳಸುವ ಬಗೆಯನ್ನು ನೋಡಿದರೆ ಪೀಡಿತ ಎಂಬ ಪದದ ಈ ಮಾದರಿ ಬಳಕೆಗಳು ಅಷ್ಟು ಸರಿ ಎನಿಸುವುದಿಲ್ಲ.

**ಏತಕ್ಕೆ–ಏನಕ್ಕೆ**

ಜಾನಕಮ್ಮ.ಆರ್ (ಬೆಂಗಳೂರು) ಇವರು 'ಏಕೆ, ಏತಕ್ಕೆ ಎಂದು ಹೇಳಬೇಕಾದ ಕಡೆಗಳಲ್ಲಿ ಹಲವರು **ಏನಕ್ಕೆ** ಎಂದು ಹೇಳುವುದಕ್ಕೆ ಕಾರಣವೇನು'ಎಂದು ಕೇಳಿದ್ದಾರೆ. ಹೀಗೆ ಏನಕ್ಕೆ ಎಂದು ಮಾತಿನಲ್ಲಿ ಬಳಸುವುದನ್ನು ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಕೇಳಿಸಿಕೊಳ್ಳಬಹುದು. ಕನ್ನಡ ಮಾತಾಡುವ ಬೇರೆ ಕಡೆಗಳಲ್ಲಿ ಈ ಪದದ ಬಳಕೆಯನ್ನು ನಾನು ಕೇಳಿದ್ದು ಇಲ್ಲವೇ ಇಲ್ಲವೆನ್ನಬಹುದು. ಬರವಣಿಗೆಯಲ್ಲಿ ಏನಕೆ ರೂಪವನ್ನು ಹೆಚ್ಚಾಗಿ ಬಳಸುವುದಿಲ್ಲ. ಗೋಪಿಂದ ಪೈಗಳು ತಮ್ಮ ಗೊಲ್ಗೊಥಾ ಕಾವ್ಯದಲ್ಲಿ ಒಂದು ಕಡೆ 'ಬಡವನೀತನ್ **ಏನಕೆ** ತನ್ನ ಹುಟ್ಟು ಬಡಗಿಯ ಕೆಲಸಬಿಟ್ಟು..' ಎಂದು ಬಳಸಿದ್ದಾರೆ. ಏಕೆ, ಏತಕ್ಕೆ ಪದಗಳ ಬೇರು ಏನ್ ಎಂಬ ಪದವೇ ಆಗಿದೆ. ಏನ್ ಎಂಬ ಬೇರಿನಿಂದ ಕನ್ನಡದಲ್ಲಿ ಹತ್ತಾರು ರೂಪಗಳು ಹುಟ್ಟಿಕೊಂಡಿವೆ. ಏನು, ಏಕೆ, ಏತರ, ಏವುದು ಇವೆಲ್ಲವೂ ಬಳಕೆಯಾಗಿವೆ. ಈಗ ಏನಕೆ ಎಂಬ ರೂಪವನ್ನು ಮಾತಿನಲ್ಲಿ ಬಳಸುತ್ತಿರುವವರ ಕನ್ನಡ ಒಳನುಡಿ ಮೊದಲ ಏನ್ ರೂಪವನ್ನು ಹಾಗೆಯೇ ಉಳಿಸಿಕೊಂಡಿದೆ. ಹಾಗಾಗಿ ಆ ರೂಪವನ್ನು ನಾವು ಕೇಳುತ್ತಿದ್ದೇವೆ. ಇದರಲ್ಲಿ ತಪ್ಪೇನೂ ಇದ್ದಂತಿಲ್ಲ. ಹಾಗೆ ನೋಡಿದರೆ ಕನ್ನಡ ಮಾತಾಡುವ ಕಡೆಗಳಲ್ಲಿ ಈ ಪದ ಯಾವೆಲ್ಲ ರೂಪಗಳನ್ನು ತಳೆದಿದೆ ಎಂಬುದನ್ನು ನೋಡಿದರೆ ಈ ಬದಲು ರೂಪಕ್ಕೆ ಅಚ್ಚರಿ ಪಡಬೇಕಿಲ್ಲ. (ಉದಾ.ಗೆ ಬಳ್ಳಾರಿ, ರಾಯಚೂರು ಕಡೆಗಳಲ್ಲಿ **ಏದಕೆ** ಎಂಬ ರೂಪವನ್ನು ಕೇಳುತ್ತೇವೆ.)

**ನತ್ತ**

ನಿಂಗಪ್ಪ (ಭೈರನತ್ತ, ಚಾಮರಾಜನಗರ) ಇವರು ತಮ್ಮ ಊರಿನ ಸುತ್ತಮುತ್ತ ನತ್ತದಿಂದ ಕೊನೆಯಾಗುವ ಹತ್ತಾರು ಊರುಗಳನ್ನು ಹೆಸರಿಸಿ ಈ ಹೆಸರುಗಳು ಬರಲು ಕಾರಣವೇನೆಂದು ಕೇಳಿದ್ದಾರೆ. ನತ್ತದಿಂದ ಕೊನೆಯಾಗುವ ಊರುಗಳು ಚಾಮರಾಜನಗರ ಜಿಲ್ಲೆಯ ಮೂಡಲ ಕಡೆ ಇರುವಂತೆ ಅದಕ್ಕೆ ಅಂಟಿಕೊಂಡಿರುವ ತಮಿಳು ನಾಡಿನಲ್ಲೂ ಇವೆ.(ಉದಾ. ಗೋಪಿನತ್ತಂ) ಊರಿನ ಹೆಸರುಗಳಲ್ಲಿ ಕೊನೆಯ ಭಾಗ ಕೆಲವೊಮ್ಮೆ ಆಯಾ ಊರಿನ ಸುತ್ತಮತ್ತ ಇರುವ ಚಹರೆಗಳನ್ನು ಹೇಳುತ್ತಿರುತ್ತದೆ. ಕೆರೆ, ಕಟ್ಟೆ, ಕೊಳ. ಗುಡ್ಡ, ಹಳ್ಳ, ಹಾಳು ಹೀಗೆ ಪಟ್ಟಿ ಮಾಡಬಹುದು. ಕನ್ನಡ–ಕನ್ನಡ ನಿಘಂಟು ಕೂಡ ನತ್ತ ಪದವನ್ನು ಹೆಸರಿಸುತ್ತದೆಯೇ ಹೊರತು ಅದರ ತಿರುಳೇನೆಂದು ಹೇಳುವುದಿಲ್ಲ. ದ್ರಾವಿಡ ನುಡಿಗಳಲ್ಲಿ ನತ್ತ ಎಂಬುದಕ್ಕೆ (ಹುಳುಗಳು ಇರುವ) ಚಿಪ್ಪು ಎಂಬ ತಿರುಳು ಇದ್ದಂತಿದೆ. ನತ್ತ ಎಂದು ಕೊನೆಯಾಗುವ ಊರುಗಳಲ್ಲಿ ಹೀಗೆ ಚಿಪ್ಪುಗಳನ್ನು ಅಗೆದು ತೆಗೆದು ಕೂಡಿಹಾಕಲು ಆಗುವ ಜಾಗಗಗಳಿದ್ದಿರಬಹುದು. ಉಪ್ಪು ದೊರಕುವ ಜಾಗಗಳನ್ನು **ಮೋಳೆ** ಎಂದು ಕರೆದಂತೆ ಚಿಪ್ಪುಗಳು ದೊರಕುವ ಜಾಗಗಳನ್ನು ನತ್ತಗಳೆಂದು ಕರೆದಿರಬಹುದೇ? ಈ ಬಗೆಯಲ್ಲಿ  ಮೋಳೆ ಎಂದು ಕೊನೆಯಾಗುವ ಹತ್ತಾರು ಊರುಗಳು ಚಾಮರಾಜನಗರ ಜಿಲ್ಲೆಯ ಮೂಡಣ ಕಡೆ ಇವೆ.(ಚಿಪ್ಪುಗಳು ಸುಣ್ಣ ತಯಾರಿಕೆಗೆ ಬೇಕಾದ ವಸ್ತುಗಳಾಗಿದ್ದಿರಬಹುದು)

**ಹಿರಿ**

ಎ.ಎಸ್.ನಾರಾಯಣ (ಹಾಸನ) ಇವರಿಗೆ **ಹಿರಿ** ಎಂಬ ಪದದ ಬಳಕೆ ಹೇಗೆ ಮಾಡಬೇಕು ಎಂಬ ಬಗೆಗೆ ಗೊಂದಲಗಳಿವೆ. ಹಿರಿ ಎಂಬ ಪದ ಇಂದಿನ ಕನ್ನಡದಲ್ಲಿ ಎರಡು ತಿರುಳುಗಳಲ್ಲಿ ಬಳಕೆಯಾಗುತ್ತದೆ. ದೊಡ್ಡ– ಎಂಬ ಗುಣ ಪದದ ಹಾಗೆ ಒಂದು ಬಳಕೆ ಇದೆ. ಹಿರಿಯಕ್ಕ, ಹಿರಿತನ, ಹಿರಿಯರು ಎಂಬ ಪದಗಳಲ್ಲಿ ಈ ಬಳಕೆ ಇದೆ. ಇದಲ್ಲದೆ. ಸೆಳೆ, ಎಳೆ, ಕೀಳು ಎಂಬ ತಿರುಳಿನ ಕೆಲಸಪದವಾಗಿಯೂ ಹಿರಿ ಬಳಕೆಯಾಗುತ್ತದೆ. (ಇದಲ್ಲದೆ ಹಿರಿಹಿರಿ ಹಿಗ್ಗು ಎಂದಾಗ ಅದು ಅನುಕರಣ ವಾಚಿಯಾಗಿಯೂ ಬಳಕೆಯಾಗುವಂತಿದೆ.) ಬೆಂದ ಮನೆಯಲ್ಲಿ ಗಳು ಹಿರಿದ ಹಾಗೆ ಎಂಬ ಗಾದೆಯಲ್ಲಿ ಹಿರಿ ಎಂದರೆ ಬೆಂಕಿ ಹಿಡಿಯದ ಗಳುಗಳನ್ನು ಎಳೆದುಕೊಳ್ಳುವುದು ಎಂಬ ತಿರುಳಿದೆ.  ಈ ತಿರುಳಿನ ಹಿರಿಯ ಹಿಂದಿನ ರೂಪ ಪಿರಿ. ಈಗ ಕೆಲಸಪದವಾಗಿ ಹಿರಿ ಎಂಬುದನ್ನು ಬಳಸಿದರೆ ಆ ಕೆಲಸವನ್ನು ಮಾಡುವವರು ಯಾರು ಎಂಬುದನ್ನು ವಾಕ್ಯದಲ್ಲಿ ಹೇಳಬೇಕು. 'ಒರೆಯಿಂದ ಕತ್ತಿಯನ್ನು ಹಿರಿದು ಮುನ್ನುಗ್ಗಿದ್ದರು' ಎಂಬ ವಾಕ್ಯದಲ್ಲಿ ಕತ್ತಿಯನ್ನು ಎಳೆದು ತೆಗೆದವರು(=ಹಿರಿದವರು) ಯಾರು ಎಂದು ಹೇಳಲಾಗಿದೆ. ಆದರೆ ಹಳಗನ್ನಡದಲ್ಲಿ ಪಿರಿ ಎಂಬುದು ತಂತಾನೆ ನಡೆಯುವ ಕೆಲಸ ಎಂಬಂತೆ ಬಳಕೆಯಾಗುತ್ತಿತ್ತೆಂದು ತೋರುತ್ತದೆ. '...ಮಂಜುವೋಲ್ ತೋರಿ ಪಿರಗುಂ' ಎಂಬ ಬಳಕೆಯನ್ನು ನೋಡಿ. ಮಂಜು ಕರಗಿ ಹೋಗುವುದು ತಂತಾನೆ ನಡೆಯುವ ಕೆಲಸ ತಾನೇ. ಇಂದಿನ ಕನ್ನಡದಲ್ಲಿ ಹಿಸಿ ಮತ್ತು ಹರಿ ಎಂಬ ಕೆಲಸಪದಗಳು ಹೇಗೆ ಬಳಕೆಯಾಗುತ್ತವೆಂಬುನ್ನು ನೋಡಿ. ಬೆಳಕು ಹರಿಯಿತು (ಇದು ನೀರು ಹರಿಯಿತು

ಎಂಬ ಮಾದರಿಯ ವಾಕ್ಯವಲ್ಲ. ಹಾಗೆ ನೋಡಿದರೆ ಕತ್ತಲೆ ಹರಿಯಿತು ಎಂದು ಹೇಳುವುದು ಹೆಚ್ಚು ಸರಿ). ಇದೇನೇ ಇರಲಿ ಈಗ ಹಿರಿ ಎಂಬ ಕೆಲಸ ಪದದ ಬಳಕೆಯಲ್ಲಿ ಬದಲಾವಣೆ ಆಗಿರುವುದಂತೂ ದಿಟ.

**ಮಹತ್ವಾಕಾಂಕ್ಷೆ–ಮಹದಾಕಾಂಕ್ಷೆ–ಮಹತ್ತ್ವಾಕಾಂಕ್ಷೆ**

ಸುಹಾಸ್ ಎನ್. (ಬೆಂಗಳೂರು) ಇವರು 'ಮಹತ್ವಾಕಾಂಕ್ಷೆ' ಎಂಬ ಪದದ ರೂಪ ಸರಿಯೇ ಎಂದು ಕೇಳಿದ್ದಾರೆ. ಸಂಸ್ಕೃತ ನುಡಿಯ ಕಟ್ಟುಗಳಂತೆ ಮಹತ್ತ್ವ(< ಮಹತ್) ಎಂಬ ರೂಪ ಸರಿ; ಮಹತ್ವ ಸರಿಯಲ್ಲ. ಹಾಗಾಗಿ ಮಹತ್ತ್ವಾಕಾಂಕ್ಷೆ ಎಂದು ಬರೆದು ನುಡಿದರೆ ಸರಿಯಾದೀತು. ಮಹತ್ ರೂಪಕ್ಕೇ ಆಕಾಂಕ್ಷೆ ಪದ ಸೇರಿದರೆ ಅದು ಮಹದಾಕಾಂಕ್ಷೆ ಆಗುತ್ತದೆ. ಈ ಪದ ಕನ್ನಡದಲ್ಲಿ ಅಲ್ಲಲ್ಲಿ ಬಳಕೆಯಲ್ಲಿದೆ. ಮಹತ್ ಪದ ಇರುವಂತೆಯೇ ಬಿಡಿಯಾಗಿ ಕನ್ನಡದಲ್ಲಿ ಬಳಕೆಯಾಗುವಾಗ ಮಹತ್ತು ಎಂದು ಬಳಕೆಯಾಗುತ್ತದೆ. ಕನ್ನಡ ಬರವಣಿಗೆಯಲ್ಲಿ ಬಿಡಿಯಾಗಿ ಬಳಕೆಯಾಗುವ ಮಹತ್ತು ಮತ್ತು ಮಹತ್ವಗಳನ್ನು ಒಂದೇ ತಿರುಳಿರುವ ಪದಗಳೆಂದು ತಿಳಿದಿರುವಂತೆ ತೋರುತ್ತದೆ. ಹಾಗೆಯೇ ತಿರುಳಿನಲ್ಲಿ ಮಹತ್ತ್ವಾಕಾಂಕ್ಷೆ ಮತ್ತು ಮಹದಾಕಾಂಕ್ಷೆಗಳ ನಡುವೆ ಅಂತಹ ವ್ಯತ್ಯಾಸ ಬಳಕೆಯಲ್ಲಿ ಕಾಣುವುದಿಲ್ಲ. ಇದೇ ಬಗೆಯ ರೂಪದ ಗೊಂದಲ ತತ್ತ್ವ, ಸತ್ವ ಪದಗಳಲ್ಲೂ ಇದೆ. ಆದರೆ ಕನ್ನಡದಲ್ಲಿ ಇವು ಬರವಣಿಗೆಯಲ್ಲಿ ಬಳಕೆಗೆ ಬಂದುಬಿಟ್ಟಿವೆ. ತತ್ತ್ವ, ಸತ್ತ್ವ ಎಂಬ ರೂಪಗಳು ಕನ್ನಡ ಬರವಣಿಗೆಯಲ್ಲಿ ಹೆಚ್ಚಾಗಿ ಕಾಣಸಿಗುವುದಿಲ್ಲ. ನುಡಿಯುವಾಗ ಮಹತ್ವ ಮತ್ತು ಮಹತ್ತ್ವಗಳ ನಡುವೆ ಇರುವ ವ್ಯತ್ಯಾಸ ಗೊತ್ತಾಗುವುದಿಲ್ಲ. ಕನ್ನಡದ ಹಿರಿಯಾಸೆ, ಹೇರಾಸೆ, ಹೆಬ್ಬಯಕೆ. ಹಿರಿಗುರಿ ಮುಂತಾದ ಪದರಚನೆಗಳನ್ನು ಮಹತ್ತ್ವಾಕಾಂಕ್ಷೆ, ಮಹದಾಕಾಂಕ್ಷೆಗಳಿಗೆ ಬದಲಿಯಾಗಿ ಬಳಸಬಹುದು.

**ಒಂದು ಗಂಟೆಗಳ ಕಾಲ**

ದತ್ತರಾಜ ಎನ್ (ದಾವಣಗೆರೆ) ಇವರು ' ಒಂದು ಗಂಟೆಗಳ ಕಾಲ' ಎಂಬ ರಚನೆಯಲ್ಲಿ 'ಒಂದು ಗಂಟೆ ಕಾಲ' ಎಂದು ಮಾತ್ರ ಇರಬೇಕಲ್ಲವೇ ಎಂದು ಕೇಳುತ್ತಾರೆ. ದಿಟ. ಒಂದು ಗಂಟೆ, ಅರ್ಧ ಗಂಟೆ ಮುಂತಾದ ರಚನೆಗಳಿಗೆ ಬಹುವಚನ ಪ್ರತ್ಯಯವಾದ –ಗಳು ಎಂಬುದನ್ನು ಹಚ್ಚಬೇಕಿಲ್ಲ. ಹಾಗೆಯೇ ಕೆಲವರು ಅವರು, ಇವು ಮುಂತಾದ ರೂಪಗಳ ಬದಲು ಅವರುಗಳು, ಇವುಗಳು ರೂಪಗಳನ್ನು ಬಳಸುವುದುಂಟು. ಹಾಗೆ ಬಳಸಿದಾಗ ತಿರುಳಿನಲ್ಲಿ ಮತ್ತು ರಚನೆಯ ಕಟ್ಟುಗಳಲ್ಲಿ ಏರುಪೇರಾಗುವುದಿಲ್ಲ. ಹಾಗಾಗಿ ಈ ಬಗೆಯ ಬಳಕೆಗಳು ಹೆಚ್ಚು ತೊಂದರೆ ಕೊಡುವುದಿಲ್ಲ. ವಾಕ್ಯ ರಚನೆಯ ಕಟ್ಟುಗಳನ್ನು ಪಾಲಿಸಿದ ಮೇಲೆ ಹೆಚ್ಚಿನ ಪದಭಾಗಗಳನ್ನು ಆ ವಾಕ್ಯದಲ್ಲಿ ಸೇರಿಸಿದರೂ ಆ ವಾಕ್ಯದ ತಿರುಳನ್ನು ತಿಳಿಯಲು ಅದು ಅಡ್ಡಿಯಾಗುವುದಿಲ್ಲ. ಇಲ್ಲಿಯೂ –ಗಳು ಎಂಬ ಸೇರ್ಪಡೆ ಬೇಡವಾಗಿದ್ದರೂ ತಿರುಳಿಗೆ ಅಡ್ಡಿ ಮಾಡುವುದಿಲ್ಲ. ಇನ್ನೂ ಒಂದು ಸಂಗತಿಯನ್ನು ಇಲ್ಲಿ ಹೇಳಬೇಕಾಗಿದೆ. ಕನ್ನಡದಲ್ಲಿ ಕ್ರಿಯಾಪದದಲ್ಲಿ ವಚನದ ಕುರುಹು ಇರುವುದರಿಂದ ಹೆಚ್ಚು ಕಡೆಗಳಲ್ಲಿ ವಾಕ್ಯದ ನಾಮಪದಕ್ಕೆ ಬಹುವಚನ ಪ್ರತ್ಯಯ ಹಚ್ಚುತ್ತೇವೆಯೋ

ಇಲ್ಲವೋ ಎಂಬುದು ಲೆಕ್ಕಕ್ಕೆ ಬರುವುದಿಲ್ಲ. 'ಬಸ್ಸಿಗೆ ಕಾಯುತ್ತಾ ಮೂರು ಗಂಟೆ ಕಳೆದವು' ಎಂಬ ವಾಕ್ಯದಲ್ಲಿ ಕಳೆದವು ಎನ್ನುವಲ್ಲಿ ಬಹುವಚನದ ಕುರುಹು ಇದೆ. ಹಾಗಾಗಿ ಮೂರುಗಂಟೆ ಎಂಬ ರಚನೆಗೆ ಬಹುವಚನ ಪ್ರತ್ಯಯ ಸೇರಿಸದಿದ್ದರೂ ತೊಂದರೆ ಇಲ್ಲ.

**ಐಗೋಳು, ಐನಾರು, ಅಯ್ಯನವರು, ಜಂಗಮಯ್ಯನವರು**

ಎಂ.ಆರ್. ಮಹೇಶ್ವರಮೂರ್ತಿ(ಮಗ್ಗೆ, ಹಾಸನ ಜಿ) ಇವರು 'ಐಗೋಳು, ಐನಾರು, ಅಯ್ಯನವರು, ಜಂಗಮಯ್ಯನವರು' ಈ ಎಲ್ಲ ರೂಪಗಳ ತಿರುಳು ಒಂದೇ ಏನು ಎಂದು ಕೇಳಿದ್ದಾರೆ. ಪದಗಳ ತಿರುಳು ಅವುಗಳಲ್ಲೇ ಅಡಕವಾಗಿರುವುದಿಲ್ಲ. ಆ ಪದಗಳನ್ನು ಯಾರು ಎಲ್ಲಿ ಬಳಸುತ್ತಾರೆ ಎಂಬುದನ್ನೂ ನೋಡಿ ತಿರುಳನ್ನು ತಿಳಿಯಬೇಕಾಗುತ್ತದೆ. ಐನಾರು/ ಐನೋರು ಈ ಎರಡೂ ಅಯ್ಯನವರು ಎಂಬ ರೂಪವನ್ನು ಕನ್ನಡದ ಕೆಲವು ಒಳನುಡಿಗಳಲ್ಲಿ ನುಡಿಯುವ ಬಗೆಗಳಾಗಿವೆ. ಐಗೋಳು ಎಂಬುದು ಅಯ್ಯಗಳು ಎಂಬುದರ ಆಡುಮಾತಿನ ರೂಪ. ಇದೂ ಕೂಡ ಕನ್ನಡಧ ಕೆಲವು ಒಳನುಡಿಗಳಲ್ಲಿ ಬಳಕೆಯಾಗುತ್ತದೆ. ಈ ಪದಗಳು ಮಠಗಳ ಒಡೆಯರನ್ನು ಸೂಚಿಸುವಾಗ ಬಳಕೆಯಾಗುವಂತೆ ಊರಿನ ಉಳ್ಳವರನು ್, ಕೆಲವೊಮ್ಮೆ ಅಧಿಕಾರಿಗಳನ್ನು ಕೂಡ ಸೂಚಿಸುವ ಪದಗಳಾಗಿ ಬಳಕೆಯಾಗಬಹುದು. ಜಂಗಮಯ್ಯನವರು ಪದ ಗೊತ್ತಾದ ವ್ಯಕ್ತಿಗಳಿಗೆ ಮತ್ತು ಗೊತ್ತಾದವರಿಂದ ಮಾತ್ರ ಬಳಕೆಯಾಗುವ ಪದ.

**ನಂತರ–ಅನಂತರ**

ಏಕನಾಥ್–ಬೊಂಗಾಳೆ(ಕಮ್ಮಚ್ಚಿ, ಹೊಸನಗರ) ಇವರು ನಂತರ, ಅನಂತರ ಪದಗಳ ರೂಪವನ್ನು ಕುರಿತು ಕೇಳಿದ್ದಾರೆ. ಅನಂತರ ಎಂಬುದು ಸರಿಯಾದ ರೂಪ. ಅಂತರವಿಲ್ಲದ್ದು ಅನಂತರ. (ಅನ್+ಅಂತರ). ಆದರೆ ಕನ್ನಡದಲ್ಲಿ ನಂತರ ಎಂಬುದು ಹೆಚ್ಚಾಗಿ ಬಳಕೆಯಲ್ಲಿದೆ. ಕೆಲವರು 'ಆನಂತರ' ಮತ್ತು 'ಆ ನಂತರ' ಎಂಬ ರೂಪಗಳನ್ನೂ ಬಳಸುವುದನ್ನು ನೋಡಿದ್ದೇನೆ. ಇವುಗಳೂ ಸರಿಯಾದ ಬಳಕೆಗಳಲ್ಲ. ಬಳಸುವುದಾದರೆ ಅನಂತರ ಎಂಬ ರೂಪ ಸರಿ. ಅಲ್ಲದಿದ್ದಲ್ಲಿ ಕನ್ನಡದ 'ಬಳಿಕ' ರೂಪವನ್ನು ಬಳಸುವುದೇ ಸರಿ. ಕೆಲವರು ತದನಂತರ (ತತ್+ಅನಂತರ) ಎಂಬ ರೂಪವನ್ನೂ ಬಳಸುವುದುಂಟು. ಇದರ ಬದಲಾಗಿ ಕನ್ನಡದ 'ಆಮೇಲೆ' ಇಲ್ಲವೇ 'ಆ ಬಳಿಕ' ಎಂಬ ರೂಪಗಳನ್ನು ಬಳಸುವುದು ಒಳಿತು.

**ಉರು ಹೊಡೆ, ಉರು ಹಚ್ಚು**

ಗೆಳೆಯರೊಬ್ಬರು **ಉರು ಹೊಡೆ, ಉರು ಹಚ್ಚು** ಎಂದು ಹೇಳುವುದೇಕೇ ಎಂದು ಕೇಳಿದರು. **ಉರು** ಎಂಬ ಕ್ರಿಯಾರೂಪ ಕನ್ನಡ ಮತ್ತು ಕೆಲವು ದ್ರಾವಿಡ ನುಡಿಗಳಲ್ಲಿ ಇದೆ. ಗಟ್ಟಿಯಾಗಿ ಹೇಳು ಎಂಬುದು ಇದರ ತಿರುಳು. ಕನ್ನಡದಲ್ಲೇ ಇರುವ **ಒರೆ** ಎಂಬುದು ಉರುವಿನಿಂದ ಬಂದದ್ದು. ಇದಕ್ಕೆ ಹೇಳು, ನುಡಿದು ತಿಳಿಸು ಎಂಬ ತಿರುಳುಗಳಿವೆ. ಉರು ಹಚ್ಚುವವರು ಗಟ್ಟಿಯಾಗಿ ಹೇಳಿಕೊಳ್ಳುತ್ತಿರುತ್ತಾರಷ್ಟೆ. ಹಾಗೆ

ಮತ್ತೆಮತ್ತೆ ಹೇಳುವ ಮೂಲಕ ನೆನಪಿನಲ್ಲಿ ಉಳಿಯುವಂತೆ ಮಾಡಿಕೊಳ್ಳುತ್ತಾರೆ. ಕನ್ನಡದಲ್ಲಿ ಹೀಗೆ ಮಾಡುವುದಕ್ಕೆ **ಗಟ್ಟಿ ಮಾಡು** ( ಗಟ್ಮಾಡು) ಎಂದೂ ಹೇಳುವುದುಂಟು. ಉರುಹೊಡೆಯುವವರಿಗೆ ತಾವು ಕಲಿತುಕೊಳ್ಳುತ್ತಿರುವ ಪಾಠದ ದನಿರೂಪ ಮುಖ್ಯವೇ ಹೊರತು ಅದರ ತಿರುಳಲ್ಲ. ಸಾವಿರಾರು ಸಾಲುಗಳ ಹಾಡುಗಬ್ಬಗಳನ್ನು ನೆನಪಿಟ್ಟುಕೊಳ್ಳುತ್ತಿದ್ದವರು ಹೀಗೆ ಮತ್ತೆ ಮತ್ತೆ ಹೇಳಿಕೊಳ್ಳುವ ದಾರಿಯಲ್ಲೇ ಸಾಗುತ್ತಿದ್ದರು. ಅವರಿಗೆ ಹಾಡುಗಳ ದನಿರೂಪ ನೆನಪಿನಲ್ಲಿ ಉಳಿಯುವುದು ಗುರಿಯಾಗಿರುತ್ತಿತ್ತು. ಇಷ್ಟಾದರೂ ಉರು ಆದಮೇಲೆ ಹೊಡೆ ಇಲ್ಲವೇ ಹಚ್ಚು ಎಂಬ ಕ್ರಿಯಾರೂಪಗಳು ಸೇರಿಕೊಂಡದ್ದೇಕೆ ಎಂಬುದು ಗೊತ್ತಾಗುವುದಿಲ್ಲ.

### ವ್ಯಂಜನಗಳನ್ನು ಬರೆಯುವಾಗ

ವಿಶ್ವನಾಥ್ (ಚಾಮರಾಜನಗರ) ಇವರು ಒಂದು ಪ್ರಶ್ನೆ ಕೇಳಿದ್ದಾರೆ. ಕನ್ನಡದ ವ್ಯಂಜನಗಳನ್ನು ಬರೆಯುವಾಗ ಅವುಗಳನ್ನು ಇಡಿಯಾಗಿ ಬರೆಯಲು ಒಂದು ಗುರುತನ್ನು, ಇನ್ನೊಂದು ವ್ಯಂಜನದೊಡನೆ ಬಂದಾಗ ಮತ್ತೊಂದು ಗುರುತನ್ನು (ಒತ್ತಕ್ಷರ) ಬಳಸುತ್ತೇವೆ. ಈ ಒತ್ತಕ್ಷರದ ಗುರುತುಗಳು ಕೆಲವು ವ್ಯಂಜನಗಳಿಗೆ ಅವುಗಳ ಇಡಿ ರೂಪದ ಭಾಗವಾಗಿದ್ದರೆ, ಉಳಿದವಕ್ಕೆ ಬೇರೆಯೇ ಗುರುತುಗಳಿವೆಯಲ್ಲ ಏಕೆ ಎಂಬುದು ಅವರ ಪ್ರಶ್ನೆ. ಕ,ದ,ಗ ಮುಂತಾದವಕ್ಕೆ ಅವುಗಳ ಭಾಗಗಳೇ ಒತ್ತಕ್ಷರಗಳು. ನ,ಮ,ಲ ಮುಂತಾದವಕ್ಕೆ ಬೇರೆಯೇ ಒತ್ತಕ್ಷರದ ಗುರುತುಗಳಿವೆ. ಇದಕ್ಕೆ ಇಂತಹುದೇ ಕಾರಣ ಎಂದು ಈಗ ಹೇಳುವುದು ಆಗದು. ಲಿಪಿ ಗುರುತುಗಳು ಹಲವಾರು ಶತಮಾನಗಳಿಂದ ಬದಲಾಗುತ್ತ ಬಂದಿವೆ. ನಾವೀಗ ನೋಡುತ್ತಿರುವುದು, ಬರೆಯುತ್ತಿರುವುದು ಮುದ್ರಣದ ಬರವು ಆದಮೇಲಿನ ಲಿಪಿಗಳು ಮತ್ತು ಅವುಗಳ ಒತ್ತಕ್ಷರಗಳು. ಅದಕ್ಕೂ ಮೊದಲಿನ ಒಂದೂವರೆ ಸಾವಿರ ವರುಷಗಳಲ್ಲಿ ಈ ಲಿಪಿ ಗುರತುಗಳು ಹೀಗಿರಲಿಲ್ಲ. ಇಂದಿನ ಲಿಪಿ ಗುರುತಿಗಳಿಗೆ ಒಗ್ಗಿದವರಿಗೆ ಅವುಗಳನ್ನು ಬರೆಯುವುದಿರಲಿ, ಓದುವುದೂ ಆಗುವುದಿಲ್ಲ. ಇದು ಎಲ್ಲ ನುಡಿಗಳ ಲಿಪಿಗಳ ಕತೆ. ಈಗ ತಂತ್ರಜ್ಞಾನದ ನೆರವು ಗಟ್ಟಿಗೊಂಡಿರುವುದರಿಂದ ಮುಂದೆ ಬದಲಾವಣೆಗಳು ಅಗದೆಯೂ ಇರಬಹುದು. ಆದರೂ ಅದು ಬಹಳ ಕಡಿಮೆ ಪ್ರಮಾಣದಲ್ಲಿರುತ್ತದೆ.

### ತಗಂಬೇಕು, ಬರಕಂಬೇಕು, ತಿನಕಂಬೇಕು

ಶಿವಮೊಗ್ಗ ರಮೇಶ್ (ಮೈಸೂರು) ಇವರು "ತಗಂಬೇಕು, ಬರಕಂಬೇಕು, ತಿನಕಂಬೇಕು ಎಂದೆಲ್ಲ ಹೇಳುತ್ತಾರಲ್ಲ; ಕೇಳಲು ಕರ್ಕಶವಾಗಿರುವ ಈ ಉಚ್ಚಾರಣೆಗಳ ಬಳಕೆ ಎಷ್ಟು ಸರಿ?" ಎಂದು ಕೇಳಿದ್ದಾರೆ. ಕನ್ನಡದ ಒಳನುಡಿಗಳು ಹಲವು. ಒಂದು ಒಳನುಡಿಯ ಮಾತುಗಳನ್ನು ಇನ್ನೊಂದು ಒಳನುಡಿಯನ್ನಾಡುವವರು ಕರ್ಕಶ ಎಂದೆಲ್ಲ ಹೇಳುವುದು ಅಷ್ಟು ಸರಿಯಾದುದಲ್ಲ. ಇದಕ್ಕೆ ನಮ್ಮ ಶಾಲೆಗಳಲ್ಲಿ ಕನ್ನಡ ಕಲಿಸುತ್ತಿರುವ ಬಗೆಯಲ್ಲಿ ಕಾರಣಗಳಿವೆ. ಒಳನುಡಿಗಳ ಬಗೆಗೆ ಸಹನೆಯನ್ನು ನಾವು ಕಲಿಸುತ್ತಿಲ್ಲ. ಇನ್ನೊಂದು ಒಳನುಡಿಯನ್ನು ನಾವು ಬಳಸದಿರಬಹುದು; ಆದರೆ ಅದನ್ನು ಆಡಿದರೆ ಅದನ್ನು ನಾವು ತಾಳಿಕೊಳ್ಳಬೇಕು. ಹಾಗೆ ಮಾತಾಡುವುದು ಅವರ ಹಕ್ಕು. ಅದನ್ನು

ತಿದ್ದಲು, ಬದಲಿಸಲು ಹೋಗುವುದು ಸರಿಯಲ್ಲ. ಈ ಪ್ರಶ್ನೆ ಕೇಳಿದವರು ತಮ್ಮ ಹೆಸರಿನ ಜೊತೆಗೆ ಊರಿನ ಹೆಸರನ್ನು ಸೇರಿಸಿಕೊಂಡಿದ್ದಾರೆ. ತಮ್ಮ ಊರಿನ ಗುರುತನ್ನು ಬಿಟ್ಟುಕೊಡಲು ಅವರಿಗೆ ಮನಸ್ಸಿಲ್ಲ. ಸರಿಯೇ. ಹಾಗೆಯೇ ಮಾತಾಡುವವರು ತಮ್ಮ ಒಳನುಡಿಗಳ ಗುರತುಗಳನ್ನು ಏಕೆ ಬಿಟ್ಟುಕೊಡಬೇಕು? ಮೈಸೂರಿನಿಂದ ಈ ಪ್ರಶ್ನೆಯನ್ನು ಕೇಳಿದ್ದಾರೆ. ಮೈಸೂರಿನ ಬೇರೆಬೇರೆ ಕಡೆಗಳಲ್ಲಿ ಕೇಳಿಸುವ ಕನ್ನಡ ದಿಟವಾಗಿಯೂ ಶಿವಮೊಗ್ಗದ ಕನ್ನಡಕ್ಕಿಂತ ಬೇರೆಯಾಗಿರುವುದಷ್ಟೆ. ಇನ್ನು ಈ ಪ್ರಶ್ನೆಯಲ್ಲಿ ಹೇಳಿರುವ ಪದರಚನೆಗಳಿಗೆ ಬರೋಣ. ತಗಂಬೇಕು, ಬರಕಂಬೇಕು ಮುಂತಾದ ರೂಪಗಳು ತೆಗೆದುಕೊಳ್ಳಬೇಕು, ಬರೆದುಕೊಳ್ಳಬೇಕು ಎಂಬ ಬರಹ ರೂಪಗಳ ಆಡುರೂಪಗಳು. ಕನ್ನಡದ ಒಳನುಡಿಗಳಲ್ಲಿ **ಕೊಳ್** ಎಂಬ ಪ್ರತ್ಯಯವನ್ನು ಸೇರಿಸಿದ ರೂಪಗಳನ್ನು ನುಡಿಯುವಾಗ ಹಲವು ಬಗೆಯ ಬದಲಾವಣೆಗಳಾಗುತ್ತವೆ. ನೋಡಿಕೊಳ್ಳು ಎಂಬ ರೂಪವನ್ನೇ ತೆಗೆದುಕೊಳ್ಳೋಣ. ಇದನ್ನು ನೋಡಿಕೋ, ನೋಡ್ಕೊ, ನೋಡ್ಕ, ನೋಡ್ಕ್ಯ ಮುಂತಾಗಿ ಹೇಳುವುದುಂಟು. ಕೊಳ್ ಎಂಬ ರೂಪದಲ್ಲಿರುವ **ಳ್** ದನಿಯನ್ನು ಬಿಟ್ಟುಕೊಟ್ಟಾಗ ಉಳಿಯುವ **ಕೋ** ಎಂಬುದನ್ನು ಹಾಗೇ ಬಳಸುವುದು ಒಂದು ಬಗೆ. ಬರಕೋ, ನೋಡೊಕೋ, ಓದಿಕೋ ಮುಂತಾದ ರೂಪಗಳಲ್ಲಿರುವ ಹಾಗೆ. ಇನ್ನು ಕೆಲವು ಕಡೆಗಳಲ್ಲಿ ಕೋ ಬದಲಿಗೆ **ಕ** ಮಾತ್ರ ಉಳಿದಿದೆ. ಬರ್ಕ, ಹೇಳ್ಕ, ತಿನ್ಕ ಮುಂತಾದ ರೂಪಗಳನ್ನು ಕೇಳುತ್ತೇವೆ. ಳ್ ದನಿ ಕಳೆದು ಹೋದಾಗ ಅದರ ಪಳೆಯುಳಿಕೆಯಾಗಿ ಕೆಲವೊಮ್ಮೆ ಬೇರೊಂದು ದನಿ ಸೇರಲೂಬಹುದು. ಬರಕ್ಯ, ತಿನ್ಕ್ಯ ರೂಪಗಳಲ್ಲಿರುವ ಯ ಅಂತಹ ದನಿ. ಈಗ ನಾವು ಗಮನಿಸುತ್ತಿರುವ ಒಳನುಡಿಯ ರೂಪಗಳಲ್ಲಿ ಒಂದು ಅನುನಾಸಿಕ ದನಿ ಹೆಚ್ಚುವರಿಯಾಗಿ ಳ್ ಬದಲಿಗೆ ಬಂದಿರುವಂತಿದೆ. ಬರಕಂ, ತಿನ್ಕಂ, ತಗಂ ಮುಂತಾದ ರೂಪಗಳು ಹೀಗೆ ತಲೆ ಎತ್ತುತ್ತವೆ. ಈ ಒಳನುಡಿಯಾಡುವ ಜನರಲ್ಲಿ ಬರಕಂತಾನೆ, ತಗಂಬಂದೆ ಮುಂತಾದ ರೂಪಗಳಿರುತ್ತವೆ. ಇವೆಲ್ಲ ಕನ್ನಡ ನುಡಿಯಲ್ಲಿ ಬೇರೆ ಬೇರೆ ಕಾಲ ಮತ್ತು ಬೇರೆ ಬೇರೆ ಪ್ರದೇಶಗಳಲ್ಲಿ ಆಗಿರುವ ಬದಲಾವಣೆಗಳು.

### ಉದ್ಯಾನ ಮತ್ತು ಉದ್ಯಾನವನ

ಶಂಕರಪ್ಪ.ಸ.ಬೆ (ಬೆಂಗಳೂರು) ಇವರು **ಉದ್ಯಾನ** ಮತ್ತು **ಉದ್ಯಾನವನ** ಎಂಬ ಎರಡು ಪದಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಉದ್ಯಾನ ಎಂಬುದೇ ಸರಿ. ಆದರೆ ಬಳಕೆಯಲ್ಲಿ ಉದ್ಯಾನವನ್ನೇ ಉದ್ಯಾನವನ ಎಂದೂ ಕರೆಯುವ ಬಗೆಯಿದೆ. ವನ ಎಂಬ ಪದಕ್ಕೆ ಕಾಡು, ಗುಂಪು ಎಂಬ ತಿರುಳುಗಳಿವೆ. ಹಾಗಾಗಿ ಉದ್ಯಾನವನ ಎಂದಾಗ ಹಲವು ಉದ್ಯಾನಗಳ ಗುಂಪು ಎಂಬ ತಿರುಳು ಹೊಂದಬಹುದು. ಸಸ್ಯೋದ್ಯಾನ, ಪುಷ್ಪೋದ್ಯಾನ ಮುಂತಾದ ರಚನೆಗಳಲ್ಲಿ ಉದ್ಯಾನವನ ಎಂಬ ರೂಪ ಬಳಕೆಯಾಗುವುದಿಲ್ಲ ಎನ್ನುವುದನ್ನು ನೋಡಬಹುದು.

### ಕತ್ತಲೆಯ ಬೆಳಗು

ಕಲ್ಲೇಶ್ ಕುಂಬಾರ್ (ಹಾರೂಗೇರಿ, ಬೆಳಗಾವಿ ಜಿ) ಇವರು ಅಕ್ಕ ಮಹಾದೇವಿಯ ವಚನದ ಸಾಲೊಂದನ್ನು ನೀಡಿ ಅದರ ತಿರುಳನ್ನು ಕೇಳಿದ್ದಾರೆ. **'ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ'** ಎಂಬುದು ಆ ಸಾಲು. ಕಲ್ಲೇಶ್ ಅವರು **ಕತ್ತಲೆಯಬೆಳಗು** ಎಂಬುದನ್ನು

ಒಟ್ಟಾಗಿ ಇರಿಸಿ ಹಾಗಂದರೇನು ಎಂಬ ಗೊಂದಲಕ್ಕೆ ಒಳಗಾಗಿದ್ದಾರೆ. ಆದರೆ ವಚನದ ಸಾಲಿನಲ್ಲಿ ಅಂತಹ ಗೊಂದಲವೇನೂ ಇಲ್ಲ. ಕರಣದ ಕತ್ತಲೆಯನ್ನು ಗೆಲ್ಲಲು ಬೆಳಕನ್ನು ಉಟ್ಟೆ/ ಕರಣದ ಕತ್ತಲೆಯನ್ನು ಬೆಳಕನ್ನು ಉಡುವ ಮೂಲಕ ಗೆದ್ದೆ ಎಂದು ಓದಿಕೊಂಡರೆ ಸರಿಯಾಗುತ್ತದೆ. ನಡುಗನ್ನಡದಲ್ಲಿ ದ್ವಿತೀಯಾ ವಿಭಕ್ತಿ ಪ್ರತ್ಯಯವಾದ **ಅನ್**(>**ಅನ್ನು**) ಎಂಬುದು **ಅ** ಎಂದು ಬದಲಾಗುತ್ತಿತ್ತು. ಕತ್ತಲೆಯನ್ನು> ಕತ್ತಲೆಯ ಎಂದಾಗುತ್ತದೆ. ಈ ಬದಲಾವಣೆಯನ್ನು ಗುರುತಿಸಿಕೊಳ್ಳದಿದ್ದರೆ ಕೆಲವೊಮ್ಮೆ ಗೊಂದಲಗಳಾಗುತ್ತವೆ. ನಡುಗನ್ನಡದ ಬರಹರೂಪಗಳಲ್ಲಿ ಹೆಚ್ಚಾಗಿ ಕಂಡುಬರುವ ಈ ಬದಲಾವಣೆ ಹೊಸಗನ್ನಡದಲ್ಲೂ ಕವಿತೆಗಳಲ್ಲಿ ಈಗಲೂ ಉಳಿದುಕೊಂಡಿದೆ. ಉದಾ. 'ಇರುವುದೆಲ್ಲವ '(ನ್ನು) ಬಿಟ್ಟು ಇರದುದರೆಡೆಗೆ ತುಡಿವುದೆ ಜೀವನ' ಇಲ್ಲಿಯೇ ಇನ್ನೊಂದು ಗೊಂದಲವೂ ಅವರನ್ನು ಕಡಿದೆ. ಬೆಳಕು ಮತ್ತು ಬೆಳಗು ಪದಗಳು ಒಂದೇ ತಿರುಳನ್ನು ಹೊಂದಿವೆಯೇ ಇಲ್ಲವೇ ಬೇರೆಬೇರೆಯೋ ಎಂಬುದೇ ಆ ಗೊಂದಲ. ಬೆಳಗು ಪದಕ್ಕೆ ಹೊತ್ತನ್ನು ತಿಳಿಸುವ ತಿರುಳು ಇದೆ ಎನ್ನುವುದನ್ನು ಗಮನಿಸಬೇಕು,

**ಊರು ಹೆಸರ ಬರೆಹರೂಪ**

ಸಿದ್ದಯ್ಯ.ಎಂ (ಶಿವಮೊಗ್ಗ) ಇವರು ಊರಿನ ಹೆಸರುಗಳನ್ನು ಕನ್ನಡ ಅಕ್ಷರಗಳಲ್ಲಿ ಬರೆಯುವುದಕ್ಕೂ ಇಂಗ್ಲಿಶ್ ಲಿಪಿಯಲ್ಲಿ ಬರೆಯುವುದಕ್ಕೂ ಇರುವ ವ್ಯತ್ಯಾಸಗಳನ್ನು ಸರಿಪಡಿಸಲು ಏನೂ ಮಾಡುತ್ತಿಲ್ಲವೇಕೆ ಎಂದು ಕೇಳಿದ್ದಾರೆ. ಸಮಸ್ಯೆ ಅವರು ತಿಳಿದಿರುವದಕ್ಕಿಂತಲೂ ಹೆಚ್ಚು ಗೋಜಲಾಗಿದೆ. ಊರಿನ ಹೆಸರುಗಳನ್ನು ಕನ್ನಡದಲ್ಲಿ ಬರೆದರೂ ಜನರು ಅದನ್ನು ಆಡುಮಾತಿನಲ್ಲಿ ಬೇರೆಯಾಗಿಯೇ ಕರೆಯುತ್ತಿರುವ ಹಲವು ಉದಾಹರಣೆಗಳಿವೆ. ಅಲ್ಲದೆ ಸರಕಾರದ ಬೇರೆ ಬೇರೆ ಇಲಾಖೆಗಳು (ಉದಾ.ಗೆ. ಅಂಚೆ, ಅಹಾರ ಸರಬರಾಜು ಮತ್ತು ನಾಗರಿಕ ಸೇವೆ, ಪೊಲೀಸ್, ಕಂದಾಯ, ಲೋಕೋಪಯೋಗಿ, ಗ್ರಾಮೀಣಾಭಿವೃದ್ಧಿ, ಆರೋಗ್ಯ ಮುಂತಾದವು) ಬೇರೆಬೇರೆಯಾಗಿ ಬರೆಯುವುದುಂಟು. ಕರ್ನಾಟಕದ ಊರುಗಳ ಪಟ್ಟಿಯೊಂದನ್ನು ಕನ್ನಡ ಮತ್ತು ಇಂಗ್ಲಿಶ್ ಲಿಪಿಯಲ್ಲಿ ಬರೆದಿರುವ ಪಟ್ಟಿಯೊಂದನ್ನು ಎರಡು ದಶಕಗಳ ಹಿಂದೆ ಸರಕಾರ ಹೊರತಂದಿತ್ತು. ಅದರಲ್ಲೂ ಎಲ್ಲ ಗೊಂದಲಗಳು ತೀರಿಲ್ಲ. ಅಲ್ಲದೆ ಆ ಪಟ್ಟಿಯಲ್ಲಿ ಕಂದಾಯ ಇಲಾಖೆಯ ವ್ಯಾಪ್ತಿಗೆ ಬಾರದಿರುವ (ಆದರೆ ಓಟುಗಳಿರುವ) ಊರುಗಳು ಸೇರಿಲ್ಲ. ಉದಾ.ಗೆ ಲಂಬಾಣಿ ತಾಂಡಾಗಳು. ಬೆಂಗಳೂರು, ಮೈಸೂರು, ಶಿವಮೊಗ್ಗ ಮುಂತಾದ ನಗರಗಳ ಹೆಸರುಗಳನ್ನು ಇಂಗ್ಲಿಶಿನಲ್ಲಿ ಸರಿಯಾಗಿ ಬರೆಯುತ್ತಿಲ್ಲ ಎಂದು ಗೊಣಗುವ ಮೊದಲು ಎಲ್ಲ ಊರುಗಳ ಹೆಸರುಗಳನ್ನು ಕನ್ನಡದಲ್ಲಿ 'ಸರಿಯಾಗಿ' ಬರೆಯುವ ಬಗ್ಗೆ ತಕ್ಕ ಹೆಜ್ಜೆಯನ್ನು ಇಡಬೇಕಾಗಿದೆ. ಇದು ಕೇವಲ ನುಡಿಗೆ ಮಾತ್ರ ಸಂಬಂಧಿಸಿದ ಮಾತಲ್ಲ. ಹೆಸರುಗಳ ದಾಖಲೆಗಳು ಜನರಿಗೆ ದೊರೆಯುವ ಹಲವು ಸೌಕರ್ಯಗಳನ್ನೂ ನಿರ್ಧರಿಸುತ್ತದೆ ಎಂಬುದನ್ನು ಮರೆಯಬಾರದು.

**ಪುನರುಕ್ತಿ ದೋಷ**

ಜಯಂತಿ ಎಚ್.ಪಿ. (ಬೆಂಗಳೂರು) ಇವರು ಪತ್ರಿಕೆಯಲ್ಲಿ ಕಂಡ ವಾಕ್ಯವೊಂದನ್ನು ನೀಡಿ (ಉಗ್ರರ ನಿಗ್ರಹ ಇಂದಿನ ಜರೂರು ಅವಶ್ಯಕತೆಯಾಗಿದೆ) ಈ ವಾಕ್ಯದಲ್ಲಿ

ಪುನರುಕ್ತಿ (ಹೇಳಿದ್ದನ್ನೇ ಹೇಳುವ) ದೋಷವಿದೆಯಲ್ಲವೇ ಎಂದು ಕೇಳಿದ್ದಾರೆ. ಸರಿ. ಜರೂರು ಇಲ್ಲವೇ ಅವಶ್ಯಕತೆ ಈ ಎರಡು ಪದಗಳಲ್ಲಿ ಒಂದನ್ನು ಬಳಸಿದರೂ ಸಾಕಾಗಿತ್ತು. ಬರೆಯುವವರಲ್ಲಿ ಪದಗಳ ತಿರುಳಿನ ಬಗೆಗೆ ಮತ್ತು ಬಳಕೆಯಲ್ಲಿ ಆ ತಿರುಳು ಪಡೆದುಕೊಳ್ಳುವ ಹರವಿನ ಬಗೆಗೆ ಅರಿವು ಇಲ್ಲದಿದ್ದರೆ ಇಂತಹ ತಪ್ಪುಗಳು ಆಗುತ್ತವೆ. ಇವರೇ ಇನ್ನೊಂದು ಉದಾಹರಣೆಯನ್ನು ನೀಡಿದ್ದಾರೆ. 'ಮತ್ತೆ ಮರು ಮತದಾನಕ್ಕೆ ಆದೇಶ' ಈ ವಾಕ್ಯವಂತೂ ಎರಡನೆಯ ಬಾರಿ ಮರುಮತದಾನಕ್ಕೆ ಆದೇಶ ನೀಡಲಾಯಿತೆಂದು ತಿಳಿಯುವಂತೆ ಮಾಡುತ್ತದೆ. ಆದರೆ ಹೇಳಿದ್ದನ್ನೇ ಹೇಳುವುದು ಎಲ್ಲ ಕಡೆಯೂ ತಪ್ಪಾಗುವುದಿಲ್ಲ. ಕೆಲವೊಮ್ಮೆ ನುಡಿವರಸೆಗಳಲ್ಲಿ ಹೀಗೆ ಹೇಳಿದ್ದನ್ನೇ ಹೇಳುವ ಬಗೆ ಇರುತ್ತದೆ. ಕೆಲಸಕಾರ್ಯ, ಸಾಲಸೋಲ, ದುಡ್ಡುದುಗ್ಗಾಣಿ ಮುಂತಾದವನ್ನು ನೋಡಿ. ಅಲ್ಲದೆ ಏನನ್ನಾದರೂ ಒತ್ತುಕೊಟ್ಟು ಹೇಳುವಾಗ ಹೀಗೆ ಹೇಳಿದ್ದನ್ನೇ ಹೇಳುವುದುಂಟು. ಉದಾ.ಗೆ 'ಬೇಡಬೇಡ. ಹೋಗಬೇಡ', 'ಸಾಕುಸಾಕು. ಈ ನಿನ್ನ ಪುರಾಣ ಸಾಕು' ಈ ಮಾದರಿಗಳನ್ನು ನೋಡಿ.

### ಹೊಸ ಪದರಚನೆಗಳು

ಪತ್ರಿಕೆಗಳಲ್ಲಿ ಓದಲು ಸಿಕ್ಕ ಮತ್ತು ಟಿವಿಯಲ್ಲಿ ಕೇಳಿದ ಕೆಲವು ಹೊಸ ಪದರಚನೆಗಳನ್ನು ನೋಡಿ: **ಬಾಲ ಕಾರ್ಮಿಕತೆ, ಖರ್ಚುದಾಯಕ, ಶಾಪಗ್ರಸ್ಥರು, ಯುದ್ಧಾವತಾರ, ಕಾಸುಬಾಕ**. ಇವೆಲ್ಲ ರಚನೆಗಳಿಗೂ ಆಯಾ ಬಳಕೆಯಲ್ಲಿ ಅರ್ಥವೇನೆಂಬುದು ಗೊತ್ತಾಗುವಂತಿದೆ. ಬಳಸಿದವರಿಗೂ ಆ ಬಗೆಗೆ ಗೊಂದಲಗಳಿದ್ದ ಹಾಗೆ ತೋರುವುದಿಲ್ಲ. ಆದರೆ ಇವೆಲ್ಲ ರಚನೆಗಳನ್ನು ರೂಪಿಸಿದವರು ಪದಗಳಿಗೆ ಒಂದು ಒಳರಚನೆ ಇರುತ್ತದೆ ಎನ್ನುವ ಮಾತನ್ನೇ ಒಪ್ಪುವಂತಿಲ್ಲ. ಒಂದು ರಚನೆಯ ಮಾದರಿಯಲ್ಲಿ, ಅದನ್ನೇ ಹೋಲುವ ಇನ್ನೊಂದು ರಚನೆಯನ್ನು ಕಟ್ಟಿದರೆ ಅದೇ ಹೊಸಪದ ಎಂಬ ತಿಳುವಳಿಕೆ ಕನ್ನಡದಲ್ಲಿ ಬಲವಾಗುತ್ತಿರುವಂತಿದೆ. **ಬಾಲ ಕಾರ್ಮಿಕತೆ** ಎಂಬ ರೂಪವನ್ನು ಧಾರ್ಮಿಕತೆ, ಆಸ್ತಿಕತೆ, ವೈಚಾರಿಕತೆ ಮಾದರಿಯಲ್ಲಿ ರಚಿಸಲಾಗಿದೆ. ಆದರೆ **ತೆ** ಎಂಬ ಪ್ರತ್ಯಯವನ್ನು ಗುಣವಾಚಕ ರೂಪಗಳಿಗೆ ಸೇರಿಸುತ್ತೇವೆ: ನಾಮಪದಗಳಿಗಲ್ಲ, ಆದರೆ ಬಾಲ ಕಾರ್ಮಿಕ ಎಂಬುದು ನಾಮಪದವಷ್ಟೆ. **ಖರ್ಚುದಾಯಕ** ಎಂಬುದು ತ್ರಾಸದಾಯಕ, ತಾಪದಾಯಕ, ಲಾಭದಾಯಕ ರೂಪಗಳನ್ನು ಅನುಸರಿಸಿದೆ. ಇಲ್ಲೆಲ್ಲಾ **ದಾಯಕ** ಎಂದರೆ ನೀಡುವ ಎಂಬ ಅರ್ಥವಿದೆ. ಉಂಟುಮಾಡುವ ಎಂಬ ಅರ್ಥಕ್ಕಾಗಿ **ಕಾರಕ** ಎಂಬ ರೂಪವನ್ನು (ಉದಾ.ನಷ್ಟಕಾರಕ, ಹಾನಿಕಾರಕ) ಬಳಸುವುದುಂಟು. ಹಾಗಾಗಿ ಖರ್ಚುದಾಯಕ ವಿಚಿತ್ರರೂಪವಾಗಿದೆ. ಶಾಪಗ್ರಸ್ಥರು ರೂಪವನ್ನು (ಇಲ್ಲಿ ಗ್ರಸ್ತ ಸಾಕಿತ್ತು ) ಬಳಸಿದ ವಾಕ್ಯ ಹೀಗಿತ್ತು: '........**ಇವರೆಲ್ಲಾ ನಾಡಿನ ಶಾಪಗ್ರಸ್ಥರು**.' ಉದ್ದೇಶವಿಷ್ಟೆ. ಇವರಿಂದ ನಾಡು ಶಾಪಗ್ರಸ್ತವಾಗಿದೆ ಎಂದು ಹೇಳಬೇಕಿದೆ. ಆದರೆ ಆ ವ್ಯಕ್ತಿಗಳೇ ಶಾಪಗ್ರಸ್ತರು( ಶಾಪಕ್ಕೆ ಒಳಗಾದವರು) ಎಂಬ ಅರ್ಥ ಬರುವಂತೆ ಬಳಸಲಾಗಿದೆ. **ಯುದ್ಧಾವತಾರ**ವನ್ನಂತೂ ರಚನೆಯ ನಿಯಮಗಳಿಗೆ ಒಳಪಡಿಸುವುದು ಸಾಧ್ಯವೇ ಇಲ್ಲ. ಇಲ್ಲಿ ಕನ್ನಡ ಮತ್ತು ಸಂಸ್ಕೃತ (ಅವತಾರ) ಪದಗಳನ್ನು ಸೇರಿಸಿದ ರಚನೆ ಇದೆ. ಯಾವ ಸಂಧಿ ನಿಯಮವನ್ನೂ ಹೊಂದಿಸುವುದಕ್ಕೆ ಆಗದು. ದಶಾವತಾರ, ಅಪರಾವತಾರ, ಲಂಚಾವತಾರ ರೂಪಗಳ ಮಾದರಿಯ ಅನುಸರಣೆ ಮಾತ್ರ ಇದೆ.

ಕಾಸುಬಾಕ ಕೂಡ ಹೊಟ್ಟೆಬಾಕ, ಕೊಳ್ಳುಬಾಕ, ನೆಲಬಾಕ ಮಾದರಿಯ ರಚನೆ. ಕಾಸು ಎಂಬ ಪದಕ್ಕೆ ಈಗ ಬಿಡಿಯಾದ ಬಳಕೆಯೇ ಇಲ್ಲ. ಇಂತಹ ರೂಪಗಳಲ್ಲಿ ಮಾತ್ರ ಅದು ಜಾಗ ಕಂಡುಕೊಳ್ಳಬೇಕಾಗಿದೆ. ಹೀಗೆ ಒಳ ರಚನೆಯನ್ನು ಕಡೆಗಣಿಸಿ ಹೊಸ ಪದಗಳನ್ನು ಕಟ್ಟುವುದು ಎಷ್ಟು ಸರಿ ಎಂದು ಮತ್ತೊಮ್ಮೆ ಯೋಚಿಸಬೇಕಾಗಿದೆ. ಇಲ್ಲವಾದರೆ ಶಾಲೆಗಳಲ್ಲಿ ಸಂಧಿನಿಯಮಗಳನ್ನು ಹೇಳಿಕೊಡುವುದನ್ನಾದರೂ ನಿಲ್ಲಿಸಬೇಕು.

**ತಂದಿತ್ತು-ತಂದಿಟ್ಟು**

ಮುಂದಿನ ಎರಡು ವಾಕ್ಯಗಳನ್ನು ಗಮನಿಸಿ: **1) ಬಂದವರಿಗೆ ಕಾಫಿ ತಂದಿತ್ತು ಒಳಗೆ ಹೋದಳು 2) ಬಂದವರಿಗೆ ಕಾಫಿ ತಂದಿಟ್ಟು ಒಳಗೆ ಹೋದಳು.** ಎರಡೂ ಸರಿಯಾದ ವಾಕ್ಯಗಳು. ಆದರೆ ಕನ್ನಡವನ್ನು ಹೆಚ್ಚಾಗಿ ಕೇಳುವ ಆದರೆ ಕಡಿಮೆ ಓದುವ ವ್ಯಕ್ತಿಯೊಬ್ಬರು ಇವುಗಳಲ್ಲಿ ಮೊದಲನೆಯದು ಸರಿಯಲ್ಲವಲ್ಲ; ಅಲ್ಲವೇ ಎಂದು ಕೇಳಿದರು. ಅವರು ಹೇಳಿದ್ದು ಒಂದು ಬಗೆಯಲ್ಲಿ ಸರಿ. ಏಕೆಂದರೆ ಮೊದಲ ಬಗೆಯ ವಾಕ್ಯಗಳು ಕನ್ನಡ ಬರಹದಲ್ಲಿ ಕಾಣಿಸಿಕೊಳ್ಳುತ್ತದೆ; ಆದರೆ ಮಾತಿನಲ್ಲಿ ಅಲ್ಲ. ಎರಡನೆಯ ವಾಕ್ಯ ಮಾತು, ಬರಹ ಎರಡೂ ಕಡೆ ಬರಬಲ್ಲುದು. ಬರಹದಲ್ಲಿ ಕಾಣಿಸಿಕೊಳ್ಳುವ ರೂಪಗಳೆಲ್ಲವೂ ಮಾತಿನಲ್ಲಿ ಕಾಣಿಸಿಕೊಳ್ಳಲಾರವು. ಕಿವಿಯಿಂದ ಕೇಳುವ ಕನ್ನಡವನ್ನು ಹೆಚ್ಚು ಬಳಸುವ ಮಾಧ್ಯಮಗಳಿಗೆ ಬೇಕಾದ ಕನ್ನಡವನ್ನು ಬರೆಯುತ್ತಿರುವವರು ಈ ಸಂಗತಿಯನ್ನು ಗಮನಿಸಬೇಕು. ಇಲ್ಲದಿದ್ದರೆ ಕಣ್ಣಿನಿಂದ ಓದುವಾಗ ಸರಿ ಎನ್ನಿಸುವ ಕನ್ನಡ ಕಿವಿಯಿಂದ ಕೇಳಿದಾಗ ಅಷ್ಟು ಹಿತವೆನಿಸುವುದಿಲ್ಲ.

ಮೇಲೆ ಬರೆದ ಎರಡೂ ವಾಕ್ಯಗಳ ಅರ್ಥದಲ್ಲಿ ಏನಾದರೂ ಬದಲಾವಣೆ ಇದೆಯೇ? ಹೆಚ್ಚು ಜನ ಅವೆರಡಲ್ಲಿರುವ ಅರ್ಥವ್ಯತ್ಯಾಸವನ್ನು ಗಮನಿಸುವುದಿಲ್ಲ. ಮೊದಲ ವಾಕ್ಯದಲ್ಲಿ ಕಾಫಿಯನ್ನು ತಂದು ಕೈಗೆ **ಕೊಟ್ಟು** ಎಂಬ ಅರ್ಥವಿರುವ ಸಾಧ್ಯತೆ ಇದೆ. ಆದರೆ ಎರಡನೆಯ ವಾಕ್ಯದಲ್ಲಿ ಕಾಫಿಯನ್ನು ತಂದು (ಮುಂದೆ) **ಇರಿಸಿ** ಎಂಬ ಅರ್ಥ ಮಾತ್ರ ಬರಬಹುದು. ತಂದಿತ್ತು(ತಂದು+ಇತ್ತು) ರೂಪದಲ್ಲಿರುವ ಇತ್ತು ಎಂಬುದು **ಈ(ಯ್)** ಎಂಬ ಕ್ರಿಯಾರೂಪದಿಂದ ಬಂದಿದೆ. **ಈ(ಯ್)** ಇಂದಿನ ಕನ್ನಡದ ಮಾತಿನಲ್ಲಿ ಉಳಿದುಕೊಂಡಿಲ್ಲ. ಅದು ಕವಿತೆಗಳಲ್ಲಿ( ತಂಪನೀವ, ಬೆಳಕನೀವ ಮುಂ.) ಮತ್ತು ಬರವಣಿಗೆಯ ಕನ್ನಡದಲ್ಲಿ ಮಾತ್ರ ಉಳಿದುಕೊಂಡಿದೆ. ಅದರಲ್ಲೂ ಇನ್ನೊಂದು ಕ್ರಿಯಾಪದದ ಜೊತೆಗೆ ಬರುವುದಿದ್ದರೆ 'ತಾ/ ತರು' ಕ್ರಿಯಾರೂಪದೊಡನೆ ಮಾತ್ರ ಹೆಚ್ಚು ಬಳಕೆಯಾಗುತ್ತದೆ. **ಈ(ಯ್)** ರೂಪದ ಅರ್ಥವನ್ನು ಹೇಳಲು ಈಗ **ಕೊಡು, ನೀಡು** ಎಂಬ ರೂಪಗಳನ್ನು ಬಳಸುತ್ತೇವೆ. ಈ ಎರಡರಲ್ಲೂ **ನೀಡು** ಎಂಬುದು ಮಾತಿನಲ್ಲಿ ಬಳಕೆಯಾಗುವುದು ಕಡಿಮೆ. ತುಂಗಭದ್ರೆಯ ಉತ್ತರದ ಕರ್ನಾಟಕದ ಕೆಲವು ಸಮುದಾಯಗಳಲ್ಲಿ ಊಣಿಸನ್ನು ಬಡಿಸು ಎಂಬ ಅರ್ಥದಲ್ಲಿ ನೀಡು ಎಂಬ ರೂಪ ಮಾತಿನಲ್ಲಿ ಬಳಕೆಯಾಗುತ್ತದೆ. ಇದಕ್ಕೆ ಬೇರೆ ಚಾರಿತ್ರಿಕ ಕಾರಣಗಳಿರುವಂತಿವೆ. ಹಿಂದೆ ಕನ್ನಡದಲ್ಲಿ ಈ(ನ್)(= ಮರಿ ಹಾಕು) ಎಂಬ ಇನ್ನೊಂದು ಕ್ರಿಯಾರೂಪ ಬಳಕೆಯಲ್ಲಿತ್ತು. ಈಗ ಅದು ಮಾತಿನಲ್ಲಾಗಲಿ, ಬರಹದಲ್ಲಾಗಲಿ ಹೆಚ್ಚು ಬಳಕೆಯಲ್ಲಿಲ್ಲ. 'ಎತ್ತು ಈಯ್ತು ಅಂದರೆ ಕೊಟ್ಟಿಗೇಲಿ ಕಟ್ಟಿ ಹಾಕು ಅಂದನಂತೆ' ಎಂಬ ಗಾದೆ

ಮಾತಿನಲ್ಲಿ ಅದರ ಪಳೆಯುಳಕೆ ಇದೆ. ಮೈಸೂರು, ಮಂಡ್ಯ ಕಡೆಯಲ್ಲಿ ಹಸು, ಎಮ್ಮೆಗಳು ಕರು ಹಾಕಿದ್ದನ್ನು ಹೇಳುವಾಗ 'ಈಲು' ಎಂಬ ಪದವೊಂದು ಕೇಳಿಬರುತ್ತದೆ.

**ಕರ್ತರೀ–ಕರ್ಮಣೀ**

ಯಲ್ಲಾಪುರ ಕೃಷ್ಣಮೂರ್ತಿ (ಬೆಂಗಳೂರು) ಇವರು ಕೆಲವು ವಾಕ್ಯಗಳನ್ನು ಬರೆದು ಆ ವಾಕ್ಯಗಳಲ್ಲಿ ಕೆಲಸ ಮಾಡಿದವರನ್ನು ಹೇಳುವ ಪದಗಳು ಯಾವುವು ಎಂದು ಕೇಳಿದ್ದಾರೆ. 'ಈ ದಿನ ಸರಕಾರದ ಆದೇಶವನ್ನು ಹೊರಡಿಸಲಾಯಿತು' , 'ಈ ರೀತಿ ಹೇಳಲಾಗಿದೆ' , 'ಉಗ್ರರನ್ನು ದಂಡಿಸಲಾಗುವುದು' ಇವೇ ಮುಂತಾದ ವಾಕ್ಯಗಳಲ್ಲಿ ಕೆಲಸವನ್ನು ಮಾಡಿದವರು ಯಾರು ಎಂಬುದು ಗೊತ್ತಾಗುವುದಿಲ್ಲ. ನಮ್ಮ ಹಿಂದಿನ ಶಾಲಾ ವ್ಯಾಕರಣಗಳು ಕರ್ತರೀ ಮತ್ತು ಕರ್ಮಣೀ ಎಂಬ ಎರಡು ಬಗೆಯ ವಾಕ್ಯಗಳನ್ನು ತಿಳಿಸಿಕೊಡುತ್ತವೆ. ಕರ್ಮಣೀ ವಾಕ್ಯಗಳಲ್ಲಿ ಕೆಲಸ ಮಾಡಿದವರು ಯಾರು ಎಂಬುದು ಗೊತ್ತಾಗುವಂತಿದ್ದರೂ ವಾಕ್ಯದ ವಿಷಯ ಮಾತ್ರ ಆ ಪದವಾಗಿರುವುದಿಲ್ಲ. **ರಾಣಿ ಗಾಳಿಪಟವನ್ನು ಹಾರಿಸಿದಳು** ಮತ್ತು **ಗಾಳಿಪಟ ರಾಣಿಯಿಂದ ಹಾರಿಸಲ್ಪಟ್ಟಿತು** ಎಂಬ ಎರಡು ವಾಕ್ಯಗಳಲ್ಲಿ ಎರಡನೆಯದು ಕರ್ಮಣೀ ವಾಕ್ಯ. ಅದರಲ್ಲಿ ಗಾಳಿಪಟ ಹರಿಸಿದವಳು ರಾಣಿ ಎಂಬುದು ಗೊತ್ತಾಗುವಂತಿದ್ದರೂ ವಾಕ್ಯದ ವಿಷಯ ಮಾತ್ರ ಗಾಳಿಪಟ. ಕನ್ನಡಕ್ಕೆ ಕರ್ಮಣೀ ವಾಕ್ಯಗಳು ಹೊಂದುವುದಿಲ್ಲ. ಹಾಗಿದ್ದರೆ ಕೆಲಸ ಮಾಡಿದವರು ಯಾರು ಎಂಬುದು ಮುಖ್ಯವಾಗದಿರುವ ವಾಕ್ಯಗಳ ರಚನೆಗೆ ಒಂದು ಹಾದಿ ಬೇಕಾಗುತ್ತದೆ. ಮೇಲೆ ಹೇಳಿದ ವಾಕ್ಯಗಳು ಆ ಬಗೆಯವು. ದಿನವೂ ನೂರಾರು ಇಂತಹ ವಾಕ್ಯಗಳು ಬರಹದಲ್ಲಿ ಕಾಣಸಿಕೊಳ್ಳುತ್ತವೆ. ಇವು ಮೇಲುನೋಟಕ್ಕೆ ಕರ್ಮಣೀ ವಾಕ್ಯಗಳಂತೆ ಇದ್ದರೂ ರಚನೆಯಲ್ಲಿ ಬೇರೆಯಾಗಿವೆ. **ಪುಸ್ತಕವನ್ನು ಮೈಸೂರಿನಲ್ಲಿ ಮುದ್ರಿಸಲಾಯಿತು** ಮತ್ತು **ಪುಸ್ತಕವು ಮೈಸೂರಿನಲ್ಲಿ ಮುದ್ರಿಸಲ್ಪಟ್ಟಿತು** ಎಂಬ ಎರಡು ವಾಕ್ಯಗಳನ್ನು ನೋಡಿ. ಎರಡನೆಯದು ಕರ್ಮಣೀ. ಮೊದಲನೆಯದು ನಾವು ಗಮನಿಸುತ್ತಿರುವ ಕರ್ತೃ ಕಾಣಿಸಿಕೊಳ್ಳದ ವಾಕ್ಯದ ಮಾದರಿಗೆ ಸೇರುತ್ತದೆ.

**ಇದುವರೆಗೂ–ಇದುವರೆವಿಗೂ**

ಶಿಲ್ಪಾ ಎಸ್. ಕುಲಕರ್ಣಿ (ವಿಜಾಪುರ) ಇವರು ' ಬೆಂಗಳೂರಿನ ಕಡೆಯವರು ಇದುವರೆಗೂ ಎನ್ನುವಲ್ಲಿ ಇದುವರೆವಿಗೂ ಎಂದು ಬರೆಯುತ್ತಾರೆ ಏಕೆ?' ಎಂದು ಕೇಳಿದ್ದಾರೆ. ಮಾತಿನಲ್ಲಿ ಹಲವು ಬಗೆಗಳು ಇರುವಂತೆ ಬರವಣಿಗೆಯಲ್ಲೂ ಹಲವು ಬಗೆಗಳೂ ಇರುತ್ತವೆ. ಬೆಂಗಳೂರಿನವರೆಲ್ಲ ಒಂದೇ ಬಗೆಯಲ್ಲಿ ಬರೆಯುತ್ತಾರೆ ಎಂದು ತಿಳಿಯುವುದು ಸಾರಾಸಗಟಾದ ಮಾತು. ಆದರೆ ಹೀಗೆ ಆ ಕಡೆಯ ಕೆಲವರು ಬರೆಯುವುದನ್ನು ಗಮನಿಸಿ ಈ ಪ್ರಶ್ನೆಯನ್ನು ಕೇಳಿದ್ದಾರೆ ಎಂದುಕೊಳ್ಳೋಣ. **ಇದುವರೆಗೂ**(<**ಇದುವರೆಗೆ**) ಹೆಚ್ಚು ಒಪ್ಪಿತ ರೂಪ. **ಇದುವರೆವಿಗೂ** ಎಂಬ ರೂಪವನ್ನು ಇದೇ ತಿರುಳಿನೊಡನೆ ಕೆಲವರು ಬರೆಯುತ್ತಿದ್ದಾರೆ. ಕೆಲವರ ಮಾತಿನಲ್ಲೂ ಕೇಳಿಸಬಹುದು. ಆದರೆ ಕಟ್ಟುಗಳ ಮೂಲಕ ವಿವರಿಸಬಹುದಾದ ರೂಪ **ಇದುವರೆಗೆ** ಮಾತ್ರ. ಇದಕ್ಕೆ ಬದಲಾಗಿ **ಈವರೆಗೆ** ಎಂಬ ಇನ್ನೊಂದು ರೂಪವೂ ಬಳಕೆಯಲ್ಲಿದೆ. ಹೆಚ್ಚು ಕಡಿಮೆ ಈ

ಎರಡನ್ನೂ ಒಂದೇ ತಿರುಳಿನ ರಚನೆಗಳು ಎಂದು ತಿಳಿಯುವುದು ವಾಡಿಕೆ. ಆದರೆ ಇಂದು ರಚನೆಯಲ್ಲಿ ಈ ಮತ್ತು ಇದು ಎಂಬ ಎರಡು ಪದಗಳನ್ನು ಒಂದರ ಬದಲಾಗಿ ಇನ್ನೊಂದನ್ನು ಬಳಸಲು ಆಗುವುದಿಲ್ಲ. ಉದಾಹರಣೆಗೆ ಇದು ಮರ ಎನ್ನುವಲ್ಲಿ ಈ ಮರ ಎನ್ನಲಾಗದು. ಆದರೆ ಇದುವರೆಗೆ ಮತ್ತು ಈವರೆಗೆ ಒಂದೇ ತಿರುಳಿನೊಡನೆ ಬಳಕೆಯಾಗುತ್ತಿವೆ. ಇವೆರಡರ ಜೊತೆಗೆ **ಇಲ್ಲಿವರೆಗೆ** ಎಂಬ ಇನ್ನೊಂದು ರಚನೆ ಕೂಡ ಬಳಕೆಯಾಗುತ್ತಿದೆ.

**ಅನಸೂಯ–ಅನುಸೂಯ**

ಸುಬ್ರಹ್ಮಣ್ಯ ಬಿ.ಕೆ (ಬೆಂಗಳೂರು) ಇವರಿಗೆ ಕೆಲವು ಪದಗಳ ಸರಿಯಾದ ರೂಪದ ಬಗೆಗೆ ಗೊಂದಲಗಳಿವೆ.( ತಮ್ಮ ಹೆಸರಿನ ಸರಿಯಾದ ಕಾಗುಣಿತ ಬಗೆಗೂ ಸೇರಿದಂತೆ.) ಅನಸೂಯ ಮತ್ತು ಅನುಸೂಯ ಈ ಎರಡರಲ್ಲಿ ಅನಸೂಯ ಸರಿ. ಅಸೂಯಾ/ಅಸೂಯ ಎರಡೂ ಸಂಸ್ಕೃತದ ಪದಗಳು. ಇವುಗಳ ನಿಷೇಧ ರೂಪಗಳನ್ನು ಪಡೆಯಲು ಅನ್–ಪ್ರತ್ಯಯವನ್ನು ಸೇರಿಸಿದಾಗ ಅನಸೂಯ/ಅನುಸೂಯಾ ರೂಪಗಳು ದೊರಕುತ್ತವೆ. ಅಸೂಯೆ ಇಲ್ಲದಿರುವುದು ಎಂಬುದು ಈ ಪದಗಳ ಸರಳ ತಿರುಳು. ಏನೋ ಕಾರಣದಿಂದ ಈ ಪದಗಳು ಹೆಂಗಸಿನ ಹೆಸರುಗಳಾಗಿ ಕನ್ನಡದಲ್ಲಿ ಬಳಕೆಯಾಗುತ್ತಿವೆ.

**ಗೆಲ್ಲ–ಗೆಲ್ಲು**

ರಘುನಾಥರಾವ್ ತಾಪ್ಸೆ ( ದಾವಣಗೆರೆ) ಇವರು 'ಗೆಲ್ಲನ್ನು ಕಡಿದರೆ ಇಡೀ ಮರಕ್ಕೆ ಹಾನಿಯಾಗುತ್ತದೆ' ಎಂಬ ವಾಕ್ಯದಲ್ಲಿ ಗೆಲ್ಲ/ಗೆಲ್ಲು ಪದದ ಬಳಕೆ ಸರಿಯೇ ಎಂದು ಕೇಳಿದ್ದಾರೆ. ಇವರ ಪ್ರಶ್ನೆಗೂ ಪದರೂಪಕ್ಕೂ ಸಂಬಂಧವಿಲ್ಲ. ಮರಕ್ಕೆ ಹಾನಿಯಾಗುವುದು ಬೇರಿಗೆ ತೊಂದರೆಯಾದಾಗ ಅಲ್ಲವೇ? ಇಲ್ಲಿ ಕೊಂಬೆ, ರೆಂಬೆ ಎಂಬ ತಿರುಳಿರುವ ಗೆಲ್ಲ/ಗೆಲ್ಲು ಪದ ಬಳಸಬಹುದೇ ಎಂಬುದು ಇವರ ಪ್ರಶ್ನೆ. ವಾಕ್ಯಗಳ ತಿರುಳು ಕೇವಲ ಪದಗಳ ದಿಟವಾದ ತಿರುಳನ್ನು ಮಾತ್ರ ನೆಮ್ಮಿಕೊಂಡಿರುವುದಿಲ್ಲ. ದಿಟ, ಬೇರು ಕಡಿದರೆ ಆಗುವಷ್ಟು ಹಾನಿ ರೆಂಬೆ ಕಡಿದರೆ ಆಗದಿರಬಹುದು. ಮರದ ಯಾವ ಅಂಗಕ್ಕೆ ಗಾಸಿಯಾದರೂ ಅದು ಮರಕ್ಕೆ ಆದ ಹಾನಿ ತಾನೆ? ಈ ನಿಟ್ಟಿನಲ್ಲಿ ಈ ವಾಕ್ಯವನ್ನು ಬಳಕೆಯ ಮಟ್ಟಿಗೆ ಸರಿಯೆಂದು ಒಪ್ಪಬಹುದು.

**ಬಳಸುದಾರಿ**

ಕುಪ್ಪೇರಾವ್ ಬಿ (ಹಂಪಿ) ಇವರು ರಾಜ್ಯ ಸರಕಾರದ ಅರ್ಜಿ ನಮೂನೆಯೊಂದರಲ್ಲಿ ಕಾಣಸಿಗುತ್ತಿರುವ ವಾಕ್ಯವೊಂದನ್ನು ಬರೆದು ಕಳುಹಿಸಿ,ಅದರ ತಿರುಳೇನು ಎಂದು ಕೇಳಿದ್ದಾರೆ. ಆ ವಾಕ್ಯ ಹೀಗಿದೆ. **"ನೀವು ಎಸ್.ಎಸ್.ಎಲ್.ಸಿ ಅಥವಾ ಅದಕ್ಕೆ ತತ್ಸಮಾನವೆಂದು ಘೋಷಿಸಲ್ಪಟ್ಟ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ ಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯಭಾಷೆ/ ದ್ವಿತೀಯ ಭಾಷೆ ಅಥವಾ ಐಚ್ಛಿಕ ವಿಷಯವಾಗಿ( ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳೊಂದಾಗಿರಬಾರದು ) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವಿರಾ**

**?ಹಾಗಿದ್ದಲ್ಲಿ ಸೂಕ್ತ ವೃತ್ತವನ್ನು ಆಯ್ಕೆಮಾಡಿ. ಇಲ್ಲವಾದಲ್ಲಿ ಕನ್ನಡ ಪರೀಕ್ಷೆ ತೆಗೆದುಕೊಳ್ಳುವ ಅವಶ್ಯವಿಲ್ಲ"** ಈ ವಾಕ್ಯದ ಬಳಿಕ ಹೌದು/ಇಲ್ಲ ಎಂಬವುಗಳಲ್ಲಿ ಒಂದನ್ನು ಆಯ್ದುಕೊಳ್ಳಲು ತಿಳಿಸಲಾಗಿದೆ. ಈ ಪ್ರಶ್ನೆಯಲ್ಲಿ ಯಾವುದಕ್ಕೆ ಹೌದು ಮತ್ತು ಯಾವುದಕ್ಕೆ ಇಲ್ಲ ಎನ್ನಬೇಕು? ಒಂದು ವೇಳೆ ಇಲ್ಲ ಎಂಬ ವೃತ್ತವನ್ನು ಗುರುತು ಮಾಡಿದರೆ ಕನ್ನಡ ಪರೀಕ್ಷೆ ತೆಗೆದುಕೊಳ್ಳುವ ಅಗತ್ಯವಿಲ್ಲ ಎಂದಾಗುವುದಲ್ಲವೇ? (ಒಂದು ವೇಳೆ ಸೂಕ್ತ ಆಯ್ಕೆ ಮಾಡದಿದ್ದರೂ ಕನ್ನಡ ಪರೀಕ್ಷೆಯನ್ನು ತೆಗೆದುಕೊಳ್ಳಬೇಕಾಗಿಲ್ಲ ಎನ್ನುವ ತಿರುಳೂ ಇಲ್ಲಿ ಅಡಕವಾಗಿದೆಯಲ್ಲವೇ?) ಹಾಗಿದ್ದರೆ ಕನ್ನಡ ಪರೀಕ್ಷೆಯನ್ನು ಯಾರು ತೆಗೆದುಕೊಳ್ಳಬೇಕೆಂದು ತಿಳಿಯಬೇಕು? ಈ ಗೊಂದಲಗಳ ವಾಕ್ಯ ರಚನೆಗೆ ಮೊದಲು ಇಂಗ್ಲಿಶಿನಲ್ಲಿ ಬರೆದು ಅದನ್ನು ಕನ್ನಡಕ್ಕೆ ತರ್ಜುಮೆ ಮಾಡುತ್ತಿರುವುದೇ ಕಾರಣ. ಈ ಬಳಸುದಾರಿಯನ್ನು ಹಿಡಿದು ಕನ್ನಡದ ಆಡಳಿತ ದಾಖಲೆಗಳು ಹುಟ್ಟುತ್ತಿವೆ. ತರ್ಜುಮೆ ಮಾಡುವವರು ಎಷ್ಟೇ ಬಲ್ಲವರಾಗಿದ್ದರೂ ಇಂತಹ ಗೋಜಲುಗಳು ಇದ್ದೇ ಇರುತ್ತವೆ. ಕನ್ನಡದಲ್ಲೇ ಬರೆದು ಅದನ್ನು ಬೇಕೆಂದರೆ ಬೇರೆ ಭಾಷೆಗಳಿಗೆ ತರ್ಜುಮೆ ಮಾಡಿಸುವ ಬಗೆಯನ್ನು ಸರಕಾರ ಅನುಸರಿಸಬೇಕು.

**ಮುಸ್ಸಂಜೆ**

ಮಿಥುನ್. ಎಂ.ವಿ (ಕುರುದಗಡ್ಡಿ ಹಗರಿಬೊಮ್ಮನ ಹಳ್ಳಿ) 'ಮುಸ್ಸಂಜೆ' ಪದವನ್ನು ಬಿಡಿಸಿ ತಳಿಸಲು ಕೇಳಿದ್ದಾರೆ. ಪ್ರಶ್ನೆ ಕೇಳುವಾಗಲೇ ಮುಂದಿನ+ಸಂಜೆ, ಮೂರು+ಸಂಜೆ ಇವುಗಳಲ್ಲಿ ಯಾವುದು ಸರಿ ಎಂದೂ ಕೇಳಿದ್ದಾರೆ. ಸಂಜೆಯ ಮೊದಲಿನ ಹೊತ್ತನ್ನು ಮುಸ್ಸಂಜೆ ಎಂದು ಕರೆಯುವುದಾದರೆ ಅಲ್ಲಿ ಮುಂ ಎಂಬ ಪ್ರತ್ಯಯವಿರಬೇಕು (ಉದಾ.ಗೆ ಮುಂಜಾವ,ಮುಂಜಾನೆ,ಮುಂಬೆಳಕು,ಮುಂಬಾಗಿಲು ಮುಂತಾದವು) ಆಗ ಈಗಿರುವ ಮುಸ್ಸಂಜೆ ರೂಪ ಇರುವುದಿಲ್ಲ. ಅನುನಾಸಿಕ ದನಿಗೆ ಸಕಾರ ಪರವಾದರೆ ಅದು ಹೆಚ್ಚಾಗಿ ಜಕಾರವಾಗುತ್ತದೆ. ಉದಾ.ಗೆ ಹಿಂ+ಸರಿತ>ಹಿಂಜರಿತ, ಕೆಂ+ಸೊಡರು>ಕೆಂಜೊಡರು. ಮುಸ್ಸಂಜೆಯಲ್ಲಿ ಹಾಗಾಗಿಲ್ಲ. ಪ್ರಶ್ನೆಯಲ್ಲಿ ಸೂಚಿಸಿರುವಂತೆ ಮುಸ್ಸಂಜೆಯನ್ನು ಮೂರು+ಸಂಜೆ ಮತ್ತು ಮುತ್+ಸಂಜೆ ಎಂದು ಎರಡು ಬಗೆಯಲ್ಲಿ ಬಿಡಿಸಿ ಹೇಳುವುದುಂಟು. ನಾನು ಬಲ್ಲ ಕೆಲವು ಕನ್ನಡ ನುಡಿಯರಿಗರು ಮುತ್+ಸಂಜೆ ಎಂದು ಬಿಡಿಸುವುದೇ ಸರಿಯೆಂದು ಹೇಳುತ್ತಾರೆ. ಇಲ್ಲಿ ಮುತ್ ಎಂಬುದಕ್ಕೆ ಮುದಿ,ಮಾಗಿದ ಎಂಬ ತಿರುಳಿದೆ. ಅಂದರೆ ಸಂಜೆಯ ಮುಗಿತಾಯದ ಹೊತ್ತನ್ನು, ಸಂಜೆ ಮಾಗಿದ ಹೊತ್ತನ್ನು ಮುಸ್ಸಂಜೆ ಎಂದು ತಿಳಿಯಬೇಕೆಂದು ಈ ಬಗೆಯಲ್ಲಿ ಬಿಡಿಸುವವರು ಹೇಳುತ್ತಾರೆ. ಈ ಬಗೆಯ ಬಿಡಿಸುವಿಕೆಯಲ್ಲಿ ನಡೆಯುವ ಸಂಧಿಯಿಂದಾಗಿ ಮುತ್ಸಂಜೆ>ಮುಚ್ಚಂಜೆ ಇಲ್ಲವೇ ಮುಸ್ಸಂಜೆ ರೂಪಗಳು ಸಿಗುತ್ತವೆ.

ಆದರೆ ಮಾತಿನ ವರಸೆಯಲ್ಲಿ ಮುಸ್ಸಂಜೆಯನ್ನು ಮೂರುಸಂಜೆ ಎಂದು ಕೆಲವು ಕಡೆಗಳಲ್ಲಿ ಹೇಳುವುದುಂಟು. ಸಂಜೆ ಎಂಬ ಪದ ಸಂಧ್ಯಾ ಎಂಬ ಸಂಸ್ಕೃತ ಪದದ ತದ್ಭವ. ತ್ರಿಸಂಧ್ಯಾ ಎಂಬ ಸಂಸ್ಕೃತ ರಚನೆಯನ್ನು ಕನ್ನಡದಲ್ಲಿ ಮೂರುಸಂಜೆ ಎಂದು ಹೇಳಿದಂತೆ ತೋರುತ್ತದೆ. ಮೂರು ಎಂಬುದನ್ನು ಸೂಚಿಸುವ ಪದಭಾಗ ಮೂ (ಮೂವಿಟ್ಟ, ಮೂಜಗ) ಮುನ್/ಮುಂ ಎಂದು (ಮುನ್ನೀರು, ಮುಮ್ಮೊಳೆ)

ಕಾಣಿಸಿಕೊಳ್ಳುತ್ತವೆ. ಮುಸ್ಸಂಜೆಯಲ್ಲಿ ಮುನ್/ಮುಂ ಇರುವಂತೆ ತೋರದು. ಹಾಗಿದ್ದಲ್ಲಿ ಅದು ಮೂ ಆಗಿರಬೇಕು. ಕನ್ನಡ ನಿಘಂಟುಗಳು ಮೂಸಂಜೆ ಎಂಬ ರೂಪವನ್ನು ದಾಖಲೆ ಮಾಡಿವೆ. ಅಂದರೆ ಮೂಸಂಜೆಯೇ ಮುಸ್ಸಂಜೆ ಆಗಿದೆ ಎಂದು ಹೇಳಬಹುದು. ಮೂಸಂಜೆಯ ಮೊದಲನೆಯ ಉದ್ದ ಸ್ವರ ಗಿಡ್ಡವಾದಾಗ ಕಳೆದು ಹೋದದ್ದನ್ನು ಸರಿದೂಗಿಸಲು ಆ ಸ್ವರದ ಮುಂದಿರುವ ವ್ಯಂಜನ ದ್ವಿತ್ವವಾಗಿ(ಒತ್ತಕ್ಷರವಾಗಿ) ಬದಲಾಗಿದೆ. ಹೀಗೆ ಬಿಡಿಸುವುದು ಸರಿಯೆಂದು ತೋರುತ್ತದೆ.

**ಲೇಖಕ-ಸಾಹಿತಿ**

ಕಾರ್ಲೊ ಜೆ.ವಿ ( ಹಾಸನ) ಇವರು 'ಲೇಖಕ' ಮತ್ತು 'ಸಾಹಿತಿ' ಎಂಬ ಪದಗಳ ತಿರುಳಿನಲ್ಲಿ ಬದಲಾವಣೆ ಇದಯೇ ಎಂದು ಕೇಳಿದ್ದಾರೆ. ಲೇಖಕ ಎಂದರೆ ಬರೆಯುವ ವ್ಯಕ್ತಿ.ಇದು ಗಂಡಸನ್ನು ಕುರಿತಿದೆ ಎಂದು ತಿಳಿದು ಬರೆಯುವ ಹೆಂಗಸರನ್ನು ಸೂಚಿಸಲು ಲೇಖಕಿ ಎಂಬ ರೂಪವನ್ನೂ ಬಳಸುತ್ತಿದ್ದೇವೆ. ಸಾಹಿತಿ ಎಂಬ ಪದ (ಇದು ಕನ್ನಡದ್ದೇ ಸೃಷ್ಟಿಯೆಂದು ತೋರುತ್ತದೆ) ಸಾಹಿತ್ಯವನ್ನು ರಚಿಸುವ/ಬರೆಯುವ ವ್ಯಕ್ತಿಯನ್ನು ಕುರಿತಿದೆ. ಸಾಹಿತ್ಯ ಎಂದಾಗ ಅದರ ವ್ಯಾಪ್ತಿಯಲ್ಲಿ ಕತೆ,ಕವನ,ನಾಟಕ ಮುಂತಾದವು ಸೇರುವುದರಿಂದ ಸಾಹಿತಿಗಳನ್ನು ಲೇಖಕರಲ್ಲಿ ಒಂದು ಬಗೆಯೆಂದು ತಿಳಿಯಬಹುದು. ಆದರೆ ಇಂದಿನ ದಿನಮಾನಗಳಲ್ಲಿ ಈ ಎರಡೂ ಪದಗಳ ನಡುವಣ ಗಡಿಗೆರೆ ಅಳಿಸಿ ಹೋಗುತ್ತಿದೆ. ಬರೆಹಗಾರರು ಎಂಬ ಪದ ನೆಲೆ ನಿಲ್ಲುವ ಹಾಗೆ ತೋರುತ್ತದೆ.

**ಜೋಡಿ ರೂಪಗಳ ಬಳಕೆಯಲ್ಲಿ ವ್ಯತ್ಯಾಸಗಳು**

ಮಹೇಶ್ವರಮೂರ್ತಿ ಎಂ.ಆರ್ (ಮಗ್ಗೆ,ಹಾಸನ ಜಿ) ಇವರು ಭಾಗ್ಯವಂತ/ ಭಾಗ್ಯಶಾಲಿ, ಅದೃಷ್ಟವಂತ/ಅದೃಷ್ಟಶಾಲಿ ಮುಂತಾದ ಜೋಡಿ ರೂಪಗಳ ತಿರುಳಿನಲ್ಲಿ ಮತ್ತು ಬಳಕೆಯಲ್ಲಿ ಏನಾದರೂ ವ್ಯತ್ಯಾಸಗಳಿವೆಯೇ ಎಂದು ಕೇಳಿದ್ದಾರೆ. ವಂತ ಎಂಬುದು ಕನ್ನಡ ಪ್ರತ್ಯಯ. ಶಾಲಿ(<ಶಾಲಿನ್) ಎಂಬುದು ಸಂಸ್ಕೃತದ ಪ್ರತ್ಯಯ. ಎರಡರ ತಿರುಳಿನಲ್ಲಿ ವ್ಯತ್ಯಾಸಗಳಿಲ್ಲ. ಆದರೆ ಎರಡನ್ನೂ ಬಳಸುವ ಬಗೆಯಲ್ಲಿ ವ್ಯತ್ಯಾಸಗಳಿವೆ. ಉದಾ.ಗೆ ಸಿರಿವಂತ ರೂಪವಿದೆ. ಆದರೆ ಸಿರಿಶಾಲಿ ರೂಪ ಇಲ್ಲ. ಹಣವಂತ ಇದೆ; ಆದರೆ ಹಣಶಾಲಿ ಇಲ್ಲ. ಹಾಗೆಯೇ ಕ್ರಿಯಾಶಾಲಿ ರೂಪ ಇದೆ. ಕ್ರಿಯಾವಂತ ಇಲ್ಲ (ಇದ್ದರೂ ಅಪರೂಪ). ವಂತ(>ವಂತಿಕೆ) ಕನ್ನಡದ ಪ್ರತ್ಯಯವಾಗಿರುವುದರಿಂದ ಹೊಸ ಪದಗಳನ್ನು ಕಟ್ಟುವಾಗ ಈಚೆಗೆ ಅದನ್ನು ಹೆಚ್ಚಾಗಿ ಬಳಸುತ್ತಿರುವುದನ್ನು ಕಾಣುತ್ತೇವೆ. ವಂತ ಪ್ರತ್ಯಯವುಳ್ಳ ನಾಮಪದಗಳನ್ನು ಬಿಡಿಯಾಗಿ ಬಳಸುವಾಗ ಅದು ಗಂಡಸರನ್ನು ಸೂಚಿಸುತ್ತದೆ. ಹೆಂಗಸರನ್ನು ಸೂಚಿಸುವಂತೆ ಮಾಡಲು ವಂತೆ ಎಂದು ಬದಲಿಸುತ್ತೇವೆ. ಆದರೆ ಅದು ಗುಣಪದವಾಗಿ ಬಳಕೆಯಾದಾಗ ಅದರ ಆ ಬಳಿಕ ಬರುವ ನಾಮಪದದ ಚಹರೆಯೇ ಇದಕ್ಕೆ ಸರಿ ಹೊಂದುತ್ತದೆ. ಉದಾ. ಹಣವಂತ ಮುದುಕ/ಹಣವಂತ ಮುದುಕಿ. ಇಲ್ಲಿ ಗುಣಪದವಾಗಿ ಬಳಕೆಯಾಗಿದೆ. ಮುದುಕ ಹಣವಂತ/ಮುದುಕಿ ಹಣವಂತೆ. ಇಲ್ಲಿ ನಾಮಪದವಾಗಿ ಬಳಕೆಯಾಗಿದೆ. ಆದರೆ ಶಾಲಿ ಪ್ರತ್ಯಯವುಳ್ಳ ರೂಪಗಳಲ್ಲಿ ಈ ಬದಲಾವಣೆ ಕಾಣಿಸುವುದಿಲ್ಲ.

ಮಹೇಶ್ ಎಲ್. (ದಾವಣಗೆರೆ) ಇವರು ಕೆಲವು ಪದಗಳ ಜೋಡಿಯನ್ನು ಬರೆದು ಅವುಗಳ ನಡುವೆ ತಿರುಳಿನಲ್ಲಿ ಏನಾದರೂ ವ್ಯತ್ಯಾಸ ಇದೆಯೇ ಎಂದು ಕೇಳಿದ್ದಾರೆ. ಕಷ್ಟ/ಸಂಕಷ್ಟ, ಪ್ರೇರಣೆ/ಅಭಿಪ್ರೇರಣೆ, ಸಮಾಪ್ತಿ/ಪರಿಸಮಾಪ್ತಿ, ವರ್ಧನೆ/ಸಂವರ್ಧನೆ, ರಕ್ಷಕ/ಸಂರಕ್ಷಕ, ಪ್ರಾಪ್ತಿ/ಸಂಪ್ರಾಪ್ತಿ ಇವೇ ಆ ಪದಗಳು. ಇವೆಲ್ಲ ಸಂಸ್ಕೃತದಿಂದ ಬಂದಿರುವ ಪದಗಳು. ಈ ಜೋಡಿ ಪದಗಳಲ್ಲಿ ಮೊದಲನೆಯ ಪದಗಳಿಗೆ ಪೂರ್ವಪ್ರತ್ಯಯಗಳನ್ನು ಸೇರಿಸಿ ಎರಡನೆಯ ಪದಗಳನ್ನು ಪಡೆದುಕೊಳ್ಳಲಾಗಿದೆ. ಸಂಸ್ಕೃತದಲ್ಲಿ ಹೀಗೆ ಪ್ರತ್ಯಯಗಳನ್ನು ಸೇರಿಸಿದಾಗ ತಿರುಳಿನಲ್ಲಿ ಉಂಟಾಗುವ ಬದಲಾವಣೆಗಳು ಏನೇ ಇರಲಿ. ಕನ್ನಡದಲ್ಲಿ ಆ ಬದಲಾದ ತಿರುಳುಗಳು ಗೊತ್ತಾಗುವುದಿಲ್ಲ. ಈ ಪೂರ್ವಪ್ರತ್ಯಯಗಳು ಸೇರಿದಾಗ ತಿರುಳಿನಲ್ಲಿ ಬದಲಾವಣೆ ಆಗುವುದೆಂಬುದಕ್ಕೆ ಉದಾಹರಣೆಗಳಿವೆ. ತಾಪ/ಸಂತಾಪ, ಚಯನ/ಸಂಚಯನ, ದರ್ಶನ/ಸಂದರ್ಶನ, ಭವ/ಸಂಭವ ಮುಂತಾದ ಜೋಡಿ ಪದಗಳನ್ನು ನೊಡಿದರೆ ಅವುಗಳಲ್ಲಿ ಒಂದರ ಬದಲು ಇನ್ನೊಂದನ್ನು ಬಳಸುವುದಕ್ಕೆ ಆಗುವುದಿಲ್ಲ ಎನ್ನುವುದು ತಿಳಿಯುತ್ತದೆ. ಆದರೆ ಮೊದಲು ಪಟ್ಟಿ ಮಾಡಿದ ಮಾದರಿಯ ತಿರುಳು ವ್ಯತ್ಯಾಸಗೊಳ್ಳದ ಪದಜೋಡಿಗಳು ಕನ್ನಡದಲ್ಲಿ ಸಾಕಷ್ಟಿವೆ. ಅದರಲ್ಲೂ ವಿವಿಧ ತಿಳಿವಿನ ವಲಯಗಳಲ್ಲಿ ಪಾರಿಭಾಷಿಕ ಪದಗಳನ್ನು ಕಟ್ಟುವಾಗ ಹೀಗೆ ಪೂರ್ವಪ್ರತ್ಯಯಗಳನ್ನುಳ್ಳ ಪದಗಳನ್ನು ಬಳಸುವುದು ಹೆಚ್ಚು. ಸಂಸ್ಕೃತಪದಗಳನ್ನು ಬಳಸುವುದರಿಂದ ಅರ್ಥ ಹೆಚ್ಚು ಸ್ಪಷ್ಟವಾಗುತ್ತದೆ ಎಂಬ ವಾದವನ್ನು ಮಂಡಿಸುವವರು ಇಂತಹ ಪದಗಳನ್ನು ಒಮ್ಮೆ ಗಮನಿಸುವುದು ಒಳ್ಳೆಯದು. ಆಗ ಆ ನುಡಿಯ ಪದಗಳಿಗೆ ಹೆಚ್ಚಾಗಿ ಜೋತು ಬೀಳುವುದನ್ನು ಕಡಿಮೆ ಮಾಡಬಹುದು.

### ಆಯ್ದುಕೊಳ್ಳಲಾಗಿದೆ, ಆಯ್ದುಕೊಂಡಿದೆ, ಆರಿಸಿಕೊಳ್ಳಲಾಗಿದ

ಚಂದನ ಪ್ರಿಯ (ಚಿತ್ರದುರ್ಗ) (ಇದು ಮುಸುಕು ಹೆಸರಿರಬಹುದು) ಇವರು ಆಯ್ದುಕೊಳ್ಳಲಾಗಿದೆ, ಆಯ್ದುಕೊಂಡಿದೆ, ಆರಿಸಿಕೊಳ್ಳಲಾಗಿದೆ– ಈ ಮೂರು ರೂಪಗಳಲ್ಲಿ ಯಾವುದು ಸರಿ ಎಂದು ಎಂದು ಕೇಳಿದ್ದಾರೆ. ಈ ರೂಪಗಳು ಬಳಕೆಯಾಗುತ್ತಿರುವ ಬಗೆಯನ್ನು ನೋಡಿದಾಗ ಅವುಗಳಲ್ಲಿ ಅಷ್ಟೇನೂ ವ್ಯತ್ಯಾಸವಿಲ್ಲ ಎಂದು ಗೊತ್ತಾಗುತ್ತದೆ. ಆದರೆ ಎರಡು ಸಂಗತಿಗಳನ್ನು ಈ ಉದಾಹರಣೆಗಳ ನೆಪದಲ್ಲಿ ಹೇಳಬೇಕೆನಿಸಿದೆ. 1. ಇಲ್ಲಿ ಬಳಕೆಯಾಗಿರುವ ಆಯ್ ಮತ್ತು ಆರಿಸು ಎಂಬ ಕ್ರಿಯಾ ರೂಪಗಳ ಬಗೆಗೆ; 2. ಒಟ್ಟು ಕ್ರಿಯಾಪದಗಳ ರಚನೆಯ ಬಗೆಗೆ. ಇಂದಿನ ಕನ್ನಡದಲ್ಲಿ ಇವೆರಡೂ ಕ್ರಿಯಾ ರೂಪಗಳನ್ನು ಅವು ಇರುವಂತೆಯೇ ಒಂದರ ಬದಲು ಇನ್ನೊಂದನ್ನು ಬಳಸುವುದು ಸಾಧ್ಯವಾಗುವುದಿಲ್ಲ. ಉದಾ.ಗೆ ಅವರು ಚುನಾವಣೆಯಲ್ಲಿ ಆರಿಸಿ ಬಂದಿದ್ದಾರೆ/ಅವರು ಚುನಾವಣೆಯಲ್ಲಿ ಆಯ್ಕೆಯಾಗಿದ್ದಾರೆ. ಆರ್ ಎಂದರೆ ಕೂಡಿಸು ,ಒಟ್ಟು ಮಾಡು ಎಂದಾಗುತ್ತದೆ. ಇದಕ್ಕೆ ಇಸು ಪ್ರತ್ಯಯ ಸೇರಿ ಆರಿಸು ಮಾಡಿಕೊಂಡಿದ್ದೇವೆ. ಈಗ ಕ್ರಿಯಾಪದಗಳ ರಚನೆಯನ್ನು ನೋಡೋಣ. ಕನ್ನಡದಲ್ಲಿ ಈಚೆಗೆ ಯಾರು ಕ್ರಿಯೆಯನ್ನು ಮಾಡಿದರು ಎಂಬುದನ್ನು ಹೇಳದಿರಲು ಕ್ರಿಯಾಪದವನ್ನು ವಿಶೇಷ ಬಗೆಯಲ್ಲಿ ಬಳಸುವುದು ಬಳಕೆಗೆ ಬಂದಿದೆ. ಯಾರು ಆಯ್ದವರು ಇಲ್ಲವೇ ಆರಿಸಿದವರು ಎಂಬುದನ್ನು ಹೇಳದಿರಲು ಆರಿಸಲಾಗಿದೆ, ಆಯ್ದುಕೊಳ್ಳಲಾಗಿದೆ ಎಂದು ಹೇಳುವುದು ರೂಢಿಯಾಗಿದೆ.

ಇದನ್ನು ಕೆಲವರು ಕನ್ನಡದಲ್ಲಿ ಇಲ್ಲದ ಕರ್ಮಣೀ ಪ್ರಯೋಗಕ್ಕೆ ಬದಲಾಗಿ ಬಳಕೆಗೆ ಬಂದಿರುವ ರೂಪವೆಂದು ಹೇಳುವುದುಂಟು.

**ಆದುದರಿಂದ/ಆದ್ದರಿಂದ, ಬಗೆಗೆ/ಬಗ್ಗೆ**

ನಾಗೇಂದ್ರಪ್ಪ.ಪಿ (ಬಳ್ಳಾರಿ) ಇವರು ಆದುದರಿಂದ/ಆದ್ದರಿಂದ, ಬಗೆಗೆ/ಬಗ್ಗೆ ಎಂಬ ಜೋಡಿ ರೂಪಗಳನ್ನು ಹೇಳಿ, ಹೀಗೆ ಒಂದೇ ವ್ಯಂಜನ ಒಂದಾದ ಮೇಲೆ ಒಂದರಂತೆ ಬಂದಾಗ ನಡುವೆ ಬಂದ ಸ್ವರವನ್ನು ಬಿಟ್ಟು ಒತ್ತಕ್ಷರವನ್ನಾಗಿ ಬದಲಿಸುವುದು ಎಲ್ಲ ಕಡೆಯೂ ಆಗುವುದಿಲ್ಲವೇಕೆ ಎಂದು ಕೇಳಿದ್ದಾರೆ. ಮೊದಲ ಜೋಡಿಯನ್ನು ನೋಡಿ. ಆದುದು ಎಂಬುದನ್ನು ಆದ್ದು ಎಂದು ಬದಲಿಸಿಕೊಂಡಿರುವುದು ಗೊತ್ತಾಗುತ್ತದೆ. ಇದು ಈ ಬಗೆಯ ಹೆಚ್ಚು ರಚನೆಗಳಲ್ಲಿ ಆಗುವ ಬದಲಾವಣೆ. ಉದಾ. ಹೇಳಿದುದು/ಹೇಳಿದ್ದು, ನೋಡಿದುದು/ನೋಡಿದ್ದು, ಓದಿದುದು/ಓದಿದ್ದು, ಕೇಳಿದುದು/ಕೇಳಿದ್ದು ಆದರೆ ಬರೆದುದು ಬರೆದ್ದು ಆಗುವುದಿಲ್ಲ; ಕುಡಿದುದು ಕುಡಿದ್ದು ಆಗದು; ಪಡೆದುದು ಪಡೆದ್ದು ಆಗುವುದಿಲ್ಲ. ಏಕೆ ಹೀಗೆ? ಮೊದಲ ಗುಂಪಿನ ಕ್ರಿಯಾಪದಗಳಲ್ಲಿ ಮೊದಲ ಸ್ವರ ದೀರ್ಘವಾಗಿರುವುದು ಮತ್ತು ಎರಡನೆಯ ಗುಂಪಿನ ಕ್ರಿಯಾಪದಗಳಲ್ಲಿ ಅದು ಹ್ರಸ್ವವಾಗಿರುವುದು ಈ ವ್ಯತ್ಯಾಸಕ್ಕೆ ಕಾರಣ. ಇನ್ನು ಬಗೆಗೆ ಎಂಬುದನ್ನು ನೋಡೋಣ. ಬಗೆ ಎಂಬುದನ್ನು ಕನ್ನಡದ ಮಾತಿನ ರೀತಿಗಳಲ್ಲಿ ಬಗ್ ಎಂದು ಹೇಳುವುದುಂಟು. ಉದಾ. ಅದರ್ ಬಗ್ ಯಾರ್ ಕೇಳೋರು? ಹಾಗಾಗಿ ಬಗ್ ಎಂಬುದಕ್ಕೆ ಗೆ ಪ್ರತ್ಯಯ ಸೇರಿದಾಗ ಬಗ್ಗೆ ಎಂಬ ರೂಪ ಸಿದ್ಧವಾಗುತ್ತದೆ. ಕೆಲವರು ಇದನ್ನು ಬಗ್ಗ್ಯೆ ಎಂದು ನುಡಿಯುವುದೂ ಉಂಟು.

**ಮಾಡು ಸಿಕ್ಕದು**

ಆಕಾಶ್ (ಬೆಂಗಳೂರು) ಇವರನ್ನು ಮಾಡು ಸಿಕ್ಕದಲ್ಲಾ ಎಂಬ ರಚನೆ ಕಾಡುತ್ತಿದೆ. ಇದರ ತಿರುಳು ಏನು ಎಂದು ಕೇಳಿದ್ದಾರೆ. ಮಾಡು ಎಂಬುದು ಕನ್ನಡದಲ್ಲಿ ಎರಡು ತಿರುಳುಗಳನ್ನು ಹೊಂದಿದೆ. ಮನೆಯ ಮೇಲ್ಚಾವಣಿ, ಉಪ್ಪರಿಗೆ ಎಂಬುದು ಒಂದು ತಿರುಳು. ಬಾಗಿಲುಗಳ ಮೇಲ್ಭಾಗದಲ್ಲಿ ಒಳ ಬದಿಗೆ ಇರಿಸಿರುವ ಗೂಡು ಎಂಬುದು ಇನ್ನೊಂದು ತಿರುಳು. ಪುರಂದರ ದಾಸರ ಈ ರಚನೆಯಲ್ಲಿ ಮಾಡಿನ ಗೂಡು ಸಿಕ್ಕದಲ್ಲಾ ಎಂಬ ಸಾಲೂ ಇದೆ. ಆದ್ದರಿಂದ ಇಲ್ಲಿ ಎರಡನೆಯ ತಿರುಳು ಹೊಂದುವುದಿಲ್ಲ. ಮೊದಲನೆಯ ತಿರುಳನ್ನು ಒಪ್ಪುವುದಾದರೆ ಉಪ್ಪರಿಗೆಯ ಗೂಡು ಸಿಕ್ಕುತ್ತಿಲ್ಲ ಎಂದು ತಿಳಿಯ ಬೇಕಾಗುತ್ತದೆ.ಇದು ಈಗ ಹೇಳಬಹುದಾದ ಮಾತು ಅಷ್ಟೆ. ಆದರೆ ಕೆಲವರು ಈ ಸಾಲನ್ನು ಹಾಡುವಾಗ ಮಾಡಿನ ಜಾಡು ಸಿಕ್ಕದಲ್ಲಾ ಎಂದು ಹಾಡುವುದನ್ನು ಕೇಳಿದ್ದೇನೆ . ಆಗ ಬೇರೆಯೇ ಆಗಿ ತಿಳಿಯಬೇಕಾಗುತ್ತದೆ.

**ಉಪನ್ಯಾಸ/ಉಪನ್ಯಾಸಕ–ಉಪನ್ನ್ಯಾಸ/ಉಪನ್ನ್ಯಾಸಕ**

ಮಲ್ಲಣ್ಣ ಬರೆಡ್ಡಿ ಸಾವೂರ (ಗುಲ್ಬರ್ಗಾ) ಇವರು ಉಪನ್ಯಾಸ/ಉಪನ್ಯಾಸಕ ಪದಗಳನ್ನು ಬರೆಯುವ ಮತ್ತು ನುಡಿಯುವ ಬಗೆಗಳು ಒಂದೇ ಆಗಿಲ್ಲ ಏಕೆ ಎಂದು ಕೇಳಿದ್ದಾರೆ. **ಉಪನ್ಯಾಸ/ಉಪನ್ಯಾಸಕ** ಪದಗಳನ್ನು ನುಡಿಯುವಾಗ **ಉಪನ್ನ್ಯಾಸ/**

**ಉಪನ್ನ್ಯಾಸಕ** ಎಂದು ಕೇಳಿಸುತ್ತದೆ ಎಂಬುದು ಅವರ ನಿಲುವು. ಈ ಪದಗಳು ಸಂಸ್ಕೃತದಿಂದ ಬಂದಿವೆ. ಕನ್ನಡನುಡಿಯಲ್ಲಿ ಪದಗಳನ್ನು ನುಡಿಯಲು ಇರುವ ಕಟ್ಟುಗಳು ಈ ಪದಗಳಿಗೂ ಹೊಂದುತ್ತವೆ. ಶಾಲೆಯ ಹಂತದಲ್ಲಿ ನಮಗೆ ಕಲಿಸಿದ ಲಘುಗುರುಗಳ ಪಾಠವನ್ನು ಕೊಂಚ ಇಲ್ಲಿ ನೆನಪು ಮಾಡಿಕೊಳ್ಳೋಣ. ಒಂದು ಪದದ (ಬರಹರೂಪ ದಲ್ಲಿ) ನಡುವೆ ಒಂದು ಒತ್ತಕ್ಷರವಿದ್ದರೆ ಆಗ ಅದರ ಹಿಂದಿನ ಅಕ್ಷರ ಗುರು( ಎರಡು ಮಾತ್ರೆಗಳ ಕಾಲ)ವಾಗುತ್ತದೆ. ಹಾಗಾಗಿ ಉಪನ್ಯಾಸ ಎಂಬ ಪದದಲ್ಲಿರುವ **ನ್ಯಾ** ಎಂಬ ಒತ್ತಕ್ಷರದ ಹಿಂದಿನ ಅಕ್ಷರವಾದ **ಪಕಾರಕ್ಕೆ** ಗುರುತ್ವ ಒದಗುತ್ತದೆ. ಆಗ ಅದನ್ನು ನುಡಿಯುವ ಬಗೆಯಲ್ಲಿ ಬದಲಾವಣೆ ಆಗುವುದು. ಅಂದರೆ ಬರೆಯುವಾಗ ಉಪನ್ಯಾಸ ಎಂದು ಬರೆದರೂ ನುಡಿಯುವಾಗ **ಉಪನ್-ಯಾಸ** ಎಂದಾಗಿ ಬಿಡುತ್ತದೆ. (**ಉಪನ್** ನಲ್ಲಿರುವ **ಪನ್** ಗುರು). ಹೀಗೆ ನುಡಿಯುವುದು ಉಪನ್ನ್-ಯಾಸದಂತೆ ಕೇಳಿಸಿದರೂ ದಿಟವಾಗಿ ನಕಾರದ ದ್ವಿತ್ವ ಅಲ್ಲಿ ಇರುವುದಿಲ್ಲ. ಹಾಗಿಲ್ಲದಿದ್ದರೆ ಉಪ-ನ್ಯಾಸ ಎಂದು ನುಡಿಯಬಾರದೇಕೆ ಎಂಬ ಪ್ರಶ್ನೆ ಎದುರಾಗುತ್ತದೆ. ಇದು ಆಯ್ಕೆಯ ಪ್ರಶ್ನೆ. ಆ ಪದ ಆರು ಮಾತ್ರೆಯ ಕಾಲದ್ದೋ (ಉಪನ್-ನ್ಯಾಸ)ಇಲ್ಲವೇ ಐದು ಮಾತ್ರೆಯ ಕಾಲದ್ದೋ (ಉಪ-ನ್ಯಾಸ) ಎಂಬುದನ್ನು ಅವಲಂಬಿಸಿ ನಮ್ಮ ಆಯ್ಕೆಗಳನ್ನು ಮಾಡಬೇಕಾಗುವುದು.

### ಸಂಕ್ಷಿಪ್ತಾಕ್ಷರಗಳ ಗೊಂದಲ

ಕೂ.ಗಿ. ಗಿರಿಯಪ್ಪ (ಕನಕಪುರ) ಇವರು ಬರವಣಿಗೆಯಲ್ಲಿ ಸಂಕ್ಷಿಪ್ತಾಕ್ಷರಗಳನ್ನು ಬರೆಯುವಾಗ ಉಂಟಾಗುವ ಗೊಂದಲವನ್ನು ಕುರಿತು ಒಂದು ಪ್ರಶ್ನೆಯನ್ನು ಕೇಳಿದ್ದಾರೆ. ಪಿಎಚ್.ಡಿ ಪದವಿಯನ್ನು ಪಡೆದವರ ಹೆಸರಿನ ಮುಂದೆ ಅವರ ಪದವಿಯನ್ನು ಸೂಚಿಸಲು **ಡಾ** ಎಂಬ ಸಂಕ್ಷಿಪ್ತಾಕ್ಷರ ಬರೆಯುವುದುಂಟು. ಹೀಗೆ ಬರೆದಾಗ **ಡಾ** ಬಳಿಕ ಒಂದು ಚುಕ್ಕಿಯನ್ನು ಇಡಬೇಕೋ ಇಲ್ಲವೇ ಎರಡು ಉದ್ದಗೆರೆಗಳನ್ನು ಬರೆಯಬೇಕೋ ಎನ್ನುವುದು ಈ ಪ್ರಶ್ನೆಯ ತಿರುಳು. ಹಾಗೆ ನೋಡಿದರೆ ಪಿಎಚ್.ಡಿ ಪದವಿಯನ್ನು ಪಡೆದವರಿಗೆ **ಡಾ** ಎಂಬ ಸಂಕ್ಷಿಪ್ತಾಕ್ಷರ ಬೇಕಿಲ್ಲ. ಅದನ್ನು ಅವರ ಹೆಸರಿನ ಮುಂದೆ ಪದವಿ ಪಟ್ಟಿಗಳಲ್ಲಿ ಸೇರಿಸುವುದೇ ಸರಿಯಾದ ದಾರಿ. ಕೆಲವು ಕಡೆಗಳಲ್ಲಿ, ಉದಾಹರಣೆಗೆ ವಿಮಾನ ಸಂಚಾರದಲ್ಲಿ ಪಯಣಿಗರ ಹೆಸರಿನ ಹಿಂದೆ ಅವರು ವೈದ್ಯರಾಗಿದ್ದರೆ ಮಾತ್ರ ಡಾ ಎಂಬ ಗುರುತನ್ನು ಬರೆಯಲು ಸೂಚಿಸುತ್ತಾರೆ. ಆದರೆ ಕನ್ನಡದಲ್ಲಿ ವೈದ್ಯರು, ಗೌರವ ಡಾಕ್ಟರೆಟ್ ಪಡೆದವರು ಮತ್ತು ಪಿಎಚ್.ಡಿ ಪದವಿ ಪಡೆದವರು ಎಲ್ಲರ ಹೆಸರಿಗೂ ಡಾ ಸೇರಿಬಿಡುತ್ತಿದೆ.( ಕೆಲವರಿಗೆ ಇದು ಅವರ ಹೆಸರಿನ ಭಾಗವೇ ಆಗಿಬಿಡುವುದುಂಟು) ಈ ಗೋಜಲನ್ನು ಬಿಡಿಸುವುದು ಆಗದ ಮಾತು. ಆದರೆ ಬರೆಯುವಾಗ ಡಾ ಆದಮೇಲೆ ಒಂದು ಚುಕ್ಕಿಯನ್ನು ಇಡುವುದೇ ಸರಿಯಾದದ್ದು (ಡಾ.). ಉದ್ದಗೆರೆಯ ಬಳಕೆ ಇಲ್ಲಿ ಸರಿಯಾಗದು.

### ಬೀಳ್ಕೊಡುಗೆ-ಬೀಳ್ಕೊಡಿಗೆ

ಮುರಲೀಧರ ಕುಲಕರ್ಣಿ (ಬೀದರ್) ಇವರು **'ಬೀಳ್ಕೊಡುಗೆ** ಮತ್ತು **ಬೀಳ್ಕೊಡಿಗೆ** ಇವೆರಡರಲ್ಲಿ ಯಾವುದು ಸರಿ' ಎಂದು ಕೇಳಿದ್ದಾರೆ. ಬೀಳ್ಕೊಡುಗೆ ಸರಿಯಾದ ಪದ.

ಬೀಳ್, ಕೊಡು ಇವೆರಡೂ ಸೇರಿ ಬೀಳ್ಕೊಡು ಎಂಬ ಕ್ರಿಯಾರೂಪ ಹುಟ್ಟುತ್ತದೆ. ಕನ್ನಡದಲ್ಲಿ ಕೆಲವು ಕ್ರಿಯಾಪದಗಳಿಗೆ -ಗೆ ಎಂಬ ಪ್ರತ್ಯಯ ಸೇರಿ ನಾಮಪದಗಳನ್ನು ರಚಿಸಿಕೊಂಡಿರುವುದುಂಟು. ಉಡುಗೆ, ತೊಡುಗೆ, ಕೊಡುಗೆ ಇಂತಹ ಪದಗಳು. ಇವುಗಳನ್ನು ನುಡಿಯುವಾಗ ಕೆಲವೊಮ್ಮೆ ಉಡಿಗೆ, ತೊಡಿಗೆ, ಕೊಡಿಗೆ ಎನ್ನುವುದುಂಟಷ್ಟೆ. ಹಾಗೆಯೆ ಬೀಳ್ಕೊಡುಗೆ ಎಂಬ ಪದವನ್ನು ಬೀಳ್ಕೊಡಿಗೆ ಎಂದು ಕೆಲವೊಮ್ಮೆ ಹೇಳುವುದುಂಟು. ಆದರೆ ಅದರ ಸರಿಯಾದ ರೂಪ ಬೀಳ್ಕೊಡುಗೆ. ಬೀಳ್ಕೊಡು ಮತ್ತು ಬೀಳ್ಕೊಳ್ಳು (ಬೀಳ್+ಕೊಳ್) ಎಂಬ ಎರಡು ರೂಪಗಳು ಕನ್ನಡದಲ್ಲಿ ಬಳಕೆಯಲ್ಲಿವೆ. (ನಡುಗನ್ನಡದಲ್ಲಿ ಬೀಳುಕೊಟ್ಟನು, ಬೀಳುಕೊಂಡನು ಎಂಬ ಎರಡೂ ರೂಪಗಳು ಬಳಕೆಯಲ್ಲಿದ್ದವು) ಇವೆರಡರ ತಿರುಳು ಒಂದೇ ಅಲ್ಲ. ಯಾರನ್ನಾದರೂ ಕಳುಹಿಸಿಕೊಡುವವರು **ಬೀಳ್ಕೊಡುತ್ತಾರೆ**. ಎಲ್ಲಿಗಾದರೂ ಹೊರಡುವವರು ಇನ್ನೊಬ್ಬರಿಂದ **ಬೀಳ್ಕೊಳ್ಳುತ್ತಾರೆ**. ಒಂದೇ ಕ್ರಿಯೆಯಲ್ಲಿ ಪಾಲ್ಗೊಳ್ಳುವವರು ಇಬ್ಬರಿದ್ದರೆ ಅವರಿಬ್ಬರ ನೆಲೆಯಲ್ಲಿ ಆ ಕ್ರಿಯೆಯನ್ನು ಬೇರೆಬೇರೆಯಾಗಿ ಈ ಪದಗಳು ಬಣ್ಣಿಸುತ್ತವೆ.

**ಅದು/ಇದು, ಅದಕ್ಕೆ/ಇದಕ್ಕೆ, ಅದರಿಂದ/ಇದರಿಂದ**

ಹರೀಶ ಎಸ್ (ಅಗರ, ಬೆಂಗಳೂರು) ಇವರಿಗೆ ವಾಕ್ಯಗಳಲ್ಲಿ ಅದು/ಇದು, ಅದಕ್ಕೆ/ಇದಕ್ಕೆ, ಅದರಿಂದ/ಇದರಿಂದ ಇವುಗಳನ್ನು ಬಳಸುವಾಗ ಯಾವುದಾದರೂ ನಿಯಮಗಳಿವೆ ಎಂಬುದನ್ನು ತಿಳಿಯಬೇಕಿದೆ. ಶಾಲಾ ವ್ಯಾಕರಣಗಳು **ಅದು** ಎಂಬುದನ್ನು ದೂರದಲ್ಲಿರುವ ವಸ್ತುವನ್ನು ಹೇಳುವಾಗ ಮತ್ತು **ಇದು** ಎಂಬುದನ್ನು ಹತ್ತಿರದಲ್ಲಿರುವ ವಸ್ತುವನ್ನು ಹೇಳುವಾಗ ಬಳಸಬೇಕೆಂದು ತಿಳಿಸುತ್ತವೆ. ಆದರೆ ಬಳಕೆಯಲ್ಲಿ ಇದಿಷ್ಟೇ ವಿವರಣೆ ಸಾಕಾಗುವುದಿಲ್ಲ. **'ಅಷ್ಟು ಹೊತ್ತಿನಲ್ಲಿ ಯಾವ ಬಸ್ಸೂ ಸಿಗುವಂತಿರಲಿಲ್ಲ. ಅದರಿಂದ ನಡೆದೇ ಹೋಗಬೇಕಾಯಿತು'** ಈ ವಾಕ್ಯದಲ್ಲಿ ಇದರಿಂದ ಎಂದು ಬಳಸಲು ಆಗುವುದಿಲ್ಲ. **'ಈಗ ಇಲ್ಲಿ ಹಿಮ ಬೀಳುತ್ತಿದೆ. ಇದರಿಂದ ಹೆಚ್ಚು ಹೊರಗೆ ಹೋಗುವುಂತಿಲ್ಲ'** ಈ ವಾಕ್ಯದಲ್ಲಿ **ಇದರಿಂದ** ಬಳಸಿದ್ದು ಸರಿ. ಅಂದರೆ ಮಾತಾಡುತ್ತಿರುವವರು/ಬರೆಯುತ್ತಿರುವವರು ಹೇಳುತ್ತಿರುವ ಸಂಗತಿ ನಡೆದ ಸಮಯ ಮತ್ತು ಜಾಗದಲ್ಲೇ ಇದ್ದರೆ ಆಗ **ಇದು** ರೂಪವನ್ನು ಬಳಸಬಹುದು. ಹಾಗಿಲ್ಲದಿದ್ದರೆ **ಅದು** ರೂಪವನ್ನು ಬಳಸಬೇಕಾಗುತ್ತದೆ. ಇದೇ ಕಟ್ಟನ್ನು **ಹಾಗೆ/ಹೀಗೆ, ಹಾಗಾಗಿ/ ಹೀಗಾಗಿ** ಮುಂತಾದ ರೂಪಗಳಿಗೂ ಹೊಂದಿಸಿಕೊಳ್ಳಬಹುದು.

**ಬ್ರಹ್ಮ, ಅಪರಾಹ್ನ**

ಸಿ.ಎನ್.ಶ್ರೀಕಂಠರಾವ್ (ಬೆಂಗಳೂರು) ಇವರು ಬ್ರಹ್ಮ, ಬ್ರಹ್ಮಚಾರಿ, ಅಪರಾಹ್ನ, ಮಧ್ಯಾಹ್ನ ಮುಂತಾದ ಪದಗಳನ್ನು ಬರೆಯುವ ಬಗೆಗೂ ಅವುಗಳನ್ನು ನುಡಿಯುವ ಬಗೆಗೂ ಏಕೆ ತಾಳೆಯಾಗುವುದಿಲ್ಲವೆಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಈ ಪದಗಳೆಲ್ಲವೂ ಸಂಸ್ಕೃತ ಪದಗಳು. ಇವುಗಳಲ್ಲಿ ಇರುವ ಜೋಡಿವ್ಯಂಜನಗಳಲ್ಲಿ ಮೊದಲನೆಯದು ಹ್, ಬಳಿಕ ಮ್ ಇಲ್ಲವೇ ನ್ ಬಂದಿದೆ. ಕನ್ನಡದಲ್ಲಿ ಹ್ ವ್ಯಂಜನವಿದ್ದರೂ ಅದು ಇನ್ನೊಂದು ವ್ಯಂಜನದೊಡನೆ ಜೋಡಿಯಾಗಿ ಬರುವ ಪದಗಳು ಇಲ್ಲ. ಹಾಗಾಗಿ ಕನ್ನಡಿಗರು ಹೆಚ್ಚು ಜನ ಹಕಾರದೊಡನೆ ಇನ್ನೊಂದು ವ್ಯಂಜನ ಜೋಡಿಯಾಗಿ

ಬರುವ ಪದಗಳನ್ನು ನುಡಿಯುವಾಗ ಎರಡು ಬೇರೆಬೇರೆ ಬಗೆಯಲ್ಲಿ ನುಡಿಯುತ್ತಾರೆ. 1. ಹಕಾರವನ್ನು ಬಿಟ್ಟು ಎರಡನೆ ವ್ಯಂಜನವನ್ನೆ ನುಡಿಯುವುದು(ಬ್ರಮ್ಮ, ಬ್ರಮ್ಮಚಾರಿ, ಮಧ್ಯಾನ್ನ, ಅಪರಾನ್ನ) 2. ಹಕಾರವನ್ನು ಎರಡನೆಯ ವ್ಯಂಜನವನ್ನಾಗಿ ನುಡಿಯುವುದು. (ಬ್ರಮ್ಹ, ಬ್ರಮ್ಹಚಾರಿ, ಮಧ್ಯಾನ್ಹ, ಅಪರಾನ್ಹ) ಎರಡನೆಯ ಬಗೆಯಲ್ಲಿ ನುಡಿಯುವುದು ಕಡಿಮೆ. ಆದರೆ ಕಲಿತವರೂ ಹೀಗೆ ನುಡಿಯುವುದನ್ನು ಕೇಳಬಹುದು. ಬರಹರೂಪದಲ್ಲಿ ನಾವು ನುಡಿಯುವ ರೂಪವನ್ನೇ ಅಳವಡಿಸಿಕೊಳ್ಳುವುದು ಹೆಚ್ಚು ಸರಿ. ಹಾಗಾಗದಿದ್ದರೂ ಯಾರಾದರೂ ತಾವು ನುಡಿಯುವ ಹಾಗೆಯೇ ಬರೆದರೆ ಅದನ್ನು ತಪ್ಪು ಎಂದು ಹೇಳದೇ ಒಪ್ಪಿಕೊಳ್ಳಬೇಕು.

**ಆರಕ್ಕೇರದೆ ಮೂರಕ್ಕಿಳಿಯದೆ**

ಚಂದ್ರಶೇಖರ ಇಟಗಿ (ಮುದ್ದೇಬಿಹಾಳ)ಯವರಿಗೆ 'ಆರಕ್ಕೇರದೆ ಮೂರಕ್ಕಿಳಿಯದೆ' ಎಂಬುದರ ತಿರುಳನ್ನು ತಿಳಿಯಬೇಕಿದೆ. ಇದು ಕನ್ನಡ ಮಾತು ಮತ್ತು ಬರಹಗಳಲ್ಲಿ ಬಳಕೆಯಲ್ಲಿರುವ ಮಾತಿನ ಒಂದು ವರಸೆಯಾಗಿದೆ. ಯಾವುದಾದರೂ ಒಂದು ಸಂಗತಿಯು ನಿಡುಗಾಲದಲ್ಲಿ ಕಂಡಿರುವ ಬದಲಾವಣೆಗಳನ್ನು ಬಣ್ಣಿಸುವಾಗ ಈ ಪದರಚನೆಯನ್ನು ಬಳಸುತ್ತೇವೆ. **'ಈ ಹತ್ತು ವರುಷದಲ್ಲಿ ನನ್ನ ಸಂಪಾದನೆ ಆರಕ್ಕೇರದೇ ಮೂರಕ್ಕಿಳಿಯುದೇ ಹೇಗೋ ಸಾಗಿದೆ'** ಬದಲಾವಣೆಗೆ ಎರಡು ತುದಿಗಳನ್ನು ಇರಿಸಿಕೊಳ್ಳಬೇಕು. ಎರಡೂ ತುದಿಗಳಲ್ಲಿ ಯಾವುದೊಂದನ್ನು ದಾಟಿದರೂ ಆಗ ಅದು ಬದಲಾವಣೆ ಎನಿಸಿಕೊಳ್ಳುವುದು. ಆ ತುದಿಗಳ ನಡುವೆ ಏನೇ ವ್ಯತ್ಯಾಸ ಆದರೂ ಅದು ಬದಲಾವಣೆಯಲ್ಲ. ಅದನ್ನು ಎಂದಿನ ಸ್ಥಿತಿಯೆಂದೇ ತಿಳಿಯಬೇಕು. ಇದು ಈ ಮಾತಿನ ತಿರುಳು. ಇಲ್ಲಿ ಆರು ಮೂರು ಎಂಬ ಎಣಿಕೆ ಪದಗಳೇಕಿವೆ? ಇದಕ್ಕೆ ಕಾರಣ ಹುಡುಕಿದರೂ ಅದು ಬಳಕೆಯ ಮೇಲೆ ಏನೂ ಪರಿಣಾಮ ಬೀರುವುದಿಲ್ಲ. ಆರು ಮೂರು ಎಣಿಕೆ ಪದಗಳಲ್ಲಿ ಕೊನೆಯ ದನಿಗಳಲ್ಲಿ ಪ್ರಾಸ ಇರುವುದು ಇದಕ್ಕೊಂದು ಕಾರಣವಿದ್ದೀತು.

**ವಾಕ್ಯದಲ್ಲಿ ಇಕ್ಕಟ್ಟಿಗೆ ಇಂಗ್ಲಿಶ್ ಕಾರಣ**

ಬ್ಯಾಕೋಡ.ಆರ್.ಜಿ( ಬಿಜಾಪುರ) ಇವರು ಕನ್ನಡ ವಾಕ್ಯರಚನೆಯ ಒಂದು ಇಕ್ಕಟ್ಟನ್ನು ಕುರಿತು ಪ್ರಶ್ನೆ ಕೇಳಿದ್ದಾರೆ. . ವಾಕ್ಯ ಹೀಗಿದೆ: **' ಆದರೆ ವೀರಶೈವ ಸಮಾಜದ ಒತ್ತಡದಿಂದ ಹಿಂದೆ ಸರಿಯುವವರು ಎಂದು ನಿರೀಕ್ಷಿಸಲಾಗಿದ್ದ ಸ್ವಾಮೀಜಿ ಕಣದಲ್ಲಿ ಉಳಿದಿದ್ದಾರೆ'** ಈ ವಾಕ್ಯವನ್ನು ಎರಡು ಬಗೆಯಲ್ಲಿ ತಿಳಿದುಕೊಳ್ಳಬಹುದು. 'ಆದರೆ (**ವೀರಶೈವ ಸಮಾಜದ ಒತ್ತಡದಿಂದ ಹಿಂದೆ ಸರಿಯುವವರು**) ಎಂದು ನಿರೀಕ್ಷಿಸಲಾಗಿದ್ದ ಸ್ವಾಮಿಜಿಯವರು ಕಣದಲ್ಲಿ ಉಳಿದಿದ್ದಾರೆ.' ಇಲ್ಲವೇ 'ಆದರೆ (**ವೀರಶೈವ ಸಮಾಜದ ಒತ್ತಡದಿಂದ**) (**ಹಿಂದೆ ಸರಿಯುವರು ಎಂದು ನಿರೀಕ್ಷಿಸಲಾಗಿದ್ದ ಸ್ವಾಮಿಜಿಯವರು**) ಕಣದಲ್ಲಿ ಉಳಿದಿದ್ದಾರೆ.' ಎರಡನೆಯ ಬಗೆಯಲ್ಲಿ ತಿಳಿದರೆ, ಆಗ ಕಣದಲ್ಲಿ ಉಳಿಯಲು ವೀರಶೈವ ಸಮಾಜದ ಒತ್ತಡವೇ ಕಾರಣ ಎಂದಾಗುತ್ತದೆ. ಮೊದಲನೆ ಬಗೆಯಲ್ಲಿ ತಿಳಿದಾಗ ಮಾತ್ರ ವಾಕ್ಯದ ತಿರುಳು ದಿಟವಾಗಿ ಗೊತ್ತಾಗುತ್ತದೆ. ಆದರೆ ಕನ್ನಡ ಬರೆವಣಿಗೆಯಲ್ಲಿ ಈಗ ಇಂತಹ

ವಾಕ್ಯಗಳು ಹೆಚ್ಚು ಕಾಣಸಿಗುತ್ತವೆ. ಗೊಂದಲ ಇಲ್ಲದಂತೆ ಮಾಡಲು ಬರವಣಿಗೆಯ ಚಿಹ್ನೆಗಳನ್ನು ಬಳಸುತ್ತಿದ್ದುದುಂಟು. ಈಗ ಅವು ಕಡಿಮೆಯಾಗಿವೆ. ಇಲ್ಲವೇ ಸರಿಯಾಗಿ ಬಳಕೆಯಾಗುತ್ತಿಲ್ಲ. ಇದನ್ನು ಬಗೆಹರಿಸುವುದು ಹೇಗೆ? ಉದ್ದ ವಾಕ್ಯಗಳನ್ನು ಬರೆಯದಿರುವುದು ಲೇಸು. ಅಲ್ಲದೆ ಬರೆದ ವಾಕ್ಯದಲ್ಲೂ ಬಳಸಿದ ಪದಗಳಿಗೆ ಸರಿಯಾದ ತಿರುಳು ಇರುವಂತೆ ನೋಡಿಕೊಳ್ಳಬೇಕು. ಮೇಲಿನ ವಾಕ್ಯದಲ್ಲಿರುವ **'ನಿರೀಕ್ಷಿಸಲಾಗಿದ್ದ'** ಎನ್ನುವ ಪದರಚನೆಯುನ್ನು ನೋಡಿ. ಇದು ಏನು ಹೇಳುತ್ತಿದೆ? ಯಾರು ನಿರೀಕ್ಷಿಸುತ್ತಿದ್ದವರು? ಅದಕ್ಕೆ ವಾಕ್ಯದಲ್ಲಿ ಏನೂ ಕುರುಹುಗಳಿಲ್ಲ. ಇದು ಇಂಗ್ಲಿಶ್ ವಾಕ್ಯರಚನೆಯ ಹಿಡಿತಕ್ಕೆ ಸಿಲುಕಿದ ವಾಕ್ಯ. **ಎಕ್ಸ್‌ಪೆಕ್ಟೆಡ್** ಎಂಬ ಕ್ರಿಯಾಪದ ರೂಪವನ್ನು ಕನ್ನಡಕ್ಕೆ ತರಲು ಹೊರಟಾಗ ಹೀಗಾಗುತ್ತದೆ. ಕನ್ನಡ ಸುದ್ದಿಪತ್ರಿಕೆಗಳಲ್ಲಿ ಈ ಗೋಜಲು ದಿನಕಳೆದಂತೆ ಹೆಚ್ಚಾಗುತ್ತಿದೆ.

**ಸಾವಿನ ಹಾಸಿಗೆ**

ಟಿವಿ ವಾಹಿನಿಯಲ್ಲಿ ಮಾತಾಡುತ್ತಿದ್ದ ವಕೀಲರೊಬ್ಬರು ಹೇಳಿದ ಮಾತು. 'ಅವನ ಹೆಂಡತಿ ಕೂಡ ಸಾವಿನ ಹಾಸಿಗೆಯಲ್ಲಿ ಇದ್ದಾಳೆ' ಡೆತ್ ಬೆಡ್ ಕನ್ನಡದಲ್ಲಿ ಸಾವಿನ ಹಾಸಿಗೆಯಾಗಿ ಬಿಟ್ಟಿದೆ.

**ಕಲ್ಯಾಣಕಟ್ಟಿ ಕೂಡಸ್ಲಿ, ಕಲ್ಯಾಣಾಗ್ಲಿ.**

ಸೊಲ್ಲಾಪುರೆ ಬಿ.ಎನ್ (ಔರಾದ್, ಬೀದರ್ ಜಿಲ್ಲೆ) ತಮ್ಮ ಕಡೆಯ ಮಾತಿನಲ್ಲಿ **'ಕಲ್ಯಾಣಕಟ್ಟಿ ಕೂಡಸ್ಲಿ, ಕಲ್ಯಾಣಾಗ್ಲಿ..** 'ಎಂಬ ಪದರಚನೆಗಳನ್ನು ಬೈಗುಳಗಳನ್ನಾಗಿ ಬಳಸುತ್ತಾರೆ; ಇದಕ್ಕೇನು ಕಾರಣ ಎಂದು ಕೇಳಿದ್ದಾರೆ. ಹೀಗೆ ಈ ಪದಗಳನ್ನು ಬೈಗುಳದ ಪದಗಳನ್ನಾಗಿ ಬಳಸುವುದು ದಿಟವೋ ಇಲ್ಲವೋ ತಿಳಿಯದು. ನಾನು ಅದನ್ನು ಕೇಳಿಲ್ಲ. ಆದರೆ ಬೈಗುಳ ಪದಗಳನ್ನು ಯಾರು ಯಾರೊಡನೆ ಮಾತಾಡುವಾಗ ಬಳಸುತ್ತಾರೆ ಎನ್ನುವುದನ್ನು ಗಮನಿಸಬೇಕು. ಕೆಲವು ಬೈಗುಳಗಳಿಗೆ ಸಾಂಸ್ಕೃತಿಕ ನೆನಪುಗಳು ಇರುತ್ತವೆ. ಹಾಗಾಗಿ ಅವುಗಳು ಸಮಾಜದ ಎಲ್ಲರ ಮಾತಿನಲ್ಲೂ ಬಳಕೆಯಾಗುವುದಿಲ್ಲ. ಕಲ್ಯಾಣ ನಾಶಗೊಂಡ ನೆನಪನ್ನು ಉಳಿಸಿಕೊಂಡ ಸಮಾಜದ ವಲಯಗಳು ಅವುಗಳನ್ನು ಹೀಗೆ ಬೈಗುಳ ಇಲ್ಲವೇ ಕಟಕಿಯ ಮಾತುಗಳನ್ನಾಗಿ ಬಳಸುತ್ತಿರಬಹುದು. ಮೈಸೂರು ಸುತ್ತಮುತ್ತಲಿನ ಊರುಗಳಲ್ಲಿ ಹೊಟ್ಟೆಗಿಲ್ಲ ಎಂದು ಬೇಡಲು ಬಂದವರನ್ನು ಟ್ಟಿ ಕಳುಹಿಸುವಾಗ 'ಗಂಜಾಂಗೆ ಹೋಗು ಅಲ್ಲಿ ಕೆಲಸ ಸಿಗತದೆ' ಎಂದು ಹೇಳುತ್ತಿದ್ದುದನ್ನು ಎಳವೆಯಲ್ಲಿ ಕೇಳಿದ್ದೆ. (ಗಂಜಾಂ ಶ್ರೀರಂಗಪಟ್ಟಣದ ಹತ್ತಿರ ಇರುವ ಒಂದು ಹಳ್ಳಿ.)ಹೀಗೇಕೆ ಹೇಳುತ್ತಾರೆಂದು ಅಂದಿನ ಹಿರಿಯರನ್ನು ಕೇಳಿದಾಗ ಯುದ್ಧದಲ್ಲಿ ಸತ್ತವರನ್ನು ಹೂಳಲು ಕುಣಿಗಳನ್ನು ತೋಡಲು ಗಂಜಾಂನಲ್ಲಿ ಜನರು ಇಲ್ಲ. ಹೋದವರಿಗೆಲ್ಲ ಕೆಲಸ ಕೊಡುತ್ತಾರೆ ಎನ್ನುತ್ತಿದ್ದರು. ಹೀಗೆ ಮಾತುಗಳ ಹಿಂದೆ ನೇರ ತಿರುಳಿಗಿಂತ ಮತ್ತೇನೋ ಹುದುಗಿರಲೂಬಹುದು.

**ಮಾಡುವುದು–ಮಾಡುವದು**

ಹೊನ್ನವಳ್ಳಿ ದಿಲೀಪ್ ( ಮೈಸೂರು) ಇವರು **ಮಾಡುವುದು** ಮತ್ತು **ಮಾಡುವದು** ಇವೆರಡರಲ್ಲಿ ಯಾವುದು ಸರಿಯಾದ ರೂಪ ಎಂದು ಕೇಳುತ್ತಾರೆ. ಇವೆರಡೂ ಸರಿಯಾದ

ರೂಪಗಳೇ ಆಗಿವೆ. ಆದರೆ ಇವೆರಡರ ಬಳಕೆಯಲ್ಲಿ ಒಂದು ವ್ಯತ್ಯಾಸವಿದೆ. ಮಾಡುವದು ರೂಪ ಹೆಚ್ಚಾಗಿ ಧಾರವಾಡ ಮತ್ತು ಅದರ ಆಸುಪಾಸಿನಲ್ಲಿರುವವರ ಬರಹಗಳಲ್ಲಿ ಮತ್ತು ಮಾತಿನಲ್ಲಿ ಹೆಚ್ಚು ಕಾಣ/ಕೇಳಸಿಗುತ್ತದೆ. ಇದರ ಜೊತೆಗೆ ಮಾಡುವರು, ಮಾಡುವನು ಮುಂತಾದ ರೂಪಗಳೂ ಸಿಗುತ್ತವೆ. ಮಾಡುವುದು ರೂಪ ಕರ್ನಾಟಕದ ಉಳಿದೆಡೆಗಳಲ್ಲಿ ಬಳಕೆಯಲ್ಲಿದೆ. ಇವೆರಡರಲ್ಲಿರುವ ರೂಪ ವ್ಯತ್ಯಾಸಕ್ಕೆ ಅವುಗಳ ಕೊನೆಯಲ್ಲಿ ಬಂದು ಸೇರಿರುವ ಪ್ರತ್ಯಯಗಳು ಬೇರೆಬೇರೆ ಆಗಿರುವುದೇ ಕಾರಣ. ಮಾಡುವುದು ರೂಪದಲ್ಲಿ **ಉದು** ಇದ್ದರೆ ಮಾಡುವದು ರೂಪದಲ್ಲಿ **ಅದು** ಎಂಬ ಪ್ರತ್ಯಯವಿದೆ. ಅವನು(<ಅನ್),ಅವಳು (<ಅಳ್) ,ಅವರು (<ಅರ್) ,ಅದು ಮತ್ತು ಅವು ಎಂಬ ಸರ್ವಪದಗಳೇ ಕ್ರಿಯಾಪದದ ಕೊನೆಗೆ ಪುರುಷ, ಲಿಂಗ ಮತ್ತು ವಚನ ಸೂಚಿಸುವ ಪ್ರತ್ಯಯಗಳಾಗುತ್ತವೆ. ಈ ನಿಯಮವನ್ನು ಗಮನಿಸಿದರೆ ಮಾಡುವದು (ಅದು ಪ್ರತ್ಯಯ) ರೂಪವೇ ಸರಿ. ಆದರೆ ಕ್ರಿಯಾಪದಗಳಿಂದ ಕ್ರಿಯಾನಾಮಪದಗಳನ್ನು ರೂಪಿಸುವ ಬಗೆಯೊಂದಿದೆ. ಸಾಮಾನ್ಯವಾಗಿ ಕ್ರಿಯಾಪದ ಮತ್ತು ಕಾಲಸೂಚಕ ಪ್ರತ್ಯಯಗಳಿರುವ ಕಾಂಡಕ್ಕೆ **ಉದು** ಪ್ರತ್ಯಯವನ್ನು ಸೇರಿಸಿ ಕ್ರಿಯಾನಾಮಪದವನ್ನು ಪಡೆದುಕೊಳ್ಳುತ್ತೇವೆ. ಮಾಡುವುದು, ಕೊಡುವುದು, ಹೇಳುವುದು, ನೋಡುವುದು (ಮಾತಿನಲ್ಲಿ ಮಾಡೋದು, ಕೊಡೋದು, ಹೇಳೋದು, ನೋಡೋದು ಎಂದಾಗುತ್ತವೆ) ಇವು ಇಂತಹ ಕ್ರಿಯಾನಾಮಪದಗಳು. ಈ ರೂಪಗಳ ಬಳಕೆಯ ರೂಢಿಯಿಂದ ಕ್ರಿಯಾಪದಗಳನ್ನೂ **ಉದು** ಪ್ರತ್ಯಯುದೊಡನೆ ರಚಿಸುವುದು ಮೊದಲಾಗಿರಬಹುದು. ಇದು ಈಗ ಬಳಕೆಯಾಗುತ್ತಿರುವ ಕನ್ನಡದ ನೆಲೆಯಲ್ಲಿನ ವಿವರಣೆ. ಹಿಂದಿನಿಂದಲೂ ಈ ರೂಪಗಳು ಬೆಳೆದುಬಂದ ಬಗೆ ಬೇರೆಯೇ ಇದೆ.

**ಪದಗಳ ನಡುವೆ ಚಿಕ್ಕಗೆರೆ**

ಕೆಲವರು ಬರೆಯುವಾಗ ಪದಗಳ ನಡುವೆ ಚಿಕ್ಕಗೆರೆಯೊಂದನ್ನು ಸೇರಿಸುವುದುಂಟು. ಇದನ್ನು ಮುದ್ರಿತ ರೂಪದಲ್ಲೂ ಅಲ್ಲಲ್ಲಿ ನೋಡಬಹುದು. ಉದಾ.ಗೆ ಈ ಪದಗಳನ್ನು ನೋಡಿ. ಸರಿ–ತಪ್ಪು, ಹಿಂದೆ–ಮುಂದೆ, ಹಾದಿ–ಬೀದಿ, ಬೇಕು–ಬೇಡ, ತಲೆ–ಬುಡ ಹೀಗೆ ಇನ್ನೂ ಕೆಲವನ್ನು ಪಟ್ಟಿ ಮಾಡಬಹುದು. ಆದರೆ ಈ ಯಾವ ಪದ ಜೋಡಿಗಳ ನಡುವೆಯೂ ಚಿಕ್ಕ ಗೆರೆಯೊಂದನ್ನು ಹಾಕಬೇಕಿಲ್ಲ. ಹಾಗೆ ನೋಡಿದರೆ ಕನ್ನಡ ಬರವಣಿಗೆಯಲ್ಲಿ ಈ **ಚಿಕ್ಕ ಗೆರೆ**(–)ಯ ಬಳಕೆ ಎಲ್ಲಿ ಆಗಬೇಕು ಎನ್ನುವುದನ್ನು ಸರಿಯಾಗಿ ಗಮನಿಬೇಕು. ಪದಗಳ ನಡುವೆ ಎಲ್ಲಿಯೂ ಇದರ ಬಳಕೆ ಇಲ್ಲ. ವಾಕ್ಯದಲ್ಲಿ ಒಂದು ಸಂಗತಿಯನ್ನು ಹೇಳಿ ಅದರ ವಿವರಣೆಯನ್ನೂ ಅದೇ ವಾಕ್ಯದೊಳಗೆ ನೀಡುತ್ತಿದ್ದರೆ ಆಗ ಮಾತ್ರ ಆ ವಿವರಣೆಯ ಭಾಗವನ್ನು ಎರಡು ಚಿಕ್ಕ ಗೆರೆಗಳ ನಡುವೆ ಇರಿಸುವುದು ಸರಿಯಾಗುತ್ತದೆ. ಮುಂದಿನ ವಾಕ್ಯವನ್ನು ನೋಡಿ. **ಬಸ್ಸಿನಲ್ಲಿ ನನ್ನ ಪಕ್ಕ ಕುಳಿತಿದ್ದ ಮುದುಕರು–ಬಹಳ ಬಳಲಿದ್ದಂತೆ ತೋರುತ್ತಿದ್ದವರು–ಮುಂದಿನ ಊರು ಬಂದಾಗ ಎಬ್ಬಿಸಲು ಕೋರಿ ನಿದ್ರಿಸತೊಡಗಿದರು.** ಇಲ್ಲಿ ಮುದುಕರು ಬಳಲಿದ್ದ ವಿವರಣೆಯನ್ನು ವಾಕ್ಯದೊಳಗೇ ಸೇರಿಸಿರುವುದರಿಂದ ಅದನ್ನು ಗುರುತಿಸಲು ಆಗುವಂತೆ ಚಿಕ್ಕ ಗೆರೆಗಳ ನಡುವೆ ಇರಿಸಿ ಬರೆಯುವುದು ಸರಿ. ಈ ವಿವರಣೆಯ ಭಾಗಗಳು ಒಂದು ವಾಕ್ಯವೇ ಆಗಿರುತ್ತವೆ

ಎನ್ನುವುದನ್ನು ಗಮನಿಸಿ. ಅದರಿಂದಾಗಿಯೇ ಈ ವಿವರಣೆಯ ಭಾಗಗಳನ್ನು **ಅಲ್ಪವಿರಾಮ ಚಿಹ್ನೆ (,)**ಗಳನ್ನು ಬಳಸಿ ಬರೆಯುವುದಿಲ್ಲ. ಏಕೆಂದರೆ ಅಲ್ಪ ವಿರಾಮ ಚಿಹ್ನೆಯು ಇಡೀ ವಾಕ್ಯವನ್ನು ಒಳಗೊಳ್ಳುವುದಿಲ್ಲ. ಬದಲಿಗೆ ವಾಕ್ಯಭಾಗ ಇಲ್ಲವೇ ಪದಗುಚ್ಚವನ್ನು ಮಾತ್ರ ಆ ಚಿಹ್ನೆಯನ್ನು ಬಳಸಿ ತೋರಿಸಲು ಸಾಧ್ಯ. ಮುಂದಿನ ವಾಕ್ಯ ನೋಡಿ. **ರೈಲಿನಿಂದ ಇಳಿದವನೇ ಮನೆಗೆ ಹೋಗಿ, ತಂದಿದ್ದ ಸಾಮಾನುಗಳನ್ನೆಲ್ಲ ಮನೆಯಲ್ಲಿರಿಸಿ, ಬಳಿಕ ಕಾಲೆಜಿಗೆ ಹೋದೆ**. ಅಲ್ಪ ವಿರಾಮ ಚಿಹ್ನೆಗಳ ನಡುವೆ ಇರಿಸಿರುವ ಭಾಗ ಒಂದು ಪೂರ್ಣ ವಾಕ್ಯದ ಚಹರೆಯನ್ನು ಪಡೆದಿಲ್ಲ ಎನ್ನುವುದನ್ನು ಗಮನಿಸಿ. ಚಿಕ್ಕ ಗೆರೆಗಳೊಡನೆ ಮೇಲೆ ಬರೆದ ವಾಕ್ಯವನ್ನು ಅಲ್ಪ ವಿರಾಮದೊಡನೆ ಬರೆದರೆ ಹೀಗಿರುತ್ತದೆ. **ಬಸ್ಸಿನಲ್ಲಿ ನನ್ನ ಪಕ್ಕದಲ್ಲಿ ಕುಳಿತಿದ್ದ, ಬಹಳ ಬಳಲಿದ್ದಂತೆ ತೋರುತ್ತಿದ್ದ ಮುದುಕರು,ಮುಂದಿನ ಊರು ಬಂದಾಗ ಎಬ್ಬಿಸಲು ಕೋರಿ ನಿದ್ರಿಸತೊಡಗಿದರು**. ಬದಲಾವಣೆ ಗೊತ್ತಾಗುವಂತಿದೆಯಷ್ಟೆ.

**ಕುರಿತು ಮತ್ತು ಬಗೆಗೆ: ಮತ್ತಷ್ಟು ವಿವರಗಳು**

ಕುರಿತು ಮತ್ತು ಬಗೆಗೆ ಎಂಬ ಪದರೂಪಗಳ ಬಳಕೆಯ ಚರ್ಚೆ ಬಂದಿತ್ತಷ್ಟೆ. ಇದನ್ನು ಓದಿ ಡಾ.ಡಿ.ಎನ್.ಶಂಕರ ಭಟ್ ಅವರು 'ಕುರಿತು ಪದರೂಪದ ಹಿಂದಿನ ನಾಮಪದಕ್ಕೆ ಷಷ್ಠೀ ವಿಭಕ್ತಿ ಪ್ರತ್ಯಯ ಬರುತ್ತದೆಂದು' ಬರೆದಿದ್ದಾರೆ. ಅಂದರೆ **ಹೂವಿನ ಕುರಿತು, ಮಳೆಯ ಕುರಿತು, ನಾಟಕದ ಕುರಿತು** ಮುಂತಾದ ಪ್ರಯೋಗಗಳು ಸರಿ ಎನ್ನುವುದು ಅವರ ಮಾತು. ಹೀಗೆ ಬರೆಯುವುದು ಕನ್ನಡದಲ್ಲಿ ರೂಢಿಯಲ್ಲಿದೆ. ಆದರೆ **ಹೂವನ್ನು ಕುರಿತು, ಮಳೆಯನ್ನು ಕುರಿತು, ನಾಟಕವನ್ನು ಕುರಿತು** ಎಂದು ಬರೆಯುವುದೂ ರೂಢಿಯಲ್ಲಿದೆ. ಒಬ್ಬರೇ ಇಲ್ಲವೇ ಒಂದು ಪ್ರದೇಶಕ್ಕೆ ಸೇರದ ಬರಹಗಾರರೇ ಎರಡೂ ರೀತಿಯಲ್ಲಿ ಬರೆಯುವುದಿಲ್ಲ. ಅಂದರೆ ಕನ್ನಡ ಮಾತಾಡುವ ಪ್ರದೇಶಗಳಲ್ಲಿ ಈ ಎರಡೂ ಬಗೆಯ ಬರಹ ರೂಪಗಳು ಹಂಚಿಹೋಗಿವೆ ಎಂದು ತೋರುತ್ತದೆ. ಮಾತಿನಲ್ಲಿ ಅದರಲ್ಲೂ ಅನೌಪಚಾರಿಕವಾದ ಮಾತಿನಲ್ಲಿ ಕುರಿತು ಮತ್ತು ಬಗೆಗೆ ಎಂಬ ಪದರೂಪಗಳು ಬಳಕೆಯಾಗುವುದು ಕಡಿಮೆ. ಇವು ಹೆಚ್ಚಾಗಿ ಕಣ್ಣಿನ ಕನ್ನಡದಲ್ಲಿ ಕಾಣಸಿಗುತ್ತವೆ; ಆದರೆ ಕಿವಿಯ ಕನ್ನಡದಲ್ಲಿ ಕೇಳಸಿಗುವುದಿಲ್ಲ. ಈಚಿನ ಕನ್ನಡ ಬರವಣಿಗಯಲ್ಲಿ ಈ ಎರಡೂ ರೂಪಗಳ ಬಳಕೆ ಹೆಚ್ಚಾಗಿದೆ. ಇದರಿಂದಾಗಿ ಕನ್ನಡ ವಾಕ್ಯ ರಚನೆಯೇ ಒಂದು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದೆ ಎಂದು ತೋರುತ್ತದೆ. ಬರೆಯುವವರು ಈ ಪದರೂಪಗಳನ್ನು ಬಳಸದೆಯೇ ವಾಕ್ಯಗಳನ್ನು ರಚಿಸುವುದು ಸಾಧ್ಯವೇ ಎಂದು ಯೋಚಿಸಬೇಕು. ಇದು ಸಾಧ್ಯ. ಈಗ ನೀವು ಓದಿದ ವಾಕ್ಯವನ್ನೇ ಬರೆಯುವವರು ಈ ಪದರೂಪಗಳನ್ನು ಬಳಸದೆಯೇ ವಾಕ್ಯಗಳನ್ನು ರಚಿಸುವುದು ಸಾಧ್ಯವೇ ಎಂಬುದನ್ನು ಕುರಿತು ಯೋಚಿಸಬೇಕು ಎಂದು ಬರೆಯಬಹುದಿತ್ತಲ್ಲವೇ? ಅಂದರೆ ಕುರಿತು ಮತ್ತು ಬಗೆಗೆ ತೀರಾ ಬಳಸಲೇಬೇಕಾದ ಪದರೂಪಗಳಲ್ಲ.

ಕುರಿತು ಪದಕ್ಕೆ ಕಾರಣವಾದ **ಕುರಿ** (ಇಲ್ಲಿನ ರಕಾರ ಹಿಂದೆ ಶಕಟರೇಫೆಯಾಗಿತ್ತು) ಎಂಬ ಕ್ರಿಯಾಪದ ಈಗ ಬಳಕೆಯಲ್ಲಿಲ್ಲ. **ಮನಸ್ಸಲ್ಲಿ ಏನಾದರೂ ಕುರಿತುಕೊಂಡರೆ ಅದು ಆಗಿಯೇ ತೀರುತ್ತದೆ** ಎನ್ನುವ ವಾಕ್ಯದಲ್ಲಿ ಈ ಕ್ರಿಯಾಪದ ತನ್ನ ಮೂಲ ಅರ್ಥದಲ್ಲಿ ಬಳಕೆಯಾಗಿರುವುದನ್ನು ಗಮನಿಸಿ. **ಕುರಿತೇಟು** ಎಂಬ ಪದರೂಪಲ್ಲೂ ಇದು ಇದೆ.

ಆದರೆ ಈ ಕ್ರಿಯಾಪದದಿಂದ ಮೈತಳೆದ ಕುರಿತು ಎಂಬ ಪದರೂಪ (ಮತ್ತು ಇದರಿಂದ ರಚಿಸಿಕೊಂಡ ಕುರಿತಾದ ,ಕುರಿತಾಗಿ, ಕುರಿತಿರುವ ಎಂಬ ರೂಪಗಳು) ಮಾತ್ರ ಹೆಚ್ಚಾಗಿ ಬರವಣಿಗೆಯಲ್ಲಿ ಬಳಕೆಯಾಗ ತೊಡಗಿದೆ.

**ಆಕೆ, ಆಕೆಗೆ, ಆಕೆಯನ್ನು**

ಈ ಮುಂದಿನ ವಾಕ್ಯಗಳನ್ನು ಗಮನಿಸಿ: **1) ಆಕೆಯನ್ನು ನೆಮ್ಮದಿಯಿಂದ ಇರಲು ಬಿಡಿ. 2) ಆಕೆ ನೆಮ್ಮದಿಯಿಂದ ಇರಲು ಬಿಡಿ. 3) ಆಕೆಗೆ ನೆಮ್ಮದಿಯಿಂದ ಇರಲು ಬಿಡಿ.** ಕನ್ನಡ ಬರವಣಿಗೆಯಲ್ಲಿ ಈ ಮೂರೂ ಬಗೆಯ ವಾಕ್ಯಗಳು ಓದಲು ಸಿಗುತ್ತವೆ. ಕೊನೆಯದು ಈಚೆಗೆ ಪತ್ರಿಕೆಯೊಂದರಲ್ಲಿ ಕಾಣಸಿಕ್ಕಿತ್ತು. ಇವು ಮೂರೂ ಒಂದೇ ಅರ್ಥದ ವಾಕ್ಯಗಳೆಂದು ತಿಳಿಯುವವರು 'ಆಕೆ' ಪದದ ಬೇರೆಬೇರೆ ರೂಪಗಳನ್ನು ಹೇಗೆ ವಿವರಿಸುತ್ತಾರೆ? ಶಾಲಾ ವ್ಯಾಕರಣಗಳಲ್ಲಿ ಈ ವಿಭಕ್ತಿ ಪಲ್ಲಟವೆಂದು ಇದನ್ನು ಕರೆದುಬಿಟ್ಟಿದ್ದಾರೆ. ಒಂದು ವಿಭಕ್ತಿ ಪ್ರತ್ಯಯ ಬಳಕೆಯಾಗುವ ಜಾಗದಲ್ಲಿ ಇನ್ನೊಂದು ವಿಭಕ್ತಿ ಪ್ರತ್ಯಯದ ಬಳಕೆ ಸಾಧ್ಯವೆಂಬುದು ಈ ವ್ಯಾಕರಣಗಳ ತಿಳುವಳಿಕೆ. ದಿಟವಾಗಿ ಇದು ಆಗುವುದಿದ್ದರೆ ಬಲು ಗೊಂದಲದ ವಾತಾವರಣವೇ ನಮಗೆ ಕಾಣಸಿಗಬೇಕಿತ್ತು. ಒಂದರ ಬದಲು ಇನ್ನೊಂದು ಎನ್ನುವ ವ್ಯಾಕರಣ ಪ್ರಕ್ರಿಯೆ ಆಗದ ಮಾತು. ಆದ್ದರಿಂದ ಈ ಮೇಲಿನ ಮೂರೂ ವಾಕ್ಯಗಳು ವ್ಯಾವಹಾರಿಕವಾಗಿ ಒಂದೇ ಅರ್ಥವನ್ನು ಹೊಂದಿದಂತೆ ತೋರಿದರೂ ಅಥವಾ ಹಾಗೆ ನಾವು ತಿಳಿದರೂ ಈ ಮೂರಕ್ಕೂ ಬೇರೆಬೇರೆ ಅರ್ಥಗಳಿವೆ; ಇಲ್ಲವೇ ಈ ಮೂರರಲ್ಲಿ ಒಂದೆರಡಾದರೂ ತಪ್ಪು ವಾಕ್ಯಗಳಾಗಿರುವುದು ಸಾಧ್ಯ.

ಈ ಮೂರು ವಾಕ್ಯಗಳನ್ನೂ ಯಾರೋ ಯಾರಿಗೋ ಹೇಳುತ್ತಿದ್ದಾರೆಂಬುದು ಸರಿಯಷ್ಟೆ. ಅಂದರೆ ವಾಕ್ಯದ ಕೊನೆಯಲ್ಲಿರುವ 'ಬಿಡಿ' ಎಂಬ ಕ್ರಿಯಾರೂಪವನ್ನು ಗಮನಿಸಿದರೆ ಈ ವಾಕ್ಯವನ್ನು ಉದ್ದೇಶಿಸಿರುವುದು 'ನೀವು' ಎಂಬ ಕರ್ತೃವನ್ನು ಎನ್ನುವುದು ಸ್ಪಷ್ಟ. 'ಇರಲು' ಎಂಬ ಅಪೂರ್ಣ ಕ್ರಿಯಾಪದ ಮತ್ತು 'ಬಿಡಿ' ಎಂಬ ಪೂರ್ಣ ಕ್ರಿಯಾಪದ ಇರುವುದರಿಂದ ಇಲ್ಲಿ ಎರಡು ವಾಕ್ಯಗಳು ಸೇರಿಕೊಂಡಿವೆ. ಈ ಮೇಲಿನ ಮೂರೂ ವಾಕ್ಯಗಳಲ್ಲಿ ಮೊದಲೆರಡು ಸಾಧುವಾದ ವಾಕ್ಯಗಳು. ಮೂರನೆಯದು ಸರಿಯಾದ ವಾಕ್ಯವಲ್ಲ. ಇದಕ್ಕೆ ಕಾರಣಗಳಿವೆ. ಕನ್ನಡದ ಬಿಡಿ (<ಬಿಡು) ಮಾದರಿಯ ಕ್ರಿಯಾಪದಗಳು ಅನುಭೋಗಿಯನ್ನು ಪಡೆಯಲಾರವು. ಹಾಗೆ ಅನುಭೋಗಿಯನ್ನು ವಾಕ್ಯದಲ್ಲೇ ಪಡೆಯಬಹುದಾದ ಕ್ರಿಯಾಪದಗಳ ಗುಂಪು ಕನ್ನಡದಲ್ಲಿ ಬೇರೆಯೇ ಇದೆ. 'ಕೊಡು' ಅಂತಹ ಕ್ರಿಯಾಪದ. ಕನ್ನಡ ಕ್ರಿಯಾಪದಗಳಲ್ಲಿರುವ ಈ ವ್ಯತ್ಯಾಸವನ್ನು ಸರಿಯಾಗಿ ಗ್ರಹಿಸದಿರುವುದರಿಂದ ಮೇಲೆ ಹೇಳಿದ ಮಾದರಿಯ ಗೋಜಲುಗಳು ಉಂಟಾಗುತ್ತವೆ. 'ಹುಡುಗನನ್ನು ಕರೆದರು' ಮತ್ತು 'ಹುಡುಗನಿಗೆ ಹೊಡೆದರು': ಈ ಎರಡೂ ವಾಕ್ಯಗಳೂ ಸರಿಯೆಂದು ತಿಳಿಯುತ್ತೇವೆ. ಈ ವಾಕ್ಯಗಳೊಡನೆ 'ಹುಡುಗನನ್ನು ಕರೆದರು' ಮತ್ತು 'ಹುಡುಗನಿಗೆ ಕರೆದರು' ಎಂಬ ವಾಕ್ಯಗಳನ್ನು ಇರಿಸಿ ನೋಡಿದಾಗ ನಮ್ಮ ತಿಳುವಳಿಕೆ ತಪ್ಪೆಂಬುದು ಗೊತ್ತಾಗುತ್ತದೆ. ಆದ್ದರಿಂದ ವಿಭಕ್ತಿ ಪಲ್ಲಟವೆಂಬ ಮಾತನ್ನು ಮರುಚಿಂತನೆಗೆ ಗುರಿಪಡಿಸಬೇಕಾಗಿದೆ.

ಇನ್ನೊಂದು ಪ್ರಶ್ನೆ ನಮ್ಮೆದುರು ಮೂಡುತ್ತದೆ. ಹೇಗಿದ್ದರೇನು? ವಾಕ್ಯದ ಒಟ್ಟು ಅರ್ಥವೇನು ಎಂಬುದು ತಿಳಿದರೆ ಸಾಕಲ್ಲವೇ ಎಂಬುದೇ ಆ ಪ್ರಶ್ನೆ. ವಾಕ್ಯ ರಚನೆಯಲ್ಲಿರುವ ತಪ್ಪುಗಳು ಅಷ್ಟು ಮುಖ್ಯವಲ್ಲ. ಹೇಗೋ ನಾವು ಮಾತಾಡಿದ್ದು / ಬರೆದದ್ದು, ಅದನ್ನು ಕೇಳಿದವರಿಗೆ / ಓದಿದವರಿಗೆ ಗೊತ್ತಾದರೆ ಸಾಕು ಎಂಬುದು ಕೆಲವರ ನಿಲುವು. ಇದು ಒಂದು ನಿಟ್ಟಿನಲ್ಲಿ ಸರಿ. ಆದರೆ ನಮ್ಮ ದಿನದಿನದ ನುಡಿಯಲ್ಲಿ ಅದರಲ್ಲೂ ಮಾತಿನಲ್ಲಿ ಅಪೂರ್ಣವಾದ ವಾಕ್ಯಗಳು, ತುಂಡು ತುಂಡಾದ ವಾಕ್ಯಗಳು, ತಪ್ಪು ರಚನೆಗಳು ಇರುತ್ತವೆ. ಅಲ್ಲಿರುವ ಕೊರತೆಗಳು ನಮಗೆ ಎಷ್ಟೋ ವೇಳೆ ಗೊತ್ತಾಗುವುದೇ ಇಲ್ಲ. ಆದರೆ ಅದರಿಂದ ಮತ್ತೊಬ್ಬರೊಡನೆ ಮಾತುಕತೆ ಮುಂದುವರೆಸುವುದಕ್ಕೆ ತೊಂದರೆಯಾಗುವುದಿಲ್ಲವಲ್ಲ ಎಂದು ಹೇಳಿ ಸುಮ್ಮನಾಗುತ್ತೇವೆ. ರಚನೆಯ ನೆಲೆಯಲ್ಲಿ ಸರಿಯಾಗಿರುವುದು ಮತ್ತು ಹೇಳಿದ್ದು ತಿಳಿಯುವುದು ಬೇರೆ ಬೇರೆ ಸಂಗತಿಗಳು. ಸರಿಯಾದ ರಚನೆಯುಳ್ಳ ವಾಕ್ಯ ಎಲ್ಲರಿಗೂ ತಿಳಿಯದೇ ಇರಬಹುದು. ಹಾಗೆಯೇ ಕೇಳಿದಾಗ ಹೇಗೋ ಅರ್ಥ ತಿಳಿಯುವ ವಾಕ್ಯದ ರಚನೆ ಸರಿಯಾಗಿಲ್ಲದೆಯೂ ಇರಬಹುದು. 'ಬಣ್ಣಬಣ್ಣದ ಹೂವುಗಳು ಆಗಸದಲ್ಲಿ ಹಾರಾಡುತ್ತಿವೆ', 'ಗಿಡಗಂಟೆಗಳ ಕೊರಳಿನಿಂದ ಹಕ್ಕಿಗಳ ಹಾಡು ಹೊರಟಿತು' ಎಂಬಂತಹ ವಾಕ್ಯಗಳು ಸರಿಯಾದ ರಚನೆಗಳು. ಆದರೆ ಅವುಗಳ ಅರ್ಥ ತಿಳಿಯುವುದು ಸುಲಭವಲ್ಲ. ಕೆಲವೊಮ್ಮೆ ಅರ್ಥವೂ ಇಲ್ಲದಿರಬಹುದು. 'ನಾಯಿ ತನ್ನ ಕೈಯಾರೆ ನನಗೆ ಈ ಹೂವನ್ನು ನನಗೆ ಕೊಟ್ಟಿತು' ಎಂಬುದು ಅಂತಹ ಒಂದು ವಾಕ್ಯ( ರಮ್ಯ ಕತೆಗಳಲ್ಲಿ ಇದಕ್ಕೂ ಅರ್ಥವಿದ್ದೀತು) ಹಾಗೆಯೇ 'ನೀನು ಹೀಗೇ ಅಡುತಿದ್ದರೆ... ನೋಡು' ಎಂಬಂತಹ ವಾಕ್ಯಗಳು ರಚನೆಯ ನೆಲೆಯಲ್ಲಿ ಪೂರ್ಣವಲ್ಲದಿದ್ದರೂ ಮಾತನಾಡಿದ ಸಂದರ್ಭದಲ್ಲಿ ನಮಗೆ ಅವುಗಳ ಅರ್ಥ ತಿಳಿಯುತ್ತದೆ. ಆದ್ದರಿಂದ 'ಸರಿಯಾದ ರಚನೆ' ಎಂಬ ಮಾತನ್ನು ಅರ್ಥ ಸಂವಹನದ ನೆಲೆಯಲ್ಲಿ ಪರಿಗಣಿಸಬಾರದು. ಭಾಷೆಯಲ್ಲಿ ಯಾವುದು ರಚನೆಯ ನೆಲೆಯಲ್ಲಿ ಸರಿ ಯಾವುದು ಅಲ್ಲ ಎಂದು ಚರ್ಚಿಸುವುದಕ್ಕೂ ದಿನದಿನದ ನುಡಿಯ ಚಹರೆಗೂ ನೇರವಾದ ಸಂಬಂಧವಿಲ್ಲ. ಆದ್ದರಿಂದ ಭಾಷೆಯಲ್ಲಿ ಸರಿತಪ್ಪುಗಳನ್ನು ಗುರುತಿಸುವುದಕ್ಕೂ ಭಾಷೆಯ ಶುದ್ಧಾಶುದ್ಧತೆಯನ್ನು ಗುರುತಿಸುವುದಕ್ಕೂ ವ್ಯತ್ಯಾಸವಿದೆ.

**ನುಡಿಯುವಾಗ/ಬರೆಯುವಾಗ**

ಕೆ.ಎನ್. ಕೀರ್ತಿಭೂಷಣ್ (ಮೈಲಸಂದ್ರ, ಬೆಂಗಳೂರು) ಇವರು ಸಂಸ್ಕೃತ ಪದಗಳನ್ನು ನುಡಿಯುವಾಗ/ಬರೆಯುವಾಗ ಮತ್ತು ಪ್ರಮಾಣ ಕನ್ನಡದ ರೂಪಗಳನ್ನು ನುಡಿಯುವಾಗ/ಬರೆಯುವಾಗ 'ತಪ್ಪುಗಳಿಲ್ಲದಂತೆ' ನೋಡಿಕೊಳ್ಳಬೇಕೆಂಬ ಬಗೆ ಒಂದು ಕಡೆ ಇದ್ದರೆ ಇನ್ನೊಂದು ಕಡೆ ಜನರು ಹೇಗೆ ನುಡಿಯುತ್ತಾರೋ ಅದಕ್ಕೆ ಮನ್ನಣೆ ನೀಡುವುದು ಸರಿ ಎಂಬ ಬಗೆ ಇನ್ನೊಂದು ಕಡೆ. ಇವೆರಡೂ ಬಗೆಗಳು ಯಾವಾಗಲೂ ಇರುತ್ತವೆ; ಅವುಗಳು ಒಂದಕ್ಕೊಂದು ತದ್ವಿರುದ್ಧವಾದುದೆಂದು ತಿಳಿಯ ಬೇಕಿಲ್ಲ ಎನ್ನುವುದು ಅವರ ಮಾತು. ಇಂದಿನ ದಿನಗಳಲ್ಲಿ ಯಾವುದೇ ಎರಡು ಸಂಗತಿಗಳನ್ನು ಒಂದು ಇನ್ನೊಂದಕ್ಕಿಂತ ಬೇರೆ ಎಂದು ತಿಳಿಯಬೇಕೇ ಹೊರತು ಯಾವುದೂ ಇನ್ನೊಂದಕ್ಕೆ ವಿರುದ್ಧವಲ್ಲ ಎಂಬ ಚಿಂತನೆ ನೆಲೆಗೊಳ್ಳುತ್ತಿದೆ. ಸರಿ. ಇದನ್ನೇ ಹೇಳುತ್ತಿದ್ದೇನೆ. ಶಿಕ್ಷಣ ಕ್ರಮದಲ್ಲಿ, ಒಪ್ಪಿಕೊಂಡ ಮಾದರಿಗಿಂತ ಬೇರೆಯಾದುದನ್ನು ತಳ್ಳಿಹಾಕುವ ಅಳಿಸಿಹಾಕುವ

ಹಾದಿಯೊಂದಿದೆ. ಇದು ಸಲ್ಲದು. ಜನರು ದಡ್ಡತನದಿಂದ ಇಲ್ಲವೇ ಸೋಮಾರಿತನದಿಂದ 'ತಪ್ಪು'ಗಳನ್ನು ಮಾಡುವುದಿಲ್ಲ.(ಹಾಗೆ ಬೇಕೆಂತಲೇ ಇಲ್ಲವೇ ಗೊತ್ತಿಲ್ಲದೆ ಮಾಡುವ ತಪ್ಪುಗಳ ಬಗೆಗೆ ಚರ್ಚೆ ಬೇರೆಯೇ ಆಗಬೇಕಿದೆ) ನಾವು ಜನರ ಮಾತಿನಲ್ಲಿ ಯಾವುದನ್ನು 'ತಪ್ಪು' ಎಂದು ತಿಳಿಯುತ್ತಿದ್ದೇವೆಯೋ ಅದು ನುಡಿಯಲ್ಲಿ ನೆಲೆಯೂರುತ್ತಿರುವ ಬದಲಾವಣೆಯೊಂದರ ಬೀಜವೂ ಅಗಿರಬಹುದು. ಹಾಗಿದ್ದಾಗ ಅದನ್ನು 'ತಿದ್ದಿ' ಸರಿಪಡಿಸಲು ಹೊರಡುವುದರಲ್ಲಿ ಹುರುಳಿಲ್ಲ. ಹಾಗಿದ್ದರೆ ಎಲ್ಲರೂ ತಮತಮಗೆ ಬೇಕಾದಂತೆ ನುಡಿಯಲು/ಬರೆಯಲು ಅನುವು ಮಾಡಿಕೊಡಬೇಕೆ; ಅದರಿಂದ ಗೋಜಲು ಹೆಚ್ಚಾಗುವುದಿಲ್ಲವೆ ಎಂದು ಯಾರಾದರೂ ಕೇಳಬಹುದು. ಆದರೆ ದಿಟವಾಗಿ ಹಾಗೆ ಎಲ್ಲರೂ ತಮ್ಮದೇ ಆದ 'ತಪ್ಪು'ಗಳನ್ನು ಮಾಡುತ್ತಿರುವುದಿಲ್ಲ. ಈ 'ತಪ್ಪು'ಗಳಲ್ಲಿ ಹಲವು ಸಮಾನವಾಗಿರುತ್ತವೆ; ಹಲವರು ಮತ್ತೆಮತ್ತೆ ಅವರ ನುಡಿಯಲ್ಲಿ ಅದನ್ನು ನೆಲೆಗೊಳಿಸುತ್ತಿರುತ್ತಾರೆ. ಇದನ್ನು ಎಚ್ಚರದಿಂದ ಗಮನಿಸಬೇಕು.

**ಚರಪು**

ಮಹೇಶ್ (ಸ್ಟಾಕ್ ಹೋಮ್, ಸ್ವೀಡನ್) ಮಿಂಚಂಚೆಯಲ್ಲಿ 'ಚರಪು' ಪದದ ಬಗೆಗೆ ಕೇಳಿದ್ದಾರೆ. ಈ ಪದ (ಚರ್ಪು, ಚೆರುಪು) ತೆಂಕಣ ಸೀಮೆಯಲ್ಲಿ ಬಳಕೆಯಲ್ಲಿದೆ. ಗುಡಿಯಲ್ಲಿ ನಡೆಯುವ ಪೂಜೆಯ ಬಳಿಕ ನೀಡುವ 'ಪ್ರಸಾದ'ವನ್ನು ಚರುಪು ಎನ್ನುತ್ತಾರೆ. ಇದು **ಸೆರಪು** ಎಂಬ ಪದದ ಇಂದಿನ ರೂಪವೆಂಬುದು ನುಡಿಯರಿಗರ ತಿಳುವಳಿಕೆ. ಇತರ ದ್ರಾವಿಡ ನುಡಿಗಳಲ್ಲಿ ಸಕಾರದಿಂದ ಮೊದಲಾಗುವ ಇದೇ ತಿರುಳಿನ ಪದಗಳಿಲ್ಲ. ತಮಿಳಿನ ಚಿರ, ಚಿರಪ್ಪು ಪದಗಳಿಗೂ ಇದಕ್ಕೂ ನಂಟಿರುವಂತೆ ತಿಳಿಯವಾಗಿದೆ. ತಮಿಳಿನಲ್ಲಿ ಇದರ ತಿರುಳು ಹೆಚ್ಚಳ, ಶ್ರೀಮಂತಿಕೆ, ಅತಿಥಿ ಸತ್ಕಾರ ಎಂದೆಲ್ಲ ಇದೆ. ಪಂಪನಲ್ಲೂ ಸೆರಪು ಪದ ಬಳಕೆಯಾಗಿದ್ದರೂ ಅದರ ತಿರುಳು ತಮಿಳಿನಲ್ಲಿರುವ ತಿರುಳಿಗೆ ಹತ್ತಿರವಾಗಿದೆ. ಈಗ ಈ ಪದಕ್ಕಿರುವ ತಿರುಳಿನ ಬಳಕೆ ಕೆಲವು ನೂರು ವರುಷಗಳಿಂದ ಬಂದಹಾಗಿದೆ. ಈ ಪದಕ್ಕೂ ಸಂಸ್ಕೃತದಲ್ಲಿರುವ ಚರು ಎಂಬ ಪದಕ್ಕೂ ನಂಟಿರಬಹುದೇ ಎಂದು ನುಡಿಯರಿಗರು ಯೋಚಿಸಿದ್ದಾರೆ. ಆ ನುಡಿಯಲ್ಲಿ ದೇವತೆಗಳಿಗೆ ಸಮರ್ಪಿಸಲು ತಯಾರಿಸಿದ ಅನ್ನ ಎಂಬ ತಿರುಳಿದೆ. ತುಂಗಭದ್ರೆಯ ಬಡಗಣ ನಾಡಿನಲ್ಲಿ **ಚರಗ** ಎಂಬ ಪದವೊಂದಿದೆ. ಇದು ಹೊಲಗಳಲ್ಲಿ ನಡೆಸಿದ ಆಚರಣೆಯ ಬಳಿಕ ಚಲ್ಲುವ ಅನ್ನ ಇಲ್ಲವೇ ಬೇರೆ ಆಹಾರ (ಮಾಂಸವೂ ಸೇರಿದಂತೆ) ಎಂಬ ತಿರುಳಿದೆ. ಚರಗ, ಚರುಗ, ಸರುಗ ಎಂದೆಲ್ಲ ಈ ಪದವನ್ನು ನುಡಿಯುತ್ತಾರೆ. ಈಗ ಈ ಎರಡೂ ಪದಗಳಿಗೂ ಯಾವ ನಂಟೂ ಇದ್ದಂತೆ ತೋರುವುದಿಲ್ಲವಾದರೂ ಇವೆರಡೂ ಒಂದೇ ದೇಟಿನಿಂದ ಹುಟ್ಟಿಕೊಂಡಿದ್ದರೂ ಅಚ್ಚರಿಪಡಬೇಕಿಲ್ಲ. ಸೆರಪು ಎಂಬಲ್ಲಿ (ತಮಿಳಿನ ಚಿರವೂ ಸೇರಿದಂತೆ) ರಕಾರವು ಶಕಟರೇಫೆ ಎಂಬ ದ್ರಾವಿಡ ನುಡಿಗಳಿಲ್ಲಿ ಮಾತ್ರ ಕಾಣಬರುವ ಉಲಿಯಾದ್ದರಿಂದ ಇದರ ಬೇರನ್ನು ಸಂಸ್ಕೃತಕ್ಕೆ ಒಯ್ಯುವುದು ಸರಿಯಾಗದೆಯೂ ಹೋಗಬಹುದು.

**ಕ್ಲೀಷೆ**

ವೈ. ಶಂಕರನಾರಾಯಣ ರಾವ್(ಪಡುಬಿದ್ರಿ) ಇವರು **'ಕ್ಲೀಷೆ'** ಎಂಬ ಪದದ ಬಗೆಗೆ ಕೇಳಿದ್ದಾರೆ. ಇದು ಇಂಗ್ಲಿಶಿನಿಂದ ಕನ್ನಡಕ್ಕೆ ಬಂದು ಸೇರಿರುವ ಪದ. ಹೆಚ್ಚಾಗಿ

ಸಾಹಿತ್ಯ ವಿಮರ್ಶಕರು ಬಳಕೆಗೆ ತಂದರು. 'ಒಂದೇ ಬಗೆಯಲ್ಲಿರುವ, ಬದಲಾವಣೆಯಿಲ್ಲದ, ಸವೆದ, ಜಾಡಿಗೆ ಬಿದ್ದ; ಎಂಬೆಲ್ಲ ತಿರುಳುಗಳೊಡನೆ ಈ ಪದ ಈಗ ಕನ್ನಡದಲ್ಲಿ ಬಳಕೆಯಾಗುತ್ತಿದೆ. ಮಾತಿನಲ್ಲಿ, ಬರಹದಲ್ಲಿ ಯಾವಾಗಲೂ ಹೇಳಿದ್ದನ್ನೇ ಹೇಳುವುದನ್ನು; ಬರೆದ್ದನ್ನೇ ಬರೆಯುವುದನ್ನು ಕ್ಲೀಷೆ (ಇದನ್ನು ಕ್ಲೀಶೆ ಎಂದೂ ಬರೆಯಬಹುದು) ಎನ್ನುವುದುಂಟು. ಉದಾ.ಗೆ. ' ಇವರ ಸಾವು ನಾಡಿಗೆ ಎಂದೂ ತುಂಬಲಾಗದ ನಷ್ಟವಾಗಿದೆ.' ಈ ಮಾತನ್ನು ಕೇಳಿಸಿಕೊಂಡಾಗ ಅದೊಂದು ಕ್ಲೀಷೆಯಾದ ಮಾತೆಂದು ಅನಿಸುವುದಲ್ಲವೇ? ಇಂಗ್ಲಿಶಿಗೂ ಇದು ಫ್ರೆಂಚ್ ನುಡಿಯಿಂದ ಹೋಗಿದೆ.

**ಅರ್ಥಕ**

ಈಚೆಗೆ ಟಿವಿ ಚಾನೆಲ್ ಒಂದರಲ್ಲಿ ಓದಲು ಸಿಕ್ಕಿದ ವಾಕ್ಯ ಹೀಗಿತ್ತು: 'ಶೋಯೆಬ್ ಅಕ್ತರ್ ಅವರ ದೈಹಿಕ ಸಾಮರ್ಥ್ಯ ಪ್ರಶ್ನಾರ್ಥಕವಾಗಿದೆ.' ಈ ವಾಕ್ಯ ಬರೆದವರು ಏನು ಹೇಳಬಯಸಿದ್ದಾರೆ ಎನ್ನುವುದಕ್ಕೂ ವಾಕ್ಯದಲ್ಲಿ ಬಳಸಿರುವ ಪದಗಳಿಗೂ ಹೊಂದಾಣಿಕೆ ಇಲ್ಲ. 'ಪ್ರಶ್ನಾರ್ಥಕ' ಎಂಬ ಪದವನ್ನು ಇಲ್ಲಿ ಬಳಸಿರುವುದು ಸರಿಯಾಗಿಲ್ಲ. ಹೀಗೆ ಈ ಪದರೂಪವನ್ನು ತಪ್ಪಾಗಿ ಬಳಸಿರುವುದಕ್ಕೆ ಕನ್ನಡದ ಪದರಚನೆಯ ಬಗೆಯಲ್ಲಿ ನಾವು ಅನುಸರಿಸುತ್ತಿರುವ ಗೋಜಲುಗಳು ಕಾರಣವಾಗಿವೆ. ಬೇಕಾದ ಹೊಸ ಪದಗಳನ್ನು ರಚಿಸಿಕೊಳ್ಳಲು ಸಂಸ್ಕೃತದಿಂದ ಪಡೆದುಕೊಂಡ ಹಲವು ಪದರೂಪ ಪ್ರತ್ಯಯಗಳನ್ನು ನಾವು ಕನ್ನಡದಲ್ಲಿ ಬಳಸುತ್ತಿದ್ದೇವೆ. ಈ ಪದರೂಪ ಪ್ರತ್ಯಯಗಳಿಗೆ ಸಂಸ್ಕೃತದಲ್ಲಿ ಏನಾದರೂ ಕೆಲಸವಿರಲಿ; ಕನ್ನಡದಲ್ಲಂತೂ ಹಲವು ಗೊಂದಲಗಳು ಹುಟ್ಟಿಕೊಂಡಿವೆ. ಉದಾಹರಣೆಗೆ ಪ್ರಶ್ನಾರ್ಥಕ, ವಿಧ್ಯರ್ಥಕ, ಸಮಾನಾರ್ಥಕ, ವಿರುದ್ಧಾರ್ಥಕ ಮುಂತಾದ ಪದಗಳನ್ನು ನೋಡಿ. ಇಲ್ಲೆಲ್ಲ ಬಳಸಿರುವ **ಅರ್ಥಕ** ಎನ್ನುವ ಪದರೂಪ ಪ್ರತ್ಯಯದ ತಿರುಳೇನು ಮತ್ತು ಅದು ರಚನೆಯ ನೆಲೆಯಲ್ಲಿ ಮಾಡುವ ಕೆಲಸವೇನು ಎಂಬುದು ಸ್ಪಷ್ಟವಾಗಿಲ್ಲ. ಹಾಗಾಗಿ ಒಂದಕ್ಕಿಂತ ಹೆಚ್ಚು ಪದರೂಪ ಪ್ರತ್ಯಯಗಳನ್ನು ಒಂದೇ ಉದ್ದೇಶಕ್ಕಾಗಿ ಬಳಸುವುದು ಮತ್ತು ಒಂದೇ ಪದರೂಪ ಪ್ರತ್ಯಯವನ್ನು ಒಂದಕ್ಕಿಂತ ಹೆಚ್ಚು ಉದ್ದೇಶಗಳಿಗೆ ಬಳಸುವುದು ಕನ್ನಡ ಪದರಚನೆಯಲ್ಲಿ ಎದ್ದು ಕಾಣುವ ಸಂಗತಿಯಾಗಿದೆ. ಮೊದಲ ಬಗೆಯ ಗೊಂದಲಕ್ಕೆ **ಖಂಡನಾರ್ಹ/ಖಂಡನೀಯ, ಚಿಂತನಾರ್ಹ/ಚಿಂತನೀಯ, ದರ್ಶನಾರ್ಹ/ದರ್ಶನೀಯ** ಈ ಜೋಡಿ ಪದಗಳ ತಿರುಳು ಮತ್ತು ಕೆಲಸದಲ್ಲಿ ಏನೂ ವ್ಯತ್ಯಾಸಗಳಿಲ್ಲ. ಆದರೆ ಎರಡು ಬೇರೆ ಬೇರೆ ಪದರೂಪ ಪ್ರತ್ಯಯಗಳನ್ನು ಅಲ್ಲಿ ಬಳಸಿರುವುದನ್ನು ನೋಡುತ್ತೇವೆ. ( **ಅರ್ಥಕ** ಮತ್ತು **ಆತ್ಮಕ** ಎಂಬ ಪದರೂಪ ಪ್ರತ್ಯಯಗಳನ್ನೂ ಹೀಗೆಯೇ ಒಂದೇ ಉದ್ದೇಶಕ್ಕೆ ನಾವು ಅಲ್ಲಲ್ಲಿ ಬಳಸಿರುವುದುಂಟು) ಎರಡನೆಯ ಬಗೆಯ ಗೊಂದಲಕ್ಕೆ ಅ– ಎಂಬ ನಿಷೇಧರೂಪ ಸಾಧಕ ಪ್ರತ್ಯಯವನ್ನು ಗಮನಿಸಬಹುದು. ಇದು ಕೆಲವೊಮ್ಮೆ **ಅಲ್ಲದ** ಎಂಬ ತಿರುಳನ್ನು ನೀಡಿದರೆ ಮತ್ತೆ ಕೆಲವೊಮ್ಮೆ **ಇಲ್ಲದ** ಎಂಬ ತಿರುಳನ್ನು ನೀಡುತ್ತದೆ. ಈ ಎಲ್ಲ ಗೋಜಲುಗಳು ಇಲ್ಲದಂತೆ ಮಾಡಲು ಆದಷ್ಟು ಕನ್ನಡದ ಪದರೂಪ ಪ್ರತ್ಯಯಗಳನ್ನು ಬಳಸುವುದು ಸರಿಯಾದ ಹಾದಿಯಾಗುವುದು.

**ಋ ಬಿಡಬೇಕೆನ್ನುವುದು ಮೂಲಭೂತವಾದ!**

ಎಂ.ಪ್ರಭಾಕರ ಜೋಶಿ (ಮಂಗಳೂರು) ಅವರು ' ಕನ್ನಡದ ಬರವಣಿಗೆಯಿಂದ ಷಕಾರವನ್ನು, ಋಕಾರವನ್ನು ಕೈಬಿಡಬೇಕೆಂದು, ಸಂಸ್ಕೃತ ಪದಗಳನ್ನು ಬಳಸುವುದನ್ನು ನಿಲ್ಲಿಸಬೇಕೆಂದು ಹೇಳುವುದೂ ಒಂದು ಬಗೆಯಲ್ಲಿ ಮೂಲಭೂತವಾದವೇ ಆಗುವುದಿಲ್ಲವೇ' ಎಂದು ಕೇಳುತ್ತಾರೆ. ಮತ್ತೊಬ್ಬ ಓದುಗರು ತಮ್ಮ ಈ–ಕಾಗದದಲ್ಲಿ ' ಕನ್ನಡವನ್ನು ವ್ಯಾಕರಣಬದ್ಧವಾಗಿ, ಶುದ್ಧವಾಗಿ ಮತ್ತು ಸ್ಪಷ್ಟವಾಗಿ ಕನ್ನಡಿಗರೆಲ್ಲರೂ ನುಡಿಯಬೇಕೆಂದು ಕಟ್ಟುಗಳನ್ನು ಹಾಕುವವರು ಕನ್ನಡ ನಾಡಿನಲ್ಲೆಲ್ಲ ದಿನಬಳಕೆಯ ಮಾತಿನರೂಪ ಮತ್ತು ಕೆಲಸಗಳಲ್ಲಿ ಇರುವ ವೈವಿಧ್ಯಗಳನ್ನು ತಿಳಿದಿಲ್ಲವೇ ಎಂದು ಕೇಳಿದ್ದಾರೆ. ಇವೆರಡೂ ನಿಲುವುಗಳು ಈಗ ನಡೆಯುತ್ತಿರುವ ಚರ್ಚೆಗಳ ಸಾರವನ್ನು ಮುಂದಿಡುತ್ತವೆ. ಕನ್ನಡ ಬರವಣಿಗೆಯನ್ನು ನಾವು ಆಡುತ್ತಿರುವ ಮಾತಿಗೆ ಹತ್ತಿರವಾಗಿರುವಂತೆ ಮಾಡಬೇಕೆಂದು ಹೇಳುವವರನ್ನು ಮೂಲಭೂತವಾದಿಗಳು ಎಂದು ಹೇಳುವುದು ಸರಿಯಾಗಲಾರದು. ಏಕೆಂದರೆ ಹೀಗೆ ಬದಲಾವಣೆಗಳನ್ನು ತರಬೇಕೆಂದು ಹೇಳುವವರು ಕನ್ನಡ ಬರವಣಿಗೆಯಲ್ಲಿ ಏಕರೂಪತೆಯಿರಬೇಕೆಂದು ವಾದಿಸುತ್ತಿಲ್ಲ; ಬದಲಿಗೆ ವೈವಿಧ್ಯವನ್ನು ಒಪ್ಪುವ ಮತ್ತು ತಾಳುವ ಮನೋಭಾವವನ್ನು ಬೆಳೆಸಿಕೊಳ್ಳಬೇಕೆಂದು ಹೇಳುತ್ತಿದ್ದಾರೆಂದು ತಿಳಿಯೋಣ. ಮಹಾಪ್ರಾಣಗಳನ್ನು ನುಡಿಯುವಾಗ ಇಲ್ಲವೇ ಬರೆಯುವಾಗ ಕೈಬಿಟ್ಟರೆ ಅದು ಕನ್ನಡದ ಅಶುದ್ಧರೂಪ ಎಂದು ಹೇಳುವುದು ಸರಿಯಲ್ಲ; ಹಾಗೆಯೇ ಆ ದನಿಗಳನ್ನು ನುಡಿಯುವುದನ್ನು ಮತ್ತು ಬರೆಯುವುದನ್ನು ಬಿಡಬೇಕೆಂದು ಕಟ್ಟುಗಳನ್ನು ಯಾರೂ ವಿಧಿಸಲಾರರು. ಹೀಗೆ ವೈವಿಧ್ಯವನ್ನು ಒಪ್ಪುವುದಾದರೆ ಎಲ್ಲರಿಗೂ ತಿಳಿಯುವ ಒಂದು ಮಾದರಿಗೆ ಎರವಾದಂತೆ ಆಗುವುದಿಲ್ಲವೇ ಎಂದು ಕೇಳಬಹುದು. ವೈವಿಧ್ಯಗಳಿರುವುದರಿಂದ ಒಬ್ಬರ ಕನ್ನಡ ಇನ್ನೊಬ್ಬರಿಗೆ ತಿಳಿಯದಂತೆ ಆಗುವುದೆಂದೂ, ಶುದ್ಧ ಕನ್ನಡವೆಂಬ ರೂಪವೊಂದನ್ನು ನುಡಿಯಲು ಮತ್ತು ಬರೆಯಲು ಒತ್ತಾಯಿಸಿದರೆ ಆಗ ಅದು ಎಲ್ಲ ಕನ್ನಡಿಗರಿಗೂ ತಿಳಿಯುವಂತೆ ಆಗುವುದೆಂದು ಹೇಳುವುದು ಸರಿಯಲ್ಲ. ಎರಡೂ ಅತಿರೇಕಗಳೇ ಆಗಿವೆ. ನಾವು ಅಸುದ್ಧವೆಂದು ಹೇಳುವ ಕನ್ನಡ ಕೂಡ ವ್ಯಾಕರಣ ಬದ್ಧವೇ ಆಗಿರುತ್ತದೆ. ಕನ್ನಡವನ್ನು ಮೊದಲ ಭಾಷೆಯಾಗಿ ಪಡೆದುಕೊಂಡ ಎಲ್ಲರೂ ಕನ್ನಡ ವ್ಯಾಕರಣದ ಕಟ್ಟುಗಳಿಗೆ ತಕ್ಕಂತೆಯೇ ನುಡಿಯುತ್ತಿರುತ್ತಾರೆ. ಬರವಣಿಗೆ ಹೊಸದಾಗಿ ಕಲಿತ ಹಾಗೂ ಎಲ್ಲ ಮನುಷ್ಯರಿಗೂ ಹುಟ್ಟಿನಿಂದಲೇ ಬಂದಿರುವ ಕೌಶಲವಲ್ಲ. ಹಾಗಾಗಿ ಬರವಣಿಗೆಯಲ್ಲಿ'ತಪ್ಪುಗಳು' ಉಳಿದೇ ಉಳಿಯುತ್ತವೆ. ಆದರೆ ಆ ತಪ್ಪುಗಳು ವ್ಯಾಕರಣದ ಕಟ್ಟುಗಳಿಗೆ ಸಂಬಂಧಿಸಿರುವುದಿಲ್ಲ: ಬರವಣಿಗೆಯ ಗುರುತುಗಳಾದ ಅಕ್ಷರಗಳಿಗೆ ಸಂಬಂಧಿಸಿರುತ್ತವೆ. ಈ ನೆಲೆಯಲ್ಲಿ ಈಗ ನಡೆಯುತ್ತಿರುವ ಚರ್ಚೆಯನ್ನು ಬೆಳೆಸಿದರೆ ಆಗ ಗೋಜಲುಗಳು ಕಡಿಮೆಯಾದಾವು.

**ಮಣ್ಣು ಹೊರು**

ಕುಪ್ಪುಸ್ವಾಮಿ ಎಸ್.ಕೆ (ಬೆಂಗಳೂರು) ಇವರು 'ಮಣ್ಣು ಹೊರು' ಎಂಬ ಮಾತಿನ ತಿರುಳಿನ ಎಂಬ ಬಗೆಗೆ ತಮಗಿರುವ ಗೊಂದಲವನ್ನು ಮುಂದಿಟ್ಟಿದ್ದಾರೆ. ಇದಕ್ಕೆ ಮಣ್ಣನ್ನು ಹೊರು, ದುಡಿ ಎಂಬ ತಿರುಳುಗಳ ಜೊತೆಗೆ 'ಶಾಲೆಗೆ ಹೋಗು' ಎಂಬ

ತಿರುಳನ್ನೂ ಪದಕೋಶಗಳು ನೀಡುವುದನ್ನು ಗುರುತಿಸಿದ್ದಾರೆ. ಅಲ್ಲದೆ ಬೇರೆ ಕೆಲವು ಕಡೆಗಳಲ್ಲಿ ಕಲಿಯಲು ಹೋದದ್ದನ್ನು ಹೇಳುವಾಗ 'ಕಾಲೇಜಿಗೆ ಮಣ್ಣು ಹೊತ್ತೆ' ಎಂದು ಬರೆದಿರುವುದನ್ನೂ ಗಮನಿಸಿದ್ದಾರೆ. ಮಣ್ಣು ಹೊರು ಎಂಬ ಮಾತಿಗೆ ಈ ಹೊಸ ತಿರುಳು ದೊರೆತದ್ದು ಹೇಗೆನ್ನುವುದು ಇವರ ಪ್ರಶ್ನೆ. ಕೆಲವರು ಹೇಳುವಂತೆ ಮಣ್ಣನ್ನು ಹೊರು ಎಂಬ ಮಾತಿಗೆ ಶಾಲೆಗೆ ಹೋಗು ಎಂಬ ತಿರುಳು ಬರಲು ಚಾರಿತ್ರಿಕ ಕಾರಣಗಳಿವೆ. ಹಿಂದೆ ಶಾಲೆಗಳಲ್ಲಿ ಅಕ್ಷರಗಳನ್ನು ಬರೆಸಲು ಹಲಗೆ ಬಳಪಗಳಿರಲಿಲ್ಲ. ಮರಳಿನ ಮೇಲೆ ಬರೆಸುತ್ತಿದ್ದರಂತೆ. ಓದಲು ಹೋಗುವವರು ತಾವು ಬರೆಯಬೇಕಾದುದನ್ನು ಕಲಿಯಲು ಬೇಕಾಗಿದ್ದ ಮಣ್ಣನ್ನು ತಾವೇ ಹೊತ್ತು ತರುತ್ತಿದ್ದುದರಿಂದ ಈ ಮಾತು ಬಳಕೆಗೆ ಬಂದಿದೆ ಎನ್ನುತ್ತಾರೆ. ನನಗೆ ಇದು ಸರಿಯಾದ ಮಾತೆಂದು ತೋರುತ್ತಿಲ್ಲ. ಮಕ್ಕಳು ದಿನವೂ ಮಣ್ಣನ್ನು ಹೊರುತ್ತಿದ್ದರೆಂದು ಹೇಳಲು ಏನೂ ಪುರಾವೆಗಳಿಲ್ಲ. ಅಲ್ಲದೆ ಬರೆಯಲು ಹರಡುತ್ತಿದ್ದುದು ಮರಳನ್ನೇ ಹೊರತು ಮಣ್ಣನ್ನಲ್ಲ. ಹಾಗೆ ನೋಡಿದರೆ ಈ ಮಾತನ್ನು 'ಮಠಕ್ಕೆ ಮಣ್ಣು ಹೊರು' ಎಂದು ಒಟ್ಟಾಗಿ ಬಳಸುವುದುಂಟು. ಹಾಗೆ ಬಳಸಿದಾಗ ವ್ಯರ್ಥ ಪ್ರಯತ್ನ; ತನಗೆ ಏನೂ ಉಪಯೋಗವಾಗಲಿಲ್ಲ ಎನ್ನುವ ತಿರುಳೇ ಇರುತ್ತದೆ. ಹಾಗಾಗಿ ಕಲಿಕೆಗೂ ಮಣ್ಣನ್ನೂ ಹೊರುವುದಕ್ಕೂ ನಂಟು ಇರಲಾರದು.

**ಕಂಪು**

ನಟರಾಜು ವಿ (ಕೊಳ್ಳೇಗಾಲ) ಇವರು 'ಕಂಪು' ಎಂಬ ಪದಕ್ಕೆ ಕನ್ನಡದಲ್ಲಿ ಒಳ್ಳೆಯ ವಾಸನೆ ಮತ್ತು ಕೆಟ್ಟ ವಾಸನೆ ಎಂಬ ಎರಡೂ ತಿರುಳುಗಳಿರುವುದೇಕೆ ಎಂದು ಕೇಳಿದ್ದಾರೆ. ಕಂಪು ಪದಕ್ಕೆ ದ್ರಾವಿಡ ನುಡಿಗಳಲ್ಲೆಲ್ಲ ಸಂವಾದಿ ಪದಗಳಿವೆ. ಹಾಗಾಗಿ ಇದು ಮೂಲ ದ್ರಾವಿಡದ್ದೇ ಪದ. ಕನ್ನಡ ಮಾತ್ರವಲ್ಲದೆ ಇನ್ನೂ ಕೆಲವು ದ್ರಾವಿಡ ನುಡಿಗಳಲ್ಲಿ ( ಉದಾ.ಗೆ ತೆಲುಗು, ತುಳು, ಕೊಲಾಮಿ, ಗೋಂಡಿ, ಗದಬ ಮುಂತಾದವು)ಹೀಗೆ ಎರಡೂ ತಿರುಳುಗಳು ಈ ಪದಕ್ಕೆ ಇರುವುದು ಕಂಡು ಬಂದಿದೆ. ವಾಸನೆ ಎಂಬ ಸಂಸ್ಕೃತ ಪದವನ್ನು ಕನ್ನಡದಲ್ಲಿ ಬಳಸುತ್ತೇವಷ್ಟೆ. ಇದು ಮೂಗಿನ ಮೂಲಕ ನಮಗೆ ಸಿಗುವ ಒಂದು ಅನುಭವವನ್ನು ಹೇಳುವ ಪದ. ಹಾಗಾಗಿ ಈ ಅನುಭವ ಹಿತಕರವಾಗಿದ್ದರೆ ಅದನ್ನು ಸುವಾಸನೆ ಎನ್ನುತ್ತೇವೆ; ಹಿತಕರವಲ್ಲದಿದ್ದರೆ ದುರ್ವಾಸನೆ ಎನ್ನುತ್ತೇವೆ. ಕಂಪು ಪದವನ್ನೂ ಹೀಗೆಯೇ ಮೂಗಿನ ಮೂಲಕ ದೊರಕುವ ಅನುಭವವನ್ನು ಹೇಳುವ ಪದವೆಂದು ತಿಳಿದರೆ ಏಕೆ ಅದಕ್ಕೆ ಎರಡೂ ತಿರುಳುಗಳು ಬಂದಿವೆ ಎಂಬುದು ಗೊತ್ತಾಗುತ್ತದೆ. ಗಮಲು, ಗಮಗಮ, ಕಮಕಮ, ಗಬ್ಬು, ಕಮ್ಮನೆ ಇವೆಲ್ಲವೂ ಇದೇ ಪದದೊಡನೆ ನಂಟಿರುವ ಪದಗಳು.

**ಪದಗಳ ಸಾಮಾಜಿಕ ನಂಟು**

ಸೌಮ್ಯ ಬಿ.ಪಿ (ಬುಕ್ಕಾಂಬುಧಿ) ಇವರು 'ಜನರು ಕಾಲಗಣನೆಯಲ್ಲಿ ಬಳಸುವ ಸರಿಹೊತ್ತು, ಹೊತ್ತಾರೆ, ಒಪ್ಪೊತ್ತು, ಬೈಗು, ಮುಸ್ಸಂಜೆ ಮುಂತಾದ ಪದಗಳಿಗೆ ಪಠ್ಯಪುಸ್ತಕಗಳಲ್ಲಿ, ದೂರದರ್ಶನ, ಆಕಾಶವಾಣಿಗಳಲ್ಲಿ ಏಕೆ ಅವಕಾಶವಿಲ್ಲ' ಎಂದು ಕೇಳುತ್ತಾರೆ. ಒಂದು ನುಡಿಯಲ್ಲಿ ಜನರು ಬಳಸುವ ಪದಗಳಿಗೆ ತಿರುಳು ಇರುವುದರ

ಜೊತೆಗೆ ಇನ್ನೂ ಕೆಲವು ಸಾಮಾಜಿಕ ನಂಟುಗಳಿರುತ್ತವೆ. ಈ ಸಾಮಾಜಿಕ ನಂಟುಗಳನ್ನು ಆ ಪದಗಳನ್ನು ಬಳಸುವಾಗ ಜನ ಎಚ್ಚರದಿಂದ ಕಾಯ್ದುಕೊಳ್ಳುತ್ತಾರೆ. ಕೊಲೆ ಮತ್ತು ಸಾವು ಎಂಬ ಎರಡು ಪದಗಳನ್ನೇ ನೋಡಿ. ಈ ಪದಗಳಲ್ಲಿ ಒಂದರ ಬದಲು ಇನ್ನೊಂದನ್ನು ಬಳಸುವುದಕ್ಕೆ ಆಗುವುದಿಲ್ಲ. ಊಟ ಎಂಬ ಪದವನ್ನೇ ಗಮನಿಸಿದರೆ ಎಷ್ಟೋ ಜನರ ಪದಕೋಶದಲ್ಲಿ ಉಣಿಸು, ಉಣ್ಣುವುದು ಎಂಬ ಪದಗಳಿದ್ದರೂ ಊಟ ಎಂಬ ಪದ ಇಲ್ಲದಿರಬಹುದು. ಏಕೆಂದರೆ ದಿನದ ಯಾವುದೋ ಒಂದು ಹೊತ್ತಿನಲ್ಲಿ ಮಾತ್ರ ತಿನ್ನುವುದನ್ನು ಊಟ ಎಂದು ಕೆಲವರು ಪರಿಗಣಿಸುತ್ತಾರೆ. ಹಾಗೆ ಗೊತ್ತಾದ ಹೊತ್ತಿನಲ್ಲಿ ಮಾತ್ರ ತಿನ್ನುವ ಅವಕಾಶ ಇಲ್ಲದವರಿಗೆ ಊಟ ಎಂಬುದು ಇರುವುದಿಲ್ಲವಲ್ಲ. ಅವರು ಉಣ್ಣುತ್ತಾರೆ ಅಷ್ಟೆ. ಕಾಲವನ್ನು ಗುರುತಿಸಲು ಜನ ಬಳಸುತ್ತಿದ್ದ ಪದಗಳು ಗಡಿಯಾರಗಳು ಮತ್ತು ಹೊಸ ಬಗೆಯ ಜೀವನಕ್ರಮ ಬಂದ ಮೇಲೆ ಬೇರೆ ಪದಗಳಿಗೆ ಜಾಗ ಮಾಡಿಕೊಟ್ಟಿವೆ. ಹಿಂದೆ ಬಳಕೆಯಲ್ಲಿದ್ದ ಪದಗಳು ಬಳಕೆಯಿಂದ ಮರೆಯಾಗುತ್ತಿವೆ. ಈ ಪದಗಳು ನಮ್ಮ ನೆನಪಿನಲ್ಲಿ ಉಳಿಸಿರುವ ಅನುಭವಗಳನ್ನು ಕಾಯ್ದುಕೊಳ್ಳುವುದು ಅಗತ್ಯ. ಈ ಕೆಲಸವನ್ನು ಕೆಲವೊಮ್ಮೆ ನಮ್ಮ ನುಡಿಯ ಸಾಹಿತ್ಯ ಕೃತಿಗಳು ಮಾಡುತ್ತಿರುತ್ತವೆ. ಹಾಗಾಗಿ ಕವಿಗಳು ಕತೆಗಾರರು ಈ ಪದಗಳನ್ನು ತಮ್ಮ ರಚನೆಗಳಲ್ಲಿ ಬಳಸುತ್ತಿರುತ್ತಾರೆ.

## ಪ್ರಶ್ನಾರ್ಥಕ ಪದಗಳು ವಾಕ್ಯದ ಯಾವ ಜಾಗದಲ್ಲಿ ಒರಬೇಕು

ನಾಗೇಂದ್ರಪ್ಪ ಪಿ. (ಬಳ್ಳಾರಿ) ಅವರಿಗೆ, ಪ್ರಶ್ನೆಗಳನ್ನು ಕೇಳುವ ವಾಕ್ಯಗಳಲ್ಲಿ ಪ್ರಶ್ನಾರ್ಥಕ ಪದಗಳು ವಾಕ್ಯದ ಯಾವ ಜಾಗದಲ್ಲಿ ಬರಬೇಕು ಎಂಬ ಬಗೆಗೆ ಗೊಂದಲವಿದೆ. ಅದು ವಾಕ್ಯದ ಮೊದಲಲ್ಲಿ ಇಲ್ಲವೇ ನಡುವೆ ಬರಬಹುದೇ; ವಾಕ್ಯದ ಕೊನೆಯಲ್ಲೇ ಬರಬೇಕೆ ಎಂದು ಕೇಳುತ್ತಾರೆ. ಮಾತು ಮತ್ತು ಬರವಣಿಗೆಯಲ್ಲಿ ಪ್ರಶ್ನೆಪದಗಳು ಇಂತಲ್ಲೇ ಬರಬೇಕೆಂಬ ಕಟ್ಟುಗಳನ್ನು ಹೇಳಲು ಆಗುವುದಿಲ್ಲ. ಆದರೆ ವಾಕ್ಯದ ನಡುವೆ ಬರುವುದಾದರೆ ಅಂತಹ ಪದಗಳು ಪದಗುಚ್ಚದ ನಡುವೆ ಬರುವುದಿಲ್ಲ; ಅದರ ಆಚೀಚೆ ಮಾತ್ರ ಬರಬಹುದು. ಉದಾ.ಗೆ ಈ ವಾಕ್ಯವನ್ನು ನೋಡಿ. **/ನಿನ್ನೆ ಸಂಜೆ/ ಕೊನೆಯ ಬಸ್ಸಿನಲ್ಲಿ/ ನಿಮ್ಮ ಮನೆಗೆ/ ಬಂದವರು ಯಾರು**? ಎಂಬ ವಾಕ್ಯದಲ್ಲಿರುವ ಯಾರು ಎಂಬ ಪದವನ್ನು ವಾಕ್ಯದ ಬೇರೆ ಬೇರೆ ಕಡೆಯಲ್ಲಿ ಇರಿಸಲು ನೋಡಿ.ವಾಕ್ಯದಲ್ಲಿ / ಗೆರೆ ಎಳೆದಿರುವ ಜಾಗದಲ್ಲಿ ಮಾತ್ರ ಯಾರು ಎಂಬ ಪದ ಬರಬಲ್ಲುದು. / ಗೆರೆಗಳ ನಡುವೆ ಇರುವ ಪದಗುಚ್ಚದ ನಡುವೆ ಯಾರು ಎಂಬ ಪದವನ್ನು ಇರಿಸಲು ನೋಡಿ. ಆಗ ಅದು ಆಗುವುದಿಲ್ಲವೆಂಬುದು ಗೊತ್ತಾಗುತ್ತದೆ. ಒಂದು ವೇಳೆ ಕೇಳುತ್ತಿರುವ ಪ್ರಶ್ನೆಗೆ ಇರುವ ಉತ್ತರ, ಒಂದು ಪದಗುಚ್ಚದ ಭಾಗವಾಗಿದ್ದರೆ ಆಗ ಪ್ರಶ್ನೆ ಪದವನ್ನು ಮಾತ್ರವಲ್ಲದೆ ಇಡೀ ಪದಗುಚ್ಚವನ್ನೇ ವಾಕ್ಯದ ಬೇರೆ ಬೇರೆ ಜಾಗಗಳಲ್ಲಿ ಇರಿಸ ಬೇಕಾಗುತ್ತದೆ. ಈ ವಾಕ್ಯವನ್ನು ನೋಡೋಣ. **/ನೀನು/ನಿನ್ನೆ ನನಗೆ ನೀಡಿದ ಇಂಗ್ಲಿಶ್ ಪುಸ್ತಕಕ್ಕೆ/ ಎಷ್ಟು ಕೊಟ್ಟೆ?** ಈ ವಾಕ್ಯದಲ್ಲಿ ಎಷ್ಟು ಎಂಬುದು ಪ್ರಶ್ನೆ ಪದ. ಅದನ್ನು ಮಾತ್ರ ವಾಕ್ಯದ ಬೇರೆ ಬೇರೆ ಜಾಗಗಳಲ್ಲಿ ಇರಿಸಿಲು ಬರುವುದಿಲ್ಲ. **ಎಷ್ಟು ಕೊಟ್ಟೆ** ಎಂಬ ಪದಗುಚ್ಚವನ್ನೇ ಬೇರೆ ಬೇರೆ ಕಡೆಗಳಿಗೆ, ಅಂದರೆ / ಗೆರೆ ಇರುವಲ್ಲಿಗೆ ಒಯ್ಯಬೇಕಾಗುತ್ತದೆ.

ಪ್ರಶ್ನೆ ಪದಗಳನ್ನು ವಾಕ್ಯದ ಬೇರೆ ಬೇರೆ ಕಡೆಗಳಿಗೆ ಒಯ್ದಾಗ ವಾಕ್ಯದ ಚಹರೆಯಲ್ಲಿ ಕೆಲವು ಬದಲಾವಣೆಗಳು ಆಗುವುದುಂಟು. ಈ ಮುಂದಿನ ಎರಡು ಪ್ರಶ್ನೆ ವಾಕ್ಯಗಳನ್ನು ನೋಡಿ. **ಬಂದವರು** ಯಾರು?/ ಯಾರು **ಬಂದರು**? ಇಲ್ಲವೇ **ಬಂದದ್ದು** ಯಾವಾಗ?/ ಯಾವಾಗ **ಬಂದೆ**?

**ತಾನು**

ಎನ್ವಿ. ವೈದ್ಯ ಹೆಗ್ಗಾರ್ (ಶಿರಸಿ) ಅವರು 'ತಾನು' ಎಂಬ ಸರ್ವಪದದ ಬಳಕೆಯ ಬಗೆಗೆ ಪ್ರಶ್ನೆಯೊಂದನ್ನು ಕೇಳಿದ್ದಾರೆ. ಅವರು ಓದಿದ ಕಾದಂಬರಿಯಲ್ಲಿ ಮಾತು ಹೀಗಿದೆ. ' ಏಕೆಂದರೆ ಸೂರ್ನಾರ್ಣ ಮಾತಾಡಿ ಮುಗಿಸುವುದೇ ಇಲ್ಲ. **ತಾನು** 'ಹೂಂ' ಎನ್ನುತ್ತಿದ್ದರೆ ಸಾಕಾಗುತ್ತದೆ. ಆತನೇ ಮಾತಾಡುತ್ತಿರುತ್ತಾನೆ. **ತಾನು** ಸುಮ್ಮನುಳಿದು ಬಿಡುತ್ತೇನೆ' ಈ ವಾಕ್ಯಗಳಲ್ಲಿ 'ತಾನು' ಎಂಬುದರ ಬಳಕೆ ಸರಿಯೇ ಎನ್ನುವುದು ಅವರ ಪ್ರಶ್ನೆ. ಈ ಮಾತುಗಳನ್ನು ಹೇಳುತ್ತಿರುವವರು ಯಾರಿಗಾದರೂ ಈ ಮಾತನ್ನು ಹೇಳುತ್ತಿದ್ದರೆ ಆಗ ಈ ವಾಕ್ಯಗಳಲ್ಲಿ ತಾನು ಎಂಬ ಸರ್ವಪದ ಬರುವಂತಿಲ್ಲ; ನಾನು ಎಂದೇ ಹೇಳಬೇಕು. ಆದರೆ ತಮ್ಮಲ್ಲೆ ತಾವು ಯೋಚಿಸುತ್ತ ಯಾರಾದರೂ ಈ ಮಾತುಗಳನ್ನು ಹೇಳಿಕೊಳ್ಳುತ್ತಿದ್ದರೆ ಆಗ 'ತಾನು' ಎಂದು ಬಳಸಿದರೆ ತಪ್ಪೇನಿಲ್ಲ. ಈ ಮುಂದಿನ ವಾಕ್ಯವನ್ನು ನೋಡಿ. **'ಈ ಗೆಲುವಿಗೆ ನಾನೇ ಕಾರಣ' ಎಂದು ಮಂತ್ರಿಗಳು ಹೇಳಿದರು.** ಇಲ್ಲಿ ಮಂತ್ರಿಗಳ ಮಾತನ್ನು ಇರುವಂತೆಯೇ ಹೇಳಲಾಗಿದೆ. ಆದರೆ ಮಂತ್ರಿಗಳು ಹೇಳಿದ ವಾಕ್ಯವನ್ನು ಬೇರೊಬ್ಬರಿಗೆ ಹೇಳುತ್ತಿದ್ದರೆ ಆಗ ಈ ವಾಕ್ಯದಲ್ಲಿ ಉಲ್ಲೇಖ ಚಿಹ್ನೆಗಳು ಇರುವುದಿಲ್ಲ ಮತ್ತು **ನಾನು** ಬದಲು **ತಾನು** ಬರುತ್ತದೆ. **ಈ ಗೆಲುವಿಗೆ ತಾವೇ ಕಾರಣ ಎಂದು ಮಂತ್ರಿಗಳು ಹೇಳಿದರು**. ಜಿ.ಪಿ.ರಾಜರತ್ನಂ ಅವರ 'ತನಗೇ ತುತ್ತೂರಿ ಇದೆಯೆಂದ' ಎಂಬ ಸಾಲನ್ನು ನೆನಪಿಸಿಕೊಳ್ಳಿ. ಅಲ್ಲಿ ನನಗೆ ಎಂದು ಬರಬಹುದೇ?

**ಮಿನಿ**

ಎಂ.ಆರ್. ಮಹೇಶ್ವರಮೂರ್ತಿ (ಮಗ್ಗೆ,ಹಾಸನ ಜಿಲ್ಲೆ) ಇವರು 'ಮಿನಿ ವಿಧಾನ ಸೌಧ' ಎಂಬ ಪದರಚನೆಯಲ್ಲಿ 'ಮಿನಿ' ಎಂಬ ಪದದ ತಿರುಳೇನು; ಅದಕ್ಕೆ ಕನ್ನಡ ರೂಪ ಇಲ್ಲವೇ ಎಂದು ಕೇಳಿದ್ದಾರೆ. ಮೂರು ದಶಕಗಳ ಹಿಂದೆ ಹೆಂಗಸರ ಉಡುಪುಗಳ ಉದ್ದವನ್ನು ಹೇಳಲು ಮಿನಿ, ಮಿಡಿ ಮತ್ತು ಮ್ಯಾಕ್ಸಿ ಎಂಬ ಪದಗಳನ್ನು ಕನ್ನಡದಲ್ಲಿ ಬಳಸತೊಡಗಿದರು. ಇವು ಇಂಗ್ಲಿಶಿನ ಮಿನಿಮಮ್, ಮೀಡಿಯಮ್ ಮತ್ತು ಮ್ಯಾಕ್ಸಿಮಮ್ ಎಂಬ ಪದಗಳ ಚಿಕ್ಕ ರೂಪಗಳಾಗಿವೆ. ಇವುಗಳಲ್ಲಿ ಮಿಡಿ ಈಗ ಕನ್ನಡದಿಂದ ಮರೆಯಾದಂತಿದೆ. ಮ್ಯಾಕ್ಸಿ ಎಂಬುದು ವಾಹನಗಳ ಮಟ್ಟಿಗೆ (ಮ್ಯಾಕ್ಸಿ ಕ್ಯಾಬ್) ಉಳಿದಿದೆ. ಮಿನಿ ಎಂಬುದು ಚಿಕ್ಕ ಎನ್ನುವ ತಿರುಳಿನಲ್ಲಿ ಅಲ್ಲಲ್ಲಿ ಬಳಕೆಯಲ್ಲಿದೆ. ಮಿನಿ ವಿಧಾನ ಸೌಧ ಎಂದರೆ ವಿಧಾನ ಸೌಧದಂತೇ ಇದ್ದರೂ ಅದರಷ್ಟು ದೊಡ್ಡದಲ್ಲದ ಕಟ್ಟಡ ಎಂದು ತಿಳಿಯಬೇಕು. ಮೊದಲು ಉದ್ದವನ್ನು ಹೇಳಲು ಬಳಕೆಯಾಗುತ್ತಿದ್ದ ಪದವೀಗ ಗಾತ್ರವನ್ನು ಹೇಳುತ್ತಿದೆ. ಮಿನಿ ಬದಲು ಕೆಲವರು ಪುಟ್ಟ, ಪುಟಾಣಿ, ಕಿರಿ ಎಂಬೆಲ್ಲ ಪದಗಳನ್ನು ಬಳಸಿದರೂ ಪತ್ರಿಕೆಗಳವರಿಗೆ ಮಿನಿಯೇ ಪ್ರಿಯವಾಗಿದೆ.

**ಅನುಸ್ವಾರ, ವಿಸರ್ಗ**

ತಿರುಮಲೆ ಪಾರ್ಥಸಾರಥಿ (ಬೆಂಗಳೂರು) ಅವರು ಕನ್ನಡ ವರ್ಣಮಾಲೆಯಲ್ಲಿ ಸ್ವರಗಳ ಪಟ್ಟಿಗೆ ಸೇರ್ಪಡೆಯಾಗಿರುವ ಅನುಸ್ವಾರ ಮತ್ತು ವಿಸರ್ಗಗಳ ಬಗೆಗೆ ಒಂದು ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಅನುಸ್ವಾರವೆಂಬ ಸ್ವರಕ್ಕೆ ಗುರುತಾಗಿ ಸೊನ್ನೆಯನ್ನು ಬರೆಯುತ್ತೇವೆ. ಆದರೆ ಕನ್ನಡದಲ್ಲಿ ಸೊನ್ನೆ ಎಂಬ ಗುರುತಿಗೆ ವ್ಯಂಜನದ ಉಚ್ಚಾರವೂ ಇದೆ. ವರ್ಗೀಯ ವ್ಯಂಜನಗಳ ಹಿಂದೆ ಬರುವ ಅನುನಾಸಿಕಗಳನ್ನು ಬರವಣಿಗೆಯಲ್ಲಿ ಸೊನ್ನೆಯ ಮೂಲಕ ಸೂಚಿಸುತ್ತೇವಷ್ಟೆ. ಉದಾ.ಅಂಗಿ, ಗಂಜಿ, ಕಂತೆ, ದಂಡು, ಕಂಬ ಮುಂತಾದ ಪದಗಳಲ್ಲಿ ಸೊನ್ನೆಗೆ ವ್ಯಂಜನದ ಉಚ್ಚಾರವೇ ಇದೆ. ಅನುಸ್ವಾರವನ್ನು ಸ್ವರ ಎಂದು ಕರೆಯುವುದಕ್ಕೆ ಸಂಸ್ಕೃತ ಭಾಷಾ ರಚನೆಯಲ್ಲಿ ಕಾರಣಗಳಿವೆ. ವೈದಿಕ ಮತ್ತು ಲೌಕಿಕ ಸಂಸ್ಕೃತಗಳಲ್ಲಿ ಈ ಅನುಸ್ವಾರದ ಬಳಕೆ ಹೇಗೆ ಆಗಿದೆ ಎನ್ನುವುದು ಆ ಭಾಷೆಯ ಮಟ್ಟಿಗೆ ಮುಖ್ಯ. ಆದರೆ ಕನ್ನಡದಲ್ಲಿ ಅದರ ಬಳಕೆ ಹೇಗೆ ಆಗುತ್ತಿದೆ ಎನ್ನುವುದನ್ನು ನೋಡಬೇಕು. ಕನ್ನಡ ಮಾತಾಡುವ ಕೆಲವು ಪ್ರದೇಶಗಳಲ್ಲಿ ಅವರ್ಗೀಯ ವ್ಯಂಜನಗಳ ಹಿಂದೆ ಬರವಣಿಗೆಯಲ್ಲಿ ಸೂಚಿತವಾಗುವ ಸೊನ್ನೆಯನ್ನು ಮಕಾರವಾಗಿ ನುಡಿದರೆ ಮತ್ತೆ ಕೆಲವು ಪ್ರದೇಶಗಳಲ್ಲಿ ಅನುನಾಸಿಕೀಕರಣಗೊಂಡ ಸ್ವರವನ್ನಾಗಿ ನುಡಿಯುತ್ತಾರೆ. ಸಂಯಮ, ಅಂಶ, ಕಂಸ, ಸಿಂಹ, ಸಂವಹನ ಮುಂತಾದ ಪದಗಳನ್ನು ಕನ್ನಡಿಗರು ಬೇರೆ ಬೇರೆ ಕಡೆಗಳಲ್ಲಿ ನುಡಿಯುವ ಬಗೆಯಲ್ಲಿ ಇರುವ ವ್ಯತ್ಯಾಸವನ್ನು ನೋಡಬಹುದು. ಹೀಗೆ ನುಡಿಯುವಿಕೆಯಲ್ಲಿ ಬದಲಾವಣೆ ಇರುವ ಪದಗಳೆಲ್ಲ ಸಂಸ್ಕೃತದಿಂದ ಬಂದು ಕನ್ನಡದಲ್ಲಿ ನೆಲೆಗೊಂಡಿರುವ ಪದಗಳು. ಇದಲ್ಲದೆ ಇನ್ನೂ ಒಂದು ಸಂಗತಿ ಇದೆ. ಹಳಗನ್ನಡದಲ್ಲಿ ಬಳಕೆಯಲ್ಲಿದ್ದ ಕೆಲವು ಪದಗಳ ಸ್ವರಗಳ ನಡುವಿನ ಮಕಾರವು ವಕಾರವಾಗಿ ಬದಲಾಗಿದೆ. ಈ ವಕಾರವನ್ನುಳ್ಳ ಪದವನ್ನು ನುಡಿಯುವಾಗ ಕನ್ನಡ ಮಾತಾಡುವ ಕೆಲವು ಕಡೆಗಳಲ್ಲಿ ಹಿಂದಿನ ಸ್ವರವನ್ನು ಅನುನಾಸಿಕೀಕರಣಗೊಳಿಸಿ ನುಡಿಯುತ್ತಾರೆ. ಹಾವು (ಪಾಂಬು>ಪಾಮು) ಪದವನ್ನು ಹಾಂವು ಎಂದು ಹೇಳುವುದನ್ನು ಕೇಳಿದ್ದೇವಷ್ಟೆ. ಇಂತಹ ಇನ್ನೂ ಕೆಲವು ಪದಗಳು ಬಳಕೆಯಲ್ಲಿವೆ. ಕನ್ನಡ ಭಾಷೆಯ ರಚನೆಯನ್ನೇ ಗಮನಿಸಿದರೆ ಮತ್ತು ಕನ್ನಡಿಗರು ಈಗ ನುಡಿಯುತ್ತಿರುವ ಬಗೆಯನ್ನು ನೋಡಿದರೆ ಅನುಸ್ವಾರವನ್ನು ಕನ್ನಡದ ಸ್ವರಗಳ ಪಟ್ಟಿಯಲ್ಲಿ ಸೇರಿಸಲು ಸಮರ್ಥನೆಗಳು ಸಾಲದು. ಇನ್ನೂ ವಿಸರ್ಗದ್ದು ದೊಡ್ಡ ಕತೆ ಇದೆ. ಈಗ ಅದು ಬೇಡ.

**ಅಸ್ಪೃಶ್ಯ/ ಅಸ್ಪರ್ಶ, ಸೃಜನಶೀಲ/ಸರ್ಜನಶೀಲ**

ಕುಪ್ಪೇರಾವ್ ಬಪ್ಪೂರು (ಹಂಪಿ) ಇವರು **ಅಸ್ಪೃಶ್ಯ/ ಅಸ್ಪರ್ಶ, ಸೃಜನಶೀಲ/ ಸರ್ಜನಶೀಲ** ಈ ಜೋಡಿಗಳಲಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಈ ಜೋಡಿಗೆ **ಮೌಲ್ಯ/ಮೂಲ್ಯ** ಎಂಬುದನ್ನೂ ಸೇರಿಸಬಹುದು. ಈ ಪ್ರಶ್ನೆಗೆ ಉತ್ತರವಿಷ್ಟೆ. ಇವೆಲ್ಲ ಸಂಸ್ಕೃತ ನುಡಿಯಿಂದ ಕನ್ನಡಕ್ಕೆ ಬಂದಿರುವ ಪದಗಳು. ಇವುಗಳನ್ನು ಸಂಸ್ಕೃತ ಭಾಷೆಯ ಕಟ್ಟುಗಳ ಮೂಲಕ ನೋಡಿದರೆ ಕನ್ನಡಿಗರು ಅಸ್ಪೃಶ್ಯ, ಸೃಜನಶೀಲ ಮತ್ತು ಮೌಲ್ಯ ಎಂಬ ತಪ್ಪು ರೂಪಗಳನ್ನು ಲಾಗಾಯ್ತಿನಿಂದಲೂ ಬಳಸುತ್ತ ಬಂದಿದ್ದಾರೆ

ಎಂದು ಹೇಳಬೇಕಾಗುತ್ತದೆ. ಇಂತಹ ತಪ್ಪುಗಳು ಒಬ್ಬಿಬ್ಬರು ಮಾಡಿರುವುದಲ್ಲ. ಬಳಕೆಯಿಂದ ನೆಲೆಗೊಂಡ ರೂಪಗಳಿವು. ಇವುಗಳನ್ನು ಒಂದು ರೀತಿಯ ತದ್ಭವಗಳು ಎನ್ನೋಣವೇ? ಹಾಗಾಗಿ ಕನ್ನಡದಲ್ಲಿ ಈಗ ಬಳಕೆಯಲ್ಲಿರುವ ರೂಪಗಳನ್ನು 'ಸರಿಯಾದ' ಸಂಸ್ಕೃತ ರೂಪಗಳಿಂದ ತಿದ್ದಲು ಹೋಗುವುದು ಸರಿಯಲ್ಲ. ಈ ಹಾದಿಯನ್ನು ಹಿಡಿದರೆ ಬೇರೆಬೇರೆ ನುಡಿಗಳಿಂದ ಕನ್ನಡಕ್ಕೆ ಬಂದು 'ತಪ್ಪಾಗಿ' ಬರಹ ರೂಪಗಳಲ್ಲಿ ನೆಲೆಗೊಂಡಿರುವ ನೂರಾರು ರೂಪಗಳನ್ನು ತಿದ್ದುವ ಹೊಣೆ ಹೊರಬೇಕಾಗಬಹುದು.

**ಒಡನೆ**

**ವರೆಗೆ** ಮತ್ತು **ತನಕ** ಎಂಬ ಪದರೂಪಗಳನ್ನು ಕುರಿತು ಟಿಪ್ಪಣಿಯೊಂದನ್ನು ಬರೆದಿದ್ದೆ. ಕನ್ನಡದಲ್ಲಿ ಹೀಗೆ ಎಷ್ಟೋ ಪದಗಳು ಕಾಲ ಮತ್ತು ದೇಶಗಳೆರಡದನ್ನು ಒಟ್ಟಿಗೆ ಹೇಳುತ್ತಿರುತ್ತವೆ. ಈಗ ಅಂತಹ ಒಂದು ಪದವನ್ನು ನೋಡೋಣ. **ಒಡನೆ** ಎಂಬುದು ಅಂತಹ ಒಂದು ಪದ. ಒಡನಾಡು, ಒಡನಾಡಿ, ಒಡಹುಟ್ಟು ಮುಂತಾದ ಪದಳಗಲ್ಲಿರುವ ಒಡ ಎನ್ನುವ ರೂಪದಿಂದ ಒಡನೆ ಎಂಬ ಪದರೂಪ ಸಿದ್ಧವಾಗಿದೆ. **ಒಡನೆ** ಎಂದರೆ **ಕೂಡಲೇ** ಎಂದೂ ಆಗುತ್ತದೆ; **ಜೊತೆಯಲ್ಲಿ** ಎಂದೂ ಆಗುತ್ತದೆ. **ಕೇಳಿದೊಡನೆ ಕೈಯೆತ್ತಿ ಕೊಟ್ಟುಬಿಟ್ಟರು** ಎಂಬ ವಾಕ್ಯದಲ್ಲಿ ಮೊದಲ ಅರ್ಥವಿದ್ದರೆ **ತಂದೆಯೊಡನೆ ಊರಿಗೆ ಹೋದರು** ಎಂಬ ವಾಕ್ಯದಲ್ಲಿ ಎರಡನೆಯ ಅರ್ಥವೂ ಇದೆ. ಈ ಎರಡೂ ತಿರುಳುಗಳಲ್ಲಿ ಬಳಕೆಯಾಗುವಾಗ ಕನ್ನಡಿಗರು ಒಂದು ಕಟ್ಟನ್ನು ಪಾಲಿಸುತ್ತಿರುವಂತಿದೆ. ಒಡನೆ ಎಂಬುದು ಕ್ರಿಯಾರೂಪದ ಬಳಿಕ ಬಂದಾಗ (ಉದಾ. ಕೇಳಿದೊಡನೆ, ನೋಡಿದೊಡನೆ, ಬಂದೊಡನೆ, ತಿಂದೊಡನೆ ಮುಂ) ಕೂಡಲೇ ಎಂದೂ, ನಾಮಪದದ ಬಳಿಕ ಬಂದಾಗ (ಉದಾ. ಅಣ್ಣನೊಡನೆ, ಗೆಳೆಯರೊಡನೆ, ಕುರಿಯೊಡನೆ ಮುಂ) ಜೊತೆಯಲ್ಲಿ ಎಂದೂ ತಿಳಿಯುತ್ತೇವೆ. ಹಾಗಾಗಿ ಗೊಂದಲಕ್ಕೆ ಕಾರಣಗಳಿದ್ದಂತಿಲ್ಲ.

**ಕೆಲಸಕಾರ್ಯ**

ಮೊಳಕಾಲ್ಮೂರು ಸುರೇಶ್ (ಬಳ್ಳಾರಿ) ಇವರು ಮಾತಿನ ವರಸೆಯಲ್ಲಿ 'ಕೆಲಸಕಾರ್ಯ' ಎಂದು ಒಂದೇ ತಿರುಳುಳ್ಳ ಪದಗಳನ್ನು ಒಟ್ಟಿಗೆ ಹೇಳುವುದೇಕೇ ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಹೀಗೆ ಬಳಸುವ ಜೋಡಿಪದಗಳಲ್ಲಿ ಎರಡಕ್ಕೂ ಒಂದೇ ತಿರುಳಿರುವ ಬಗೆ ಒಂದು; ಎರಡನೆಯ ಪದಕ್ಕೆ ಇಂತಹುದೇ ತಿರುಳಿದೆ ಎಂದು ಗುರುತಿಸಲಾಗದ ಜೋಡಿಪದಗಳ ಬಗೆ ಇನ್ನೊಂದು. (ಉದಾ: ಮನೆಮಾರು, ಸಾಲಸೋಲ ಮುಂತಾದವು) ಹೀಗೆ ರೂಢಿಯಲ್ಲಿರುವ ಜೋಡಿಪದಗಳಲ್ಲಿ ಕನ್ನಡದ ಪದಗಳು ಮಾತ್ರ ಇರಬೇಕೆಂದಿಲ್ಲ. ದಯಾದಾಕ್ಷಿಣ್ಯ, ಮುಖಮೋರೆ ಮುಂತಾದ ಜೋಡಿಪದಗಳನ್ನು ನೋಡಿ. ಅಲ್ಲಿ ಕನ್ನಡ ಪದಗಳು ಮಾತ್ರವಲ್ಲ; ಸಂಸ್ಕೃತ ಪದಗಳೂ ಇವೆ. ಹೀಗೆ ಸುಮಾರಾಗಿ ಒಂದೇ ತಿರುಳುಳ್ಳ ಎರಡು ಪದಗಳನ್ನು ಜೋಡಿಯಾಗಿ ಬಳಸುವುದು ದಕ್ಷಿಣ ಏಸಿಯಾದ ಭಾಷೆಗಳ ಒಂದು ಚಹರೆ ಎಂದು ಹೇಳಲಾಗಿದೆ. ಕೆಲಸಕಾರ್ಯ ಎಂಬುದನ್ನೆ ಹಿಂದಿ ನುಡಿಯಲ್ಲಿ ಕಾಮ್‌ಕಾಜ್ ಎನ್ನುವರಷ್ಟೆ. (ಕಾಮ್<ಕರ್ಮ,ಕಾಜ್>ಕಾರ್ಯ. ಕಾಜ್ ಎಂಬುದೇ ಕನ್ನಡದಲ್ಲಿ ಕಜ್ಜ ಎಂದಾಗಿ ಹಿಂದೆ ಬಳಕೆಯಲ್ಲಿತ್ತು.) ಎರಡು ನಾಮಪದಗಳನ್ನು

ಒಟ್ಟಾಗಿ ಇರಿಸಿದರೂ ಒಟ್ಟು ಪದ ಮಾತ್ರ ಒಂದೇ ನಾಮಪದವೆಂಬಂತೆ ಏಕವಚನ ರೂಪದಲ್ಲಿ ಇರುತ್ತದೆ. ಇಂತಹ ಪದಗಳು ಏಕೆ ಬಳಕೆಯಾಗುತ್ತವೆ ಎಂಬ ಪ್ರಶ್ನೆಗೆ ಉತ್ತರ ನೀಡುವುದಕ್ಕೆ ಆಗುವುದಿಲ್ಲ. ಆದರೆ ಮಾತಿನ ವರಸೆಯಲ್ಲಿ ಇಂತಹ ಜೋಡಿ ಪದಗಳನ್ನು ಬಳಸಿದಾಗ ಅದರ ಮೊದಲ ಪದವನ್ನು ಮಾತ್ರ ಬಳಸಿದ್ದಕ್ಕಿಂತ ಪರಿಣಾಮ ಬೇರೆಯೇ ಆಗಿರುತ್ತದೆ ಎಂಬುದಂತೂ ದಿಟ. **ಈ ಹೊತ್ತಿನಲ್ಲಿ ಜನರು ಕೆಲಸದಲ್ಲಿ ತೊಡಗಿಕೊಂಡಿರುತ್ತಾರೆ/ ಈ ಹೊತ್ತಿನಲ್ಲಿ ಜನರು ಕೆಲಸಕಾರ್ಯಗಳಲ್ಲಿ ತೊಡಗಿಕೊಂಡಿರುತ್ತಾರೆ** ಈ ಎರಡೂ ವಾಕ್ಯಗಳನ್ನು ಓದಿದರೆ ಮೇಲೆ ಹೇಳಿದ ಸಂಗತಿ ಗೊತ್ತಾಗುವಂತಿದೆ. ಬರೆಯುವಾಗ ಜೋಡಿಪದಗಳ ನಡುವೆ ಕೊಂಚ ಜಾಗ ಬಿಟ್ಟು ಇಲ್ಲವೇ ಚಿಕ್ಕ ಗೆರೆಯೆಳೆದು (ಕೆಲಸ ಕಾರ್ಯ, ಕೆಲಸ-ಕಾರ್ಯ) ಬರೆಯುವುದುಂಟು. ಆದರೆ ಜಾಗಬಿಡದೆ ಒಂದೇ ಪದವೆಂಬಂತೆ ಬರೆಯುವುದೇ ಸರಿ.

### ಅಲ್ಲದೆ

ಕನ್ನಡ ಬರವಣಿಗೆಯಲ್ಲಿ ಬಳಕೆಯಾಗುವ **ಅಲ್ಲದೆ** ಎಂಬ ಪದರೂಪವನ್ನು ಕುರಿತ ಟಿಪ್ಪಣಿ. ಆ ಸಭೆಯಲ್ಲಿ ಆಡಳಿತ ಪಕ್ಷದವರಲ್ಲದೆ ವಿರೋಧ ಪಕ್ಷದ ಸದಸ್ಯರೂ ಭಾಗವಹಿಸುತ್ತಾರೆ. ಈ ವಾಕ್ಯದಲ್ಲಿ ಅಲ್ಲದೆ ಎಂಬ ಪದರೂಪಕ್ಕೆ ಜೊತೆಗೆ ಎನ್ನುವ ಅರ್ಥವಿದೆ. ಆದರೆ ಈ ವಾಕ್ಯವನ್ನು ನೋಡಿ. ಈ ನೆಲದಲ್ಲಿ ರಾಗಿಯಲ್ಲದೆ ಮತ್ತೇನೂ ಬೆಳೆಯುವುದಿಲ್ಲ. ಇಲ್ಲಿ ಅಲ್ಲದೆ ಪದರೂಪಕ್ಕೆ ಜೊತೆಗೆ ಎನ್ನುವ ಅರ್ಥ ಬರುವುದಿಲ್ಲ. ರಾಗಿ ಮಾತ್ರ ಬೆಳೆಯುತ್ತದೆ; ಬೇರೇನೂ ಬೆಳೆಯುವುದಿಲ್ಲ ಎಂಬ ಎರಡು ಸರಳ ವಾಕ್ಯಗಳ ಅರ್ಥವನ್ನು ಒಟ್ಟಾಗಿ ಹೇಳುವ ವಾಕ್ಯವಿದು.( ನಡುಗನ್ನಡದಲ್ಲಿ ಅಲ್ಲದ ಎಂಬ ರೂಪವೊಂದು ಬಳಕೆಯಲ್ಲಿತ್ತು. ಉದಾ. **ಒಳ್ಳೆಯವರಲ್ಲದ ಜನರು ಈ ಊರಿನಲ್ಲಿಲ್ಲ.** ಆದರೆ ಇಂದಿನ ಕನ್ನಡದಲ್ಲಿ ಈ ಬಗೆಯ ಬಳಕೆ ಬೇಕಾದಾಗ ಅಲ್ಲದ ಬದಲಿಗೆ ಅಲ್ಲದೆ ಎಂಬ ಪದರೂಪವನ್ನು ನಾವು ಬಳಸುತ್ತಿರುವಂತಿದೆ. ಇನ್ನೂ ಒಂದು ಬಗೆಯಲ್ಲಿ ಅಲ್ಲದೆ ಎಂಬ ಪದರೂಪವನ್ನು ಬಳಸುತ್ತೇವೆ. ವಾಕ್ಯದ ಮೊದಲಲ್ಲಿ ಅಲ್ಲದೆ ಬಂದಾಗ ಅದು ಹಿಂದಿನ ವಾಕ್ಯದ ಯಾವುದೋ ಒಂದು ಅರ್ಥದ ಮುಂದುವರಿಕೆಯಾಗಿರ ಬೇಕೆಂಬ ಕಟ್ಟು ಇಲ್ಲ. ಇದು ಮಾತಿನ ಒಂದು ವರಸೆಯಾಗಿಯೂ ಇದು ಬಳಕೆಯಾಗಬಹುದು. ಅಲ್ಲದೆ ನನಗೆ ಈಗ ತುಂಬ ಕೆಲಸವಿದೆ ಎಂದಾಗ ಅಲ್ಲದೆ ಎನ್ನುವುದನ್ನು ಬಳಸಿರುವುದಕ್ಕೆ ಕಾರಣಗಳಿರುವಂತೆ ತೋರುವುದಿಲ್ಲ. ಈ ಪದರೂಪದ ಬಳಕೆಯ ಜೊತೆಗೆ ಇಲ್ಲದೆ (ಹಾಗೂ ಇಲ್ಲದ) ಪದಗಳ ಬಳಕೆಯನ್ನು ಕುರಿತು ಕೂಡ ಗಮನಿಸಬಹುದಾಗಿದೆ.

### ಕಾಳ್ಗಿಚ್ಚು

ಚಂದ್ರಕಾಂತ (ಹೊಸಪೇಟೆ) ಇವ್ರು ಕಾಳ್ಗಿಚ್ಚು(=ಕಾಡಿನ ಬೆಂಕಿ) ಎಂಬ ರೂಪವನ್ನು ಕುರಿತು ಕೇಳಿದ್ದಾರೆ. ಇದಕ್ಕೆ ಅವರ ಶಾಲೆಯ ಅಧ್ಯಾಪಕರಿಂದಲೇ ಉತ್ತರ ಪಡೆಯಬಹುದು. ಆದರೂ ಈ ರೂಪದಲ್ಲಿ ಕಾಳ್ ಮತ್ತು ಕಿಚ್ಚು ಎಂಬ ರೂಪಗಳು ಸೇರಿದಾಗ ಗಕಾರಾದೇಶವಾಗಿದೆ ಎಂಬ ವಿವರಣೆಯ ಜೊತೆಗೆ ಕಾಳ್ ಎಂಬ ರೂಪವೇ ವಿವರಣೆಗೆ

ತಕ್ಕುದಾಗಿದೆ. ಕಾಡು ಎಂದು ನಾವು ಈಗ ಬಳಸುತ್ತಿರುವ ಪದದ ಹಳೆಯ ರೂಪವಿದು. ಕಾಳ್ಕೋಣ ಎಂಬ ಪದವೂ ಬಳಕೆಯಲ್ಲಿದೆ.(ಕಾಳ್+ಕೋಣ). ಆದರೆ ಹೊಸಗನ್ನಡದಲ್ಲಿ ಕಾಡು ಎಂಬ ರೂಪವಷ್ಟೆ ಬಳಕೆಯಲ್ಲಿದೆ. ಈಚೆಗೆ ಕಾಳ್ಗಿಚ್ಚು ಬದಲಿಗೆ ಕಾಡ್ಗಿಚ್ಚು ರೂಪವನ್ನೆ ಹೆಚ್ಚಾಗಿ ಬಳಸುತ್ತಿದ್ದೇವೆ.

**ದಂದಣ ದತ್ತಣ**

ಮಹಲಿಂಗಪ್ಪ.ಜೆ (ಚಿತ್ರದುರ್ಗ) ಇವರು ದಂದಣ ದತ್ತಣ ಎಂಬ ರಚನೆಯ ಬಗೆಗೆ ಕೇಳಿದ್ದಾರೆ. ಈಗ ಈ ರಚನೆ ಜನಬಳಕೆಯಲ್ಲಿ ಇದ್ದ ಹಾಗಿಲ್ಲ. ಹಿಂದೆಯೂ ಇದರ ಬಳಕೆ ಸೀಮಿತವಾಗಿ ಆಗಿದೆಯೆಂದು ಕಾಣುತ್ತದೆ. ನಿಘಂಟುಗಳು ಒಂದೆರಡು ಪ್ರಯೋಗಗಳನ್ನು ಮಾತ್ರ ನೀಡುತ್ತವೆ. ಬಸವಣ್ಣನವರ ವಚನವೊಂದರಲ್ಲಿ ಈ ರೂಪಬಳಕೆಯಾಗಿದೆ. ಆ ವಚನದಲ್ಲಿ ಇಂದು ನಾವು ಬಳಸುವ 'ದಮ್ಮಯ್ಯದತ್ತಯ್ಯ'ಎಂಬ ರಚನೆಯ ತಿರುಳನ್ನೇ ದಂದಣ ದತ್ತಣ ಎಂಬ ಈ ರಚನೆ ಕೂಡ ಹೊಂದಿದಂತಿದೆ. ದತ್ತಣ ಎಂಬುದು ಬೇರೆಯಾಗಿ ಬಳಕೆಯಾಗುವ ಪದವಲ್ಲ. ಅದು ಜೋಡಿಪದಗಳಲ್ಲಿ ಬಳಕೆಯಾಗುವ ಎರಡನೆಯ ಪದದಂತಿದೆ. ಉದಾ. ಕೂಲಿನಾಲಿ, ಸಾಲಸೋಲ ಈ ರಚನೆಗಳಲ್ಲಿರುವ ನಾಲಿ, ಸೋಲ ಮಾದರಿಯ ಪದಗಳ ಹಾಗೆ ದತ್ತಣವೂ ಕೂಡ. ದಂದಣ ಎಂಬುದಕ್ಕೂ ದಣದಣ ಎಂಬ ಅನುಕರಣವಾಚಿಗೂ ನಂಟು ಕೂಡಿಸಿರುವುದುಂಟು. ಆದರೆ ದಂದಣ ದತ್ತಣ ಎಂಬುದು ಬಳಕೆಯಾಗಿರುವ ಸಂದರ್ಭವನ್ನು ನೋಡಿದರೆ ಇಲ್ಲಿ ಈ ಅನುಕರಣವಾಚಿ ತಿರುಳು ಸರಿಹೊಂದುವಂತೆ ತೋರದು.

**ಇದ್ದಕ್ಕಿದ್ದ ಹಾಗೆ, ಇದ್ದಕ್ಕಿದ್ದಂತೆ, ಇದ್ದಕಿದ್ದೊಲೆ**

ಇದ್ದಕ್ಕಿದ್ದ ಹಾಗೆ, ಇದ್ದಕ್ಕಿದ್ದಂತೆ, ಇದ್ದಕಿದ್ದೊಲೆ ಈ ರಚನೆಗಳ ತಿರುಳು ಏನು? ಈ ರಚನೆಗಳ ಹಿಂದಿರುವ ಕಟ್ಟುಗಳನ್ನು ಈಗ ಗುರುತಿಸುವುದೂ ಆಗುತ್ತಿಲ್ಲ. ಅಲ್ಲದೆ ಇವುಗಳನ್ನು ಬರೆಯುವಾಗ ಇದ್ದಕಿದ್ದ ಹಾಗೆ, ಇದ್ದಕಿದ್ದಂತೆ ಎಂದೂ ಬರೆಯುವುಂಟು. (ಕ ಒತ್ತಕ್ಷರವಿಲ್ಲ) ಈ ರಚನೆಗಳಲ್ಲಿ ಇರ್ ಎಂಬ ಕ್ರಿಯಾ ಧಾತು ಎರಡಕ್ಕೂ ಹೆಚ್ಚು ಬಾರಿ ಬಳಕೆಯಾಗಿರುವುದಂತೂ ದಿಟ. **(ಇದ್ದಕ್ಕೆ?, ಇದ್ದ ಮತ್ತು ಇದ್ದ ಹಾಗೆ)** ಈ ರಚನೆಗಳು ಎಷ್ಟು ಹಿಂದಿನಿಂದ ಬಳಕೆಯಾಗುತ್ತಿದ್ದವೋ ತಿಳಿಯದು. ಕಿಟೆಲ್ ತಮ್ಮ ನಿಘಂಟಿನಲ್ಲಿ ಇದ್ದಕ್ಕಿದ್ದ ಹಾಗೆ ಎಂಬುದು ಜನರ ಮಾತಿನಲ್ಲಿ ಬಳಕೆಯಾಗಿದೆ ಎಂದು ಹೇಳುತ್ತಾರೆ. ಅಲ್ಲದೆ ಬರವಣಿಗೆಯಲ್ಲಿ ಮುಂಬಯಿ ಪ್ರಾಂತ್ಯದ ಶಾಲಾ ಪುಸ್ತಕಗಳಲ್ಲಿ ಬಳಕೆಯಾಗಿದೆಯೆಂದು ಹೇಳಿದ್ದಾರೆ. ಇದ್ದಕ್ಕಿದ್ದ ಹಾಗೆ ಎಂಬುದಕ್ಕೆ ಇರುವಂತೆಯೇ, ಯಥಾವತ್ತಾಗಿ, ತದ್ವತ್ತಾಗಿ ಎಂಬ ತಿರುಳುಗಳನ್ನು ಕಿಟೆಲ್ ಅವರು ಗುರುತಿಸುತ್ತಾರೆ. ಈಗ ಬಳಕೆಯಲ್ಲಿರುವಂತೆ ಈ ರಚನೆಗಳಿಗೆ ತಟಕ್ಕನೆ, ಗೊತ್ತಾಗದಂತೆ. ಅಂದುಕೊಳ್ಳದಿದ್ದಾಗ ಎಂಬ ತಿರುಳು ಇದೆ. 1.ನಡು ಹಗಲಲ್ಲಿ ಇದ್ದಕಿದ್ದ ಹಾಗೆ ಮೋಡ ಕವಿದು ಮಳೆ ಸುರಿಯಿತು. 2. ನೀನು ಇದ್ದಕ್ಕಿದ್ದ ಹಾಗೆ ಬಂದು ಕೇಳಿದರೆ ಅಷ್ಟು ಹಣ ನಾನು ಎಲ್ಲಿ ತರಲಿ? 3. ರಾತ್ರಿ ಇದ್ದಕಿದ್ದ ಹಾಗೆ ಎದೆ ನೋವು ಕಾಣಿಸಿಕೊಂಡಿತು. ಈ ವಾಕ್ಯಗಳಲ್ಲಿ

ಎಲ್ಲಿಯೂ 'ಇರುವಂತೆಯೇ, ಯಥಾವತ್ತಾಗಿ' ಎಂಬ ತಿರುಳಿನಲ್ಲಿ ಇದ್ದಕಿದ್ದ ಹಾಗೆ ಬಳಕೆಯಾಗಿಲ್ಲ. ಹಾಗೆ ನೋಡಿದರೆ ಇಂದಿನ ಕನ್ನಡದಲ್ಲಿ 'ಇದ್ದ ಹಾಗೆ, ಇದ್ದುದನ್ನು ಇದ್ದ ಹಾಗೆ' ಮುಂತಾದ ರಚನೆಗಳ ನೆರವಿನಿಂದ ಯಥಾವತ್ತಾಗಿ ಎಂಬ ತಿರುಳನ್ನು ಹೇಳುತ್ತಿದ್ದೇವೆ. ಅಂದರೆ ನೂರು ವರುಷಗಳ ಅವಧಿಯಲ್ಲಿ ಇದ್ದಕ್ಕಿದ್ದ ಹಾಗೆ ಎಂಬ ರಚನೆಯ ತಿರುಳಿನಲ್ಲಿ ಎದ್ದು ಕಾಣುವ ಬದಲಾವಣೆಯಾಗಿದೆ ಎಂದಾಯ್ತು.

**ಉಂಟು**

ಬೇಳೂರು ಲಕ್ಷ್ಮೀನಾರಾಯಣ (ಸಾಗರ) ಇವರು **ಉಂಟು** ಎಂಬ ಕ್ರಿಯಾರೂಪದ ಬಳಕೆ ಕುರಿತು ಒಂದು ಪ್ರಶ್ನೆ ಕೇಳಿದ್ದಾರೆ. ಇದು ತುಳುವಿನಿಂದ ಬಂದಿರುವ ರೂಪವಿರಬಹುದೇ ಎಂಬ ಸಂದೇಹವನ್ನೂ ಮುಂದಿಟ್ಟಿದ್ದಾರೆ. **ಉಂಟು** ಕನ್ನಡದ್ದೇ ರೂಪ. ಹಲವೆಡೆ ಹಿಂದಿನಿಂದಲೂ ಬಳಕೆಯಾಗಿರುವ ರೂಪ. 'ಹಸಿವಾದಡೆ ಭಿಕ್ಷಾನ್ನಗಳುಂಟು' ಎಂಬ ಅಕ್ಕನ ವಚನದ ಸಾಲಿನಲ್ಲಿ ಬರುವ 'ಉಂಟು' ಎಂಬ ಕ್ರಿಯಾರೂಪವನ್ನು ಗಮನಿಸಿ. ಇಂದಿನ ಕನ್ನಡದಲ್ಲಿ ಈ ರೂಪವನ್ನು ಬಳಸುವುದು ಕೆಲವು ಪ್ರದೇಶಗಳಿಗೆ ಸೀಮಿತವಾಗಿದೆ. ತುಳು ಮಾತನಾಡುವ ಪ್ರದೇಶದ ಕನ್ನಡದಲ್ಲಿ ಉಂಟು ರೂಪ ಹೆಚ್ಚಾಗಿ ಬಳಕೆಯಾಗುತ್ತಿರುವುದರಿಂದ ಅದು ತುಳುವಿನಿಂದ ಬಂದುದಿರಬೇಕೆಂಬ ಸಂದೇಹ ಮೂಡುವುದು ಸಹಜ.

ಉಂಟು ಬಳಕೆಯಾಗುವ ಕಡೆಗಳಲ್ಲಿಯೂ ಅದು ಆಗಿಹೋದ ಸಂಗತಿಯನ್ನು, ನಡೆದು ಹೋದ ಘಟನೆಯನ್ನು ಸೂಚಿಸಲು ಮಾತ್ರ ಬಳಕೆಯಾಗುತ್ತದೆ. ಅಂದರೆ ಭೂತಕಾಲದಲ್ಲಿ ಬಳಕೆಯಾಗುತ್ತದೆ. ಇದರ ಧಾತು ರೂಪ **ಉಳ್**–. ಇದು ಈಗ ಉಳ್ಳವರು, ಉಳ್ಳಷ್ಟು ಮುಂತಾದ ರೂಪಗಳಲ್ಲಿ ಮಾತ್ರ ಉಳಿದುಕೊಂಡಿದೆ. ಇದನ್ನೀಗ ಬಿಡಿಯಾಗಿ ಕ್ರಿಯಾಪದವಾಗಿ ನಾವು ಬಳಸುತ್ತಿಲ್ಲ. ಹಳಗನ್ನಡದಲ್ಲಿ ಉಳ್– ಕ್ರಿಯಾರೂಪದ ಬಳಕೆ ಸಾಧ್ಯವಿತ್ತು. ಉಳ್–ಗೆ ಸಾಟಿಯಾದ ಕ್ರಿಯಾಧಾತು **ಇರ್**–. ಇರ್– ಈಗ ಹೆಚ್ಚಾಗಿ ಬಳಕೆಯಾಗುತ್ತಿದೆ. **ಇದೆ**(<**ಇರ್**–) ಎಂಬುದು **ಉಂಟು** (<**ಉಳ್**–) ರೂಪದ ಜಾಗವನ್ನು ಪಡೆದುಕೊಂಡಿದೆ. ಆದರೆ ಇದೆ ಎಂಬುದರ ಬಹುವಚನ ರೂಪ ಇವೆ ಎಂದಿದ್ದರೂ ಉಂಟು ರೂಪಕ್ಕೆ ಬಹುವಚನ ರೂಪವಿಲ್ಲ. ಅದು ಎರಡೂ ವಚನಗಳಲ್ಲಿ ಒಂದೇ ರೂಪವನ್ನು ಪಡೆದಿರುತ್ತದೆ. ಮೊದಲು ಹೇಳಿದ ಅಕ್ಕನ ವಚನದ ಸಾಲಿನಲ್ಲಿ ಬಹುವಚನದ ಬಳಕೆ ಇದೆ.

ಇರ್– ಮತ್ತು ಉಳ್– ಈ ಎರಡೂ ಕ್ರಿಯಾರೂಪಗಳ ನಿಷೇಧರೂಪವಾಗಿ ಇಲ್ಲ ಎಂಬುದು ಬಳಕೆಯಾಗುತ್ತಿತ್ತು. ಹಳಗನ್ನಡದಿಂದ ನಡುಗನ್ನಡಕ್ಕೆ ಬದಲಾಗುತ್ತಿದ್ದಾಗ ಈ ಎರಡೂ ಕ್ರಿಯರೂಪಗಳ ನಡುವೆ ಇದ್ದ ಅರ್ಥ ವ್ಯತ್ಯಾಸ ಕಳೆದು ಹೋದದ್ದು ಮಾತ್ರವಲ್ಲದೆ ಇರ್– ಮಂಚೂಣಿಗೆ ಬಂದು ಉಳ್– ಬಳಕೆಯಿಂದ ಹಿಂದೆ ಸರಿದು ಬಿಟ್ಟಿತು. ಉಂಟು ಎಂಬ ಸಿದ್ಧರೂಪದಲ್ಲಿ ಮಾತ್ರ ಪಳಯುಳಿಕೆಯಾಗಿ ಈಗ ಉಳಿದು ಕೊಂಡಿದೆ.

**ಇರ್ ಮತ್ತು ಉಳ್** ಎಂಬ ಎರಡು ಕ್ರಿಯಾ ಧಾತುಗಳು ಕನ್ನಡದಲ್ಲಿವೆ. ಇವೆರಡರ ನಿಷೇಧ ರೂಪ ಮಾತ್ರ ಒಂದೆ. ಅದು 'ಇಲ್ಲ'. ಇರ್ ನಿಂದ ರೂಪುಗೊಂಡ 'ಇದೆ'

(ಇದಕ್ಕೆ ಅದೆ, ಐತೆ, ಅದ ಎಂಬ ನುಡಿಯುವ ರೂಪಗಳೂ ಇವೆ.) ಬದಲಿಗೆ 'ಉಳ್' ನಿಂದ ರೂಪುಗೊಂಡ 'ಉಂಟು' ಎಂಬ ರೂಪ ಕನ್ನಡ ಮಾತಾಡುವ ಕೆಲವು ಕಡೆಗಳಲ್ಲಿ ಬಳಕೆಯಾಗಿದೆ. 'ಇದೆ' ಎಂಬುದು ನಪುಂಸಕ ಲಿಂಗ ಮತ್ತು ಏಕವಚನದಲ್ಲಿ ಮಾತ್ರ ಬಳಕೆಯಾಗುವುದಾದರೆ 'ಉಂಟು' ಎಂಬುದನ್ನು ಎಲ್ಲ ಲಿಂಗಗಳಲ್ಲಿ ಮತ್ತು ಎಲ್ಲ ವಚನಗಳಲ್ಲಿ ಬಳಸಬಹುದು. ಹಾಗೆ ನೋಡಿದರೆ 'ಉಂಟು' ಎಂಬುದಕ್ಕೆ 'ಇದೆ' ಪದಕ್ಕಿಂತ ಹೆಚ್ಚು ಬಳಕೆ ಇದೆ. ಅಂದರೆ 'ಉಂಟು' ಎಂಬುದನ್ನು ಬಳಸುವ ಎಷ್ಟೋ ಕಡೆಗಳಲ್ಲಿ 'ಇದೆ' ಎಂಬುದನ್ನು ಬಳಸುವುದು ಆಗದು. ಉದಾ.ಗೆ ಪ್ರವಾಹದಿಂದ ಉಂಟಾದ ಹಾನಿ, ಅವರ ಮಾತುಗಳು ಉಂಟುಮಾಡಿದ ಪರಿಣಾಮ ಇವೇ ಮುಂತಾದ ರಚನೆಗಳಲ್ಲಿ ಉಂಟು ಬದಲು ಇದೆ ಎಂಬುದನ್ನು ಬಳಸಲಾಗುವುದಿಲ್ಲ.

ಬೊ.ನಾ. ಕೃಷ್ಣಮೂರ್ತಿ (ಸಾಗರ)ಯವರು 'ಉಂಟು' ಎಂಬ ಪದದ ಬಳಕೆಯನ್ನು ವಿವರಿಸಿದ್ದನ್ನು ಗಮನಸಿ ಪ್ರತಿಕ್ರಿಯೆ ಬರೆದಿದ್ದಾರೆ. ಅವರ ಬರಹದ ತಿರುಳು ಇಷ್ಟು: ಉಂಟು ಎಂಬ ಪದರೂಪವನ್ನು ಭೂತಕಾಲದಲ್ಲಿ ಮಾತ್ರವಲ್ಲದೆ ಬೇರೆ ಬಗೆಯಲ್ಲೂ ಬಳಸಲು ಸಾಧ್ಯವಿದೆ; ಉಂಟು ಎಂಬುದು ಯಾವಾಗಲೂ ಇದೆ ಎಂಬುದಕ್ಕೆ ಸಮಾನವಲ್ಲ; ಒಂದರ ಬದಲು ಇನ್ನೊಂದನ್ನು ಬಳಸಲು ಸಾಧ್ಯವಾಗದಿರುವ ಪ್ರಯೋಗಗಳು ಇವೆ. ಇವರ ಗ್ರಹಿಕೆ ಸರಿಯಾಗಿಯೇ ಇದೆ. ಆದರೆ ಉಂಟು ಎಂಬ ಪದರೂಪದ ಚರಿತ್ರೆಯನ್ನು ಕೊಂಚ ಗಮನಿಸೋಣ. ಇದು ಉಳ್- ಎಂಬ ಕ್ರಿಯಾ ಧಾತುವಿಗೆ ಭೂತಕಾಲದ ಪ್ರತ್ಯಯವೊಂದನ್ನು ಮತ್ತು ಪ್ರಥಮ ಪುರುಷ ತಟಸ್ಥಲಿಂಗದ(ನಪುಂಸಕ ಲಿಂಗ)ದ ಆಖ್ಯಾತ ಪ್ರತ್ಯಯವನ್ನು ಸೇರಿಸುವುದರಿಂದ ರೂಪುಗೊಂಡಿದೆ. ನಡುಗನ್ನಡದ ಹೆಚ್ಚು ಪ್ರಯೋಗಗಳು ಈ ಅಂಶವನ್ನು ನಮಗೆ ಸೂಚಿಸುತ್ತವೆ. ಮತ್ತೆ ಅಕ್ಕಮಹಾದೇವಿಯ ಎರಡು ಪ್ರಯೋಗಗಳನ್ನು ನೋಡೋಣ. 'ಹಸಿವಾದಡೆ ಭಿಕ್ಷಾನ್ನಗಳುಂಟು' ಮತ್ತು 'ನನ್ನಲ್ಲಿ ಏನುಂಟೆಂದು ಕರಸ್ಥಲದಲಿ ಇಂಬುಗೊಂಡೆ'. ಮೊದಲ ವಾಕ್ಯವನ್ನು ನಾವು ಅರಿಯುವುದು ಹೀಗೆ: (ನನಗೆ) ಹಸಿವಾದಡೆ ಭಿಕ್ಷಾನ್ನಗಳು (ತಿನ್ನಲು) ಉಂಟು. ಉಂಟು ರೂಪದ ಹಿಂದಿನ ಕ್ರಿಯಾಪದಕ್ಕೆ ಭೂತನ್ಯೂನರೂಪ ಇರಬೇಕೆಂಬ ನಿಯಮ ಇಂದಿನ ಕನ್ನಡದಲ್ಲೂ ಇದೆ. ಆದರೆ ಈಗೀಗ ಉಂಟು ಬಳಸುವ ವಾಕ್ಯಗಳಲ್ಲಿ 'ನನಗೆ' (ಚತುರ್ಥಿ ವಿಭಕ್ತಿರೂಪ) ಎನ್ನುವ ಬದಲು 'ನಾನು' (ಪ್ರಥಮಾ ವಿಭಕ್ತಿರೂಪ)ವನ್ನು ಬಳಸುವುದುಂಟು. ಉದಾ.ಗೆ ಈ ವಾಕ್ಯಗಳನ್ನು ನೋಡಿ. 'ನನಗೆ ಮಾಡಲು ಕೆಲಸ ಉಂಟು';'ನಾನು ಮಾಡಲು ಕೆಲಸ ಉಂಟು'. ಆದರೆ ಎಲ್ಲ ಸಂದರ್ಭಗಳಲ್ಲೂ ಪ್ರಥಮಾ ವಿಭಕ್ತಿರೂಪ ಬಳಸಲು ಆಗುವುದಿಲ್ಲ. ಇನ್ನು ಅಕ್ಕನ ಎರಡನೆಯ ವಾಕ್ಯದಲ್ಲಿ ಇರುವ 'ನನ್ನಲ್ಲಿ'(ಸಪ್ತಮಿ ವಿಭಕ್ತಿರೂಪ) ಈಗ ಹೆಚ್ಚು ಬಳಕೆಯಾಗದೆ ಅದರ ಬದಲಿಗೆ 'ನನಗೆ' ರೂಪವೇ ನೆಲೆಯಾಗುತ್ತಿದೆ. 'ನನ್ನಲ್ಲಿ ಎರಡು ತೋಟ ಉಂಟು'; 'ನನಗೆ ಎರಡು ತೋಟ ಉಂಟು'.

ಇದಲ್ಲದೆ ಉಂಟು ರೂಪದ ಒಳರಚನೆಯು ಈಗ ನಮಗೆ ಗೊತ್ತಿಲ್ಲ. ಅದನ್ನು ಒಂದು ಬಿಡಿಬಿಡಿಯಾಗಿ ಮಾಡಲಾಗದ ಪದವೆಂದು ತಿಳಿದಿದ್ದೇವೆ. ಅದನ್ನೀಗ

ಕ್ರಿಯಾನಾಮ(ಪದ)ವೆಂಬಂತೆ ಬಳಸುತ್ತಿದ್ದೇವೆ. ಹಾಗಾಗಿ ಉಂಟಾದ, ಉಂಟಾಗು ಮುಂತಾದ ರಚನೆಗಳು ಈಗ ಕಾಣಸಿಗುತ್ತವೆ. ಈ ಬದಲಾದ ತಿಳುವಳಿಕೆಯಿಂದಾಗಿ 'ಉಂಟು' ಈಗ ಭೂತಕಾಲವನ್ನು ಸೂಚಿಸಲು ಮಾತ್ರ ಬಳಕೆಯಾಗಬೇಕೆಂಬ ಹಳೆಯ ನಿಯಮ ಕಳೆದುಹೋಗಿದೆ. ಇನ್ನು 'ಇದೆ' ಮತ್ತು 'ಉಂಟು' ಪದರೂಪಗಳು ಇಂದಿನ ಕನ್ನಡದಲ್ಲಿ ಬಳಕೆಯಾಗುತ್ತಿರುವ ಬಗೆ ಮತ್ತು ಆ ಬಳಕೆಯಲ್ಲಿರುವ ವ್ಯತ್ಯಾಸಗಳನ್ನೆಲ್ಲ ಇನ್ನೂ ವಿವರವಾಗಿ ನಾವು ಅಭ್ಯಾಸ ಮಾಡುವ ಅಗತ್ಯ ಉಂಟು (ಅಥವಾ ಇದೆ).

**ಹೋದ ದನ**

ಓದುಗರೊಬ್ಬರು ಕರ್ನಾಟಕ ಲೋಕಸೇವಾ ಆಯೋಗದ ಪರೀಕ್ಷೆಯೊಂದರಲ್ಲಿ ಕೇಳಿದ್ದ ಪ್ರಶ್ನೆಯನ್ನು ಕುರಿತು ಹೀಗೆ ಬರೆಯುತ್ತಾರೆ: **ಕಾಡಿಗೆ ಮೇಯಲು ಹೋದ ದನ ಸಂಜೆ ಹಿಂದಿರುಗಿದವು** ಎಂಬ ವಾಕ್ಯವನ್ನು ನೀಡಿ ಈ ವಾಕ್ಯದಲ್ಲಿ ತಪ್ಪಾಗಿರುವ ಭಾಗ ಯಾವುದು ಎಂದು ಕೇಳಿದ್ದಾರೆ. ಆಯೋಗವೇ ನೀಡಿರುವ ಸರಿ ಉತ್ತರದ ಪಟ್ಟಿಯಲ್ಲಿ **ಹೋದ ದನ** ಎಂಬುದು ತಪ್ಪಾದ ಭಾಗ ಎಂದು ಹೇಳಿದ್ದಾರಂತೆ. ಪ್ರಶ್ನೆಯನ್ನು ಕೇಳಿದ ಓದುಗರ ಪ್ರಕಾರ **ಸಂಜೆ ಹಿಂದಿರುಗಿದವು** ಎಂಬುದು ತಪ್ಪಾಗಿರುವ ಭಾಗ. ದಿಟವಾಗಿ ನೀಡಿರುವ ಈ ವಾಕ್ಯದಲ್ಲಿ ಯಾವ ತಪ್ಪುಗಳೂ ಇಲ್ಲ. ಅದು ಸರಿಯಾದ ವಾಕ್ಯವಾಗಿದೆ. ವಾಕ್ಯದ ಕ್ರಿಯಾಪದದಲ್ಲಿ ಬಹುವಚನದ ಪ್ರತ್ಯಯವಿದೆ(ಅವು). ಹಾಗಾಗಿ ವಾಕ್ಯದ ಕರ್ತೃ ನಾಮಪದವೂ ಬಹುವಚನದಲ್ಲಿ ಇರಬೇಕೆಂಬ ನಿಯಮವೊಂದಿದೆ. ಅಂದರೆ **ದನಗಳು** ಎಂಬ ರೂಪ ಇರಬೇಕೆಂದು ಹೇಳಬಹುದು. ಆದರೆ ಈ ನಿಯಮ ನಪುಂಸಕ ಲಿಂಗದ ನಾಮಪದಗಳಿಗೆ ಅನ್ವಯವಾಗುವುದಿಲ್ಲ. ಉದಾ.ಗೆ **ಗಿಡದಲ್ಲಿ ಹೂ ಅರಳಿವೆ; ಕುದುರೆ ಓಡುತ್ತವೆ; ಮರ ಎತ್ತರಕ್ಕೆ ಬೆಳೆದಿವೆ.** ಈ ಎಲ್ಲ ವಾಕ್ಯಗಳೂ ಸರಿಯಾಗಿವೆ.

ವಾಕ್ಯಗಳಲ್ಲಿ ಎಲ್ಲಿ ತಪ್ಪಿದೆ ಎಂದು ಕೇಳುವ ಪ್ರಶ್ನೆಗಳ ಬಗೆಗೆ ಕೆಲವು ಮಾತುಗಳನ್ನು ಹೇಳಬೇಕಿದೆ. ವಾಕ್ಯಗಳು ಎರಡು ಬಗೆಗಳಲ್ಲಿ ತಪ್ಪಾಗಿರಲು ಸಾಧ್ಯ. **1. ವಾಕ್ಯ ರಚನೆಯ ಕಟ್ಟುಗಳನ್ನು ಮೀರಿರಬಹುದು. 2. ವಾಕ್ಯದಲ್ಲಿ ಇರುವ ಪ್ರಸ್ತಾಪ ಸುಳ್ಳಾಗಿರಬಹುದು.** ಹುಡುಗ ಓಡುತ್ತಾಳೆ; ಹಕ್ಕಿ ಹಾರುತ್ತಾರೆ; ಜನರು ಬಸ್ಸನ್ನು ಬರುತ್ತಾರೆ. ಇವೆಲ್ಲ ಮೊದಲ ಬಗೆಯ ತಪ್ಪುಗಳಿರುವ ವಾಕ್ಯಗಳು. ಇಲ್ಲೆಲ್ಲಾ ರಚನೆಯ ಕಟ್ಟುಗಳನ್ನು ಪಾಲಿಸಿಲ್ಲ. ಆ ಹುಡುಗನಿಗೆ ಆರು ಕಣ್ಣುಗಳಿವೆ; ಬೆಂಗಳೂರಿನಲ್ಲಿ ರಾತ್ರಿ ಹನ್ನೆರಡು ಗಂಟೆಯಾದಾಗ ಸೂರ್ಯೋದಯವಾಗುತ್ತದೆ; ಮಳೆ ಬಿದ್ದಾಗ ಕಾಡು ಹತ್ತಿ ಉರಿಯ??ತೊಡಗಿತು. ಇವೆಲ್ಲವೂ ಎರಡನೆಯ ಬಗೆಯ ತಪ್ಪುಗಳಿರುವ ವಾಕ್ಯಗಳು. ಏಕೆಂದರೆ ಇಲ್ಲಿರುವ ಪ್ರಸ್ತಾವಗಳು ಸುಳ್ಳು. ಲೋಕದಲ್ಲಿ ಹಾಗಿರುವುದು ಆಗದ ಮಾತು. ಆದ್ದರಿಂದ ತಪ್ಪುಗಳನ್ನು ತಿದ್ದುವಾಗ ಯಾವ ಬಗೆಯ ತಪ್ಪುಗಳಿರುವ ವಾಕ್ಯ ಎನ್ನುವುದು ಮುಖ್ಯವಾಗುತ್ತದೆ.

ರಚನೆಯ ಕಟ್ಟುಗಳನ್ನು ಪಾಲಿಸದಿರುವ ವಾಕ್ಯಗಳು ಸಂಕೀರ್ಣ ಇಲ್ಲವೇ ಸಂಯೋಜಿತ ವಾಕ್ಯಗಳಾಗಿದ್ದರೆ ಒಂದಕ್ಕಿಂತ ಹೆಚ್ಚು ತಿದ್ದುಪಡಿಗಳು ಸಾಧ್ಯ. ಉದಾಹರಣೆಗೆ ಈ ವಾಕ್ಯವನ್ನು ನೋಡಿ: **ಬಸ್ಸು ನಿನ್ನೆ ಬೆಳಿಗ್ಗೆ ಹೊರಡುತ್ತದೆ.** ಈ ವಾಕ್ಯದಲ್ಲಿ ರಚನೆಯ ಕಟ್ಟುಗಳನ್ನು ಪಾಲಿಸಿಲ್ಲ. ತಿದ್ದಿ ಬರೆಯುವುದಾದರೆ ಎರಡು ಬಗೆಯಲ್ಲಿ ತಿದ್ದಬಹುದು.

**ಬಸ್ಸು ನಿನ್ನೆ ಬೆಳಿಗ್ಗೆ ಹೊರಟಿತು** ಎನ್ನುವುದು ಒಂದು ಬಗೆಯ ತಿದ್ದಿದ ವಾಕ್ಯ. **ಬಸ್ಸು ನಾಳೆ ಬೆಳಿಗ್ಗೆ ಹೊರಡುತ್ತದೆ** ಎನ್ನುವುದು ಇನ್ನೊಂದು ಬಗೆಯಲ್ಲಿ ತಿದ್ದಿದ ವಾಕ್ಯ. ಹಾಗಾಗಿ ತಿದ್ದುವಿಕೆಯ ಪ್ರಶ್ನೆಗಳನ್ನು ಕೇಳುವಾಗ ಎಚ್ಚರ ಬೇಕು. ಎರಡು ಬಗೆಗಳಲ್ಲಿ ತಿದ್ದುವುದು ಆಗುವಂತಿದ್ದರೆ ಎರಡೂ ಬಗೆಗಳನ್ನು ಒಪ್ಪಿಕೊಳ್ಳಬೇಕು.

### ಸಮಾಸಗಳಿಗೆ ಉದಾಹರಣೆಗಳು

ಸತೀಶ್ ಎ.ಎಂ. (ದೊಡ್ಡಪಾಲನ ಹಳ್ಳಿ) ಇವರು ಸಮಾಸಗಳನ್ನು ಕುರಿತು ಒಂದು ಪ್ರಶ್ನೆಯನ್ನು ಕೇಳಿದ್ದಾರೆ. ಸಮಾಸಗಳಿಗೆ ಕೊಡುವ ವಿವರಣೆಗಳಿಗೂ ನೀಡುವ ಉದಾಹರಣೆಗಳಿಗೂ ಹೊಂದಿಕೆಯಾಗುವುದಿಲ್ಲ ಎನ್ನುವುದು ಅವರು ಎದುರಿಸುತ್ತಿರುವ ತೊಂದರೆ. ಸಮಾಸಗಳಿಗೆ ಇರುವ ಹೆಸರುಗಳನ್ನೆ ನೋಡಿ. ಅವೆಲ್ಲವೂ ಸಂಸ್ಕೃತದ ಹೆಸರುಗಳು. ಆ ನುಡಿಯ ರಚನೆಗೆ ಅನುಗುಣವಾಗಿರುವ ವಿವರಣೆಯನ್ನು ಕೊಡುವುದು ಸರಿಯಾಗಿಯೇ ಇದೆ. ಆದರೆ ಕನ್ನಡದಲ್ಲಿ ಆ ಕಟ್ಟುಗಳನ್ನು ಅಲ್ಲಿರುವಂತೆಯೇ ಪಾಲಿಸಬೇಕಾಗಿಲ್ಲ. ಇದು ಹಿಂದಿನ ವ್ಯಾಕರಣಕಾರರಿಗೂ ಗೊತ್ತಿತ್ತು. ಅದರಿಂದಾಗಿಯೇ ಕೇಶಿರಾಜನು ಗಮಕ ಸಮಾಸವೆಂಬ ಹೊಸ ರಚನೆಯ ಕಟ್ಟನ್ನು ತಿಳಿಸಿದನು. ಅದು ಹಾಗಿರಲಿ. ಈಗ ನಾವು ತತ್ಪುರುಷ, ಕರ್ಮಧಾರಯ, ಬಹುವ್ರೀಹಿ, ಅಂಶಿ, ದ್ವಿಗು ಮುಂತಾಗಿ ಗುಂಪು ಮಾಡಬೇಕೇ ಎನ್ನುವುದು ಈಗ ನಾವು ಎದುರಿಸುತ್ತಿರುವ ಗೋಜಲು. ಇದೆಲ್ಲ ಬೇಡವೆಂದೇ ತೋರುತ್ತದೆ. ಪದರಚನೆಯಲ್ಲಿ ಯಾವುದು ಸಮಾಸ ಯಾವುದು ಪದಗುಚ್ಚ ಎಂಬುದನ್ನು ಬೇರೆ ಮಾಡಲು ಮೊದಲು ತಿಳಿದುಕೊಳ್ಳಬೇಕು. ಸಮಾಸ ರಚನೆಯು ಒಂದು ಪದದ ಹಾಗೆಯೇ ನಡೆದುಕೊಳ್ಳುತ್ತದೆ ಎನ್ನುವುದು ಮೊದಲು ಗಮನಿಸಬೇಕಾದ ಮಾತು. ಕನ್ನಡದ ಮಟ್ಟಿಗೆ ಎರಡು ಪದಗಳಿರುವ ಸಮಾಸ ರಚನೆಗಳೇ ಹೆಚ್ಚು. ಮೂರು ನಾಲ್ಕು ಪದಗಳಿರುವ ಸಮಾಸಗಳನ್ನು ಈಗ ಬದಿಗಿರಿಸೋಣ. ಇಂತಹ ಸಮಾಸಗಳಲ್ಲಿ ಎರಡನೆಯ ಪದ ಯಾವಾಗಲೂ ನಾಮಪದವಾಗಿರುತ್ತದೆ. ಕೆಲವರು ಕಷ್ಟಪಡು, ಮತನೀಡು, ಆನಂದಪಡು ಇವೆಲ್ಲವೂ ಸಮಾಸಗಳು; ಇಲ್ಲಿ ಎರಡನೆಯ ಪದ ಕ್ರಿಯಾಪದವಾಗಿದೆಯಲ್ಲ ಎಂದು ಕೇಳಿಯಾರು. ಆದರೆ ಇವು ಕನ್ನಡದ ಕಟ್ಟುಗಳ ನೆಲೆಯಲ್ಲಿ ಸಮಾಸಗಳಾಗಲಾರವು. ಎರಡನೆಯ ಪದ ನಾಮಪದವೇ ಆಗಿರುತ್ತದೆ ಎಂದುಕೊಳ್ಳೋಣ. ಆಗ ಮೊದಲನೆಯ ಪದ ನಾಮಪದ, ಕ್ರಿಯಾಪದ ಇಲ್ಲವೇ ಗುಣಪದ ಇವುಗಳಲ್ಲಿ ಯಾವುದಾದರೊಂದು ಆಗಿರಬೇಕು. ಮನೆಯಳಿಯ, ಬಿಸಿಲುಕೋಲು, ಬಿಡುಗಣ್ಣು, ಊರುಗೋಲು, ಕೆಂಡಸಂಪಿಗೆ, ಚಿಕ್ಕಮ್ಮ ಇವೆಲ್ಲವೂ ಕನ್ನಡದಲ್ಲಿ ಸಮಾಸಗಳಾಗುತ್ತವೆ. ಈ ಮೂರು ಗುಂಪುಗಳು ಕನ್ನಡದ ಮಟ್ಟಿಗೆ ಸಾಕು.

### ವಾಕ್ಯದ ತಿರುಳು

ಪತ್ರಿಕೆಯೊಂದರಲ್ಲಿ ಈಚೆಗೆ ಕಂಡುಬಂದ ಜಾಹಿರಾತಿನಲ್ಲಿ ಒಂದು ವಾಕ್ಯ ಹೀಗಿತ್ತು: **'ವರ್ಷಗಳು ಕಳೆದರೂ ಬಣ್ಣ ಹೋಗದೇ ಹೋಗುವುದಿಲ್ಲ'** ಈ ವಾಕ್ಯ ಸರಿಯಿಲ್ಲ. ಇದರಲ್ಲಿ ಇರುವ ತಪ್ಪು ಯಾವುದು ಎನ್ನುವುದನ್ನು ನೋಡೋಣ. ಕನ್ನಡದಲ್ಲಿ ಕೆಲಸ ಪದಗಳನ್ನು

ಬಳಸುವಾಗ ಹೇಳಬೇಕಾದ್ದಕ್ಕೆ ಹೆಚ್ಚು ಒತ್ತು ಕೊಟ್ಟು ಹೇಳಬೇಕಾಗಿದರೆ ಆಗ ಆ ಕೆಲಸಪದವನ್ನು ಮತ್ತೊಮ್ಮೆ ಬಳಸಿ ಹೊಸ ಪದವನ್ನು ಕಟ್ಟುವ ವಾಡಿಕೆ ಇದೆ. ಬಂದೇ ಬರುತ್ತದೆ, ಕೊಟ್ಟೇ ಕೊಡುತ್ತಾನೆ, ಹೇಳೇ (=ಹೇಳಿಯೇ) ಹೇಳುತ್ತಾನೆ, ಸುಟ್ಟೇ ಸುಡುತ್ತದೆ ಹೀಗೆ. ಹೀಗೆ ಮಾಡುವಾಗ ಎರಡು ಕಟ್ಟುಗಳನ್ನು ಬಳಸುತ್ತೇವೆ. ಒಂದು: ಕೆಲಸ ಪದದ ಭೂತಕೃದಂತ ರೂಪವನ್ನು ಮೊದಲಿಗೆ ಇರಿಸಿ ಅದಕ್ಕೆ ಒತ್ತು ಸೂಚಿಸುವ ಪ್ರತ್ಯಯವನ್ನು ಸೇರಿಸಿ ಬಳಿಕ ಮೂಲ ಕೆಲಸ ಪದವನ್ನು ಇರಿಸುತ್ತೇವೆ. **ಬಿಡು** ಎಂಬ ಕೆಲಸಪದದ ಭೂತ ಕೃದಂತ ರೂಪಕ್ಕೆ (=ಬಿಟ್ಟು) ಒತ್ತು ಸೂಚಿಸುವ ಏ ಪ್ರತ್ಯಯವ್ನು ಸೇರಿಸಿದಾಗ ಸಿಗುವ **ಬಿಟ್ಟೇ** ಪದವನ್ನು ಬಿಡು ಎಂಬುದರ ಮುಂದೆ ಇರಿಸಿ **ಬಿಟ್ಟೇಬಿಡು** ಎಂಬ ಹೊಸ ರೂಪವನ್ನುಕಟ್ಟುತ್ತೇವೆ. ಅದನ್ನು ಬಿಟ್ಟೇ ಬಿಡುತ್ತೇನೆ, ಬಿಟ್ಟೇ ಬಿಡುತ್ತದೆ ಮುಂತಾಗಿ ಇತರ ಕೆಲಸ ಪದಗಳಂತೆ ಬಳಸಬಹುದು. ಎರಡು: ಈ ಹೊಸ ಕೆಲಸ ಪದ ರೂಪವನ್ನು ನಿಷೇಧ ತಿರುಳನ್ನು ಸೂಚಿಸಲು ಬಳಸಲಾಗುವುದಿಲ್ಲ. ಬಂದೇ ಬರುವುದಿಲ್ಲ, ಸುಟ್ಟೇ ಸುಟ್ಟಿಲ್ಲ, ಕೊಟ್ಟೇ ಕೊಡುವುದಿಲ್ಲ ಮುಂತಾಗಿ ಬಳಸಲಾಗುವುದಿಲ್ಲ. ಅಲ್ಲೆ ಒತ್ತು ಕೊಟ್ಟು ಹೇಳಲು ಬೇರೆ ಪದಗಳನ್ನು ಕೆಲಸ ಪದಗಳ ಹಿಂದೆ ಬಳಸ ಬೇಕಾಗುತ್ತದೆ. ಮೇಲೆ ಹೇಳಿದ ಜಾಹಿರಾತಿನ ವಾಕ್ಯದಲ್ಲಿ ಈ ಎರಡೂ ಕಟ್ಟುಗಳನ್ನು ಪಾಲಿಸಿಲ್ಲ ಎನ್ನುವದು ಗೊತ್ತಾಗುತ್ತದೆ. ಹಾಗಾಗಿ ಇದು ತಪ್ಪು ರಚನೆ

**ಎರಡು ಪದಗಳು**

ಅದೂ ಇದೂ, ಆಗಲೋ ಈಗಲೋ, ಅಷ್ಟೋ ಇಷ್ಟು, ಅವರಿವರು, ಹೇಳಿಕೇಳಿ, ಬಿಟ್ಟೂ ಬಿಡದೆ, ಸಾಕು ಬೇಕು ಮುಂತಾದ ಪದರಚನೆಗಳನ್ನು ಗಮನಿಸಿ. ಇಲ್ಲೆಲ್ಲ ಎರಡು ಪದಗಳಿದ್ದು ಅವುಗಳಲ್ಲಿ ಒಂದು ಇನ್ನೊಂದರ ಅರ್ಥಕ್ಕೆ ಎದುರಾದ ಅರ್ಥವನ್ನು ನೀಡುವಂತಿರುತ್ತದೆ. ಆದರೆ ಈ ಒಟ್ಟು ಪದರಚನೆಗಳಿಗೆ ಅದರಲ್ಲಿರುವ ಪದಗಳ ಅರ್ಥ ಮುಖ್ಯವಾಗುವುದಿಲ್ಲ. ಇಡೀ ಪದರಚನೆಗೇ ಬೇರೆ ಅರ್ಥ ರೂಪುಗೊಂಡು ಬಳಕೆಗೆ ಬಂದಿರುತ್ತದೆ. ಈ ಪದರಚನೆಗಳು ಒಂದೇ ಕ್ರಿಯಾರೂಪವನ್ನು ಒಂದಕ್ಕಿಂತ ಹೆಚ್ಚು ಬಾರಿ ಬಳಸಿ ಸಿದ್ಧಗೊಳಿಸಿಕೊಂಡ ಪದರಚನೆಗಳಿಗಿಂತ ಬೇರೆಯಾಗಿರುತ್ತವೆ. ಹೋಗಿಹೋಗಿ, ಬಿಟ್ಟೂಬಿಟ್ಟೂ, ಕೇಳೀಕೇಳೀ, ನೋಡೀನೋಡೀ, ಕೂತೂಕೂತೂ ಮುಂತಾದ ಪದರಚನೆಗಳನ್ನು ಗಮನಿಸಿ. ಇವು ಮೇಲೆ ಹೇಳಿದ ರಚನೆಗಳಿಗಿಂತ ಬೇರೆಯೇ ಕೆಲಸವನ್ನು ಮಾಡುತ್ತವೆ. ಇಂತಹ ರೂಪಗಳು ಬರಹಕ್ಕಿಂತ ಮಾತಿನಲ್ಲಿ ಹೆಚ್ಚು ಬಳಕೆಯಾಗುತ್ತವೆ ಎನ್ನುವುದನ್ನು ಗಮನಿಸಬೇಕು.

**ಕುರಿತು. ಕುರಿತಂತೆ, ಕುರಿತಾದ**

ಶ್ರೀನಿವಾಸ ಕಾರ್ಕಳ (ಮಂಗಳೂರು) ಇವರು 'ಕುರಿತು ಎಂಬ ಪದಕ್ಕೆ ಬೇಡದಿದ್ದರೂ ಕುರಿತಂತೆ, ಕುರಿತಾದ ಮುಂತಾದ ಪ್ರತ್ಯಯಗಳನ್ನು(?) ಸೇರಿಸುತ್ತಿರುವುದು ಎಷ್ಟು ಸರಿ' ಎಂಬ ಪ್ರಶ್ನೆಯನ್ನು ಮುಂದಿಟ್ಟಿದ್ದಾರೆ. ಇವಷ್ಟೆ ಅಲ್ಲದೆ ಕುರಿತಾಗಿ ಎಂಬ ಪ್ರಯೋಗವೂ ಅಲ್ಲಲ್ಲಿ ಕಂಡು ಬರುತ್ತಿದೆ. ಅವರ ತಕರಾರು ಸರಿ. ಹೀಗೆ ಕುರಿತು ಪದಕ್ಕೆ ಬೇರೆ ಮತ್ತೊಂದು ಪದರೂಪವನ್ನು ಸೇರಿಸುವ ಅಗತ್ಯವಿಲ್ಲದಿದ್ದರೂ ಹಾಗೆ

ಮಾಡುವುದು ರೂಢಿಯಲ್ಲಿದೆ. ಹಾಗೆ ನೋಡಿದರೆ 'ಕುರಿತು' ಎಂಬ ಪದವನ್ನು ಹೀಗೆ ನಾವು ಬಳಸಲು ಮೊದಲು ಮಾಡಿ ಕೆಲವಾರು ದಶಕಗಳಷ್ಟೆ ಕಳೆದಿವೆ. ಈ ಪದದ ಬಳಕೆ ಬೇಕೇ .ಅದಿಲ್ಲದೆಯೂ ವಾಕ್ಯವನ್ನು ರಚಿಸುವುದು ಸಾಧ್ಯವಿಲ್ಲವೇ ಎಂಬ ಪ್ರಶ್ನೆಯನ್ನು ನಾವು ಕೇಳಿಕೊಳ್ಳುವುದಿಲ್ಲ. ಇದಲ್ಲದೆ ಈ ಪದದ ಜೊತೆಗೆ 'ಬಗ್ಗೆ'(ಬಗೆಗೆ) ಎಂಬ ಇನ್ನೊಂದು ಪದ ಯಾವಾಗಲೂ ಪೈಪೋಟಿ ನಡೆಸುತ್ತಿದೆ. 'ಬಡತನ ನಿರ್ಮೂಲನೆಯನ್ನು ಕುರಿತು ಉಪನ್ಯಾಸ ನೀಡಿದರು' ಮತ್ತು 'ಬಡತನ ನಿರ್ಮೂಲನೆಯ ಬಗೆಗೆ ಉಪನ್ಯಾಸ ನೀಡಿದರು' ಎಂಬ ಎರಡು ವಾಕ್ಯಗಳನ್ನು ಗಮನಿಸಿ. ಮೇಲು ನೋಟಕ್ಕೆ ಕುರಿತು ಮತ್ತು ಬಗೆಗೆ ಒಂದರ ಬದಲು ಇನ್ನೊಂದು ಬಳಕೆಯಾಗಬಲ್ಲ ಪದಗಳು ಎನಿಸುವುದುಂಟು. ಹಾಗೆ ಯಾವಾಗಲೂ ಒಂದರ ಬದಲು ಇನ್ನೊಂದನ್ನು ಬಳಸಲು ಆಗುವುದಿಲ್ಲ. ಒಂದು ವೇಳೆ ಹಾಗೆ ಬಳಕೆಯಾದಾಗ ವಾಕ್ಯದ ರಚನೆಯಲ್ಲಿ ಕೆಲವು ಬದಲಾವಣೆಗಳಾಗುವುದನ್ನು ಗಮನಿಸಬೇಕು. ಮೇಲೆ ಹೇಳಿದ ವಾಕ್ಯಗಳನ್ನೇ ಗಮನಿಸಿ. ಮೊದಲ ವಾಕ್ಯದಲ್ಲಿ ನಿರ್ಮೂಲನೆ ಪದಕ್ಕೆ ದ್ವಿತೀಯಾ ವಿಭಕ್ತಿ ಪ್ರತ್ಯಯವಿದ್ದರೆ ಎರಡನೆಯ ವಾಕ್ಯದಲ್ಲಿ ಅದಕ್ಕೆ ಪ್ರಥಮಾ ವಿಭಕ್ತಿ ಪ್ರತ್ಯಯವಿರುತ್ತದೆ. ಹೀಗಿದ್ದರೂ ಈ ಪದಗಳು ಬೇರೆ ಬೇರೆ ಪ್ರದೇಶದ ಬರಹಗಳಲ್ಲಿ ಬಳಕೆಯಾಗುವ ಕ್ರಮದಲ್ಲಿ ಎದ್ದು ಕಾಣುವ ವ್ಯತ್ಯಾಸವಿದೆ. ಶ್ರೀನಿವಾಸ ಕಾರ್ಕಳ ಅವರ ಪತ್ರದಲ್ಲೇ '.... ವಿಷಯದ ಕುರಿತು' ಎಂಬ ಪ್ರಯೋಗವಿದೆ. ನಾನು ಬರೆಯುವ ಕ್ರಮದಲ್ಲಿ ಅದು 'ವಿಷಯವನ್ನು ಕುರಿತು' ಎಂದಾಗುತ್ತದೆ. ನಮ್ಮ ಬರವಣಿಗೆಗೊಂದು ಖಚಿತ ಕೈಪಿಡಿ ಸಿದ್ಧವಾಗುವವವರೆಗೆ ಈ ಗೊಂದಲಗಳು ಮುಂದುವರೆಯುತ್ತವೆಂದು ತೋರುತ್ತದೆ.

**'ಸೊನ್ನೆ'**

ಸೊನ್ನೆಯನ್ನು ನಮ್ಮ ಬರವಣಿಗೆಯ ಚಿಹ್ನೆಯನ್ನಾಗಿ ಬಳಸುತ್ತೇವೆ. ಇದನ್ನು ಹೇಗೆ ನುಡಿಯುವುದು? ನಮಗೇ ಗೊತ್ತಿಲ್ಲದಂತೆ ಈ ಬರಹ ಚಿಹ್ನೆಯನ್ನು ನಾವು ಆರು ಬಗೆಯಲ್ಲಿ ಉಚ್ಚರಿಸುತ್ತಿದ್ದೇವೆ. ಸಾಮಾನ್ಯವಾಗಿ ಪದದ ನಡುವೆ ಬರುವ ಸೊನ್ನೆಯ ಉಚ್ಚಾರಣೆಯನ್ನು ಅದರ ಬಳಿಕ ಬರುವ ವ್ಯಂಜನ ನಿರ್ಧರಿಸುವುದೆಂಬ ನಿಯಮವಿದೆ. ಹಾಗಾಗಿ ಎಲ್ಲೆಲ್ಲಿ ಹೇಗೆ ಉಚ್ಚರಿಸಬೇಕೆಂಬ ನಿಯಮವನ್ನು ನಾವು ಬಲ್ಲೆವು. ಹಾಗಾಗಿ ಗೊಂದಲವಿಲ್ಲ. ಹೀಗಿದ್ದರೂ ನಾವೀಗ ಮಾತಿನಲ್ಲಿ ಬಳಸದಿರುವ ಹಳಗನ್ನಡದ ಬರಹ ರೂಪದಲ್ಲಿ ಪದಗಳ ಕೊನೆಗೆ ಬರುವ ಸೊನ್ನೆ ಚಿಹ್ನೆಯನ್ನು ಉಚ್ಚರಿಸುವಲ್ಲಿ ಸಮಸ್ಯೆ ಇದ್ದಂತಿದೆ. ತರಗತಿಗಳಲ್ಲಿ ಹಳಗನ್ನಡ ಪದ್ಯ ಭಾಗಗಳನ್ನು ಓದಿ ಪಾಠ ಹೇಳುವ ಅಧ್ಯಾಪಕರು ಪದಗಳ ಕೊನೆಯಲ್ಲಿ ಬರುವ ಸೊನ್ನೆಯನ್ನು **ಮ್** ಎಂದು ಉಚ್ಚರಿಸುತ್ತಾರೆ. ರಾಮಂ, ಪಂಪಂ, ಬಂದಂ, ಪೇಳಿದಂ ಮುಂತಾದ ಪದಗಳನ್ನು ಕ್ರಮವಾಗಿ ರಾಮಮ್, ಪಂಪಮ್, ಬಂದಮ್, ಪೇಳಿದಮ್ ಎಂದೇ ಹೇಳುತ್ತಾರೆ. ಇನ್ನು ಕೆಲವರು ಪದದ ಕೊನೆಯ ಸೊನ್ನೆಯನ್ನು **ನ್** ಎಂದು ಉಚ್ಚರಿಸುವುದುಂಟು, ರಾಮಂ ಎಂಬುದನ್ನು ರಾಮನ್ ಎಂದು ಹೇಳುತ್ತಾರೆ. ಆದರೆ ಯಾವಾಗ ಈ ಪದದ ಕೊನೆಯ ಸೊನ್ನೆಯನ್ನು **ಮ್** ಎಂದು ಹೇಳಬೇಕು ಮತ್ತು ಯಾವಾಗ ಅದನ್ನು **ನ್** ಎಂದು ಹೇಳಬೇಕು ಎಂಬ ಬಗೆಗೆ ಗೊಂದಲವಿದ್ದಂತಿದೆ.

ಕನ್ನಡ ಪದರಚನೆಯಲ್ಲಿ ಇದಕ್ಕೊಂದು ನಿಯಮವಿದೆ. ಪದದ ಕೊನೆಯಲ್ಲಿ ಸೊನ್ನೆಗಿಂತ ಮೊದಲು ಅಕಾರವಿದೆಯೆನ್ನಿ. ಉದಾ. ರಾಮಂ, ಚಂದ್ರಂ, ಮರಂ ಹೀಗೆ. ಇಲ್ಲೆಲ್ಲಾ ಆ ಪದ ಒಂದು ನಾಮಪದವಾಗಿದ್ದರೆ ಮತ್ತು ಆ ನಾಮಪದವು ಗಂಡು ಇಲ್ಲವೇ ಹೆಣ್ಣನ್ನು ಸೂಚಿಸುತ್ತಿದ್ದರೆ ಆಗ ಸೊನ್ನೆಯನ್ನು ನ್ ಎಂದು ಉಚ್ಚರಿಸಬೇಕು. ರಾಮಂ ಎಂಬುದನ್ನು ರಾಮನ್ ಎಂದು ಹೇಳಬೇಕು. ಹಾಗಿಲ್ಲದೆ ನಾಮಪದವು ತಟಸ್ಥ ಲಿಂಗವನ್ನು(ನಪುಂಸಕ ಎನ್ನುವ ವಾಡಿಕೆಯಿದೆ) ಸೂಚಿಸುತ್ತಿದ್ದರೆ ಆಗ ಕೊನೆಯ ಸೊನ್ನೆಯನ್ನು ಮ್ ಎಂದು ಹೇಳಬೇಕು. ಹಾಗಾಗಿ ಮರಂ ಎಂಬುದನ್ನು ಮರಮ್ ಎಂದು ನುಡಿಯುವುದು ಸರಿ. ಸೊನ್ನೆಯು ಕ್ರಿಯಾಪದದ ಕೊನೆಗೆ ಬಂದಿದ್ದರೆ ಆ ಕ್ರಿಯಾಪದವು (ಆಖ್ಯಾತಗಳ ಮೂಲಕ) ಸೂಚಿಸುತ್ತಿರುವ ನಾಮಪದ ಸಾಮಾನ್ಯವಾಗಿ ಗಂಡಸನ್ನೇ ಸೂಚಿಸುವುದರಿಂದ ಅಲ್ಲಿ ಸೊನ್ನೆಯ ಉಚ್ಚಾರಣೆ ನ್ ಎಂದೇ ಆಗುವುದು. ಉದಾ. ಕೊಟ್ಟಂ, ಬಿಟ್ಟಂ ಎಂಬವುಗಳನ್ನು ಕೊಟ್ಟನ್,ಬಿಟ್ಟನ್ ಎಂದು ಹೇಳಬೇಕು.

ಪದದ ಕೊನೆಯ ಸೊನ್ನೆಯ ಹಿಂದಿನ ಸ್ವರ ಅಕಾರವಲ್ಲದೆ ಬೇರೆಯಾಗಿರುವ ಸಾಧ್ಯತೆಗಳೂ ಇವೆ. **ಇಂ** ಎಂದಿದರೆ (ಬಟ್ಟೆಯಿಂ)ಆಗ ನ್ ಎಂದು ಹೇಳಬೇಕು.(ಈ ಇಂ ಈಗಿನ ಇಂದ ಎಂಬುದರ ಹಳೆಯ ರೂಪ) **ಎಂ** (ಪೇಳ್ವೆಂ) ಎಂದಿದ್ದರೆ ಅಲ್ಲಿಯೂ ನ್ ಎಂದೇ ಉಚ್ಚರಿಸಬೇಕು. ಕೊನೆಯಲ್ಲಿ **ಉಂ** ಎಂದಿದ್ದಾರೆ (ಅಕ್ಕನುಂ) ಆಗ ಮ್ ಎಂದು ಹೇಳಬೇಕು. **ಒಂ** ಎಂದು ಕೊನೆಯಾಗುವ ಸಂಭವ ಕಡಿಮೆ. ಹಳಗನ್ನಡಕ್ಕೂ ಹಿಂದೆ ಇದು ಕನ್ನಡದಲ್ಲಿ ಕಾಣಿಸುತ್ತಿತ್ತು. ಉದಾ. ಬಿಟ್ಟೋಂ. ಇಲ್ಲಿಯು ಸೊನ್ನೆಗೆ ನ್ ಉಚ್ಚಾರಣೆಯೇ ಇರುತ್ತದೆ.

**ಅದ್ವಿತೀಯ**

ಅದ್ವಿತೀಯ ಎಂಬುದು ಸಂಸ್ಕೃತ ಪದ. ಆದರೆ ಕನ್ನಡದಲ್ಲಿ ನಾಮಪದವಾಗಿ (ಈತ ಸುಳ್ಳು ಹೇಳುವುದರಲ್ಲಿ ಅದ್ವಿತೀಯ) ಮತ್ತು ಗುಣವಾಚಕವಾಗಿ (ಆರ್ಥಿಕ ಪ್ರಗತಿಯಲ್ಲಿ ಅದ್ವಿತೀಯ ಸಾಧನೆ) ಬಳಕೆಯಾಗುತ್ತಿದೆ. ಇದನ್ನು ಬಳಸುವಾಗ ಅರ್ಥದಲ್ಲಿ ಕೆಲವು ಗೊಂದಲ ಇರುವಂತಿದೆ. ಕನ್ನಡದ ಬೇರೆಬೇರೆ ನಿಘಂಟುಗಳು ಈ ಪದಕ್ಕೆ **ಎರಡನೆಯದಿಲ್ಲದ(ಎರಡಿರದ) ಮತ್ತು ಎರಡನೆಯದಲ್ಲದ** ಎಂಬ ಅರ್ಥಗಳನ್ನು ನೀಡುತ್ತವೆ. ಹೆಚ್ಚು ನಿಘಂಟುಗಳು ಮೊದಲನೆಯ ಅರ್ಥಕ್ಕೆ ಅಂಟಿಕೊಂಡಿವೆ. ಎರಡನೆಯದಿಲ್ಲದ. ಸಾಟಿಯಿಲ್ಲದ, ಸಮಾನವಾದದು ಇಲ್ಲದ ಎಂಬ ಅರ್ಥವನ್ನು ನೀಡುತ್ತವೆ. ಕೆಲವರು ಅದ್ವಿತೀಯ ಎಂಬುದಕ್ಕೆ ಬದಲಾಗಿ ಕನ್ನಡದಲ್ಲಿ **ಎರಡಿಲ್ಲದ/ಎರಡಿರದ** ಎಂಬ ಉಕ್ತಿಯನ್ನೂ ಅಲ್ಲಲ್ಲಿ ಬಳಸುತ್ತಿರುವುದುಂಟು. ಇದು ಎಷ್ಟು ಸರಿ? 'ಇವರು ಕತೆ ಹೇಳುವುದರಲ್ಲಿ ಅದ್ವಿತೀಯರು' ಎಂಬ ವಾಕ್ಯವನ್ನು ನೋಡೋಣ. ಈ ವಾಕ್ಯದ ಅರ್ಥವೇನು? **ಇವರಷ್ಟು ಚೆನ್ನಾಗಿ ಕತೆ ಹೇಳುವವರು ಇನ್ನೊಬ್ಬರಿಲ್ಲ** ಎಂದೋ ಇಲ್ಲವೇ **ಇವರಿಗಿಂತ ಚೆನ್ನಾಗಿ ಕತೆ ಹೇಳುವವರು ಇನ್ನೊಬ್ಬರಿಲ್ಲ** ಎಂದೋ. ಎಚ್ಚರಿಕೆಯಿಂದ ಗಮನಿಸಿದರೆ ಇವೆರಡೂ ಬೇರೆ ಬೇರೆ ಅರ್ಥಗಳಾಗಿವೆ. ವಾಕ್ಯದ ಉದ್ದೇಶವು ಕೂಡ ಚೆನ್ನಾಗಿ ಕತೆ ಹೇಳುವುದರಲ್ಲಿ ಇವರು ಯಾರಿಗೂ ಎರಡನೆಯವರಲ್ಲ ಎಂಬುದೇ ಆಗಿರುವುದರಿಂದ ಎರಡನೆಯ ಅರ್ಥವೇ ಸರಿ. ಆದ್ದರಿಂದ ಅದ್ವಿತೀಯ ಎನ್ನುವವದಕ್ಕೆ ಎರಡನೆಯದಲ್ಲದ

ಎಂಬ ಅರ್ಥವನ್ನೇ ನೀಡಬೇಕು. ಮೊದಲನೆಯ ಅರ್ಥವನ್ನು ಒಪ್ಪಿದರೆ ಮುಂದಿನ ವಾಕ್ಯದ ಅರ್ಥ ಏನಾಗುತ್ತದೆ ನೋಡೋಣ. 'ಇವರು ಓಟದಲ್ಲಿ ಅದ್ವಿತೀಯರಾದರು' ಈ ವಾಕ್ಯದಲ್ಲಿ ಸೂಚಿತವಾದ ವ್ಯಕ್ತಿ ಓಟದಲ್ಲಿ ಕೊನೆಯ ಸ್ಥಾನ ಪಡೆದಿದ್ದಾರೆ ಎಂದುಕೊಳ್ಳಿ ಆಗಲೂ ಈ ವಾಕ್ಯದಲ್ಲಿ ಅದ್ವಿತೀಯ ಪ್ರಯೋಗ ಸರಿ ಎನ್ನಬಹುದೇ? ನಿಘಂಟುಗಳು ಹೇಳುವ ಮೊದಲ ಅರ್ಥದಲ್ಲಿ(ಎರಡಿಲ್ಲದ) ಈ ವಾಕ್ಯ ಸರಿಯೇ ಸರಿ. ಏಕೆಂದರೆ ಕೊನೆಯ ಸ್ಥಾನಕ್ಕೆ ಸಮಾನವಾದ, ಸಾಟಿಯಾದ ಸ್ಥಾನ ಇನ್ನೊಂದಿಲ್ಲವಲ್ಲ!

**ಮಾನ್ಯರೆ–ಮನ್ನೆಯರೇ**

ಶ್ರೀಧರ ಪಿಸ್ಸೆ (ಕಮಲಾಪುರ,ಬಳ್ಳಾರಿ ಜಿಲ್ಲೆ) ಇವರು 'ಮಾನ್ಯರೇ ಎಂದು ಬಳಸುವ ಕಡೆ ಮನ್ನೆಯರೇ ಎಂದು ಬಳಸಬಹುದೇ?' ಎಂದು ಕೇಳಿದ್ದಾರೆ. ಮನ್ನೆಯ(=ನಾಯಕ, ಮುಂದಾಳು) ಎಂಬುದು ನಡುಗನ್ನಡದಲ್ಲಿ ಹೆಚ್ಚು ಬಳಕೆಯಾಗುತ್ತಿದ್ದ ಪದ. ಈಗ ಅದನ್ನು ಕನ್ನಡದಲ್ಲಿ ಬಳಸುತ್ತಿಲ್ಲ. ಹಾಗಾಗಿ ಯಾರನ್ನಾದರೂ 'ಮನ್ನೆಯರೇ' ಎಂದು ಕರೆದರೆ ಅವರಿಗೆ ಮುಜುಗರವೇ ಆಗಬಹುದು. ಈ ಪದವನ್ನು ಬಳಸುವುದರಲ್ಲಿ ತಪ್ಪೇನೂ ಇಲ್ಲವಾದರೂ ಬಳಸುವುದಕ್ಕೆ ತಕ್ಕ ಹಿನ್ನೆಲೆಗಳನ್ನು ಕಟ್ಟಿಕೊಳ್ಳಬೇಕಾಗಿದೆ. ಅಲ್ಲದೆ ಇಂತಹ ಪದಗಳನ್ನು ಯಾರನ್ನಾದರೂ ಗುರುತಿಸಲು ಬಳಸುವ ಹಾಗೆ ಕರೆಯಲು ಬಳಸಲು ಬರುವುದಿಲ್ಲ. ತಾಯಿ ಎಂಬ ಪದವನ್ನು ನೋಡಿ. ಹೆತ್ತವಳನ್ನು ಗುರುತಿಸಲು ತಾಯಿ ಎಂಬ ಪದ ಬಳಸಬಹುದು. ಆದರೆ ಆಕೆಯನ್ನು ಕರೆಯಲು 'ತಾಯೀ' ಎಂದು ಹೇಳುತ್ತೇವೆಯೇ? ಹಾಗೆ ಹೇಳುವುದು ಯಾವುದೇ ಹಿರಿಯ ಹೆಂಗಸನ್ನು ಕುರಿತು ಮಾತ್ರ. ಮುಂದಾಳು ಎಂದು ಗುರುತಿಸುವಾಗ ಮನ್ನೆಯ ಎನ್ನಲಡ್ಡಿಯಿಲ್ಲ. ಆದರೆ ಅವರನ್ನು ಕರೆಯಲು ಬಳಸಲು ಆಗದು.

**ಹೆಚ್ಚುಕಡಿಮೆ–ಹೆಚ್ಚೂಕಡಿಮೆ**

ಈ ಮುಂದಿನ ವಾಕ್ಯಗಳನ್ನು ಓದಿ: 1. ಊಟದಲ್ಲಿ ಒಂದಿಷ್ಟು **ಹೆಚ್ಚುಕಡಿಮೆ**ಯಾದರೂ ಯಜಮಾನರು ಸಹಿಸಿಕೊಳ್ಳುವುದಿಲ್ಲ 2. ನಿಮ್ಮ ಉತ್ತರಗಳೆಲ್ಲ **ಹೆಚ್ಚೂಕಡಿಮೆ** ಸರಿಯಾಗಿಯೇ ಇವೆ. ಮೊದಲ ವಾಕ್ಯದಲ್ಲಿ ಹೆಚ್ಚುಕಡಿಮೆ ಎನ್ನುವುದು ಬದಲಾವಣೆ, ಕೊರತೆ, ಏರುಪೇರು ಮುಂತಾದ ತಿರುಳುಗಳನ್ನು ಹೊಂದಿದೆ. ಎರಡನೆಯ ವಾಕ್ಯದಲ್ಲಿ ಹೆಚ್ಚೂಕಡಿಮೆ ಎಂದರೆ ಈ ತಿರುಳು ಇಲ್ಲ. ಇದಕ್ಕೆ ಸರಿಯಾಗಿರುವುದಕ್ಕೆ ಹತ್ತಿರವಾದ, ಅಂದುಕೊಂಡಂತೆ ಇರುವ ಎಂಬೆಲ್ಲ ತಿರುಳುಗಳು ಇಲ್ಲಿವೆ. ಮಾತಿನಲ್ಲಿ ಈ ಎರಡರಲ್ಲಿ ಇರುವ ಬದಲಾವಣೆಯನ್ನು ದನಿಯ ಏರುಪೇರಿನಿಂದ ಗುರುತಿಸಬಹುದು. ಆದರೆ ಬರೆಯುವಾಗ ಇರಬೇಕಾದ ಬದಲಾವಣೆಯನ್ನು ಎಚ್ಚರದಿಂದ ಗಮನಿಸಬೇಕಾಗುತ್ತದೆ. ಕೊರತೆ, ಏರುಪೇರು ಎಂಬ ತಿರುಳಿನೊಡನೆ ಬಳಸುವಾಗ ಹೆಚ್ಚುಕಡಿಮೆ ಎಂಬುದನ್ನು ಆಗು ಇಲ್ಲವೇ ಮಾಡು ಎಂಬ ನೆರವಿನ ಕ್ರಿಯಾಪದಗಳ ಜೊತೆಯಲ್ಲೇ ಬಳಸಬೇಕೆಂಬ ಕಟ್ಟು ಇದ್ದಂತಿದೆ. ಈ ಕಟ್ಟು ಎರಡನೆಯ ತಿರುಳಿನ ಬಳಕೆಗೆ ಇಲ್ಲ.

### ಶ್ರೇಣಿ-ದರ್ಜೆ

ಮಂಜುಳ.ವಿ.ಎಂ (ಸಿರಿಗೆರೆ) ಇವರು ' ಶ್ರೇಣಿ ಮತ್ತು **ದರ್ಜೆ** ಪದಗಳ ತಿರುಳಿನಲ್ಲಿ ಏನಾದರೂ ವ್ಯತ್ಯಾಸವಿದೆಯೇ?' ಎಂದು ಕೇಳಿದ್ದಾರೆ. ಶ್ರೇಣಿ ಸಂಸ್ಕೃತದಿಂದ ಬಂದಿರುವ ಪದ. ದರ್ಜೆ ಪರ್ಶಿಯನ್-ಅರಾಬಿಕ್ ನೆಲೆಯಿಂದ ಬಂದ ಪದ. ಆಯಾ ನುಡಿಗಳಲ್ಲಿ ಈ ಪದಗಳಿಗೆ ಯಾವ ಬಗೆಯ ತಿರುಳಿದೆ ಎಂಬುದನ್ನು ಬದಿಗಿಟ್ಟರೆ ಕನ್ನಡದಲ್ಲಿ ಇವೆರಡೂ ಪದಗಳನ್ನು ಸುಮಾರಾಗಿ ಒಂದೇ ತಿರುಳಿರುವ ಪದಗಳೆಂಬಂತೆ ಬಳಸುತ್ತಿದ್ದೇವೆ. ಅದರೂ ಕೆಲವು ಕಡೆಗಳಲ್ಲಿ ಶ್ರೇಣಿಯ ಬಳಕೆ ಆಗುವಂತೆ ದರ್ಜೆ ಬಳಕೆಯಾಗುವುದಿಲ್ಲ. ಉದಾ.ಗೆ **ಶ್ರೇಣೀಕರಣ, ಶ್ರೇಣೀಕೃತ** ಪದಗಳಲ್ಲಿ ದರ್ಜೆ ಬಳಸುವುದಿಲ್ಲ. ಹಾಗೆಯೇ ದರ್ಜೆ ಬಳಸುವ ಕೆಲವು ಕಡೆಗಳಲ್ಲಿ ಶ್ರೇಣಿ ಪದವನ್ನು ಬಳಸುವುದಿಲ್ಲ. ಥರ್ಡ್ ರೇಟ್ ಎಂಬ ಇಂಗ್ಲಿಶ್ ಪದರಚನೆಗೆ ಬದಲಾಗಿ ಕನ್ನಡದಲ್ಲಿ **ಮೂರನೆಯ ದರ್ಜೆ** ಎಂಬ ಪದರಚನೆ ಬಳಕೆಯಲ್ಲಿದೆ. ಇದಕ್ಕೆ ಬದಲಾಗಿ ಮೂರನೆಯ ಶ್ರೇಣಿ ಎಂಬ ಬಳಕೆ ಇಲ್ಲ. ಬೇರೆ ಬೇರೆ ನುಡಿಗಳಿಂದ ಒಂದೇ ತಿರುಳಿರುವಂತೆ ಕಾಣುವ ಪದಗಳನ್ನು ಬಳಕೆಗೆ ತೆಗೆದುಕೊಂಡಾಗ ಹೀಗೆ ಅವುಗಳ ಬಳಕೆಯ ನಡುವೆ ತೆಳುವಾದ ಬೇರ್ಪಡಿಸುವ ಗೆರೆಯೊಂದನ್ನು ಎಳೆದುಕೊಳ್ಳುವುದುಂಟು. ಇಂತಹುದೆ ಇನ್ನೊಂದು ಉದಾಹರಣೆ ಬೇಕೆಂದರೆ **ವ್ಯಾಯಾಮ** ಮತ್ತು **ಕಸರತ್ತು** ಪದಗಳ ಬಳಕೆಯಲ್ಲಿರುವ ವ್ಯತ್ಯಾಸವನ್ನು ನೋಡಿರಿ.

### ಎಚ್ಚರ ಮತ್ತು ಎಚ್ಚರಿಕೆ

**ಎಚ್ಚರ** ಮತ್ತು **ಎಚ್ಚರಿಕೆ** ಈ ಎರಡೂ ಪದಗಳನ್ನು ಒಂದೇ ತಿರುಳುಳ್ಳ ಪದಗಳೆಂಬಂತೆ ಬಳಸುವುನ್ನು ಈಗ ನೋಡುತ್ತಿದ್ದೇವೆ. ಎಚ್ಚರಿಕೆ ಎಂಬುದು ಬೆದರಿಕೆ (<ಬೆದರು), ಹೆದರಿಕೆ (<ಹೆದರು) ಮಾದರಿಯ ರಚನೆ. ಒಂದು ಕ್ರಿಯಾಪದಕ್ಕೆ –ಇಕೆ ಎಂಬ ಪ್ರತ್ಯಯ ಸೇರಿ ಈ ನಾಮಪದ ರಚನೆಗಳು ಉಂಟಾಗುತ್ತವೆ. ಅಂದರೆ ಎಚ್ಚರಿಕೆ ಎಂಬ ರಚನೆಗೂ ಮೂಲದಲ್ಲಿ ಎಚ್ಚರು ಎಂಬ ಕ್ರಿಯಾಪದ ಇರುವುದು ಸರಿಯಾದುದೇ ತಾನೇ? ಎಚ್ಚರು (<ಎಚ್ಚರ್) ಎಂಬ ರೂಪ ಕನ್ನಡದಲ್ಲಿ ಬಳಕೆಯಲ್ಲಿತ್ತು. ಎಚ್ಚರಿಸು, ಎಚ್ಚತ್ತು ಎಂಬ ರಚನೆಗಳು ಇದರಿಂದಲೇ ಉಂಟಾಗಿವೆ. ಈಗ ಎಚ್ಚರ ಎಂಬ ಪದಕ್ಕೆ ಜಾಗರೂಕತೆ, ನಿದ್ದೆ ಮಾಡದಿರುವುದು, ಕಣ್ತೆರೆದಿರುವುದು ಮುಂತಾದ ತಿರುಳುಗಳಿವೆ. ಆದರೆ ಎಚ್ಚರಿಕೆ ಎಂಬುದನ್ನು ಜೋಕೆ, ಹೆದರಿಸುವುದು, ಅಪಾಯದ ಮುನ್ಸೂಚನೆ ನೀಡುವುದು ಮುಂತಾದ ತಿರುಳುಗಳೊಡನೆ ಬಳಸುತ್ತೇವೆ. ತಿರುಳಿನಲ್ಲಿ ಮಾತ್ರವಲ್ಲ ಬಳಕೆಯಲ್ಲೂ ಈ ಎರಡೂ ಪದಗಳು ಒಂದರ ಬದಲು ಇನ್ನೊಂದು ಎಲ್ಲ ಕಡೆಗಳಲ್ಲೂ ಬಳಕೆಯಾಗಲಾರವು. ಎಚ್ಚರಗೊಳ್ಳು ಎಂಬುದರ ಬದಲು ಎಚ್ಚರಿಕೆಗೊಳ್ಳು ಹೇಳಲಾಗುವುದಿಲ್ಲ. ಎಚ್ಚರಗೆಡು ಎಂಬುದರ ಬದಲು ಎಚ್ಚರಿಕೆಗೆಡು ಎನ್ನಬಹುದೇ?

### ರಕಾರದ ಒತ್ತಕ್ಷರ

ರಂಗಭಟ್ಟ(ಚಿಂತರಪಳ್ಳಿ, ಬಳ್ಳಾರಿ ಜಿಲ್ಲೆ) ಇವರಿಗೆ ರಕಾರದ ಒತ್ತಕ್ಷರವಾಗಿ ಎರಡು ಗುರುತುಗಳನ್ನು ಬಳಸುತ್ತಿರುವುದು ಸರಿಯೇ ಎಂಬ ಪ್ರಶ್ನೆ ಕಾಡಿದೆ. ಎರಡು ವ್ಯಂಜನಗಳು ಒಟ್ಟಾಗಿ ಬಂದಾಗ ಮತ್ತು ಅವುಗಳಲ್ಲಿ ಮೊದಲನೆಯದು ರ್ ಆಗಿದ್ದಾಗ ಬರವಣಿಗೆಯಲ್ಲಿ

ರಕಾರವನ್ನು ಎರಡು ಬಗೆಗಳಲ್ಲಿ ಬರೆಯುವುದು ವಾಡಿಕೆ. **ಕಾರ್ಯ** ಮತ್ತು **ಕಾರ್‍ಯ** ಎಂಬ ಪದಗಳನ್ನು ಓದಿದರೆ ಈ ಮಾತು ತಿಳಿಯುತ್ತದೆ. ಹೀಗೆ ಎರಡು ಗುರುತುಗಳು ಬರಲು ಕನ್ನಡ ಬರವಣಿಗೆಯ ಚರಿತ್ರೆಯಲ್ಲಿ ಕಾರಣಗಳಿವೆ. ಆದರೆ ಕನ್ನಡ ಬರವಣಿಗೆಯಲ್ಲಿ ಒತ್ತಕ್ಷರಗಳನ್ನು ಬರೆಯಲು ಬಳಸುವ ಬಗೆಗೆ **ಕಾರ್‍ಯ** ಎಂದು ಬರೆಯುವುದು ಹೊಂದಿಕೆಯಾಗುತ್ತದೆ. ವ್ಯಂಜನ ಜೋಡಿಯಲ್ಲಿ ಮೊದಲ ವ್ಯಂಜನದ ಒತ್ತಕ್ಷರದ ಗುರುತನ್ನು ಬರೆದು ಎರಡನೆಯ ವ್ಯಂಜನವನ್ನು ಸ್ವರದೊಡನೆ ಬರೆಯುವುದು ಬಳಕೆಯಲ್ಲಿರುವ ಬಗೆ. **ಭಾಗ್ಯ, ಪಕ್ಷ, ಶಕ್ತಿ, ಹೋಯ್ತು,** ಗ್ಲಾನಿ ಮುಂತಾದ ಪದಗಳನ್ನು ನೋಡಿದರೆ ಇಲ್ಲೆಲ್ಲಾ ಒತ್ತಕ್ಷರಗಳು ಮೊದಲನೆಯ ವ್ಯಂಜನಕ್ಕೆ ಸೇರಿರುವಂತಹವು ಎಂಬುದು ತಿಳಿಯುತ್ತದೆ. ಹಾಗಾಗಿ ಕಾರ್‍ಯ ಎಂದು ಬರೆಯುವುದು ಹೆಚ್ಚು ಸರಿ. ಆದರೆ ಈ ನಿಟ್ಟಿನಲ್ಲಿ ಬದಲಾವಣೆ ಆಗಲಾರದ ಹಂತಕ್ಕೆ ನಾವು ಬಂದಿದ್ದೇವೆ. ಅಂದರೆ ರಕಾರದ ಒತ್ತಕ್ಷರವಾಗಿ ಕಾಣುವ ಅರ್ಕಾವೊತ್ತನ್ನು ಬಿಡಲು ಆಗದೇ ಹೋಗಬಹುದು. ಏಕೆಂದರೆ ಕನ್ನಡ ಬರವಣಿಗೆಯ ಕಂಪ್ಯೂಟರ್ ತಂತ್ರಾಂಶಗಳೂ ಈಗ ಎರಡೂ ಬಗೆಯಲ್ಲಿ ಬರೆಯಲು ನೆರವಾಗುವಂತೆ ಮೈತಳೆದುಬಿಟ್ಟಿವೆ: ಬಳಕೆಗೆ ಬಂದಿವೆ. ನಮ್ಮ ಕಣ್ಣುಗಳನ್ನು ಸರಿಯೋದಿಗೆ ಹೊಂದಿಸಿಕೊಳ್ಳುವುದೊಂದೇ ಈಗಿರುವ ದಾರಿ.

### ಹೆದರಿಕೆ ಮತ್ತು ಬೆದರಿಕೆ

ಸುಹಾಸ್ ಎನ್. (ಬೆಂಗಳೂರು) ಇವರು **'ಹೆದರಿಕೆ ಮತ್ತು ಬೆದರಿಕೆ** ಇವೆರಡರ ನಡುವಣ ಇರುವ ವ್ಯತ್ಯಾಸ ಏನು?' ಎಂದು ಕೇಳಿದ್ದಾರೆ. ದಿಟ, ಇವೆರಡೂ ಪದಗಳ ತಿರುಳು ಒಂದೆ ಎಂದು ಮೇಲು ನೋಟಕ್ಕೆ ತೋರುತ್ತದೆ. ಆದರೆ ಬಳಕೆಯಲ್ಲಿ ಯಾವಾಗಲೂ ಒಂದರ ಬದಲು ಇನ್ನೊಂದನ್ನು ಬಳಸಲು ಆಗುವುದಿಲ್ಲ. ಬೆದರು ಬೊಂಬೆ ಎನ್ನುವಲ್ಲಿ ಹೆದರುಬೊಂಬೆ ಎನ್ನಬಹುದೇ?; 'ಅಣುಸ್ಥಾವರಕ್ಕೆ ಉಗ್ರರಿಂದ ಬೆದರಿಕೆ' ಎನ್ನುವಲ್ಲಿ 'ಆಣುಸ್ಥಾವರಕ್ಕೆ ಉಗ್ರರಿಂದ ಹೆದರಿಕೆ' ಎನ್ನಲಾಗದು. 'ಬೀಳುವೆನೆಂಬ ಹೆದರಿಕೆಯಿಂದ ನಾನು ಎಂದೂ ಮರ ಹತ್ತಲಿಲ್ಲ' ಎನ್ನುವಲ್ಲಿ ಹೆದರಿಕೆ ಬದಲಾಗಿ ಬೆದರಿಕೆ ಬಳಸಬಹುದೇ? ಅಂದರೆ ಈ ಎರಡೂ ಪದಗಳಲ್ಲಿ ಗೊತ್ತಾಗುವಂತಹ ವ್ಯತ್ಯಾಸ ಇದೆ ಎಂದಾಯ್ತು. ಎರಡೂ ಮನಸ್ಸಿನ ಅವಸ್ಥೆಗಳು. ಹೆದರಿಕೆ ಉಂಟಾಗಲು ಯಾವಾಗಲೂ ಹೊರಗಿನ ಕಾರಣಗಳು ಬೇಕಾಗಿಲ್ಲ. ನಾವು ಅಂದುಕೊಳ್ಳುವ ಏನೋ ಒಂದು ಸಂಗತಿಯಿಂದಲೂ ನಾವು ಹೆದರಬಹುದು. ಆದರೆ ಬೆದರಿಕೆಗೆ ಹೊರಗಿನ ಕಾರಣಗಳು ಇರಲೇ ಬೇಕು.

### ಹೆಸರಿಗೆ ಅರ್ಥ

ಬೀನಾ.ಡಿ.ವಿ (ದೊಡ್ಡನಹಳ್ಳಿ,ಸಕಲೇಶಪುರ ತಾ.) ಐದನೆಯ ತರಗತಿಯಲ್ಲಿರುವ ಈ ಹುಡುಗಿಗೆ ತನ್ನ ಹೆಸರಿನ ತಿರುಳೇನು ಎಂಬುದನ್ನು ತಿಳಿಯಬೇಕಿದೆ. ಹೆಸರಿಟ್ಟವರು ಈ ಬಗೆಗೆ ತಲೆ ಕೆಡಿಸಿಕೊಂಡಿರಲಾರರು. ಬೀನಾ ಎಂಬುದು ಹೆಚ್ಚಾಗಿ ವೀಣಾ ಎಂಬುದರ ತದ್ಭವ ಎನ್ನಬಹುದು. ವೀಣಾಪಾಣಿಯನ್ನು ಬೀಣಾಪಾಣಿ ಎಂದು ಕರೆದಿರುವುದುಂಟು. ಬೀಣಾ ಎಂಬುದನ್ನು ಇಂಗ್ಲಿಶ್ ಅಕ್ಷರಗಳಲ್ಲಿ ಬರೆಯುವುದು ರೂಢಿಗೆ ಬಿದ್ದರೆ ಅದು ಬೀನಾ ಎಂದೇ ಆಗಿಬಿಡುತ್ತದೆ. ಹಾಗಾಗಿ ಬೀನಾ ಎಂದರೆ ವೀಣಾ ಎಂದು ತಿಳಿಯೋಣ.

## ಕಪಾಳ ಮೋಕ್ಷ

ಸಂತೋಷ ಪರಸಪ್ಪ. ಬಿ (ಹೂವಿನ ಹಡಗಲಿ) ಇವರು 'ಕಪಾಳ ಮೋಕ್ಷ ಎಂದರೇನು' ಎಂದು ಕೇಳಿದ್ದಾರೆ. ಕೆನ್ನೆಗೆ ಹೊಡೆಯುವುದನ್ನು ಕಪಾಳ ಮೋಕ್ಷ ಎನ್ನುತ್ತಾರೆ. ಇದೊಂದು ಬಗೆಯ ಮಾತಿನ ವರಸೆ. ಮಾತಿನಿಂದಲೂ ಏಟುಕೊಡಲು ಬರುತ್ತದೆ ಎಂದು ತೋರಿಸಲು ಈ ಬಗೆಯ ಪದರಚನೆಗಳು ನುಡಿಯಲ್ಲಿ ಬಳಕೆ ಬಂದಿರುತ್ತವೆ. ಮಂಗಳಾರಾತಿ (=ಅವಮಾನ), ಪೂಜೆ(= ಅವಮಾನ), ಪಟ್ಟಾಭಿಷೇಕ(=ತಲೆ ಬೋಳಿಸುವುದು), ಅರ್ಧಚಂದ್ರ ಪ್ರಯೋಗ (=ಕತ್ತು ಹಿಡಿದು ಹೊರ ದಬ್ಬುವುದು), ಸಹಸ್ರಾರ್ಚನೆ(= ಅವಮಾನ) ಮುಂತಾದ ಪದರಚನೆಗಳು ಹೀಗೆ ಮಾತಿನಲ್ಲಿ ಬಳಕೆಯಲ್ಲಿವೆ. ಇವುಗಳ ವ್ಯಾಚ್ಯಾರ್ಥ ನಮಗೆ ಅಷ್ಟು ಮುಖ್ಯವಲ್ಲ; ಬಳಕೆಯ ಸಂದರ್ಭದಲ್ಲಿ ಯಾವ ತಿರುಳನ್ನು ಇರಿಸಿಕೊಂಡು ಹೇಳಲಾಗುತ್ತಿದೆ ಎನ್ನುವುದನ್ನು ನೋಡಬೇಕು. ಇಂತಹ ಪದರಚನೆಗಳು, ದಿಟವಾಗಿಯೂ ನಡೆಯುವ ಕೆಲಸಗಳನ್ನು ಮಾತಿನ ಮೂಲಕವೇ ಮಾಡಿ ತೋರಿಸಲು ಬಳಕೆಯಾಗುತ್ತವೆ. ಇಂತಹ ನೂರಾರು ಪದರಚನೆಗಳು ನುಡಿಯಲ್ಲಿ ಬಳಕೆಯಾಗುತ್ತಿರುತ್ತವೆ.

## ಸಂವೃತ, ವಿವೃತ, ಆವೃತ

ನಟರಾಜ.ವಿ (ಕೊಳ್ಳೇಗಾಲ) ಇವರು 'ಈ ಬ್ರಹ್ಮಾಂಡವು **ಸಂವೃತವೊ, ವಿವೃತವೊ, ಆವೃತವೊ** ತಿಳಿಯದಾಗಿದೆ' ಎನ್ನುವ ವಾಕ್ಯದ ತಿರುಳನ್ನು ತಿಳಿಯ ಬಯಸಿದ್ದಾರೆ. ಸಂವೃತ ಎಂದರೆ ಒಳಗೇ ಏನೂ ಬಾರದಂತೆ ತಾನೇ ಮುಚ್ಚಿಕೊಂಡಿರುವುದು; ವಿವೃತ ಎಂದರೆ ಏನಾದರೂ ಒಳಗೆ ಬರಲು ಆಗುವಂತೆ ತೆರೆದುಕೊಂಡಿರುವುದು; ಅವೃತ ಎಂದರೆ ಬೇರೆ ಯಾವುದೋ ಸುತ್ತುವರೆದಿರುವುದು. ಬ್ರಹ್ಮಾಂಡವು ಈ ಮೂರು ಬಗೆಗಳಲ್ಲಿ ಹೇಗಿದೆ ಎನ್ನುವುದು ನಮಗಿನ್ನೂ ಗೊತ್ತಿಲ್ಲ ಎನ್ನುವುದು ವಾಕ್ಯದ ತಿರುಳು.

## ನೈದಾನಿಕ ಪರೀಕ್ಷೆ

ಮಹೇಶ್ ಎಲ್. (ದಾವಣಗೆರೆ) ಇವರು ತಮ್ಮ 'ಡಿ.ಇಡಿ ಕನ್ನಡ ಪುಸ್ತಕದಲ್ಲಿ 'ನೈದಾನಿಕ ಪರೀಕ್ಷೆ' ಎಂದಿದೆ; ಹಾಗಂದರೇನು' ಎಂದು ಕೇಳಿದ್ದಾರೆ. ಆ ಪದ ಬಳಕೆಯಾಗಿರುವ ಸಂದರ್ಭದಲ್ಲಿ ಅದೇನು ಎಂಬುದು ಅವರಿಗೆ ಗೊತ್ತಾಗಿದೆ. ಆದರೆ **ನೈದಾನಿಕ** ಎಂಬ ಪದವನ್ನೇಕೆ ಬಳಸಿದ್ದಾರೆ ಎನ್ನುವುದು ಅವರ ಸಮಸ್ಯೆ. 'ನಿದಾನ' ಎನ್ನುವುದು ಸಂಸ್ಕೃತದಿಂದ ಬಂದು ಸೇರಿರುವ ಪದ (ನಿಧಾನ ಬೇರೆಯೇ ಪದ). ಬಚ್ಚಿಟ್ಟಿರುವ, ಅಡಗಿರುವ, ಕಾಣದಿರುವ ಸಂಗತಿಗಳನ್ನು ಹೇಳಲು 'ನಿದಾನ' ಎಂಬ ಪದವನ್ನು ಬಳಸುವುದುಂಟು. (ನೆಲದ ಮರೆಯ ನಿದಾನ ಎಂಬ ಮಾತು ವಚನದಲ್ಲಿ ಬಳಕೆಯಾಗಿದೆ) ನಿದಾನಕ್ಕೆ ಸಂಬಂಧಿಸಿದ್ದನ್ನು ಹೇಳುವ ಪದ ಸಂಸ್ಕೃತ ವ್ಯಾಕರಣ ನಿಯಮಗಳಂತೆ ನೈದಾನಿಕ ಎಂದಾಗುತ್ತದೆ. (ನೋಡಿ: ವಿಮಾನ>ವೈಮಾನಿಕ, ವಿಧಾನ> ವೈಧಾನಿಕ, ನಿಮಿತ್ತ> ನೈಮಿತ್ತಿಕ ಮುಂ) ಸರಿ. ಆದರೆ ಕನ್ನಡದಲ್ಲಿ ಈ ಬಗೆಯ ಪದಗಳನ್ನು ಬಳಸುವುದನ್ನು ಇನ್ನಾದರೂ ತಡೆಯಬೇಕು. ಓದುವವರಿಗೆ ತಲೆಬುಡ ತಿಳಿಯದ ಪದಗಳನ್ನು ಪಠ್ಯಗಳಲ್ಲಿ ಸೇರಿಸಿ ನಾವು ಮಾಡುತ್ತಿರುವುದಾದರೂ ಏನನ್ನು?

## ವಾಕ್ಯರಚನೆಯ ಕಟ್ಟುಗಳು

ಒಂದೆರಡು ದಿನಗಳ ಹಿಂದೆ ಪತ್ರಿಕೆಯೊಂದರಲ್ಲಿ ಓದಿದ ವಾಕ್ಯ ಹೀಗಿತ್ತು. **'ಯುವಕನ ಕ್ಷಮೆ ಕೋರಿ ಪ್ರತಿಭಟನಾಕಾರರು ರಾಷ್ಟ್ರೀಯ ಹೆದ್ದಾರಿಯಲ್ಲಿ ಸಂಚಾರಕ್ಕೆ ತಡೆಯೊಡ್ಡಿದರು'** ಇದು ಕನ್ನಡ ವಾಕ್ಯ ರಚನೆಯ ಕಟ್ಟುಗಳನ್ನು ಮೀರಿಲ್ಲ. ಹಾಗಾಗಿ ಇದು ತಪ್ಪು ರಚನೆಯಲ್ಲ. ಆದರೆ ಈ ವಾಕ್ಯದ ತಿರುಳೇನು? ಇದು ಬಳಕೆಯಾದ ಸಂದರ್ಭವನ್ನು ನೋಡಿದರೆ **'ಪ್ರತಿಭಟನೆಯಲ್ಲಿ ತೊಡಗಿದ್ದವರು ಯುವಕನು ಕ್ಷಮಾಪಣೆಯನ್ನು ಕೋರಬೇಕೆಂದು ಒತ್ತಾಯಿಸುತ್ತಿದ್ದರು'** ಎಂದು ಗೊತ್ತಾಗುತ್ತದೆ. ಆದರೆ ವಾಕ್ಯವನ್ನು ಬೇರೆ ರೀತಿಯಲ್ಲೂ ತಿಳಿದುಕೊಳ್ಳಬಹುದು. **'ಸಂಚಾರಕ್ಕೆ ಅಡ್ಡಿಯುಂಟು ಮಾಡುತ್ತಿದ್ದ ಪ್ರತಿಭಟನಾಕಾರರು ಅದಕ್ಕಾಗಿ ಯುವಕನಲ್ಲಿ ಮುಂದಾಗಿ ಕ್ಷಮೆ ಕೋರಿದರು'** ಎಂದೂ ಈ ವಾಕ್ಯದ ತಿರುಳನ್ನು ಹೇಳಲು ಬರುತ್ತದೆ. ವಾಕ್ಯವನ್ನು ಬರೆದವರು ಎರಡನೆಯ ಬಗೆಯಲ್ಲಿ ತಿಳಿದುಕೊಳ್ಳಬೇಕೆಂದು ಬಯಸಿಲ್ಲ. ಆದರೆ ವಾಕ್ಯರಚನೆಯೇ ಹಾಗಿದೆ; ಇನ್ನೊಂದು ಬೇಡದ ತಿರುಳನ್ನು ತೆಗೆದು ತೋರಿಸುತ್ತಿದೆ. ಹಾಗಿದ್ದರೆ ಈ ಬಗೆಯ ವಾಕ್ಯಗಳನ್ನು ತಪ್ಪುರಚನೆಗಳೆಂದು ಕರೆಯಬಹುದೇ? ಹಾಗೆ ಹೇಳಲಾಗುವುದಿಲ್ಲ. ಏಕೆಂದರೆ ಈ ವಾಕ್ಯರಚನೆಯಲ್ಲಿ ಕಟ್ಟುಗಳನ್ನು ಮೀರಿಲ್ಲ. ಮೇಲಿನ ವಾಕ್ಯವನ್ನೇ ರಚನೆಯಲ್ಲಿ ಹೋಲುವ ಈ ಮುಂದಿನ ವಾಕ್ಯವನ್ನು ನೋಡಿ: **'ಹೆಚ್ಚಿನ ಸೌಲಭ್ಯಗಳನ್ನು ಕೋರಿ ಕಿರಿಯ ವೈದ್ಯರು ಮುಷ್ಕರನಿರತರಾಗಿದ್ದಾರೆ'** ಈ ವಾಕ್ಯಕ್ಕೆ ಮೇಲಿನ ವಾಕ್ಯಕ್ಕಿರುವಂತೆ ಎರಡು ತಿರುಳುಗಳಿಲ್ಲ. ಹಾಗಾಗಿ ರಚನೆಯು ಕಟ್ಟುಗಳನ್ನು ಪಾಲಿಸಿದರೂ ಸಂದರ್ಭದಿಂದಾಗಿ ವಾಕ್ಯಗಳಿಗೆ ಪದಕಂತೆಗಳಿಗೆ ಒಂದಕ್ಕಿಂತ ಹೆಚ್ಚು ತಿರುಳುಗಳಿರುವಂತೆ ಆಗಬಹುದು. **ಉಷಾ ಬಿಟ್ಟ ಬಾಣ** ಎಂಬ ಪದಕಂತೆಯನ್ನು ಓದಿದಾಗ ನಮಗೆ ಅದರಲ್ಲಿ ಒಂದಕ್ಕಿಂತ ಹೆಚ್ಚು ತಿರುಳುಗಳು ಇರಬಹುದೆಂದು ಅನ್ನಿಸುವುದಿಲ್ಲ. ಆದರೆ ಆ ಪದಕಂತೆಯನ್ನು ಬೇರೆಬೇರೆ ವಾಕ್ಯಗಳಲ್ಲಿ ಬಳಸಿದಾಗ ಅದರೊಳಗೆ ಇರುವ ಎರಡು ತಿರುಳುಗಳು ಕಾಣತೊಡಗುತ್ತವೆ. ನೋಡಿ: **'ಉಷಾ ಬಿಟ್ಟ ಬಾಣದಂತೆ ಓಡಿದಳು'** ಮತ್ತು **'ಉಷಾ ಬಿಟ್ಟ ಬಾಣ ಗುರಿ ತಲುಪಿತು'** ಮೊದಲನೆಯ ವಾಕ್ಯದಲ್ಲಿ ಪದಕಂತೆಯನ್ನು (ಉಷಾ)(ಬಿಟ್ಟ ಬಾಣ)ಎಂದು ತಿಳಿಯುತ್ತೇವೆ; ಎರಡನೆಯ ವಾಕ್ಯದಲ್ಲಿ (ಉಷಾ ಬಿಟ್ಟ) (ಬಾಣ) ಎಂದು ತಿಳಿಯಬೇಕಾಗುತ್ತದೆ. ಇದು ಭಾಷೆಯ ರಚನೆಯಲ್ಲೇ ಇರುವ ಇಕ್ಕಟ್ಟುಗಳು. ಹಾಗಿದ್ದ ರೆ ಗೊಂದಲ ಇಲ್ಲದಂತೆ ಮಾಡಲು ಏನು ಮಾಡಬೇಕು? ವಾಕ್ಯವನ್ನು ಬರೆಯುವಾಗ ಎರಡು ಶರತ್ತುಗಳನ್ನು ಪಾಲಿಸಬೇಕು 1) ವ್ಯಾಕರಣದ ನಿಯಮಗಳನ್ನು ಪಾಲಿಸುವುದು 2) ಸಂದರ್ಭಕ್ಕೆ ತಕ್ಕ ತಿರುಳು ಮಾತ್ರ ಕಾಣುವಂತೆ ವಾಕ್ಯವನ್ನು ಸರಿಯಾಗಿ ಬರೆಯುವುದು. ಮೊದಲನೆಯ ಶರತ್ತನ್ನು ಪಾಲಿಸುವುದಕ್ಕಿಂತ ಎಷ್ಟೋ ಕಡೆ ಎರಡನೆಯ ಶರತ್ತನ್ನು ಪಾಲಿಸುವುದು ಕಷ್ಟ.

## ತಬ್ಬು

'ಮಿಶೆಲ್‌ಅನ್ನು ತಬ್ಬಿಹಿಡಿದ ರಾಣಿ' ಎಂಬ ಶೀರ್ಷಿಕೆಯ ವರದಿಯನ್ನು ಕೆಲವು ದಿನಗಳ ಹಿಂದೆ ಓದಿದೆ. ಸಂದರ್ಭವನ್ನು ಪತ್ರಿಕೆ ಬಣ್ಣಿಸಿದ ರೀತಿಯಿಂದ ಶೀರ್ಷಿಕೆಯಲ್ಲಿ ಬಳಸಿದ ತಬ್ಬು ಪದದ ಬಗೆಗೆ ಗೊಂದಲ ಉಂಟಾಯಿತು. ಕನ್ನಡದಲ್ಲಿ ತಬ್ಬು ಮತ್ತು

ಅಪ್ಪು ಎಂಬ ಎರಡು ಪದಗಳಿವೆ. ಎರಡೂ ಕ್ರಿಯಾಪದಗಳು. ತಬ್ಬು ಎಂಬುದು ಹೆಚ್ಚು ವ್ಯಾಪಕವಾಗಿ ಬಳಕೆಯಾಗುವ ಪದ. ಇತರ ದ್ರಾವಿಡ ಭಾಷೆಗಳಲ್ಲೂ ಇದನ್ನು ಹೋಲುವ ಪದಗಳಿವೆ. ಆದರೆ ಅಪ್ಪು ಹೆಚ್ಚು ಬಳಕೆಯಾಗುವುದಿಲ್ಲ ತುಳುವನ್ನು ಬಿಟ್ಟರೆ ಇತರ ದ್ರಾವಿಡ ಭಾಷೆಗಳಲ್ಲಿ ಇದನ್ನು ಹೋಲುವ ತಿರುಳುಳ್ಳ ಪದಗಳು ಇಲ್ಲ. ತಬ್ಬು, ತೆಬ್ಬು, ತಕ್ಕೈಸು, ತೆಕ್ಕೆ, ತರ್ಬು, ತರುಬು ಇವೆಲ್ಲ ನಂಟುಳ್ಳ ಪದಗಳು. ಅಪ್ಪು ಪದಕ್ಕೆ ಅಪ್ಪುಗೆ ಎಂಬ ನಾಮಪದವಿದೆ. ಈ ಎರಡೂ ಪದಗಳು ಬೇರೆಬೇರೆ ಕೆಲಸಗಳನ್ನು ಹೇಳುತ್ತಿವೆಯೇ ಎಂದು ಅವುಗಳ ಬಳಕೆಯನ್ನು ನೋಡಿ ತಿಳಿಯಲು ಹೋದರೆ ಏನೂ ಗೊತ್ತಾಗುವುದಿಲ್ಲ. ಆದರೆ ಅಪ್ಪುಗೆ ಎಂದಾಗ ಎದುರು ಬದುರು ಇದ್ದಾಗ ನಡೆಯುವ ಕ್ರಿಯೇ ಎಂದು ತೋರುತ್ತದೆ.. ಆದರೆ ತಬ್ಬು ಎನ್ನುವುದನ್ನು ಹಾಗೆ ಬಳಸಬೇಕೆಂಬ ಒತ್ತಾಯವಿದ್ದಂತಿಲ್ಲ. ಆದರೂ ಮರಗಳನ್ನು ಉಳಿಸುವ ಚಳವಳಿಯನ್ನು **ಅಪ್ಪಿಕೋ ಚಳವಳಿ**ಯೆಂದು ಕರೆದದ್ದೇಕೆ; **ತಬ್ಬಿಕೋ** ಎಂದೇಕೆ ಹೇಳಲಿಲ್ಲ ಎನ್ನುವುದು ಬಗೆಹರಿಯಲಾರದ ಪ್ರಶ್ನೆಯೇ ಸರಿ.

**ಲೇಖನ ಚಿಹ್ನೆಗಳನ್ನು ಬಳಸುವಲ್ಲಿ ಗೊಂದಲ**

**ಬಂದವರು ಯಾರು? ಎಲ್ಲಿಂದ ಬಂದರು? ಏಕೆ ಬಂದರು? ಎಂಬುದನ್ನೆಲ್ಲ ವಿಚಾರಿಸಿಕೊಳ್ಳಲು ನನಗೆ ಹೇಳಿದ್ದಾರೆ."** ಈ ವಾಕ್ಯ ಒಂದು ಪ್ರಶ್ನೆಯಲ್ಲ. ಆದರೂ ಪ್ರಶ್ನೆ ಚಿಹ್ನೆಗಳನ್ನು ಬರೆಯಬೇಕೇಕೆ? ಕನ್ನಡ ಬರವಣಿಗೆಯಲ್ಲಿ ಲೇಖನ ಚಿಹ್ನೆಗಳನ್ನು ಬಳಸುವ ಬಗೆಗೆ ಗೊಂದಲಗಳು ಕಾಣಸಿಗುತ್ತವೆ. ಗೊತ್ತಾದ ನಿಯಮಗಳನ್ನು ರೂಪಿಸಿಕೊಳ್ಳದಿರುವುದು ಮತ್ತು ಇರುವ ನಿಯಮಗಳನ್ನು ಸರಿಯಾಗಿ ಪಾಲಿಸದಿರುವುದು ಇದಕ್ಕೆ ಕಾರಣ. ಉದಾಹರಣೆಗೆ ಪ್ರಶ್ನೆ ಸೂಚಿಸುವ ಚಿಹ್ನೆಯನ್ನು ಎಲ್ಲಿ, ಹೇಗೆ ಬಳಸಬೇಕು ಎಂಬುದನ್ನು ಕುರಿತು ಇರುವ ಗೊಂದಲವನ್ನು ನೋಡೋಣ. ಮುಂದಿನ ಕೆಲವು ವಾಕ್ಯಗಳನ್ನು ನೋಡಿ: 1) **ಈ ಪುಸ್ತಕಕ್ಕೆ ಎಷ್ಟು ಬೆಲೆ?** 2) **ಈ ಪುಸ್ತಕಕ್ಕೆ ಎಷ್ಟು ಬೆಲೆ? ಎಂದು ಅವನು ಕೇಳಿದನು**. ಎರಡನೆಯ ವಾಕ್ಯದಲ್ಲಿ ಪ್ರಶ್ನೆ ಸೂಚಿಸುವ ಚಿಹ್ನೆಯ ಬಳಕೆಯ ಅಗತ್ಯವಿಲ್ಲ. ಏಕೆಂದರೆ ಅದು ಪ್ರಶ್ನೆಯಲ್ಲ. ಒಂದು ವೇಳೆ ಎರಡನೆಯ ವಾಕ್ಯದ ಒಳಗೆ ಸೇರಿರುವ ಪ್ರಶ್ನೆಯನ್ನು ಉಲ್ಲೇಖ ಚಿಹ್ನೆಗಳಲ್ಲಿ ಇರಿಸಿದರೆ ಆಗ ಆ ಒಳ ವಾಕ್ಯದ ಕೊನೆಗೆ ಪ್ರಶ್ನೆ ಚಿಹ್ನೆಯನ್ನು ಬಳಸಬಹುದು. 3)**" ಈ ಪುಸ್ತಕದ ಬೆಲೆ ಎಷ್ಟು?" ಎಂದು ಅವನು ಕೇಳಿದನು**. ಇದು ತಕ್ಕ ಬಳಕೆ. ಇದಲ್ಲದೆ ಇನ್ನೂ ಒಂದು ಬಗೆಯ ವಾಕ್ಯವನ್ನು ಗಮನಿಸಿ. 4) **ನಗರದ ರಸ್ತೆಗಳು ಎಷ್ಟು ಹಾಳಾಗಿವೆಯೆಂದರೆ ಅದನ್ನು ಹೇಳತೀರದು**. ಈ ವಾಕ್ಯದಲ್ಲಿ ಎಷ್ಟು ಎಂಬ ಪದವಿದೆಯಾದರೂ ವಾಕ್ಯ ಮಾತ್ರ ಪ್ರಶ್ನೆಯಲ್ಲ. (ಹಾಗಾಗಿ ಪ್ರಶ್ನೆ ಚಿಹ್ನೆ ಇಲ್ಲಿ ಬೇಕಿಲ್ಲ) ಕನ್ನಡ ಶಾಲಾ ವ್ಯಾಕರಣಗಳು ಎಷ್ಟು, ಯಾರು, ಎಲ್ಲಿ, ಹೇಗೆ, ಏನು ಮುಂತಾದ ಪದಗಳನ್ನು ಪ್ರಶ್ನಾರ್ಥಕ ಪದಗಳೆಂದು ಹೇಳಿಕೊಡುತ್ತವೆ. ಈ ಪದಗಳಿಗೆ ಕೇವಲ ಪ್ರಶ್ನೆ ಕೇಳುವ ಕೆಲಸವಲ್ಲದೆ ಬೇರೆ ಕೆಲಸಗಳೂ ಇವೆ. ಹಾಗಾಗಿ ಈ ಪದಗಳು ಬಳಕೆಯಾದ ಕಡೆಯಲ್ಲೆಲ್ಲ ಪ್ರಶ್ನೆ ಚಿಹ್ನೆಯನ್ನು ಬಳಸಬಾರದು. ಇವು ನಾಮಪದಗಳಲ್ಲಿ ಒಂದು ಒಳಗುಂಪಿಗೆ ಸೇರಿದ ಪದಗಳು. ಇವುಗಳನ್ನು ಸರ್ವಪದಗಳೆಂದು ಕರೆಯಲು ಡಾ.ಡಿ.ಎನ್. ಶಂಕರ ಭಟ್ ಸೂಚಿಸುತ್ತಾರೆ.

## ತಿಳುವಳಿಕೆಯ ಬಯಲಾಟ

ಈಚೆಗೆ ರಾಜ್ಯದಲ್ಲಿ ನಡೆದ ರಾಜಕೀಯ ವಿದ್ಯಮಾನಗಳನ್ನು ವರದಿ ಮಾಡುವಾಗ ನಮ್ಮ ಬಹುಪಾಲು ಮಾಧ್ಯಮಗಳು ಮದುವೆಯ ಪರಿಭಾಷೆಯನ್ನು ಬಳಸಿದವು. ಮದುವೆ, ಮರುಮದುವೆ, ವಿಚ್ಛೇದನ, ಮರುವಿಚ್ಛೇದನ, ದಾಂಪತ್ಯ, ವರ, ವಧು, ಮಧುಚಂದ್ರ, ತಾಳಿ, ವಿರಸ ಇವೇ ಮುಂತಾದ ಪದಗಳನ್ನು ಬಳಸಿದ್ದಲ್ಲದೆ ಕೊನೆಗೆ ಒಂದು ಪತ್ರಿಕೆ 'ಮಂಚವೇರುವ ಮುನ್ನ' ಎಂಬ ಮಾತನ್ನು ಬಳಸಲು ಕೂಡ ಹಿಂಜರಿಯಲಿಲ್ಲ. ಕಾರ್ಟೂನುಗಳನ್ನು ಬರೆದವರೂ ಕೂಡ ಈ ಮಾದರಿಯನ್ನು ಬಿಟ್ಟುಕೊಡಲಿಲ್ಲ. ಒಂದು ಸಂಗತಿಯನ್ನು ವಿವರಿಸಲು ಏಕೆ ಹೀಗೆ ಇನ್ನೊಂದು ಸಂಗತಿಯನ್ನು ನೆರವಿಗೆ ಬಯಸುತ್ತಾರೆ? ವಿಷಯವನ್ನು ಹೆಚ್ಚು 'ಕಣ್ಣಿಗೆ ಕಟ್ಟುವಂತೆ ' ಮಾಡಲು ಈ ಹಾದಿಯನ್ನು ಹಿಡಿಯುವುದುಂಟು. ಆದರೆ ಇದಿಷ್ಟೇ ಅಲ್ಲ. ವಿವರಿಸುತ್ತಿರುವ ಸಂಗತಿಯ ಬಗೆಗೆ ನಮಗಿರುವ ದೃಷ್ಟಿಕೋನವೂ ಈ ಹೋಲಿಕೆಗಳಲ್ಲಿ ಕಾಣುವಂತಿರುತ್ತದೆ. ಇನ್ನೂ ಮುಂದುವರೆದು ಹೇಳುವುದಾದರೆ ಹೋಲಿಕೆಗಾಗಿ ಆಯ್ದುಕೊಂಡ ವಿಷಯದ ಬಗೆಗೆ, ಬಣ್ಣಿಸುತ್ತಿರುವವರಿಗೆ ಇರುವ ದೃಷ್ಟಿಕೋನ ಕೂಡ ಗಮನಕ್ಕೆ ಬರುವಂತಿರುತ್ತದೆ. ರಾಜಕೀಯ ಪಕ್ಷಗಳ ನಡುವಣ ಸಂಬಂಧವನ್ನು ಮದುವೆಗೆ ಸಂಬಂಧಿಸಿದ ಪದಗಳಿಂದ ಬಣ್ಣಿಸುವ ಮೂಲಕ ಮದುವೆಯನ್ನು ಕುರಿತ ಸಿದ್ಧ ಚಿಂತನೆಗಳು ಹೊರಬಂದಿವೆ. ಯಾರನ್ನಾದರೂ ನಾವು ಕತ್ತೆ ಎಂದು ಕರೆದಾಗ ಆ ವ್ಯಕ್ತಿಯ ಬಗೆಗೆ ನಮಗಿರುವ ತಿಳುವಳಿಕೆ ಪ್ರಕಟವಾಗುವಂತೆ ಕತ್ತೆಯನ್ನು ಕುರಿತ ನಮ್ಮ ತಿಳುವಳಿಕೆಯೂ ಹೊರಬೀಳುತ್ತದಷ್ಟೆ.

ಈ ಪ್ರಸಂಗದಲ್ಲೂ ಮಾಧ್ಯಮಗಳು ರಾಜಕೀಯ ಸನ್ನಿವೇಶವನ್ನು ಅರಿಯಲು ಮದುವೆಯನ್ನು ಕುರಿತು ಇರುವ ಸಾಮಾಜಿಕ ನಂಬಿಕೆಗಳನ್ನು ಬಳಸಿಕೊಂಡಿವೆ. ಈ ಚರ್ಚೆಯಲ್ಲಿ ವಧು ಯಾರು, ವರ ಯಾರು ಎಂಬ ಮಾತುಗಳೂ ನುಸುಳಿ ಹೋದವು. 'ತಾಳಿಕಟ್ಟುವ',' ಮಂಚವೇರುವ' ಮಾತುಗಳೂ ಬಂದವು. ಇಡೀ ಚರ್ಚೆಯಲ್ಲಿ 'ಮದುವೆ'ಯನ್ನು ಕುರಿತಿರುವ ಗಂಡಸಿನ ನೆಲೆಯ ಚಿಂತನೆಗಳೆ ಮುಂಚೂಣಿಗೆ ಬಂದವು. ನಮ್ಮ ಭಾಷಿಕ ಸಂಕಥನಗಳು ಏನನ್ನೋ ಕುರಿತು ಇರುತ್ತವೆ ಎನ್ನುವುದರ ಜತೆಗೆ ನಮಗೇ ಗೊತ್ತಿಲ್ಲದ ಹಾಗೆ ಬೇರೇನನ್ನೋ ಹೇಳುತ್ತಿರುತ್ತವೆ ಎಂಬುದಕ್ಕೆ ಇದೊಂದು ಒಳ್ಳೆಯ ಉದಾಹರಣೆ. ರಾಜಕಾರಣದ ಅಸ್ಥಿರತೆಯನ್ನು ಹೇಳುವಾಗ ಮದುವೆಯೆಂಬ ವ್ಯವಸ್ಥೆಯ ಅಸ್ಥಿರತೆಯನ್ನು ಕುರಿತಂತೆ ಇರುವ ಗಂಡಸರ ತಿಳುವಳಿಕೆಯನ್ನೂ ಹೇಳುತ್ತಿದ್ದೇವಲ್ಲವೇ?

## ಙ,ಞ,ಣ,ನ ಮತ್ತು ಮ

ಅನಿಲ್‌ಬೋಕೆ (ಬೆಂಗಳೂರು) ಇವರು ಕನ್ನಡದಲ್ಲಿರುವ ಮೂಗುಲಿ(=ಅನುನಾಸಿಕ) ಗಳಾದ **ಙ,ಞ,ಣ,ನ ಮತ್ತು ಮ** ಇವುಗಳನ್ನು ನುಡಿಯುವ ಬಗೆಗೆ ಬರೆದು ಕೇಳಿದ್ದಾರೆ. ಇವುಗಳಲ್ಲಿ ಮೊದಲ ಎರಡು ಉಲಿಗಳನ್ನು ಬಿಟ್ಟರೆ ಉಳಿದ ಮೂರು ತಮಗೆ ತಾವೇ ಬೇರೆ ಉಲಿಗಳ ನೆರವಿಲ್ಲದೆ ಕಾಣಿಸಕೊಳ್ಳಬಲ್ಲವು. ಕಾಣು, ಕಣ್ಣು, ನಗ, ಕನ್ನಡ, ಮನೆ,

ಮಗ, ಅಮ್ಮ, ಅಮಲು ಮುಂತಾದ ಪದಗಳನ್ನು ನೋಡಿ. ಆದರೆ ಣ ಎಂಬುದು ಪದದ ಮೊದಲಲ್ಲಿ ಎಂದೂ ಬರಲಾರದು. ಇದು ಬರಹ ಕನ್ನಡಕ್ಕೆ ಸಲ್ಲುವ ಮಾತು. ಕನ್ನಡದ ಕೆಲವು ಒಳನುಡಿಗಳಲ್ಲಿ ಐದಕ್ಕಿಂತಲೂ ಹೆಚ್ಚು ಮೂಗುಲಿಗಳಿರಬಹುದು. ಬಾಗಲಕೋಟೆಯಿಂದ ಮೇಲಕ್ಕೆ ಹೋದಂತೆ ಬೆಳಗಾವಿಯ ಮೂಡಣ ಕಡೆಯಲ್ಲಿ ಣಕಾರ ಮತ್ತು ನಕಾರಗಳ ನಡುವೆ ಇರುವ ಬೇರೊಂದು ಮೂಗುಲಿನ್ನು ಕೇಳಬಹುದು. ಆ ಒಳನುಡಿಯನ್ನಾಡದ ನಮಗೆ ಕೆಲವೊಮ್ಮೆ ಅದು ಣಕಾರದಂತೆ ಮತ್ತೆ ಕೆಲವೊಮ್ಮೆ ನಕಾರದಂತೆ ಕೇಳುವುದು. ಇನ್ನು ಮೊದಲ ಎರಡು ಮೂಗುಲಿಗಳ ಮಾತಿಗೆ ಬರೋಣ. ಇವೆರಡೂ ಪದಗಳ ನಡುವೆ ಬೇರೊಂದು ತಡೆಯುಲಿ(=ವ್ಯಂಜನ) ಜೊತೆಯಲ್ಲಿ ಮಾತ್ರ ಬರಬಲ್ಲವು. ಕನ್ನಡದ್ದೇ ಪದಗಳನ್ನು ನೋಡಿದರೆ ಈ ಜೋಡಿಗಳಲ್ಲಿ ಮೊದಲನೆಯದು ಮೂಗುಲಿಯಾಗಿ ಆ ಬಳಿಕ ಒಂದು ವ್ಯಂಜನ ಬರುತ್ತದೆ. ಕ ಮತ್ತು ಗ ಉಲಿಗಳ ಹಿಂದೆ ಙ ಎಂಬುದೂ, ಚ ಮತ್ತು ಜ ಉಲಿಗಳ ಹಿಂದೆ ಞ ಎಂಬುದೂ ಕಾಣಸಿಕೊಳ್ಳುತ್ತದೆ. ಹಾಗಾಗಿ ಮಂಕರಿ, ಮಂಗ ಎಂಬ ಪದಗಳಲ್ಲಿ ಇರುವ ಮೂಗುಲಿ ಙ, ಅಂಚು, ಪಂಜು ಎಂಬ ಪದಗಳಲ್ಲಿ ಇರುವ ಮೂಗುಲಿ ಞ. ಬರೆಯುವಾಗಲೂ ಹಿಂದೆ ಕೆಲವೊಮ್ಮೆ ಈ ಪದಗಳನ್ನು ಮಙ್ಕರಿ, ಮಙ್ಗ, ಅಞ್ಚು, ಪಞ್ಜು ಎಂಬಂತೆ ಬರೆಯುತ್ತಿದುದುಂಟು. ಒಟ್ಟಾಗಿ ಬರುವ ಎರಡು ತಡೆಯುಲಿಗಳಲ್ಲಿ ಎರಡನೆಯದು ಮೂಗುಲಿ ಆದಾಗ ಕೆಲವು ಗೋಜಲುಗಳುಂಟಾಗುತ್ತವೆ. ಈ ಬಗೆಯ ಪದಗಳು ಕನ್ನಡದವಲ್ಲ; ಹೆಚ್ಚಾಗಿ ಸಂಸ್ಕೃತದಿಂದ ಬಂದಿವೆ. ವಾಙ್ಮಯ, ವಿಜ್ಞಾನ ಮುಂತಾದ ಪದಗಳನ್ನು ನೋಡಿ. ಹೆಚ್ಚು ಜನ ಕನ್ನಡಿಗರು ಈ ಪದಗಳನ್ನು ಇಲ್ಲಿರುವಂತೆ ಬರೆದರೂ ನುಡಿಯುವಾಗ ಈ ಪದಗಳಲ್ಲಿರುವ ಞ ಉಲಿಯನ್ನು ನ ಕಾರವೆಂಬಂತೆ ನುಡಿಯುತ್ತಾರೆ.

**ಕೆರ–ಕರ**

ಕೃಪ (ತುಮಕೂರು) ಇವರಿಗೆ ಸರ್ವಜ್ಞನ ವಚನವೊಂದರಲ್ಲಿ ಬರುವ ಪದ ಕಾಡಿಸಿದೆ. **'ಕರೆಯದೇ ಬಂದವನ ಕೆರದಲ್ಲಿ ಹೊಡೆ..'** ಎಂಬುದೇ ಈ ಸಾಲು. ಇಲ್ಲಿ **'ಕೆರ'**ಸರಿಯೋ ಇಲ್ಲವೇ **'ಕರ'** ಸರಿಯೋ ಎಂದು ಕೇಳಿದ್ದಾರೆ. ಹೆಚ್ಚು ಬಳಕೆಯಲ್ಲಿರುವಂತೆ ಈ ಸಾಲಿನಲ್ಲಿ ಇರುವುದು 'ಕೆರ' (ಇದು ಕನ್ನಡದ್ದೇ ಪದ. ಈ ಪದದ ಮೊದಲ ಉಲಿಯಾದ ಕಕಾರದ ಜಾಗದಲ್ಲಿ ಕೆಲವು ದ್ರಾವಿಡ ನುಡಿಗಳಲ್ಲಿ ಚ ಇಲ್ಲವೇ ಸ ಕಾರಗಳು ಕಾಣಿಸಿಕೊಳ್ಳುತ್ತವೆ) ಆದರೆ ಸರ್ವಜ್ಞ ಇಷ್ಟು ಒರಟಾಗಿ ಹೇಳಬಹುದೇ ಎಂದುಕೊಂಡವರು ಅದನ್ನು 'ಕರ'ಎಂದು ತಿದ್ದಿರಬಹುದು. ತಮಗೆ ಒಪ್ಪಿಗೆಯಾಗದ ಪದಗಳನ್ನು ಹೀಗೆ ತಿದ್ದಿಕೊಂಡು ಓದುವ ಮತ್ತು ಅದೇ ಸರಿಯೆಂದು ಜಾರಿಗೆ ತರುವ ಬಗೆ ಎಂದಿನಿಂದಲೂ ಇದ್ದದ್ದೇ.

**ಹಕಾರ ಎಲ್ಲಿದೆ?**

ಕುಚ್ಚಣ್ಣ ಶ್ರೀನಿವಾಸನ್ (ಬೆಂಗಳೂರು) ಇವರು ಪತ್ರಿಕೆಗಳಲ್ಲಿ ತಾವು ಓದಿದ ಕೆಲವು ನುಡಿಗಡಣಗಳನ್ನು ಪಟ್ಟಿ ಮಾಡಿ ಇವೆಲ್ಲವೂ ಸರಿಯೇ ಎಂದು ಕೇಳಿದ್ದಾರೆ.

ಅವೆಲ್ಲವನ್ನೂ ಇಲ್ಲಿ ಮರಳಿ ಬರೆಯುವುದಿಲ್ಲ. ಅವುಗಳಲ್ಲಿ ಕೆಲವು ಹೀಗಿವೆ. **'ಬೆನ್ನತ್ತು, ಬಿಟ್ಟೋದ, ಮಾತಾಡಕತ್ಯಾನ'** ಇಲ್ಲೆಲ್ಲ ಈ ನುಡಿಗಳಲ್ಲಿ ಇರಬೇಕೆಂದು ನಾವು ತಿಳಿದಿರುವ ಹ ಕಾರ ಇಲ್ಲದಿರುವುದು ಇವರನ್ನು ಕಾಡಿಸಿದೆ. **ಬೆನ್ನು ಹತ್ತು. ಬಿಟ್ಟು ಹೋದ, ಮಾತಾಡಕ ಹತ್ಯಾನ** ಎಂದು ಈ ನುಡಿಗಳನ್ನು ಒಡೆಯುತ್ತೇವೆ. ಅಲ್ಲಿರುವ ಎರಡನೆಯ ಪದಗಳ ಮೊದಲಿನ ಹಕಾರ, ಜೋಡಿಸಿದ ಪದಗಳಲ್ಲಿ ಇಲ್ಲ. ಮಾತಿನಲ್ಲಿ ಈ ಬಗೆಯಲ್ಲಿ ಹಕಾರ ಕಳೆದುಹೋದ ಹತ್ತಾರು ರೂಪಗಳು ನಮಗೆ ಕೇಳಿಸುತ್ತಲೇ ಇರುತ್ತವೆ. ಆದರೆ ಬರೆಯುವಾಗ ನುಡಿಯುವಂತೆಯೇ ಬರೆಯುವುದು ಸರಿಯೇ ಎಂದು ಕೇಳುತ್ತಿದ್ದಾರೆ. ಬರೆಹದಲ್ಲಿ 'ತಪ್ಪು'ಗಳು ಆಗಬಾರದೆಂದು ಹೇಳುತ್ತಿದ್ದಾರೆ. ನುಡಿಯುವವರು ಹೆಚ್ಚು ಜನರು ಈಗ ತಾನೇ ಬರೆಯಲು ಮೊದಲು ಮಾಡಿದ್ದಾರೆ. ಅಲ್ಲದೆ ಬರೆಹದ ಸರಿ ರೂಪ ಯಾವುದು ಎಂಬುದನ್ನು ಅವರು ಕಣ್ಣಿನಿಂದ ನೋಡಿ ಕಲಿತುಕೊಳ್ಳಲು ಆಗದೆಯೂ ಇರಬಹುದು. ಹೀಗಾಗಿ ಈ ಮಾದರಿಯ ಬರೆಹ ರೂಪಗಳು ಕಾಣಿಸುತ್ತಿವೆ. ಕೆಲವು ವರುಷಗಳು ಕಳೆದ ಮೇಲೆ ಒಂದೋ ನಾವು ಬರೆಯುವಂತೆ ಮಾತಾಡಬೇಕೆಂಬ ಒತ್ತಾಯ ಬರಬಹುದು ಇಲ್ಲವೇ ಮಾತಾಡುವಂತೆ ಬರೆಯುವ ಬಿಡುಗಡೆಯೂ ದೊರಕಬಹುದು. ಅದಕ್ಕಾಗಿ ಕಾಯುವುದನ್ನು ಬಿಟ್ಟು ಬೇರೇನನ್ನೂ ಈಗ ಮಾಡುವಂತಿಲ್ಲ. ಆದರೆ ಹೀಗೆ 'ತಪ್ಪು' ಬರೆದವರಿಗೆಲ್ಲ ಬರೆಗುಳ ಕಾಯಿಸಿ ಬರೆಹಾಕುತ್ತೇವೆ ಎಂದು ಹೊರಟರೆ ಜನ ಬರೆಯುವುದನ್ನೇ ನಿಲ್ಲಿಸಬಹುದಲ್ಲವೇ?

**ಒಳನುಡಿಗಳು ಏಕಿವೆ?**

ಆನಂದ ಭಾವೀಕಟ್ಟಿ (ಬೆಂಗಳೂರು) ಇವರು ಕನ್ನಡದಲ್ಲಿ ಹಲವು ಒಳನುಡಿಗಳು ಏಕಿವೆ ಎಂದು ಕೇಳಿದ್ದಾರೆ. ಬಿಜಾಪುರದ ಕಡೆಯವರಾದ ಅವರಿಗೆ ಬೆಂಗಳೂರು, ತುಮಕೂರು ಕಡೆಯ ಕನ್ನಡ, ತಮ್ಮ ಕಡೆಯ ಕನ್ನಡದಂತೆ ಏಕಿಲ್ಲ ಎಂಬ ಪ್ರಶ್ನೆ ಕಾಡಿದೆ. ಒಂದು ಭಾಷೆಯಲ್ಲಿ ಒಳನುಡಿಗಳು ಉಂಟಾಗಲು ಇರುವ ಕಾರಣಗಳನ್ನು ಇಲ್ಲಿ ವಿವರಿಸುವುದು ಕಷ್ಟ ಆದರೆ ಅವರ ಪ್ರಶ್ನೆಯಲ್ಲಿ ಇನ್ನೊಂದು ಮಾತು ಸೇರಿಕೊಂಡಿದೆ. ಅದನ್ನಿಲ್ಲಿ ಗಮನಿಸಬೇಕಿದೆ. ಈಗಿನ ಬೀದರ್,ಬಿಜಾಪುರ ಕಡೆಯಲ್ಲಿ ಹನ್ನೆರಡನೆಯ ಶತಮಾನದ ಸರಿಸುಮಾರಿನಲ್ಲಿ ಮೈದಳೆದ ವಚನ ಸಾಹಿತ್ಯದ ಭಾಷೆ ಈಗ ಆ ಕಡೆಯವರು ಆಡುವ ಕನ್ನಡದಂತೆ ಇಲ್ಲ; ಅದು ಹೆಚ್ಚೂ ಕಡಿಮೆ ಬೆಂಗಳೂರು, ಮೈಸೂರಿನವರು ಈಗ ಆಡುವ ಕನ್ನಡದಂತೆಯೇ ಇದೆಯಲ್ಲ ಏಕೆ ಎನ್ನುವುದು ಅವರ ಪ್ರಶ್ನೆ. ಹನ್ನೆರಡನೆಯ ಶತಮಾನದ ಹೊತ್ತಿನಲ್ಲಿ ಕನ್ನಡ ಮಾತಾಡುವ ಎಲ್ಲ ಕಡೆಗಳಲ್ಲೂ ಒಂದೇ ಮಾದರಿಯ ಕನ್ನಡವಿದ್ದು ಆ ಬಳಿಕ ಮರಾಠಿ, ಪರ್ಶಿಯನ್ ನುಡಿಗಳ ನಂಟಿನಿಂದ ಬೀದರ್, ಬಿಜಾಪುರಗಳ ಕನ್ನಡ ಬದಲಾಯಿತೇ ಎಂದೂ ಕೇಳಿದ್ದಾರೆ. ಎರಡನೆಯ ಪ್ರಮೇಯ ಸರಿಯಲ್ಲ. ಒಂಬತ್ತನೆಯ ಶತಮಾನದ ಹೊತ್ತಿಗೇ ಕನ್ನಡದಲ್ಲಿ ಒಳನುಡಿಗಳಿದ್ದುದನ್ನು ಶ್ರೀವಿಜಯ ತನ್ನ ಕವಿರಾಜ ಮಾರ್ಗದಲ್ಲಿ ಹೇಳಿದ್ದಾನೆ. ಅದಕ್ಕೂ ಹಿಂದಿನ ಕನ್ನಡ ಶಾಸನಗಳನ್ನು ಓದಿದರೆ ಬೇರೆಬೇರೆ ಕಡೆಗಳ ಶಾಸನಗಳು ಕನ್ನಡದ ಬೇರೆಬೇರೆ ಒಳನುಡಿಗಳ ಚಹರೆಗಳನ್ನು ಹೊಂದಿರುವುದೂ ಗೊತ್ತಾಗುವಂತಿದೆ. ಇನ್ನು ವಚನಗಳ ಮಾತು. ಅವು ಬಾಯ್ದೆರೆಯಲ್ಲಿದ್ದ ರಚನೆಗಳು. ಬರಹರೂಪಕ್ಕೆ

ಅಂದರೆ ಇಂದು ನಾವು ಓದುತ್ತಿರುವ ರೂಪಕ್ಕೆ ಬರಲು ಮೂರರಿಂದ ನಾಲ್ಕು ಶತಮಾನಗಳು ಕಳೆದಿದ್ದವು. ಅಲ್ಲದೆ ಅವು ಬರಹ ರೂಪಕ್ಕೆ ಬಂದದ್ದೂ ಕೂಡ ತುಂಗಭದ್ರೆಯ ಆಸುಪಾಸಿನಲ್ಲಿ. ಕೃಷ್ಣಾನದಿಯ ಉತ್ತರದಿಂದ ತುಂಗಭದ್ರೆಯವರೆಗೆ ಮೂರು ಶತಮಾನಗಳ ಚಲನೆಯಲ್ಲಿ ನುಡಿಯಲ್ಲಿ ಏನೇನು ಬದಲಾವಣೆಗಳಾಗಿವೆಯೋ ಈಗ ಹೇಗೆ ಹೇಳುವುದು? ಅಲ್ಲದೆ ವಚನಗಳನ್ನು ರಚಿಸಿದವರು ಬೇರೆಬೇರೆ ಕಡೆಗಳಿಂದ ಬಂದವರಾಗಿದ್ದರಿಂದ ಅವರೆಲ್ಲರಿಗೂ ಹೊಂದಿಕೊಳ್ಳುವ ನುಡಿ ಬಗೆಯೊಂದನ್ನು ಆ ಪರಿಸರದಲ್ಲಿಯೇ ರೂಪಿಸಿಕೊಂಡಿದ್ದರೂ ಅದರಲ್ಲಿ ಅಚ್ಚರಿಯೇನಿಲ್ಲ. ಆದರೂ ಈ ಬಗೆಗೆ ಹೆಚ್ಚಿನ ತಿಳುವಳಿಕೆ ನಮಗೆ ಇನ್ನೂ ದೊರಕಬೇಕಿದೆ. ಬಾಯ್ದೆರೆಯಲ್ಲಿ ಕಟ್ಟಿದರೂ ಹಾಡಿದ ಕೊಂಚಕಾಲದಲ್ಲೇ ಬರಹಕ್ಕೆ ದಾಟಿದ ತತ್ತ್ವಪದಕಾರರ ಹಾಡುಗಳ ಭಾಷೆಯಲ್ಲಿ ಹಾಗಾಗಿ ಹೆಚ್ಚು ಬದಲಾವಣೆಗಳು ಕಾಣುವುದಿಲ್ಲ.

**ನಿಲ್ದಾಣ–ತಂಗುದಾಣ**

ಮಹೇಶ್ವರಮೂರ್ತಿ (ಮಗ್ಗೆ) ಇವರು **ನಿಲ್ದಾಣ** ಮತ್ತು **ತಂಗುದಾಣ** ಈ ಎರಡು ಪದಗಳಲ್ಲಿ ಯಾವುದು ಸರಿ ಎಂದು ಕೇಳಿದ್ದಾರೆ. ಇವೆರಡರಲ್ಲಿ ನಿಲ್ದಾಣ ಎಂಬುದೇ ಸರಿ ಎನ್ನುವುದು ಅವರ ನಿಲುವು. ನಿಲ್ದಾಣ ಹೆಚ್ಚು ಕಡೆಗಳಲ್ಲಿ ಬಳಕೆಯಾಗುತ್ತಿದೆ. ತಂಗುದಾಣ ಅಲ್ಲಲ್ಲಿ ಮಾತ್ರ ಕಾಣಸಿಗುತ್ತದೆ. ಅದರಲ್ಲೂ ಬಸ್‌ಗಳ ಪಯಣದ ನಡುವೆ ನಿಲ್ಲುವ ತಾಣಗಳಲ್ಲಿ ಈ ಪದದ ಬಳಕೆ ಕಾಣುತ್ತದೆ. **ತಂಗು** ಎನ್ನುವುದಕ್ಕೆ **ಅಲ್ಲೇ ಉಳಿಯುವ, ಇರುಳನ್ನು ಕಳೆಯುಲು ಒಂದೆಡೆ ಉಳಿದುಕೊಳ್ಳುವ** ಎಂಬ ತಿರುಳುಗಳಿರುವುದರಿಂದ ಬಂದು ನಿಂತು ಹೋಗುವ ಕಡೆಗಳಿಗೆ ತಂಗುದಾಣ ಸರಿಯಲ್ಲ ಎನ್ನುವುದು ಇವರ ವಾದ. ಆದರೆ ತಂಗು ಎನ್ನುವ ಪದಕ್ಕೆ ಮೇಲೆ ಹೇಳಿದ ತಿರುಳುಗಳ ಜೊತೆಗೆ **ಕೊಂಚ ಹೊತ್ತು ನಿಂತು ಹೊರಡು** ಎನ್ನುವ ತಿರುಳೂ ಇದೆ. ಹಾಗಾಗಿ ತಂಗುದಾಣ ಪದದ ಬಳಕೆಯಲ್ಲಿ ತಪ್ಪೇನೂ ಇಲ್ಲ. ಆದರೆ ನಿಲ್ದಾಣ ಪದ ಬಸ್, ರೈಲು, ವಿಮಾನ ಮುಂತಾದವುಗಳೆಲ್ಲಕ್ಕೂ ಬಳಕೆಯಾಗುತ್ತಿರುವುದರಿಂದ ಅದನ್ನೇ ಬಳಸುವುದು ಸರಿಯೆಂದು ಹೇಳಲಡ್ಡಿಯಿಲ್ಲ.

**ಅಪಾಯದ ಮಟ್ಟ**

ಸುಹಾಸ್ ಎನ್ (ಬೆಂಗಳೂರು) ಇವರು ವಾಕ್ಯವೊಂದನ್ನು ಬರೆದು ಇದು ಸರಿಯೇ ಎಂದು ಕೇಳಿದ್ದಾರೆ. ವಾಕ್ಯ ಹೀಗಿದೆ. **ಅಪಾಯದ ಮಟ್ಟವನ್ನು ಮೀರಿ ಹರಿಯುತ್ತಿರುವ ಯಮುನಾನದಿ.** ವಾಕ್ಯ ಹೀಗಿರಬೇಕಿತ್ತು ಎನ್ನುವುದು ಅವರ ನಿಲುವು: **ಅಪಾಯದ ಮಟ್ಟದಲ್ಲಿ ಹರಿಯುತ್ತಿರುವ ಯಮುನಾನದಿ.** ಈಗ ಇರುವಂತೆ ಮೂಲ ವಾಕ್ಯದಲ್ಲಿ ತಪ್ಪೇನೂ ಕಾಣುತ್ತಿಲ್ಲ. ನದಿಗಳು ಹರಿಯುವಾಗ ಅವುಗಳ ನೀರಿನ ಮಟ್ಟ ಗೊತ್ತಾದ ಎತ್ತರ (ಆಳ?) ಕ್ಕಿಂತ ಹೆಚ್ಚಿದರೆ ಅದನ್ನು ಅಪಾಯದ ಮಟ್ಟ ಎಂದು ಹೇಳುವುದುಂಟಷ್ಟೆ. ಅದಕ್ಕಿಂತ ಎಷ್ಟು ಹೆಚ್ಚಿದರೂ ಅದು ಅಪಾಯವೇ ಸರಿ. ಆದರೆ ಆ ಅಪಾಯದ ಮಟ್ಟವನ್ನು ಮೀರಿ ಹರಿಯುವುದು ಒಂದು ಸಂಗತಿಯಾಗಿ ದಿಟವಷ್ಟೆ. ಅಪಾಯ ಉಂಟು ಮಾಡುವ ಹಂತದಲ್ಲಿ ಹರಿಯುತ್ತಿದೆ ಎನ್ನುವಾಗ 'ಅಪಾಯದ ಮಟ್ಟದಲ್ಲಿ

ಹರಿಯುತ್ತಿರುವ' ಎಂದು ಹೇಳಲಡ್ಡಿಯಿಲ್ಲ. ಆದರೆ ಮೂಲ ವಾಕ್ಯ ಅಪಾಯದ ಸೂಚನೆಯ ಜೊತೆಗೆ ನದಿಯ ನೀರಿಯ ಹರಿವಿನ ಮಟ್ಟವನ್ನೂ ಹೇಳುತ್ತಿದೆಯಾದ್ದರಿಂದ ಅದರಲ್ಲಿ ಕಟ್ಟುಗಳ ನಿಟ್ಟಿನಲ್ಲಿ ಇಲ್ಲವೇ ತಿರುಳಿನ ನಿಟ್ಟಿನಲ್ಲಿ ತಪ್ಪಿದೆಯೆಂದು ತೋರುತ್ತಿಲ್ಲ

**ಲಲನೆ-ಲಲನ**

ಬಸವನಗೌಡ ಕೆ. (ಹಗರಿಬೊಮ್ಮನಹಳ್ಳಿ) ಇವರು ಕೇಳುವ ಪ್ರಶ್ನೆ ಹೀಗಿದೆ.' ನಲ್ಲ-ನಲ್ಲೆ, ಪ್ರಿಯ-ಪ್ರಿಯೆ ಎಂಬ ಪದಗಳಂತೆ ಲಲನೆ-ಲಲನ ಎಂಬ ಪದಗಳನ್ನು ಯಾಕೆ ಬಳಸಬಾರದು? ಬಳಸಿದರೆ ತಪ್ಪೇನು?..' ನಲ್ಲ/ನಲ್ಲೆ ಇವು ಕನ್ನಡ ಪದಗಳು. ಪ್ರಿಯೆ ಇದು ಸಂಸ್ಕೃತದ ಪ್ರಿಯಾ ಪದದ ತದ್ಭವ. (ಮಾದರಿ: ರಮಾ>ರಮೆ, ಉಮಾ>ಉಮೆ, ಅಪ್ಸರಾ>ಅಪ್ಸರೆ ಮುಂ) ಪ್ರಿಯಾ ಎಂಬ ಇನ್ನೊಂದು ರೂಪವನ್ನು ಕನ್ನಡದಲ್ಲಿ ಅದು ಇರುವಂತೆಯೇ ಬಳಸುತ್ತೇವೆ. ಅದು ಪ್ರಿಯನನ್ನು ಕೂಗಿ ಕರೆಯುವ ಪದ (ಹಾ ಪ್ರಿಯಾ ಪ್ರಶಾಂತ ಹೃದಯಾ ಹಾನಿ ಹೊಂದಿದೆಯಾ) ಈ ಪದದ ಕೊನೆಗೆ ಬರುವ ದೀರ್ಘಸ್ವರ ಕೂಗಿಕರೆಯುವ ಪದಗಳಲ್ಲಿ ಕಾಣಿಸಿಕೊಳ್ಳುತ್ತದೆ. ರಂಗಾ, ಚನ್ನಾ, ಸೀತೇ, ದೇವೀರೀ ಮುಂ. ಹೀಗೆ ದೀರ್ಘ ಸ್ವರದಿಂದ ಕೊನೆಗೊಳ್ಳುವ ಸಂಸ್ಕೃತದ ಸ್ತ್ರೀಲಿಂಗ ರೂಪಗಳನ್ನು ಕನ್ನಡ ಒಂದೋ ಎಕಾರಾಂತ ಮಾಡಿಕೊಳ್ಳುತ್ತದೆ ಇಲ್ಲವೇ ಆ ದೀರ್ಘಸ್ವರವನ್ನು ಹ್ರಸ್ವವನ್ನಾಗಿ ಮಾಡಿಕೊಳ್ಳುತ್ತದೆ. ಉದಾ. ಸೀತಾ>ಸೀತ, ನಟೀ>ನಟಿ ಮುಂ. ಲಲನೆ ಎನ್ನುವುದು ಕೂಡ ಲಲನಾ ಎಂಬ ಪದದ ತದ್ಭವವೇ ಆಗಿದೆ. ಹಾಗಾಗಿ ಲಲನ ಎಂಬ ಪುಲ್ಲಿಂಗ ರೂಪವನ್ನು ಕನ್ನಡದಲ್ಲಿ ರೂಪಿಸಿಕೊಳ್ಳಲು ಆಗುವುದಿಲ್ಲ. ಆದರೆ ನಲ್ಲ/ನಲ್ಲೆ ಈ ಪದಗಳಿಗೆ ಕನ್ನಡದ ದನಿ ಕಟ್ಟುಗಳು ಹೊಂದುತ್ತವೆ. ಈ ದನಿಕಟ್ಟನ್ನು ಕನ್ನಡದಲ್ಲದ ಪದಗಳಲ್ಲಿ ಬಳಸುವುದಿಲ್ಲ.

ಕೆ.ವಿ.ಎನ್‌ರ ಭಾಷಿಕ ಚಿಂತನೆಗಳು ಕೇವಲ ಕನ್ನಡ ಭಾಷೆಯ ಬಗೆಗಿನ ಚರ್ಚೆಗಳಾಗದೆ, ಯಾವುದೇ ಭಾಷೆಯನ್ನು ಬಿಡಿಸಿ ನೋಡುವ ಚಿಂತನಾ ಮಾದರಿಗಳಾಗಿವೆ. ಒಂದು ಭಾಷಿಕ ಕ್ರಿಯೆ ಸಾಮಾಜಿಕ ಕ್ರಿಯೆಯಾಗಿ ರೂಪಗೊಳ್ಳುವುದರ ಹಿಂದಿನ ತಾತ್ತ್ವಿಕ ನೆಲೆಗಳು ಎಂತಹವು ಎಂಬುದನ್ನು ಇವರ ಅಧ್ಯಯನಗಳು ಬಿಚ್ಚಿತೋರಿಸುತ್ತವೆ. ಹಾಗಾಗಿ ಭಾಷೆಯನ್ನು ಅಧ್ಯಯನ ಮಾಡುವುದೆಂದರೆ, ಅದರ ಬಗೆಗೆ ಎಲ್ಲ ಬಗೆಯ ಮಾಹಿತಿಯನ್ನು ಮಾತ್ರ ಸಂಗ್ರಹಿಸುವುದಲ್ಲ ಎಂಬ ಭಾಷಾತತ್ವಶಾಸ್ತ್ರೀಯ ತಿಳುವಳಿಕೆ ಇವರ ಚಿಂತನೆಗಳಿಂದ ನಿಚ್ಚಳವಾಗುತ್ತದೆ.

ಯಾವುದೇ ಭಾಷಿಕ ಸನ್ನಿವೇಶವು ಎದುರಿಸಬಹುದಾದ ಎರಡು ಮುಖ್ಯ ಪ್ರವೃತ್ತಿಗಳೆಂದರೆ, ಪ್ರಾಮಾಣೀಕರಣ ಹಾಗೂ ಆಧುನೀಕರಣ. ಈ ಎರಡು ಪ್ರವೃತ್ತಿಗಳು ಉಂಟುಮಾಡುವ ಪರಸ್ಪರ ವೈರುಧ್ಯಗಳು ಎಂತಹವು; ಇದರಿಂದ ಉಂಟಾಗುವ ಭಾಷಿಕ ಬಿಕ್ಕಟ್ಟುಗಳಾವವು; ಇವು ಶೈಕ್ಷಣಿಕ ಗೊಂದಲಗಳಿಗೆ ಹೇಗೆ ಕಾರಣವಾಗುತ್ತವೆ; ಒಟ್ಟಾರೆಯಾಗಿ, ಸಾಮಾಜಿಕ ಭಾಷಾಶಾಸ್ತ್ರೀಯ ಪರಿಣಾಮಗಳೇನು ಎಂಬಿತ್ಯಾದಿ ಪ್ರಶ್ನೆಗಳನ್ನು ಉತ್ತರಿಸುವುದಲ್ಲದೇ, ಅಂತಹ ಆಲೋಚನಾಕ್ರಮಗಳ ಹಿಂದಿರುವ ತಾತ್ತ್ವಿಕ ನೆಲೆಗಳನ್ನು ಬಿಡಿಸಿ ನೋಡುವ ಕಣ್ಣೋಟಗಳೂ ಇಲ್ಲಿ ಸಿಗುತ್ತವೆ. ಭಾಷಾ ನೀತಿ ಹಾಗೂ ಯೋಜನೆಗಳು ಹುಟ್ಟುಹಾಕುವ ತಾರತಮ್ಯಗಳು ಸಾಮಾಜಿಕ-ಭಾಷಿಕ ಪಲ್ಲಟಕ್ಕೆ ಹೇಗೆ ಕಾರಣವಾಗುತ್ತವೆ ಎಂಬ ತಿಳುವಳಿಕೆಯೂ ಇವರ ಚಿಂತನೆಗಳಲ್ಲಿ ಅಡಕವಾಗಿವೆ.

ಕನ್ನಡ ಭಾಷೆಯ ರಚನೆ ಮತ್ತು ಬಳಕೆಯಲ್ಲಿ ಆಗುವ ರಾಚನಿಕ ವ್ಯತ್ಯಾಸದ ಸೂಕ್ಷ್ಮಗಳನ್ನು ವಿಶ್ಲೇಷಿಸುವ ವಿಧಾನ ಪರಿಣಾಮಕಾರಿಯಾಗಿದೆ. ಇಂಗ್ಲಿಶ್‌ನ ನುಡಿಗಟ್ಟುಗಳನ್ನು ಕೇವಲ ■






PRAGATI GRAPHICS




ರೂ.300/-